# ಗೋಲಗೇರಿ ಗೊಲ್ಲಾಳೇಶ್ವರ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ)


ಸಂಶೋಧಕ

**ಎಸ್.ಆಯ್. ಬಿರಾದಾರ**

ಶ್ರೀ ಶಾಂತವೀರ ಕಲಾ ಮಹಾವಿದ್ಯಾಲಯ

ಬಬಲೇಶ್ವರ

ಮಾರ್ಗದರ್ಶಕರು

**ಡಾ. ಜಿ.ಬಿ. ಸಜ್ಜನ**

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ

ಕೂಡಲ ಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ.





ಭಾಷಾನಿಕಾಯ

...ರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ, ಕೂಡಲ ಸಂಗಮ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧೨

# ಗೋಲಗೇರಿ ಗೊಲ್ಲಾಳೇಶ್ವರ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ)



ಸಂಶೋಧಕ

**ಎಸ್.ಆಯ್. ಬಿರಾದಾರ**

ಶ್ರೀ ಶಾಂತವೀರ ಕಲಾ ಮಹಾವಿದ್ಯಾಲಯ

ಬಬಲೇಶ್ವರ

ಮಾರ್ಗದರ್ಶಕರು

**ಡಾ. ಜಿ.ಬಿ. ಸಜ್ಜನ**

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ

ಕೂಡಲ ಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ.



ಭಾಷಾನಿಕಾಯ

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ, ಕೂಡಲ ಸಂಗಮ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦೧೨

# ಪ್ರಮಾಣ ಪತ್ರ

**ಗೋಲಗೇರಿ ಗೊಲ್ಲಾಳೇಶ್ವರ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ಡಾ. ಜಿ.ಬಿ. ಸಜ್ಜನರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ ಕೂಡಲ ಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಕೂಡಲ ಸಂಗಮ
ದಿನಾಂಕ : ೨೨-೨-೨೦೧೨

**(ಎಸ್.ಆಯ್. ಬಿರಾದಾರ)**
ಕನ್ನಡ ಉಪನ್ಯಾಸಕರು
ಶ್ರೀ ಶಾಂತವೀರ ಕಲಾಮಹಾವಿದ್ಯಾಲಯ
ಬಬಲೇಶ್ವರ

# ದೃಢೀಕರಣ ಪತ್ರ

ಶ್ರೀ ಎಸ್. ಆಯ್. ಬಿರಾದಾರ ಇವರು ಗೋಲಗೇರಿ ಗೊಲ್ಲಾಳೇಶ್ವರ : ಒಂದು ಅಧ್ಯಯನ ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ ಕೂಡಲಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



ಸ್ಥಳ : ಕೂಡಲ ಸಂಗಮ
ದಿನಾಂಕ :

(ಡಾ. ಜಿ.ಬಿ. ಸಜ್ಜನ)
ಮಾರ್ಗದರ್ಶಕರು
ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ,
ಕೂಡಲ ಸಂಗಮ,
ಕನ್ನಡ ವಿಶ್ವವಿದ್ಯಾಲಯ,
ಹಂಪಿ

# ಅರಿಕೆ

ಸಂಶೋಧನೆಯನ್ನು ಮಾಡಬೇಕು ಎಂಬ ಆಸೆಯು ನನ್ನ ಮನದಾಳದಲ್ಲಿ ಉಪನ್ಯಾಸಕ ವೃತ್ತಿಯ ಆರಂಭದ ದಿನಗಳಿಂದಲೂ ಹುದುಗಿಕೊಂಡಿತ್ತು. ಕಾಲೇಜಿನ ಪಾಠ ಪ್ರವಚನಗಳಲ್ಲಿ ಅತೀ ಆಸಕ್ತಿಯಿಂದ ತೊಡಗಿಸಿಕೊಂಡಿರುವ ಕಾರಣ ನನ್ನ ಆಸೆಯು ಆಸೆಯಾಗಿಯೇ ಉಳಿದಿತ್ತು. ಈ ಆಸೆ ಈಡೇರಲು ಕಾರಣರಾದವರು ಶ್ರೀ ಶಾಂತವೀರ ಸ್ವಾಮಿಗಳ ಕೃಪಾಶೀರ್ವಾದದಿಂದ ಜ್ಞಾನದ ಬೆಳಕನ್ನು ನೀಡುತ್ತಿರುವ ಗ್ರಾಮಾಂತರ ವಿದ್ಯಾವರ್ಧಕ ಸಂಘ, ಬಬಲೇಶ್ವರ ಎಂದು ಹೇಳಲು ಹೆಮ್ಮೆಪಡುವೆ. ಅದರಲ್ಲೂ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಎಫ್.ಟಿ. ಹಳ್ಳಿಕೇರಿ ಅವರು ಹಾಗೂ ಇದೇ ವಿಭಾಗದ ಮುಖ್ಯಸ್ಥರಾದ ಡಾ. ಕೆ. ರವೀಂದ್ರನಾಥರ ಪ್ರೋತ್ಸಾಹವೇ ನಾನು ಸಂಶೋಧನೆಯ ಕಾರ್ಯದಲ್ಲಿ ತೊಡಗಿಸಿಕೊಳ್ಳುವಂತಾಯಿತು. ಇವರೀರ್ವರ ಮಾರ್ಗದರ್ಶನ ಸಲಹೆ ಸೂಚನೆಗಳನ್ನು ಎಂದೂ ಮರೆಯಲಾರೆ. ನನ್ನ ಅಧ್ಯಯನದ ಮಾರ್ಗದರ್ಶಕರಾಗಿರುವ ಡಾ. ಜಿ.ಬಿ. ಸಜ್ಜನರು ನನ್ನ ಬರವಣಿಗೆಯ ಪ್ರತಿಯೊಂದು ಹಂತವನ್ನು ಸೂಕ್ಷ್ಮವಾಗಿ ಗಮನಿಸಿ, ಅಮೂಲ್ಯವಾದ ಸಲಹೆ ಸೂಚನೆಗಳನ್ನು ನೀಡಿ, ತಿದ್ದಿ-ತೀಡಿ ಈ ಮಹಾಪ್ರಬಂಧಕ್ಕೆ ಒಂದು ಸ್ಪಷ್ಟ ಸ್ವರೂಪವನ್ನು ಕೊಟ್ಟಿದ್ದಾರೆ. ಬದುಕಿನಲ್ಲಿ ಮತ್ತು ಅಧ್ಯಯನದಲ್ಲಿ ಅವರು ನೀಡಿದ ಸಲಹೆ-ವಾತ್ಸಲ್ಯ ಕಿರಿಯರ ಕುರಿತು ತೋರಿಸುವ ಕಕ್ಕುಲಾತಿಗೆ ಕೃತಜ್ಞತೆಯನ್ನು ಸಲ್ಲಿಸುವದು ನನ್ನ ಪ್ರಥಮ ಕರ್ತವ್ಯವಾಗಿದೆ. ಸಜ್ಜನರ ಸರಳತೆ, ಅವರ ಪ್ರಬುದ್ಧ ಬದುಕಿನ ಬಗ್ಗೆ ಹೇಳಲು ನನ್ನಲ್ಲಿ ಶಬ್ದಗಳಿಲ್ಲ. ಒಟ್ಟಾರೆಯಾಗಿ ಇವರನ್ನು ನನ್ನ ಬದುಕಿನುದ್ದಕ್ಕೂ ಆರಾಧಿಸುವೆ.

ಗ್ರಾಮಾಂತರ ವಿದ್ಯಾವರ್ಧಕ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ವ್ಹಿ.ಎನ್.ಬಿರಾದಾರ ಅವರ ಕಾಳಜಿ ಮತ್ತು ಸಂಸ್ಥೆಯ ನೌಕರರು ಎಲ್ಲರೂ ಹೆಚ್ಚೆಚ್ಚು ಅಧ್ಯಯನ ಮಾಡಬೇಕು. ಶಿಕ್ಷಕರು ಬೋಧನೆಯಲ್ಲಿ ಪ್ರಭುತ್ವ ಮತ್ತು ಪ್ರಬುದ್ಧತೆಯಿಂದ ನಿಗರ್ವಿಗಳಾಗಿ, ನಿಷ್ಠುರರಾಗಿ ಬದುಕಬೇಕು. ಇವರಿಂದಲೇ ನಮ್ಮ ಕಾಲೇಜಿನ ಕೀರ್ತಿ ನಾಡಿನಾದ್ಯಂತ ಹರಡಬೇಕು. ಅವರನ್ನು ನೋಡಿ ಸಂತೋಷ ಪಡಬೇಕು, ಎಂಬ ಭಾವ ಸದಾ ಅವರಲ್ಲಿ ಮಿಡಿಯುತ್ತಿದೆ. ಈ ಭಾವ ಹೊಂದಿದವರು ನಮ್ಮ ಬದುಕಿನಲ್ಲಿ ಕಾಣುವುದು ಅಪರೂಪ. ಅಂಥವರು ನಮ್ಮ ಪೋಷಕರಾಗಿದ್ದಾರೆಂದರೆ, ನಮ್ಮ ಭಾಗ್ಯವೆಂದೆ ಅಂದುಕೊಂಡಿದ್ದೇನೆ. ನಾನು ಎಫ್.ಆಯ್.ಪಿ. ಮೇಲೆ ಸಂಶೋಧನಾ ಅಧ್ಯಯನಕ್ಕೆ ನಿಯೋಜನೆಗೊಳ್ಳಲು ಪ್ರಮುಖ ಕಾರಣಕರ್ತರಾಗಿದ್ದಾರೆ. ಈ ಪ್ರಬುದ್ಧ ವಾತ್ಸಲ್ಯಕ್ಕೆ ನಿಷ್ಠುರತೆಗೆ ನನ್ನ ಪ್ರಣಾಮಗಳು.

ನಾನು ಡಾ. ಎಫ್.ಟಿ. ಹಳ್ಳಿಕೇರಿ ಅವರಲ್ಲಿ ಯಾವ ವಿಷಯವನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ಸಮಾಲೋಚಿಸಲಾಗಿ, ನಮ್ಮ ನಾಡಿನ ೧೨ನೇ ಶತಮಾನದ ಧಾರ್ಮಿಕ, ಸಾಮಾಜಿಕ ಚಳುವಳಿಯಲ್ಲಿ ಭಾಗವಹಿಸಿದ ಮತ್ತು ಈ ಹೋರಾಟಕ್ಕೆ ವೇದಿಕೆಯನ್ನು ಸಜ್ಜುಗೊಳಿಸಿದ ಅನೇಕ ಮಹಾನುಭಾವರು ತೆರೆಯ ಮರೆಯಲ್ಲಿದ್ದಾರೆ. ಅಂಥವರನ್ನು ಮುಂದಿನ ಪೀಳಿಗೆಗೆ ಪರಿಚಯಿಸುವ ಅಗತ್ಯವಿದೆ. ಆದ್ದರಿಂದ ಬಸವಪೂರ್ವ ಕಾಲ ಹಾಗೂ ಬಸವಣ್ಣನ ಸಮಕಾಲೀನ ಶರಣರಲ್ಲಿ ಅಧ್ಯಯನ ಮಾಡಲು ಹೇಳಿ, ಗೋಲಗೇರಿ ಗೊಲ್ಲಾಳೇಶ್ವರ ಕುರಿತಾಗಿ ಏಕೆ ? ಅಧ್ಯಯನ ಕೈಕೊಳ್ಳಬಾರದು ಎಂದು ಸೂಚಿಸಿದರು. ಅವರು ಸೂಚಿಸಿದ ವಿಷಯವನ್ನೇ ಡಾ. ಕೆ. ರವೀಂದ್ರನಾಥ ಅವರ ಜೊತೆ ಸಮಾಲೋಚಿಸಿ ಅಧ್ಯಯನಕ್ಕೆ ತೊಡಗಿದೆ. ಆ ಸಂದರ್ಭದಲ್ಲಿ ಇವರು ಪ್ರೀತಿಯಿಂದ ಅನೇಕ ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿದ್ದಾರೆ. ಇವರ ಈ ಕಾಳಜಿಗೆ ಕೃತಜ್ಞತೆಗಳು.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಹೆಚ್.ಡಿ ಅಧ್ಯಯನವನ್ನು ಮಾಡುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ ಹಿಂದಿನ ಅಧ್ಯಯನಾಂಗದ ನಿರ್ದೇಶಕರಾದ ಡಾ. ವಿರೇಶ ಬಡಿಗೇರ ಅವರಿಗೂ ಅನಂತ ಕೃತಜ್ಞತೆಗಳು.

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ ಕೂಡಲಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಇಲ್ಲಿ ಎರಡು ವರ್ಷಗಳ ಕಾಲ ಯು.ಜಿ.ಸಿ. ಯ ಯೋಜನೆಯಾದ ಎಫ್.ಆಯ್.ಪಿ.ಯಲ್ಲಿ ಸಂಶೋಧನಾ ಕಾರ್ಯದಲ್ಲಿ ಹೆಚ್ಚೆಚ್ಚು ತೊಡಗಿಸಿಕೊಂಡು ಕಳೆದ ದಿನಗಳನ್ನು ಜೀವನದಲ್ಲಿ ಎಂದೂ ಮರೆಯಲಾರೆ. ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ ಕೂಡಲಸಂಗಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಇದರ ಹಿಂದಿನ ಮುಖ್ಯಸ್ಥರಾದ ಡಾ. ಕೆ. ರವೀಂದ್ರನಾಥ, ಡಾ. ಎಸ್.ಎಸ್. ಅಂಗಡಿ, ಡಾ. ಟಿ.ಆರ್. ಚಂದ್ರಶೇಖರ, ಸಂದರ್ಶನ ಪ್ರಾಧ್ಯಾಪಕರಾದ ಮಹೇಶ ತಿಪಶೆಟ್ಟಿ, ಅವರು ತೋರಿಸಿದ ಪ್ರೀತಿ -ವಾತ್ಸಲ್ಯ ನೀಡಿದ ಸಲಹೆ ಸೂಚನೆಗಳು ತುಂಬ ಮೌಲಿಕವಾದವುಗಳಾಗಿವೆ. ನಾನು ಇಲ್ಲಿ ಸಂಶೋಧಕ ವಿದ್ಯಾರ್ಥಿಯಾಗಿದ್ದರೂ ನನ್ನನ್ನು ತಮ್ಮ ಸಹೋದ್ಯೋಗಿ ಸಹೋದರನಂತೆ ಕಂಡಿರುವುದು ಅವರ ದೊಡ್ಡ ಗುಣವಾಗಿದೆ. ಇವರೆಲ್ಲರಿಗೂ ನನ್ನ ಪ್ರೀತಿಪೂರ್ವಕ ನಮನಗಳು ಹಾಗೂ ಬೋಧಕೇತರ ಸಿಬ್ಬಂದಿಯಾದ ನಾಗರಾಜ, ಮತ್ತು ಚೌದರಿಯವರನ್ನು ಮರೆಯಲಾರೆ.

ನಮ್ಮ ನಾಡಿನಲ್ಲಿ ಶರಣರ ಕುರಿತಾಗಿ ಹೆಚ್ಚೆಚ್ಚು ಗ್ರಂಥಗಳು, ಮಾಹಿತಿಗಳು ಒಂದೆಡೆ ದೊರೆಯುವುದು ಅಪರೂಪ. ಅದರಲ್ಲಿ ಬಿ.ಎಲ್.ಡಿ.ಈ. ಸಂಸ್ಥೆಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಫ.ಗು. ಹಳಕಟ್ಟಿಯವರ ಸಂಶೋಧನಾ ಕೇಂದ್ರವು ಒಂದಾಗಿದೆ. ಇದರ ಅಧ್ಯಕ್ಷರಾದ ಶ್ರೀ ತಂಬಾಕೆಯವರು ಹಾಗೂ ನಿರ್ದೇಶಕರಾದ ಡಾ. ಮದಬಾವಿ ಅವರು ಗ್ರಂಥಾಲಯ ಉಪಯೋಗಿಸಿಕೊಳ್ಳಲು ಸಹಾಯ ಸಹಕಾರ,

ಸಲಹೆಗಳನ್ನು ನೀಡಿದ ಇವರಿಗೆ ಋಣಿಯಾಗಿದ್ದೇನೆ. ಈ ಸಂದರ್ಭದಲ್ಲಿಯೇ ನಾನು ಸ್ಮರಿಸಬೇಕಾದ ಸ್ನೇಹಿತ, ಆತ್ಮೀಯ ಡಾ. ಶಿವಕುಮಾರಸ್ವಾಮಿ ಆರ್. ಹಿರೇಮಠರು, ನನ್ನ ಜೊತೆ ಗ್ರಂಥಾಲಯಕ್ಕೆ ಬಂದು, ನನ್ನ ಜೊತೆ-ಜೊತೆಯಾಗಿ ಓದುತ್ತಾ, ಚರ್ಚಿಸುತ್ತಾ ನನ್ನ ಸಂಶೋಧನಾ ಮಹಾಪ್ರಬಂಧಕ್ಕೆ ಒಂದು ರೂಪ ಬರಲು ಕಾರಣಕರ್ತರಾದ ಇವರನ್ನು ಅಭಿನಂದಿಸುತ್ತೇನೆ.

ನಾನು ಪಿಹೆಚ್.ಡಿ ಅಧ್ಯಯನವನ್ನು ಕೈಕೊಳ್ಳುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು ಪ್ರೋತ್ಸಾಹಿಸಿದ ಶ್ರೀ ಶಾಂತವೀರ ಕಲಾಮಹಾವಿದ್ಯಾಲಯದ ಪ್ರಾಚಾರ್ಯರಾದ ಡಾ. ಎಸ್.ಎಸ್. ಪಾಟೀಲ ನಮ್ಮ ಸಂಸ್ಥೆಯ ಚೇರಮನ್ನರಾದ ಶ್ರೀ ಆರ್.ಬಿ. ಬಿರಾದಾರ ಜಂಟಿ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬಿರಾದಾರ ಹಾಗೂ ಎಲ್ಲ ಆಡಳಿತ ಮಂಡಳಿಯ ನಿರ್ದೇಶಕರುಗಳು ತಮ್ಮ ಸಂಸ್ಥೆಯಲ್ಲಿ ಸೇವೆಯನ್ನು ಸಲ್ಲಿಸುವುದಕ್ಕೆ ಅವಕಾಶವನ್ನು ನೀಡಿ ಇದರ ಜೊತೆಗೆ ಪಿಹೆಚ್.ಡಿ. ಅಧ್ಯಯನವನ್ನು ಕೈಗೊಳ್ಳಲು ಎರಡು ವರ್ಷಗಳ ಕಾಲ ನಿಯೋಜನೆಯ ಮೇಲೆ ಬಿಡುಗಡೆ ಮಾಡಿ ನನ್ನ ಜೀವನದ ಒಳಿತನ್ನು ಬಯಸಿ ಒಂದು ನೆಲೆಯನ್ನು ಒದಗಿಸಿದ ನನ್ನ ಬಗ್ಗೆ ತುಂಬಾ ಪ್ರೀತಿ, ಅಭಿಮಾನವನ್ನು ಹೊಂದಿದ ನಮ್ಮ ಸಂಸ್ಥೆಯ ಎಲ್ಲ ಪದಾಧಿಕಾರಿಗಳ ಸದಸ್ಯರುಗಳಿಗೆ ಭಕ್ತಿಪೂರ್ವಕ ಪ್ರಣಾಮಗಳು. ಎಫ್.ಆಯ್.ಪಿ. ಮೇಲೆ ಎರಡು ವರ್ಷ ಪಿಹೆಚ್.ಡಿ. ಅಧ್ಯಯವಕ್ಕೆ ಅವಕಾಶ ಕಲ್ಪಿಸಿದ ಯು.ಜಿ.ಸಿ. ಗೆ ಧನ್ಯವಾದಗಳು.

ನಾನು ಮಾಡುತ್ತಿರುವ ಒಳ್ಳೆಯ ಕಾರ್ಯಗಳನ್ನು ಮೆಚ್ಚಿ ಸಂತೋಷಪಟ್ಟು ಪ್ರೋತ್ಸಾಹಿಸುತ್ತಿರುವ ಸಹೋದ್ಯೋಗಿ ಮಿತ್ರರಾದ ಡಾ.ವ್ಹಿ.ಆರ್.ಚೌಧರಿ, ಸಹೋದರ ಸಮಾನರಾಗಿ ಸಹೋದ್ಯೋಗಿ ಮಿತ್ರರುಗಳಾದ ಡಾ. ವ್ಹಿ.ಎಸ್.ಶೇಖದಾರ, ಶ್ರೀ. ಆರ್.ಎಸ್. ಕೋಟ್ಯಾಳ. ಡಾ. ವ್ಹಿ.ಬಿ. ಪಾಟೀಲ. ಡಾ. ಎಂ.ಸಿ. ನಿಗಶೆಟ್ಟಿ. ಡಾ. ಬಿ.ಎಂ. ಬಿರಾದಾರ. ಡಾ. ಜೆ.ಆರ್. ಹಾವಿನಹಾಳ. ಶ್ರೀ ಎಚ್.ಎಸ್. ಕುಚನೂರ, ಶ್ರೀಮತಿ ಎಸ್.ಎ. ಕುರಂದವಾಡ, ಶ್ರೀ. ಎನ್.ಪಿ. ಬಿರಾದಾರ, ಶ್ರೀ ಜಿ.ಪಿ.ಸಾಳೆ, ಶ್ರೀ ಎಂ.ಎನ್. ಬಾಲಗಾವಿ, ಶ್ರೀ ಎಚ್.ಎಸ್. ಕಗ್ಗೊಡ, ಶ್ರೀ ಸಿ.ಎಸ್. ಗಣಚಾರಿ, ಶ್ರೀ ಎಸ್.ಡಿ. ಬಾಗೋಜಿಕೊಪ್ಪ ಇನ್ನುಳಿದ ಎಲ್ಲ ಬೋಧಕೇತರ ಬಂಧುಗಳನ್ನು ನೆನೆಯದೇ ಇರಲಾರೆ. ಹಾಗೆಯೇ ನನ್ನೊಂದಿಗೆ ಕರ್ನಾಟಕದ ಹಲವು ಭಾಗಗಳಿಗೆ ಕ್ಷೇತ್ರ ಕಾರ್ಯಕ್ಕೆ ಬಂದಿರುವ ಸ್ನೇಹಿತ ಡಾ. ಎಸ್.ಆರ್. ಹಿರೇಮಠ, ಕರಡು ಪ್ರತಿಯನ್ನು ತಿದ್ದುವಲ್ಲಿ ಸಹಾಯ ಮಾಡಿದ ಡಾ. ವ್ಹಿ.ಆರ್. ಚೌಧರಿ, ಡಾ. ಬಿ.ಜಿ. ಬಿರಾದಾರ, ಸ್ನೇಹಿತ ಜಿನದತ್ತ ಹಡಗಲಿ, ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ ವಕ್ತೃಗಳಿಗೂ ಮತ್ತು ಗೆಳೆಯನಾದ ಶ್ರೀ ನಿಂಗಯ್ಯ ಸಂ. ಚೌಕಿಮಠ, ಶ್ರೀಶೈಲ ಕೌಲಗಿ, ಶ್ರೀ ತಿಪ್ಪಣ್ಣಪ್ಪ ಯಳಮೇಲಿ, ಶ್ರೀ ಈರಪ್ಪ ಪರಣ್ಣವರ, ದಿ. ಶಿವನಗೌಡ ರು. ಪಾಟೀಲ, ಶ್ರೀ ಗುರುಲಿಂಗಪ್ಪ ನಂದಿ, ಶ್ರೀ ಗೋಲಪ್ಪ ದೇಗಿನಾಳ, ಶ್ರೀ ದಾನಪ್ಪಣ್ಣ ನಾಟೀಕಾರ, ಶ್ರೀ ಅಣ್ಣಪ್ಪ ನಾಗಶೆಟ್ಟಿ ಅವರಿಗೂ ಕೃತಜ್ಞತೆಗಳು.

ತಮ್ಮ ಜೀವನದುದ್ದಕ್ಕೂ ನಮ್ಮ ಒಳಿತನ್ನೇ ಬಯಸಿ ಮಕ್ಕಳ ಬೆಳವಣಿಗೆಯಲ್ಲಿಯೇ ಸಂತೋಷವನ್ನು ಕಂಡ ತಂದೆಯವರಾದ ಶ್ರೀ ದಿ. ಈರನಗೌಡ ಮ. ಬಿರಾದಾರ ಹಾಗೂ ತಾಯಿಯಾದ ಲಕ್ಷ್ಮೀಬಾಯಿ. ಈ. ಬಿರಾದಾರ ಅವರ ಪುತ್ರ ವಾತ್ಸಲ್ಯಕ್ಕೆ ಚಿರ ಋಣಿಯಾಗಿದ್ದೇನೆ. ನನ್ನ ಈ ಅಧ್ಯಯನದ ಬರವಣಿಗೆಗೆ ಸ್ಫೂರ್ತಿ ನೀಡಿ ಸಹಕರಿಸಿದ ಪತ್ನಿ ಸುವರ್ಣಾ (ಮಾಂತೇಶ್ವರಿ) ಮತ್ತು ಯಾವಾಗ ನಿಮ್ಮ ಪಿಎಚ್.ಡಿ ಅಧ್ಯಯನ ಮುಗಿಸುತ್ತೀರಿ ಎಂದು ಪದೇ ಪದೇ ಕೇಳಿ ಕೆಣಕಿದ ಮಗ ಶಶಾಂಕನಿಗೂ ಹಾಗೂ ಶಾಶ್ವತಾಳಿಗೂ ತುಂಬು ಹೃದಯದ ನೆನೆಕೆಗಳು.

ಈ ಮಹಾಪ್ರಬಂಧದ ಡಿ.ಟಿ.ಪಿ. ಕಾರ್ಯವನ್ನು ತುಂಬ ಮುತುವರ್ಜಿ ವಹಿಸಿ ಕಾಳಜಿಯಿಂದ ಟೈಪ ಮಾಡಿ, ಪ್ರಬಂಧದ ಅಂದ ಹೆಚ್ಚಾಗಲು ಕಾರಣರಾದ ಧಾರವಾಡದ ವಚನ ಗ್ರಾಫಿಕ್ಸ್‌ನ ಮಾಲೀಕರಾದ ದೇವರಾಜ ನಾಡಿಗ, ಸಹೋದರಿ ಶ್ರೀಮತಿ ಎ.ಬಿ. ಅಂಗಡಿ ಅವರಿಗೂ ಪ್ರೀತಿಪೂರ್ವಕ ವಂದನೆಗಳು.

**ಶಿವಶಂಕರ. ಈ. ಬಿರಾದಾರ.**

# ಪರಿವಿಡಿ

# ಅಧ್ಯಾಯ - ೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕರ್ನಾಟಕದ ಕಣಕಣದಲ್ಲೂ ಈ ನಾಡಿನ ಸಂಸ್ಕೃತಿ ಅಡಗಿದೆ. ಕರ್ನಾಟಕದುದ್ದಕ್ಕೂ ಅನೇಕ ಮಹಾಪುರುಷರು, ಶರಣರು, ದಾಸರು ಬಾಳಿ ಬದುಕಿದ್ದಾರೆ. ಇವರುಗಳಿಗೆ ಸಂಬಂಧಿಸಿದಂತೆ ನಾಡಿನಾದ್ಯಂತ ಮಂದಿರಗಳು ಹುಟ್ಟಿಕೊಂಡಿವೆ. ಈ ದೇವಾಲಯಗಳು ಕರುನಾಡಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ಇವುಗಳು ಈ ನಾಡಿನಲ್ಲಿ ಬಾಳಿ ಬದುಕಿ ಹೋದ ಪುಣ್ಯಪುರುಷರ, ಪುಣ್ಯ ಸ್ತ್ರೀಯರ ಜೀವನಕ್ರಮ, ಬದುಕಿದ ಪರಿ, ನಮಗೆಲ್ಲ ಮಾದರಿಯಾಗಿ ಇಂದಿಗೂ ವರ್ತಮಾನದಲ್ಲಿ ಸಮಷ್ಟಿ ಬದುಕಿಗೆ ದಿಕ್‌ಸೂಚಿಯಾಗಿ ಬೆಳಕು ನೀಡುವಂತೆ ಇವೆ.

ವಚನ ಚಳುವಳಿ ಮಾಡಿದ ಶರಣ ಶರಣೆಯರು, ಪ್ರಕೃತಿಯಲ್ಲಿ ಮನುಕುಲ ಹುಟ್ಟಿದ ಹಾಗೆಯೇ, ಈ ಭೂಮಿಯ ಮೇಲೆ ಜನ್ಮ ಪಡೆದವರಾಗಿದ್ದಾರೆ. ಇವರು ಛಲದಿಂದ ಸಾಧಕರಾಗಿ, ದಿವ್ಯಚೇತನಮೂರ್ತಿಗಳಾಗಿ, ನಾಡನ್ನು ಬೆಳಗಿದವರಾಗಿದ್ದಾರೆ. ಪ್ರಕೃತಿ ಬೇರೆಯೇ ಅಲ್ಲ. ನಾವು ಬೇರೆ ಅಲ್ಲವೆಂದು, ದೇವರು ಪ್ರಕೃತಿ ಅಂತಸ್ಥವಾಗಿದ್ದಾನೆಂದು ಹೇಳಿದವರು. ಲಿಂಗವೂ ಪ್ರಕೃತಿಯ ರೂಪಕ, ಲಿಂಗ ತತ್ವವೆಂದರೆ, ಪ್ರಕೃತಿ ತತ್ವ, ಲಿಂಗವು ಎಲ್ಲರಿಗೂ ಸಮಾನ ದೈವವಾಗಿದೆ. ಹೀಗೆಂದೆ ಲಿಂಗ ಆರಾಧಕರಾದವರ ಅಸಂಖ್ಯಾತರು, ಆರಾಧನೆಯ

ಮುಖಾಂತರ ಸುತ್ತಣ ಸಮಾಜ ಹಾಗೂ ಮಾನವ ಜನಾಂಗಗಳಲ್ಲಿ ಪ್ರಭಾವ ಬೀರಿದವರಾಗಿದ್ದಾರೆ. ಈ ಪ್ರಕ್ರಿಯೆಯಲ್ಲಿ ಗೋಲಗೇರಿ ಗೊಲ್ಲಾಳೇಶ್ವರನು ಪ್ರಭಾವಿ ಪುರುಷನೆಂದು ತನ್ನನ್ನು ಗುರುತಿಸಿಕೊಂಡವನು.

ಲಿಂಗತತ್ವ ಕುರಿತಾಗಿ ಹಾಗೂ ಲಿಂಗ ಆರಾಧಕರ ಕುರಿತಾಗಿ ಶಾಸನಗಳು, ಪುರಾಣಗಳು, ಕಾವ್ಯಕೃತಿಗಳು, ವಿವಿಧ ರೀತಿಯ ಸಾಹಿತ್ಯ ಹುಟ್ಟಿಕೊಂಡಿತು. ಆ ಎಲ್ಲ ಸಾಹಿತ್ಯ ಇಂದು ನಮಗೆ ಲಭ್ಯವಿಲ್ಲ. ಅನೇಕ ಕಾರಣಗಳಿಂದ, ಆಕ್ರಮಣಗಳಿಂದಾಗಿ ಕಾಲನಿಗೆ ಆಹುತಿಯಾಗಿದೆ. ಹೀಗಾಗಿ ನಮಗೆ ಸಿಗುವ ಶುದ್ಧ ಆಕರ ಸಾಮಗ್ರಿಗಳು ಬಹು ವಿರಳವಿದೆ. ಈ ಕಾರಣವಾಗಿಯೇ ಏನೋ ಪ್ರಮುಖ ವಚನಕಾರರ ಕುರಿತು ಹೆಚ್ಚೆಚ್ಚು ಅಧ್ಯಯನವಾಗಿರುವಂತೆ ತೆರೆಯ ಮರೆಯಲ್ಲಿರುವ ವಚನಕಾರರ ಬಗೆಗೆ ಆಗಿಲ್ಲ. ಅವರನ್ನು ಮುಖ್ಯವಾಹಿನಿಗೆ ತರುವ ಅವಶ್ಯಕತೆಯಿದೆ. ಡಾ. ಎಸ್.ಸಿ. ಪಾಟೀಲರು ಅಭಿಪ್ರಾಯ ಪಡುವಂತೆ, ಬಸವಪೂರ್ವಯುಗದ ಅಧ್ಯಯನಗಳು ಸಂಶೋಧಕರಿಗೆ, ಸಂಶೋಧನೆಗಳಿಗೆ ಹೆಚ್ಚು ಆಹ್ವಾನವನ್ನೊಡ್ಡಿ ನಿಂತಿವೆ. ಈ ತೆರನಾದ ಅಧ್ಯಯದಿಂದ ಇತಿಹಾಸದ ಪುಟಗಳಲ್ಲಿ ಮರೆಯಾಗಿರುವ ಐತಿಹಾಸಿಕ ವ್ಯಕ್ತಿಗಳನ್ನು ಪರಿಚಯಿಸಲು ಸಾಧ್ಯವಿದೆ. ಹೀಗಾಗಿ ನನ್ನ ಈ ಮಹಾಪ್ರಬಂಧದ ಮುಖಾಂತರ ಜನಮನಗಳಲ್ಲಿ ಪೌರಾಣಿಕ ವ್ಯಕ್ತಿಯಾಗಿ ನೆಲೆನಿಂತಿರುವ ಗೋಲಗೇರಿ ಗೊಲ್ಲಾಳೇಶ್ವರನ ನಿಜವಾದ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶವಾಗಿದೆ.

ಗೊಲ್ಲಾಳೇಶ್ವರನ ಜೀವನ ಚರಿತ್ರೆಯನ್ನು ಕಟ್ಟಲು ಆಕರ ಸಾಮಗ್ರಿಗಳ ಅವಶ್ಯಕತೆ ಇರುವುದರಿಂದ, ಸ್ಥಳೀಯ ಕ್ಷೇತ್ರ ಕಾರ್ಯ ಕೈಗೊಳ್ಳುವುದರ ಮೂಲಕ ಮತ್ತು ವೀರಶೈವ ಸಾಹಿತ್ಯದಲ್ಲಿ ಸಿಗುವ ಮಾಹಿತಿಗಳಿಂದ ಹಾಗೂ ಜಾನಪದ ಸಾಹಿತ್ಯದಿಂದ, ದೇವಾಲಯ, ದೇವಾಲಯದ ಉಸ್ತುವಾರಿ ನಿರ್ವಹಿಸುತ್ತಿರುವ ಭಕ್ತರಿಂದ, ಭಕ್ತರ ಕುಟುಂಬಗಳ ಇತಿಹಾಸದಿಂದ, ಆಕರ ಸಾಮಗ್ರಿಗಳನ್ನು ಕ್ರೋಢೀಕರಿಸಿ ಮಹಾಪ್ರಬಂಧವನ್ನು ರಚಿಸಿದ್ದಾಗಿದೆ. ಗೊಲ್ಲಾಳೇಶ್ವರನ ಕುರಿತ ಆಕರಗಳನ್ನು ಭಾಷಿಕ, ಮೌಖಿಕ ಹಾಗೂ ವಸ್ತುಸಾಮಗ್ರಿ ಆಕರಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೧. ಭಾಷಾ ಸಾಮಗ್ರಿ ಆಕರಗಳು**

೧. ಗೊಲ್ಲಾಳೇಶ್ವರನಿಂದ ರಚಿತವಾದ ವಚನಗಳು

೨. ಗೊಲ್ಲಾಳೇಶ್ವರ ಪುರಾಣ

೩. ಗೊಲ್ಲಾಳೇಶ್ವರನನ್ನು ಕುರಿತ ವೀರಶೈವ ಸಾಹಿತ್ಯ

೪. ಗೊಲ್ಲಾಳೇಶ್ವರ ನಾಟಕ

೫. ಗೊಲ್ಲಾಳೇಶ್ವರ ಕುರಿತು ಆಧುನಿಕ ಸಾಹಿತ್ಯ

**೨. ವಸ್ತು ಸಾಮಗ್ರಿ ಆಕರ**

೧. ಗೊಲ್ಲಾಳೇಶ್ವರ ದೇವಾಲಯಗಳು

೩. ಮೌಖಿಕ ಸಾಮಗ್ರಿ ಆಕರಗಳು

೧. ಗೊಲ್ಲಾಳೇಶ್ವರ ಕುರಿತು ಜನಪದ ಸಾಹಿತ್ಯ

೨. ಐತಿಹ್ಯಗಳು

೩. ಗೊಲ್ಲಾಳೇಶ್ವರನ ಕುರಿತು ನಂಬಿಕೆ, ಆಚರಣೆ, ಸಂಪ್ರಾದಯಗಳು

ಈ ಮೇಲಿನ ಆಕರ ಸಾಮಗ್ರಿಗಳ ಮುಖಾಂತರ ಹಾಗೂ ವಿದ್ವಾಂಸರುಗಳ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಇಂದಿನ ಜಾಗತೀಕರಣ, ಉದಾರೀಕರಣಗಳ ಅಲೆಯಲ್ಲಿ ಒಂದು ನಾಡಿನ, ಅದರಲ್ಲೂ ಒಬ್ಬ ಮಹಾಪುರುಷನ ಕುರಿತಾದ ಅಧ್ಯಯನಗಳು ಬಹಳ ವಿಶಿಷ್ಟ ಎನಿಸುತ್ತವೆ. ವಿಶ್ವಸಂಸ್ಥೆಯ ಸದಾಶಯದಂತೆ, ಜಗತ್ತಿನ ವೈವಿಧ್ಯತೆಯ ಉಳಿವಿಗೆ, ಸುಂದರತೆಗೆ, ಸಂಸ್ಕೃತಿಯ, ಅದರಲ್ಲೂ ಉಪಸಂಸ್ಕೃತಿಯ, ಅಧ್ಯಯನಗಳು ಮುಖ್ಯವೆನಿಸುವುದರಿಂದ. ಕರ್ನಾಟಕದ ಶರಣಪರಂಪರೆಯಲ್ಲಿ ಬಾಳಿ ಬದುಕಿಹೋದ ಗೋಲಗೇರಿ ಗೊಲ್ಲಾಳೇಶ್ವರರ ಕುರಿತಾದ ಅಧ್ಯಯನ ತುಂಬಾ ಮುಖ್ಯವಾಗುತ್ತದೆ. "ಪರಂಪರೆಯೆನ್ನುವುದು ಮೂಲದ ಆಶಯವನ್ನು ಉಳಿಸಿಕೊಂಡು ಕಾಲಕಾಲಕ್ಕೆ ಬದಲಾಗುತ್ತ ಬೆಳೆಯುವ ಪ್ರಕ್ರಿಯೆ. ಬದಲಾವಣೆಯ ಪ್ರಕ್ರಿಯೆಯಲ್ಲಿ ಮೂಲದ ಎಲ್ಲ ವಿವರಗಳೂ ಉಳಿಯುವದಿಲ್ಲ; ಉದ್ದೇಶ ಮತ್ತು ಆಶಯ ಉಳಿಯುತ್ತವೆ. ಬೆಳೆಯುತ್ತ ಹೋಗುತ್ತವೆ. ಯಾವಾಗ ಬೆಳವಣಿಗೆ ನಿಂತು ಜಡವಾಗುತ್ತದೆಯೋ ಆಗ ಅದು 'ಸಂಪ್ರದಾಯ'ವೆನಿಸಿಕೊಳ್ಳುತ್ತದೆ"[೧] ಶರಣ ಪರಂಪರೆಯಲ್ಲಿ ಬೆಳೆದು ಬಾಳಿದ ಶರಣರು ಒಂದೇ ರೀತಿಯಲ್ಲಿರಲಿಲ್ಲ. ಅವರ 'ಜೀವನದ ನಾನಾ ವಿಷಯಗಳ, ನಾನಾ ಧ್ಯೇಯಗಳ, ನಾನಾ ತತ್ವಗಳ ಸಿದ್ಧಾಂತಗಳ ತಾರತಮ್ಯ ಜ್ಞಾನದಿಂದಾದ ಸ್ವಾರಸ್ಯಮಯವಾದ ಸಮನ್ವಯ ಸಂಸ್ಕೃತಿ, ಸಾಹಿತ್ಯ, ನಿರ್ಮಾಣ ಇವರಿಂದಾಯಿತು. ಅವರೇ ಶೈವ, ವೀರಶೈವ, ಲಿಂಗಾಯತ, ಲಿಂಗನಿಷ್ಠರು, ಲಿಂಗಭಕ್ತರೆಂದು, ಗುರುತಿಸಿಕೊಂಡರು.

ವೀರಶೈವ ಸಾಹಿತ್ಯದ ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಸಾಧನೆ ಮಾಡಿದ ಅನೇಕರಲ್ಲಿ ಕೆಲವೇ ಪ್ರಮುಖ ಶರಣ-ಶರಣೆಯರ, ಕವಿ-ಕಾವ್ಯಗಳ ಕುರಿತು ಅಧ್ಯಯನ ಮಾಡಲಾಗಿದೆ. ಆದರೆ ಇತ್ತೀಚೆಗೆ ಬಹುಶಿಸ್ತೀಯ ಹಾಗೂ ಸ್ಥಳೀಯವಾದ ಅಧ್ಯಯನ ನಡೆಯುತ್ತಿರುವುದರಿಂದ ಈ ಕ್ಷೇತ್ರದಲ್ಲಿ ತೀರ ಉಪೇಕ್ಷಿತರಾದವರನ್ನೂ ಕುರಿತು ಸಂಶೋಧನಾಧ್ಯಯನ ನಡೆಯುತ್ತಿದೆ. ದಾರ್ಶನಿಕರ ತತ್ವಗಳಿಗೆ ಅಡಿಪಾಯ ಹಾಕಿದ ಅನೇಕರು ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೆ ಹಲವಾರು ಕಾರಣಗಳಿಂದ ಅವರು ಬೆಳಕಿಗೆ ಬಾರದೆ, ಗುಪ್ತವಾಗಿ ಉಳಿದಿದ್ದರು. ಈಗ್ಗೆ ಇವರ ಸಮಾಜಮುಖಿ ಜೀವನ, ಸಮಾನತೆಯ ಸಾಮಾಜಿಕ ಜೀವನ, ಜಂಗಮ-ಸ್ಥಾವರಗಳ ಪರಿಕಲ್ಪನೆಯ ಅರಿವಿನಿಂದ ಬಹುಶಿಸ್ತೀಯ ಅಧ್ಯಯನದಿಂದ ಜಗತ್ತಿಗೆ ಪರಿಚಿತರಾಗುತ್ತಿದ್ದಾರೆ.

ಅಂತೆ -ಕಂತೆಯ ನಡುವೆ ದಂತಕತೆಯಾಗಿ ಹೋದ ಗೊಲ್ಲಾಳೇಶ್ವರರ ವಿಷಯವನ್ನು ಹಾಗೂ ಚಾರಿತ್ರಿಕ ಸಂಗತಿಯನ್ನು ವರ್ತಮಾನಕ್ಕೆ ಪೂರಕವಾಗಿ ಅಭ್ಯಸಿಸುವುದು, ಗತಿಸಿದ ಜೀವನ ಕುರಿತು ಹುಟ್ಟಿಕೊಂಡ ಅಪೂರ್ವ ಕತೆಗಳಲ್ಲಿ ಸತ್ಯವನ್ನು ಹೆಕ್ಕುತ್ತಾ ವರ್ತಮಾನಕ್ಕೆ ಮುಖಾಮುಖಿಯಾಗಿಸುತ್ತಾ. ಸಮಕಾಲೀನ ಅಗತ್ಯಗಳಿಗೆ ಅನುಗುಣವಾಗಿ ಗೊಲ್ಲಾಳನು ಪ್ರತಿಪಾದಿಸಿದ ಮೌಲ್ಯಗಳನ್ನು ಪೋಣಿಸುವುದಾಗಿದೆ. "ಒಬ್ಬ ಮನುಷ್ಯ ಆಸ್ತಿಕನೋ ನಾಸ್ತಿಕನೋ ಎನ್ನುವುದು ಇವತ್ತಿನ ಮುಖ್ಯ ಮಾನದಂಡವಲ್ಲ. ಸಂಸ್ಕೃತಿ ಸಾಮರಸ್ಯ, ಅನ್ಯಧರ್ಮ ಸಹಿಷ್ಣುತೆ, ಮಾನವೀಯ ಅಂತಃಕರಣ, ಆತ್ಮವಂಚನೆಯಿಲ್ಲದ ಮೌಲ್ಯನಿಷ್ಠೆ ಇವುಗಳಿಂದ ಕೂಡಿದ ಪ್ರಖರ ಪ್ರಾಮಾಣಿಕತೆ ಇವತ್ತು ಮುಖ್ಯವಾಗಿದೆ. ಅಮಾನವೀಯವಲ್ಲದ ಆಚರಣೆ, ಅಸಹನೆಯಿಲ್ಲದ ಮನಸ್ಸು, ಪರಸ್ಪರರ ಪ್ರೀತಿಪೂರ್ವಕ ನಂಬಿಕೆ -ಇವ್ಯಾವನ್ನೂ ಲೆಕ್ಕಿಸದೆ ಪೂಜೆಯಲ್ಲಿ ಬಾಯಿಪಾಠ ಒಪ್ಪಿಸುವ ಆಸ್ತಿಕನಾಗಿದ್ದರೆ ಸಾಕೆ? ಸಾಮಾಜಿಕ, ಆರ್ಥಿಕ ಅಸಮಾನತೆಯನ್ನು ತೊಡೆದುಹಾಕುವ ಸಂಕಲ್ಪವಿಲ್ಲದೆ ಕೇವಲ ನಾಸ್ತಿಕನಾದರೆ ಸಾಕೆ?"[3] ಈ ನೆಲೆಯಲ್ಲಿ ಮಥಿಸುತ್ತಾ ಗೊಲ್ಲಾಳೇಶ್ವರರ ಕುರಿತು, ಮಾಹಿತಿಯನ್ನು ಕ್ರೋಢೀಕರಿಸಿ ಅಧ್ಯಯನ ಮಾಡಲಾಗಿದೆ.

ಹತ್ತು ಮತ್ತು ಹನ್ನೊಂದನೆಯ ಶತಮಾನಗಳು ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ವಿಪ್ಲವತೆಯಿಂದ ಕೂಡಿದ್ದ ಕಾಲ. ಆಗ್ಗೆ ಜಡ್ಡುಗಟ್ಟಿದ ವೈದಿಕ ಮತಾರಚಣೆಗಳು, ಜನಸಾಮಾನ್ಯರ ಪ್ರಜ್ಞೆಯನ್ನು ಕೆರಳಿಸಿಬಿಟ್ಟಿದ್ದವು. ತತ್ಸಂದರ್ಭದಲ್ಲಿ ಧರ್ಮ-ಸಮಾಜ ಸುಧಾರಕರಾಗಿ ಉದಯಿಸಿದವರಲ್ಲಿ ಶರಣ-ಶರಣೆಯರು. ಇವರುಗಳು ಲಿಂಗಭೇದ, ವರ್ಗಭೇದಗಳನ್ನು ತಿರಸ್ಕರಿಸಿ, ನಿರ್ಮಲ ಭಾವದಿಂದ ಸಮಾನತೆಯ ಬದುಕನ್ನು (ಸಮಾಜವನ್ನು) ರೂಪಿಸಲು ಪ್ರಯತ್ನಿಸಿದರು. ~~ಈ ಪ್ರಯತ್ನದಲ್ಲಿ~~ ಅವು ಯಾವ ತರಹದ ಒತ್ತಡವನ್ನು, ಅಸಾಧುವಾದ, ಮಾರ್ಗವನ್ನು ಅನುಸರಿಸಲಿಲ್ಲ. ಜನರಿಗೆ ಭಕ್ತಿ, ರೀತಿ, ನೀತಿಯ ತಿಳುವಳಿಕೆಗಳನ್ನು ನೀಡಿದರು. ಅಂತಹ ಶರಣ ಪರಂಪರೆಯಲ್ಲಿ ಗೋಲಗೇರಿ ಗೊಲ್ಲಾಳೇಶ್ವರನು ಒಬ್ಬನಾಗಿದ್ದಾನೆ.

ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ - ಶರಣೆಯರ ಬದುಕಿನ ಸಂದರ್ಭದಲ್ಲಿ ಜರುಗಿದ ಕ್ರಾಂತಿ ಅದ್ಭುತವಾದುದಾಗಿದೆ. ಸಮಾಜದ ಸ್ವಸ್ಥ ಬದುಕಿಗಾಗಿ ಇಡೀ ಮನುಕುಲಕ್ಕೆ ಪರಿಚಯಿಸಲು ಅಧ್ಯಯನದ ಅವಶ್ಯಕತೆಯಿದೆ. "ವಂದೇ ಮಾತರಂ" ಎಂದು ಹೇಳುವ ನಾವೆಲ್ಲಾ ಒಂದೇ ಕುಟುಂಬದವರೆಂದೂ, ವಿಶ್ವಶಾಂತಿಗಾಗಿ ನಮ್ಮ ನಾಡಿನ ಸಮಗ್ರ ಶಿವಶರಣ -ಶರಣೆಯರ ತತ್ವಗಳು, ಯೋಚನೆ, ಯೋಜನೆಗಳನ್ನು ಮನುಕುಲಕ್ಕೆ ಪರಿಚಯಿಸುವ ಅಗತ್ಯತೆಯಿಂದೆ. ಈ ಹಿನ್ನೆಲೆಯಲ್ಲಿ ಗೊಲ್ಲಾಳೇಶ್ವರನ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ವಿಷಯಗಳಲ್ಲಿ ಆತನ ಆಚಾರ, ವಿಚಾರ, ನಿಷ್ಠೆ, ಐಕ್ಯತಾಭಾವನೆ ಪ್ರಭಾವಕಾರಿಯಾಗಿವೆ. ಈ ಸತ್ಯತೆಯ ಕುರಿತು ಅಧ್ಯಯನ ಮಾಡುವುದರಿಂದ ಕರ್ನಾಟಕದ ಹಿರಿಮೆಯನ್ನು ಪೂರ್ಣ ಪ್ರಮಾಣದಲ್ಲಿ ಬಿಂಬಿಸುವಲ್ಲಿ

ಗೋಲಗೇರಿ ಗೊಲ್ಲಾಳೇಶ್ವರನ ಅಧ್ಯಯನವು ಮಹತ್ವದ ಸಂಗತಿಯಾಗಿದೆ. ಆದ್ದರಿಂದ ಈ ಕುರಿತು ಸಮಗ್ರವಾದ ಅಧ್ಯಯನ ಕೈಗೊಳ್ಳುವುದು ಈ ಪ್ರಬಂಧದ ಉದ್ದೇಶವಾಗಿದೆ.

ಹನ್ನೆರಡನೆಯ ಶತಮಾನದ ಪೂರ್ವದಲ್ಲಿ ಮತ್ತು ಅನಂತರದ ಕಾಲಾವಧಿಯಲ್ಲಿ ಅನೇಕ ಶಿವಶರಣ - ಶರಣೆಯರು ಉದಯಿಸಿದ್ದರು ಎಂಬುದು ಸರ್ವವಿದಿತವಾದ ಸಂಗತಿ. ಈ ವಿಷಯದಲ್ಲಿ ಇನ್ನೂ ಅಭ್ಯಸಿಸಬೇಕಾದ ಅವಶ್ಯಕತೆ ಇದೆ. ಶರಣ ಸಮೂಹದಲ್ಲಿ ವಿವಿಧ ಪ್ರದೇಶ, ವಿವಿಧ ಜಾತಿ, ವಿವಿಧ ವೃತ್ತಿ, ವಿವಿಧ ಅನಾನುಕೂಲತೆಗಳಿಂದ ನೋವು ಅನುಭವಿಸಿದವರೆಲ್ಲ ಒಗ್ಗೂಡಿದರು. ಇವರೆಲ್ಲ ತ್ರಿಕರಣ ಪೂರ್ವಕವಾಗಿ ಕೈಜೋಡಿಸಿದರು. ಈ ಶಿವಶರಣರ ಮಹತ್ಕಾರ್ಯದಲ್ಲಿ ಪಾಲ್ಗೊಂಡ ಅನೇಕರಲ್ಲಿ ಗೋಲಗೇರಿಯ ಗೊಲ್ಲಾಳನು ಒಬ್ಬನಾಗಿದ್ದಾನೆ. ಈತ ಸಾಧಕನಾಗಿ, ಸಂಪರ್ಕದ ಸಂಸ್ಕಾರ ಬಲದಿಂದ ಚಿಂತನಶೀಲನಾಗಿ, ವಿಚಾರಶೀಲನಾಗಿ, ಪರಿವರ್ತನೆಗೊಂಡು ಪ್ರಸಿದ್ಧನಾದನು ಎಂಬುದಕ್ಕೆ ಅವನ ಚರಿತ್ರೆಯ ಅವಲೋಕನದಿಂದ ತಿಳಿದುಬರುತ್ತದೆ.

ಅಧ್ಯಯನಕ್ಕೆ ಪೂರಕವಾದ ಆಕರಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ೧) ಮಾಹಿತಿ ಸಂಗ್ರಹಣೆ, ೨) ವಿದ್ವಾಂಸರ ಜೊತೆ ಚರ್ಚೆ, ೩) ಜನಸಾಮಾನ್ಯರ ಜೊತೆ ಚರ್ಚೆ ಮಾಡುವುದರ ಮೂಲಕ ವಿಷಯವನ್ನು ಸಂಗ್ರಹಿಸಲಾಗಿದೆ. 'ಗೊಲ್ಲಾಳೇಶ್ವರನು' ಬಸವಪೂರ್ವದ ಒಬ್ಬ ಶರಣನಾಗಿದ್ದರಿಂದ, ನಾನು ಇಲ್ಲಿ 'ಚಾರಿತ್ರಿಕ ಮಾರ್ಗ'ವನ್ನು ಅನುಸರಿಸಬೇಕಾಯಿತು. ಸಂಶೋಧನಾ ವಿಧಾನಗಳಲ್ಲಿ 'ಚಾರಿತ್ರಿಕ ಮಾರ್ಗವೂ ಒಂದಾಗಿದೆ. ಈ ವಿಧಾನದಂತೆ ಈತನ ಕಾಲ ಯಾವುದು? ಇವನು ಯಾವ ಮತದವನು? ಇವರು ರಚಿಸಿದ ಸಾಹಿತ್ಯವೇನಾದರೂ ಇದೆಯೇ? ಇವನು ಕರ್ನಾಟಕದ ಸಂಸ್ಕೃತಿಗೆ ಕೊಟ್ಟ ಕಾಣಿಕೆ ಯಾವುದು? ಈ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಈ ಪ್ರಬಂಧದ ಉದ್ದೇಶವಾಗಿದೆ.

ಗೊಲ್ಲಾಳನು ಕರ್ನಾಟಕದ ಒಬ್ಬ ಬಹುಮುಖ್ಯ ಬಸವಪೂರ್ವಯುಗದ ಶರಣನು ಆಗಿರುವುದರಿಂದ, ಗೊಲ್ಲಾಳೇಶ್ವರನ ಹೆಸರಿನಲ್ಲಿ ಅನೇಕ ಕಡೆಗಳಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ. ಇವುಗಳ ಆಧಾರದ ಮೇಲೆ ಗೊಲ್ಲಾಳನ ಚರಿತ್ರೆ ಅರಿತುಕೊಳ್ಳುವುದು ಅಧ್ಯಯನದ ಮೊದಲ ಪ್ರಸ್ಥಾನವಾಗಿದೆ. ಈ ದೇವಾಲಯಗಳು ಅನೇಕ ಜನರ, ಅನೇಕ ಧರ್ಮೀಯರ, ಅನೇಕ ಭಾಷಿಕರ, ಆರಾಧನಾ ಕೇಂದ್ರವಾಗಿರುವುದನ್ನು ಗಮನಿಸಿ ಅದನ್ನು ದಾಖಲಿಸಿಕೊಳ್ಳಲಾಗಿದೆ. ದೇವಾಲಯದ ನಿರ್ಮಾಣ ಪತ್ತೆ ಮಾಡುವುದರ ಜೊತೆಗೆ ಯಾವ ಯಾವ ಪ್ರದೇಶದಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ ಎಂಬುದರ ಕಡೆಗೆ ಲಕ್ಷ್ಯವಹಿಸಿ ದಾಖಲಿಸಲಾಗಿದೆ.

ಸಾಹಿತ್ಯಿಕ ಆಧಾರಗಳಲ್ಲಿ ಗೊಲ್ಲಾಳನಿಂದ ರಚಿತವಾದ ಸಾಹಿತ್ಯ ಹಾಗೂ ಗೊಲ್ಲಾಳನ ಕುರಿತಾಗಿ ರಚಿತವಾದ ಸಾಹಿತ್ಯ ಎಂದು ವಿಭಾಗಿಸಿ ಅಭ್ಯಸಿಸಲಾಗಿದೆ. ಗೊಲ್ಲಾಳನು ರಚಿಸಿದ ವಚನಗಳು ಮತ್ತು ಈತನ ಕುರಿತಾದ ಐತಿಹ್ಯಗಳು, ಪುರಾಣಗಳು, ನಾಟಕ, ಜನಪದ ಸಾಹಿತ್ಯವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ವಿದ್ವಾಂಸರು, ಜನಸಾಮಾನ್ಯರು, ಭಕ್ತರು, ದೇವಾಲಯದ ಅರ್ಚಕರು, ಇವರನ್ನು ಸಂಪರ್ಕಿಸಿ, ಗೊಲ್ಲಾಳನ ಚರಿತ್ರೆ, ಈತನ ಭಕ್ತಿ ಲಿಂಗನಿಷ್ಠೆಯ, ಕುರಿತು ಮಾಹಿತಿಯನ್ನು ಮತ್ತು ನಿರ್ದೇಶನವನ್ನು

ಸ್ವೀಕರಿಸಲಾಯಿತು. ಈತನ ಬದುಕು ಮತ್ತು ಸಾಹಿತ್ಯವನ್ನು ಅವಲೋಕಿಸಿದಾಗ ತಿಳಿದುಬರುವ ಸಂಗತಿ ; ಗೊಲ್ಲಾಳೇಶ್ವರನು ಕರ್ನಾಟಕ ಸಂಸ್ಕೃತಿಯ ಭಾಗವಾಗಿರುವುದುರಿಂದ, ಅದರಲ್ಲೂ ಕೆಳವರ್ಗದಲ್ಲಿ ಹುಟ್ಟಿರುವುದರಿಂದ, ಆಧುನಿಕ ಸಂಶೋಧನೆಗಳ ಹೊಸರೀತಿಯ ಕ್ರಮದಂತೆ ಉಪಸಂಸ್ಕೃತಿಯ ಅಧ್ಯಯನವನ್ನು ಕೈಗೊಳ್ಳುವುದರಿಂದ, ಒಬ್ಬ ಶರಣನು (ಎಲೆಯ ಮರೆಯ ಕಾಯಿಯಂತಿರುವ) ಲೋಕಕ್ಕೆ ಬೆಳಕಾಗಿರುವ ರೀತಿಯನ್ನು ಹೇಳಲನುವಾಗಿರುವುದರಿಂದ, ಈ ಹಿನ್ನೆಲೆಯ ಚಿಂತನೆ ಸಂಕೀರ್ಣಗೊಂಡು ಕನ್ನಡ ಹಾಗೂ ಜಾಗತಿಕ ಸಂಸ್ಕೃತಿಗಳ ಮುಖಾಮುಖಿ ನೆಲೆಗೆ ನನ್ನ ಸಂಶೋಧನೆ ಇಂಬು ನೀಡಿರುವುದರಿಂದ ಸಮಗ್ರ ಸಂಶೋಧನೆಗೆ ಮೂಲ ನೆಲೆ ಸಿಕ್ಕಂತಾಗಿರುವುದು. ಹೀಗೆ ಗೋಲಗೇರಿ ಗೊಲ್ಲಾಳೇಶ್ವರ ಹಾಗೂ ಈತನು ರಚಿಸಿದ ವಚನಗಳನ್ನು ಮತ್ತು ಇವನ ಕುರಿತಾಗಿ ರಚಿತವಾದ ಸಾಹಿತ್ಯ ಕುರಿತು ಇಲ್ಲಿಯವರೆಗೆ ವಿದ್ವಾಂಸರಿಂದ ತಲಸ್ಪರ್ಶಿಯಾದ ಅಧ್ಯಯನ ನಡೆದಿರುವುದಿಲ್ಲ. ಇದನ್ನು ಮನಗಂಡು ಗೋಲಗೇರಿ ಗೊಲ್ಲಾಳೇಶ್ವರ ಚರಿತ್ರೆ ಹಾಗೂ ಸಾಹಿತ್ಯ, (ಗೊಲ್ಲಾಳೇಶ್ವನಿಂದ, ಗೊಲ್ಲಾಳೇಶ್ವರ ಕುರಿತ) ಕುರಿತು ಸಮಗ್ರ ಅಧ್ಯಯನವನ್ನು ಇಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಹನ್ನೆರಡನೆಯ  ಶತಮಾನದಲ್ಲಿ ನಡೆದ ಶರಣ ಚಳುವಳಿಗೆ ಇಂತಹ ಅಜ್ಞಾತ ವಚನಕಾರರು, ಶರಣರು, ಸತ್ಯಶುದ್ಧ ಕಾಯಕದ ಮೂಲಕ ಅಡಿಪಾಯ ಹಾಕಿದ್ದಾರೆ. ಗೊಲ್ಲಾಳೇಶ್ವರನಂಥವರು ಕನ್ನಡ ವೀರಶೈವ ತತ್ವಶಾಸ್ತ್ರ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪೂರ್ವವಾಗಿದೆ.

ಉತ್ತರ ಕರ್ನಾಟಕದ ವಿಜಾಪೂರ, ಗುಲಬರ್ಗಾ, ಯಾದಗೀರ, ಬಳ್ಳಾರಿ, ರಾಯಚೂರ, ಬೆಳಗಾವಿ, ಧಾರವಾಡ ಜಿಲ್ಲೆಗಳಲ್ಲಿ ಬಹು ಹೆಚ್ಚಾಗಿ ಈತನನ್ನು ದೈವವೆಂದು ಇಂದಿಗೂ ಆರಾಧಿಸುತ್ತಿದ್ದಾರೆ. ವೀರಶೈವ ಧರ್ಮಕ್ಕೆ  ಈತ ಅಮೂಲ್ಯ ಕೊಡುಗೆಯನ್ನು ನೀಡಿದ್ದಾನೆ. ಗೊಲ್ಲಾಳೇಶ್ವರನ ವ್ಯಕ್ತಿತ್ವ ಹಾಗೂ ಸಾಹಿತ್ಯ ದರ್ಶನಗಳ ಪರಿಚಯ ಮಾಡಿಸಿಕೊಡುವುದೇ ಈ ಮಹಾಪ್ರಬಂಧದ ಉದ್ದೇಶವಾಗಿದೆ.

ಮಹಾಪ್ರಬಂಧದ ರಚನೆಯಲ್ಲಿ ಸಾಹಿತ್ಯ ಕೃತಿಗಳು, ಮೌಖಿಕ ಸಾಹಿತ್ಯ ಇವುಗಳನ್ನು ಪ್ರಮುಖ ಆಕರ ಸಾಮಗ್ರಿಯನ್ನಾಗಿ ಉಪಯೋಗಿಸಿಕೊಳ್ಳಲಾಗಿದೆ. ಇಲ್ಲಿ ಕ್ಷೇತ್ರಕಾರ್ಯ, ಸಂದರ್ಶನ, ಲೇಖನ, ಪುರಾಣ ಕಾವ್ಯಗಳ ಮೂಲಕ ವಿಷಯ ಸಂಗ್ರಹಿಸಲಾಗಿದೆ. ಗೊಲಗೇರಿ ಗೊಲ್ಲಾಳೇಶ್ವರನಿಗೆ ಸಂಬಂಧಿಸಿದ ಸರ್ವಸಂಗತಿಗಳನ್ನು ಸಂಗ್ರಹಿಸಿವುದು. ಈ ಮಹಾಪ್ರಬಂಧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಗೊಲ್ಲಾಳೇಶ್ವರ ಚಾರಿತ್ರಿಕ ಹಿನ್ನೆಲೆ, ಗೊಲ್ಲಾಳೇಶ್ವರ ನೆಲೆಗಳು, ಶರಣ ಪರಂಪರೆಯಲ್ಲಿ ಗೊಲ್ಲಾಳೇಶ್ವರ, ಗೊಲ್ಲಾಳೇಶ್ವರ ಸಾಹಿತ್ಯ ಸಮೀಕ್ಷೆ ಹಾಗೂ ವಿಶ್ಲೇಷಣೆ, ಗೊಲ್ಲಾಳೇಶ್ವರ ಕುರಿತ ಸಾಹಿತ್ಯ, ಗೊಲ್ಲಾಳೇಶ್ವರ ಕುರಿತ ಆಚರಣೆ, ನಂಬಿಕೆ, ಸಂಪ್ರದಾಯಗಳು, ಹೀಗೆ ಈ ಸಂಶೋಧನಾ ಮಹಾ ಪ್ರಬಂಧಕ್ಕೆ ಒಂದು ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ವಿಷಯಗಳನ್ನು ಸಂಗ್ರಹಿಸುತ್ತಾ ಅಧ್ಯಾಯಗಳನ್ನು ವಿವರಿಸಲಾಗಿದೆ.

ಇತ್ತೀಚೆಗೆ ಸಂಶೋಧಕರು, ವಿದ್ವಾಂಸರು, ಬಹುಶಿಸ್ತೀಯ ಹಾಗೂ ಸ್ಥಳೀಯವಾದ ಅಧ್ಯಯನದ ಕಡೆಗೆ ಹೆಚ್ಚೆಚ್ಚು ಲಕ್ಷ್ಯವಹಿಸುತ್ತಿರುವುದರಿಂದ ಗೊಲ್ಲಾಳೇಶ್ವರನಂತಹ ಉಪೇಕ್ಷಿತರಾದವರನ್ನು ಕುರಿತು

ಅಧ್ಯಯನವನ್ನು ಮಾಡುವ ಉದ್ದೇಶವಿಟ್ಟುಕೊಳ್ಳಲಾಗಿದೆ. ಕನ್ನಡ ಸಾಹಿತ್ಯವು ಹತ್ತನೆಯ ಶತಮಾನದ ನಂತರದಲ್ಲಿ ಪಂಡಿತವರ್ಗದಿಂದ ಮತ್ತು ರಾಜಾಶ್ರಯದಿಂದ ದೂರಸರಿದು ಜನಸಾಮಾನ್ಯರ ಬದುಕಿನೆಡೆಗೆ ಸಮಾಜಿಮುಖಿಯಾಗಿ ಬೆಳೆಯಲು ಪ್ರಾರಂಭಿಸಿತು. ಮುಂದುವರೆದ ಈ ಶತಮಾನದ ಬದುಕು, ಸಾಮಾಜಿಕ ಹಾಗೂ ರಾಜಕೀಯ, ಧಾರ್ಮಿಕ ಜೀವನ ವಿಪ್ಲವಗಳಿಂದ ಕೂಡಿದ್ದ ಕಾಲ. ಈ ಸಂದರ್ಭದಲ್ಲಿ ವೈದಿಕ ಮತಾಚರಣೆಗಳು ಜನಸಾಮಾನ್ಯರ ಪ್ರಜ್ಞೆಯನ್ನು ಕೆರಳಿಸಿಬಿಟ್ಟವು. ತತ್ಸಂದರ್ಭದಲ್ಲಿ ಈ ಧರ್ಮ -ಸಮಾಜ ಸುಧಾರಕರ ಒಂದು ಪರಂಪರೆಯೇ ಹುಟ್ಟಿಕೊಂಡಿತು. ಅದುವೇ ಶರಣ ಪರಂಪರೆ. ಈ ಪರಂಪರೆಯು ಮೇಲು-ಕೀಳು ಭೇದಗಳನ್ನು ಸರಿಸಿ ಸಮಾನವಾದ ಮಾನವ ಸಮಾಜ ಕಟ್ಟಲು ಪ್ರಯತ್ನಿಸಿತು.

ಕರ್ನಾಟಕದ ಶಿವಶರಣರು ನಡೆಸಿದ ವಚನ ಚಳುವಳಿ ಸಮಾಜದ ಸಮಗ್ರ ಪರಿವರ್ತನೆಗೆ ಪ್ರಯತ್ನಪಟ್ಟಿತ್ತು. ಈ ಪ್ರಯತ್ನದಲ್ಲಿ ನೂರಾರು-ಸಾವಿರಾರು ಶಿವಶರಣರು ವಚನಸಾಹಿತ್ಯದ ಸೃಷ್ಟಿಯಲ್ಲಿ ತೊಡಗುವುದರ ಮೂಲಕ ಜಗತ್ತಿನ ವೈಚಾರಿಕ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ. ಅವರಲ್ಲಿ ಬಸವ, ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿಯರಂತಹ ಪ್ರಮುಖ ಶರಣರು ಮಾತ್ರ ಅಧ್ಯಯನಕ್ಕೆ ಒಳಪಟ್ಟಿದ್ದು ಹೆಚ್ಚಾಗಿ. ಆದರೆ ಬೇರೆ ಬೇರೆ ಪ್ರದೇಶಗಳಲ್ಲಿ, ಸಮುದಾಯಗಳಲ್ಲಿ, ಜನಾಂಗಗಳಲ್ಲಿದ್ದ ಕಾಯಕಗಳಿಂದ ಬಂದಂತಹ ಅನೇಕ ಜನ ಶರಣರು, ವಚನಕಾರರು, ಪರದೆಯ ಮುಂದೆ ಬರದೆ ಹಿಂದೆಯೇ ಇದ್ದವರು. ಈ ದೃಷ್ಟಿಯಿಂದ ಉಪೇಕ್ಷಿತ ಶರಣರ, ವಚನಕಾರರ ಕುರಿತು ಅಧ್ಯಯನ ನಡೆದಾಗಲೇ ವಚನ ಸಾಹಿತ್ಯದ ಮೂಲ ಆಶಯವನ್ನು ಪ್ರಮಾಣಬದ್ಧವಾಗಿ ಕಟ್ಟಿಕೊಡಲು ಸಾಧ್ಯವಾಗುತ್ತದೆ.

ಶರಣರು, ವಚನಕಾರರು ಇಂದು ಧಾರ್ಮಿಕ ಪುರುಷರಾಗಿ, ದೈವೀಸಂಭೂತರಾಗಿ, ತತ್ವಜ್ಞಾನಿಗಳಾಗಿ, ವೈಚಾರಿಕತೆಯ ಹರಿಕಾರರಾಗಿ, ಜನರ ಭಕ್ತಿ ಗೌರವಗಳಿಗೆ ಪಾತ್ರರಾಗಿದ್ದಾರೆ. ಈ ಅನೇಕ ಕಾರಣಗಳಿಂದ ಇವರುಗಳ ಕುರಿತು ನಂಬಿಕೆ, ಆಚರಣೆ, ಸಂಪ್ರದಾಯಗಳು ಹಬ್ಬ ಹರಿದಿನ ಮತ್ತು ದೇವಾಲಯ ನಿರ್ಮಾಣ ಕಾರ್ಯಗಳು ಜರುಗಿದವು. ಗೊಲ್ಲಾಳೇಶ್ವರ ದೇವಾಲಯಗಳು ಉತ್ತರ ಕರ್ನಾಟಕದ ಹಲವು ಕಡೆ ಕಟ್ಟಲ್ಪಟ್ಟವು. ಇವುಗಳನ್ನು ಗೊಲ್ಲಾಳೇಶ್ವರ ನೆಲೆಗಳೆಂದು ಅಭ್ಯಸಿಸಲಾಗಿದೆ.

ಈತನ ಕುರಿತು ಕೆಲವು ದೇವಾಲಯಗಳಲ್ಲಿ ಪ್ರತಿ ವರ್ಷ ಜಾತ್ರೆ, ಉತ್ಸವಗಳು ಜರುಗುತ್ತವೆ. ಆ ನಿಮಿತ್ತ ಭಕ್ತಜನ ಅವರವರದೇ ಆಗಿರತಕ್ಕಂತಹ, ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಆಚರಿಸುವರು. ಇವುಗಳಿಂದ ಮಾನವನ ಸಹಬಾಳ್ವೆಯ ಬದುಕಿಗೆ ಸಹಾಯಕಾರಿಯಾಗಿದೆ. ಕಂಬಿಸೇವೆ, ಕಡುಬಿನ ಕಾಳಗ, ಪಲ್ಲಕ್ಕಿ ಉತ್ಸವ, ತೊಟ್ಟಿಲು ಪೂಜೆ ಮುಂತಾದ ಆಚರಣೆಗಳು ನಡೆಯುತ್ತವೆ. ಈ ಎಲ್ಲಾ ಆಕರಗಳನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡು ನಂಬಿಕೆ, ಆಚರಣೆ, ಸಂಪ್ರದಾಯಗಳು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಈ ಆರಾಧನಾ ಆಚರಣೆಗಳು ಶೈವಪರಂಪರೆಗೆ ಹತ್ತಿರವಾಗಿವೆ.

ಹೀಗೆ ಗೋಲಗೇರಿ ಗೊಲ್ಲಾಳೇಶ್ವರನು ಬಸವಪೂರ್ವಕಾಲದಲ್ಲಿ ಜನಿಸಿ ಶರಣ ಪರಂಪರೆಯಲ್ಲಿ ಬಾಳಿ ಬೆಳೆದು ಸಮಾಜಕ್ಕೆ ಬೆಳಕು ನೀಡಿದವನು. ಜನಗಳಿಗೆ ಮುಗ್ಧನಾಗಿ ಕಂಡರೂ, ಜಂಗಮ ಲಿಂಗವೆನ್ನುವುದು ಪ್ರಕೃತಿನಿಯಮದಂತಿದ್ದು, ಮನುಷ್ಯ ನಿರ್ಮಿತವಾದ ಗುಡಿಗೋಪುರಗಳಲ್ಲಿಲ್ಲ ಎಂಬ ಅರಿವನ್ನು ಬಿತ್ತಿದವನು. ಈ ಹಿನ್ನೆಲೆಗಳಲ್ಲಿ ಈತ ಶರಣನಾಗಿ, ವಚನಕಾರನಾಗಿ, ಭಕ್ತನಾಗಿ, ಸಾಧಕನಾಗಿ, ಸಮಾಜದ ಐಕ್ಯತೆಗಾಗಿ ಬದುಕಿದ ಈತನನ್ನು ಅಧ್ಯಯನಕ್ಕೆ ಸೂಕ್ತ ಅಧ್ಯಾಯಗಳನ್ನು ರಚಿಸಿಕೊಂಡು ಮಹಾಪ್ರಬಂಧದಲ್ಲಿ ವಿಷಯದ ಸ್ವರೂಪವನ್ನು ಒಂದೊಂದಾಗಿ ಈಗ ವಿವೇಚಿಸುವುದಾಗಿದೆ.

**ಕೊನೆಯ ಟಿಪ್ಪಣಿಗಳು**

೧. ಬರಗೂರು ರಾಮಚಂದ್ರಪ್ಪ 'ಶಬ್ದವಿಲ್ಲದ ಯುದ್ಧ' ಪ್ರಕಾಶನ : ಅಂಕಿತ ಪುಸ್ತಕ ಬಸವನಗುಡಿ, ಬೆಂಗಳೂರು ೨೦೦೭ ಪುಟ ೧೯೫

೨. ಅದೇ ಪುಟ - ೧೯೭

# ಅಧ್ಯಾಯ -೨
# ಗೋಲಗೇರಿ ಗೊಲ್ಲಾಳೇಶ್ವರ : ಚಾರಿತ್ರಿಕ ಹಿನ್ನೆಲೆ

ದೇವ ಮಾನವರ ಸಂಬಂಧ ಇಂದು ನಿನ್ನೆಯದಲ್ಲ, ಬಹಳಷ್ಟು ಪುರಾತನವಾದುದು. ಇವರ ಸಂಬಂಧ ಕುರಿತ ಪ್ರಾಥಮಿಕ ದಾಖಲಾತಿಗಳ ಪುರಾತನತೆಯನ್ನು ನಿಷ್ಕರ್ಷಿಸುವುದು ಕಷ್ಟ. ಇದು ಅನೇಕರ ಕುತೂಹಲಕ್ಕೆ ಕಾರಣವಾಗಿದೆ. ಮಾನವ ಎಷ್ಟೇ ವೈಜ್ಞಾನಿಕವಾಗಿ ಮುಂದುವರೆದಿದ್ದರೂ ಒಂದಲ್ಲ ಒಂದು ರೀತಿಯಲ್ಲಿ ದೇವರ ಅಥವಾ ಅವನನ್ನು ಹೋಲುವ ಇನ್ನಾವುದೋ ಶಕ್ತಿಯ ಜೊತೆಗೆ ಸಂಬಂಧ ಪಡೆದೇ ಇರುತ್ತಾನೆ. ಆಧುನಿಕ ತಂತ್ರಜ್ಞಾನದ ಯುಗದಲ್ಲೂ ಕ್ಷಿಪಣಿಯನ್ನು ಹಾರಿಸುವ ಪೂರ್ವದಲ್ಲಿ ದೇವರಿಗೆ ಅರ್ಚನೆ ಮಾಡುವುದನ್ನು ನೋಡುತ್ತೇವೆ. ಹೀಗೆ ತೀರಾ ದಟ್ಟವಾಗಿರುವ ದೇವ ಮತ್ತು ಮಾನವರ ಸಂಬಂಧದ ಮೇಲೆ ಬೆಳಕು ಚೆಲ್ಲಲು ಅನೇಕಾನೇಕ ಮಹಾಕಾವ್ಯಗಳು, ಶಾಸನಗಳು, ಶಿಲ್ಪಗಳು, ಜಾತ್ರೆ, ಉತ್ಸವಗಳು, ಸಾವಿರಾರು ಜನಪದ ಕತೆ ಕಾವ್ಯಗಳು ಇರುವುದನ್ನು ನೋಡುತ್ತೇವೆ.

ಮಾನವನು ದೇವರಿಗೆ ಭಕ್ತಿಯನ್ನು ಸಮರ್ಪಿಸುವ ಬಗೆ ಅನೇಕ. ಅವುಗಳಲ್ಲಿ ಕೆಲವು ಸಾತ್ವಿಕವೆನಿಸಿದರೆ ಇನ್ನುಳಿದವುಗಳು ತಾಮಸ. ಒಬ್ಬ ಜಂಗಮ ವ್ಯಕ್ತಿ ಕೊಟ್ಟ ಕುರಿ ಹಿಕ್ಕೆಯನ್ನೇ ಲಿಂಗವೆಂದು ನಂಬಿ, ಅದನ್ನೇ ಸಾತ್ವಿಕವಾಗಿ ಪೂಜಿಸಿ ದೇವರ ಸಾಕ್ಷಾತ್ಕಾರ ಮಾಡಿಕೊಂಡ ಶ್ರೀ ಗೊಲ್ಲಾಳೇಶ್ವರರು ಈ ನಾಡು ಕಂಡ ಅಪರೂಪದ

ಪುಣ್ಯಪುರುಷ. ಕುರಿ ಹಿಕ್ಕೆಯನ್ನೇ ಲಿಂಗವೆಂದು ಭಾವಿಸಿ ಭಜಿಸಿ ಶಿವಸಾಕ್ಷಾತ್ಕಾರ ಮಾಡಿಕೊಂಡನು ಎಂಬುದೇ ಅವನ ಜೀವನ ಕುರಿತಾದ ಘಟನಾವಳಿಗಳಲ್ಲಿ ಪ್ರಮುಖ ಘಟನೆ. ಈತನ ಕುರಿತು ಮಾತನಾಡುವ ಸಂದರ್ಭಗಳಲ್ಲಿ ಈ ದಂತಕತೆಯೇ ಪ್ರಧಾನವಾಗಿ ಮೂಡಿ ಬರುತ್ತದೆ. ಇದೊಂದು ದಂತಕತೆ ಎಂದಿಟ್ಟುಕೊಂಡರೂ, ಅವನೊಬ್ಬ ಪವಾಡ ಪುರುಷರೆಂದು ಬಗೆದರೂ, ಮುಖ್ಯವಾಗಿ ಶ್ರೀ ಗೊಲ್ಲಾಳೇಶ್ವರರು ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿದ್ದಾರೆ. ಇದಕ್ಕೆ ಅವರು ರಚಿಸಿದ ವಚನಗಳು ಸಾಕ್ಷಿಯಾಗಿವೆ. ಉಪಲಬ್ಧವಾಗಿರುವ ಅವರ ವಚನಗಳು ಸಂಖ್ಯೆಯಲ್ಲಿ ಕಡಿಮೆ ಎಂದೆನಿಸಿದರೂ, ಕರ್ನಾಟಕದ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಅವು ಬಹು ಮುಖ್ಯವಾಗುತ್ತದೆ.

ಶ್ರೀ ಗೊಲ್ಲಾಳೇಶ್ವರರ ಕುರಿತಾಗಿ ಪ್ರಚಲಿತವಿರುವ ಸಾಹಿತ್ಯ ಹಾಗೂ ಉಪಲಬ್ಧವಿರುವ ಈತನ ವಚನಗಳನ್ನು ಅನುಲಕ್ಷಿಸಿ, ಅವನು ಯಾವ ಕಾಲಘಟ್ಟದಲ್ಲಿ ಬಾಳಿ ಬದುಕಿದನು? ಅಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತಿಗತಿಗಳೇನು ? ಎಂಬುದನ್ನು ತಿಳಿಯುವುದು ಬಹಳ ಮುಖ್ಯವಾಗುತ್ತವೆ. ಇವನ ಚಾರಿತ್ರಿಕ ಹಿನ್ನೆಲೆಯನ್ನು ಅರಿತುಕೊಂಡಾಗ ಮಾತ್ರ ಗೊಲ್ಲಾಳನ ವಚನಗಳ ಭಾವಾರ್ಥ ಮಥಿಸಿ ಬರುತ್ತದೆ. ಈ ಹಿನ್ನೆಲೆಯಲ್ಲಿ ಅಂದಿನ ಸಮಕಾಲೀನ ಸಂಗತಿಗಳು ಶ್ರೀ ಗೊಲ್ಲಾಳೇಶ್ವರರ ಅಧ್ಯಯನದಲ್ಲಿ ಪೂರಕವಾಗಿ ಬರುವುದರಿಂದ ಬಹು ಮುಖ್ಯ ಎನಿಸುತ್ತವೆ.

ಸವಿಸ್ತಾರವಾದ ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಅನೇಕ ಕೌತುಕದ ಸಂಗತಿಗಳು ಗೋಚರಿಸುತ್ತವೆ. ಅವುಗಳಲ್ಲಿ ಮುಖ್ಯವಾಗಿ ಕಂಡುಬರುವ ಸಂಗತಿಗಳಲ್ಲಿ ಭಾರತದ ಮೂಲ ನಿವಾಸಿಗಳು ಯಾರು ? ಎಂಬುದು, ಸದ್ಯ ಲಭ್ಯವಿರುವ ಆಧಾರಗಳಿಂದ ರೂಪಿತವಾದ ಅಭಿಪ್ರಾಯವೇನೆಂದರೆ- ದ್ರಾವಿಡರೇ ಈ ನೆಲದ ಮೂಲನಿವಾಸಿಗಳು. "ಮೊಹೆಂಜೋದಾರೊ. ಪುರುಷ ದೇವತೆಯನ್ನು ಶಿವನೊಂದಿಗೆ ಗುರುತಿಸುವುದನ್ನು ಅಲ್ಲಿ ದೊರೆತಿರುವ ಶಿವಲಿಂಗವನ್ನೇ ಹೋಲುವ ಶಿಲೆಯ ಅಕೃತಿಗಳಿಂದ ಪುಷ್ಟೀಕರಿಸಬಹುದಾಗಿದೆ. ಈ ಲಿಂಗ ಸ್ವರೂಪದಲ್ಲಿಯೇ ಶಿವನನ್ನು ಆರಾಧಿಸಲಾಗುತ್ತಿದೆ."[1] ದ್ರಾವಿಡರ ನಂತರದಲ್ಲಿ ಬರುವ ಆರ್ಯರು ಇಂದ್ರನ ಆರಾಧಕರಾದರೂ ಮುಂದೆ ಬರುಬರುತ್ತಾ ಆರ್ಯ ದ್ರಾವಿಡರ ಸಂಕರವಾಗಿ ಸುಂದರವಾದ ವೈವಿಧ್ಯಮಯವಾದ ಭಾರತದ ಸಂಸ್ಕೃತಿ ರೂಪುಗೊಳ್ಳುತ್ತಾ ನಡೆಯಿತು. ರಾಮಾಯಣ ಮಹಾಭಾರತದ ಕಾಲದಲ್ಲೂ ಶಿವನನ್ನು ಪೂಜಿಸುವ ಅನೇಕ ಸಂಗತಿಗಳು ನಮಗೆ ಗೋಚರಿಸುತ್ತವೆ. ಶ್ರೀರಾಮನು ಲಂಕೆಗೆ ಯುದ್ಧಕ್ಕೆ ಹೋಗುವುದಕ್ಕೆ ಪೂರ್ವದಲ್ಲಿ ರಾಮೇಶ್ವರದಲ್ಲಿ ಲಿಂಗವನ್ನು ಪೂಜಿಸಿ ಶಿವನನ್ನು ಆರಾಧಿಸುವ ಸಂಗತಿ ಇಲ್ಲಿ ಉಲ್ಲೇಖನೀಯ. ಶ್ರೀ ರಾಮನು ಪೂಜಿಸಿದ ರಾಮೇಶ್ವರದಲ್ಲಿಯ ಲಿಂಗ 'ಅಚಲಲಿಂಗ'ಕ್ಕೆ ಉದಾಹರಣೆಯಾದರೆ, ರಾವಣನು ಪೂಜಿಸುತ್ತಿದ್ದ ಗಣೇಶ ಗೋಕರ್ಣದಲ್ಲಿ ಪ್ರತಿಷ್ಠಾಪನೆಗೊಂಡ ಲಿಂಗ 'ಚಲಲಿಂಗ'ಕ್ಕೆ ಉದಾಹರಣೆ. ಇಂತಹ ಘಟನೆಗಳೇ ಮುಂದೆ ಕಾಲಾಂತರದಲ್ಲಿ ಕಾಣಿಸಿಕೊಂಡ 'ಜಂಗಮ ಸ್ಥಾವರ ಸಂಸ್ಕೃತಿಗೆ ಕಾರಣವಾಗುತ್ತವೆ.

ಭಾರತವನ್ನು ಧರ್ಮಗಳ ಭೂಮಿ ಎಂದಿರುವರು. ಇಲ್ಲಿರುವಷ್ಟು ಧರ್ಮಗಳು ಇನ್ನಾವುದೇ ದೇಶದಲ್ಲಿ ಇಲ್ಲ ಎಂದರೂ ಅತಿಶಯೋಕ್ತಿ ಎನಿಸದು. ಭಾರತದ ಸಾಂಸ್ಕೃತಿಕ ವೈವಿಧ್ಯತೆಗೆ ಕಾರಣವಾದ ಈ ಧರ್ಮಗಳು ಭಾರತವನ್ನು ಒಂದು ಉಪಖಂಡವೆಂದು ಬಗೆಯುವಂತೆ ಮಾಡಿದವು. ಧರ್ಮ ಸಂಬಂಧವಾದ ಸೂಕ್ಷ್ಮಾತಿಸೂಕ್ಷ್ಮ ಸೈದ್ಧಾಂತಿಕ ಚಿಂತನೆ ಪ್ರಾಯಶಃ ಭಾರತದಲ್ಲಿ ನಡೆದಷ್ಟು ಪ್ರಮಾಣದಲ್ಲಿ ಪ್ರಪಂಚದ ಬೇರಾವ ಭಾಗಗಳಲ್ಲಿಯೂ ನಡೆದಿಲ್ಲ. ಆದಿವಾಸಿ ಜನಾಂಗಗಳು ಧಾರ್ಮಿಕವಾಗಿ ಅಂದು ನಡೆಸಿದ ಸರಳ ಚಿಂತನೆಗಳಿಂದ ಹಿಡಿದು ಮುಂದೆ ಹರಪ್ಪ ಮೊಹೆಂಜೊದಾರೋ ಸಂಸ್ಕೃತಿಯ ಮೂಲಕ ಹರಿದು ಆರ್ಯರ ಆಗಮನದ ನಂತರದ ಸಾಮಾಜಿಕ ಸಿದ್ಧಾಂತಗಳಲ್ಲಿ ಧರ್ಮದ ಪರಿಕಲ್ಪನೆಗಳು ಅನೇಕ ಕವಲುಗಳಾಗಿ ಚಿಗುರಿದುದು ಈಗ ಇತಿಹಾಸದ ಭಾಗವೇ ಆಗಿದೆ. ಹಿಂದೂ ಧರ್ಮದ ಚೌಕಟ್ಟಿನೊಳಗೇ ಬೆಳೆದ ಅನೇಕ ಧರ್ಮಗಳಲ್ಲಿ ದೇವರ ಅಸ್ತಿತ್ವವನ್ನು ಒಪ್ಪಿಕೊಂಡರೂ ಸಾಕಾರ ನಿರಾಕಾರದ ಬಗ್ಗೆ ಏಕಾಭಿಪ್ರಾಯ ಮೂಡಲಿಲ್ಲ. "ಬಹುಧರ್ಮಗಳ ಬೀಡಾದ ಭಾರತದಲ್ಲಿ ಕಾಲಕಾಲಕ್ಕೆ ಧರ್ಮಗಳು ಹುಟ್ಟುತ್ತಲೇ ಬಂದಿರುವುದು ಸಹಜ. ಒಂದು ಯುಗಧರ್ಮದ ಅವಶ್ಯಕತೆಯನ್ನು ಅನುಸರಿಸಿ ಒಂದು ಧಾರ್ಮಿಕ ವಿಚಾರ ಪ್ರಣಾಳಿ ರೂಪುಗೊಳ್ಳುತ್ತದೆ."[2] ಹೀಗೆ ಯುಗಧರ್ಮಕ್ಕನುಸಾರವಾಗಿ ಭಾರತದ, ಕರ್ನಾಟಕದ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಪರಿಸರ ವಿಕಸಿಸುತ್ತಾ ನಡೆದಿರುವುದನ್ನು ನಾವು ಕಾಣುತ್ತೇವೆ.

ಕಾರ್ಲ್‌ಮಾರ್ಕ್ಸ್‌ರು "ಧರ್ಮ ಒಂದು ಅಫೀಮು" ಎಂದರು. ಸಿಗ್ಮಂಡ ಫ್ರಾಯ್ಡ್" ಧರ್ಮವು ಕಾಮವನ್ನು ನಿಯಂತ್ರಿಸುತ್ತದೆ" ಎನ್ನುವರು. ಈ ವಿಜ್ಞಾನಿ, ಸಮಾಜ ವಿಜ್ಞಾನಿಗಳ ಪ್ರಸಿದ್ಧ ಹೇಳಿಕೆಗಳನ್ನೇ ಗಮನಿಸಿದರೆ ಸಾಕು ಧರ್ಮವು ಎಷ್ಟೊಂದು ಪ್ರಭಾವಶಾಲಿ ಹಾಗೂ ಪರಿಣಾಮಕಾರಿಯಾಗಿ ಮಾನವನ ಇತಿಹಾಸದುದ್ದಕ್ಕೂ ಬೆಳೆದು ಬಂತೆಂಬುದು ಸ್ಪಷ್ಟವಾಗುತ್ತದೆ.

ಧರ್ಮವು ಮಾದಕ ದ್ರವ್ಯವಾಗಿ ಕಂಡರೂ, ಮನುಷ್ಯನ ಸಹಜ ಹಸಿವಾದ ಕಾಮವನ್ನು ಹತ್ತಿಕ್ಕುವ, ಶೋಷಣೆಯ ಅಸ್ತ್ರವಾಗಿ, ಬಳಕೆಯಾದರೂ, ಭಾರತದಲ್ಲಿ ಹೆಚ್ಚಿನ ಮಟ್ಟಿಗೆ ಧರ್ಮವು ಔಷಧಿಯಾಗಿ, ಸಂಜೀವಿನಿಯಾಗಿ, ಮೋಕ್ಷಮಾರ್ಗವಾಗಿ, ಅನುಕಾಲದ ಸಂಗಾತಿಯಾಗಿ, ಬೆಳಕಾಗಿ ದೇವರಾಗಿ ಬೆಳೆದು ಬಂದುದಕ್ಕೆ ಅಸಂಖ್ಯ ಉದಾಹರಣೆಗಳು ಲಭ್ಯವಾಗಿವೆ. ಶ್ರೀ ನಿಡುಮಾಮಿಡಿ ಚನ್ನಮಲ್ಲಿಕಾರ್ಜುನ ಸ್ವಾಮಿಗಳು ಒಂದೆಡೆ ಅಭಿಪ್ರಾಯ ಪಡುತ್ತಾ "ಧರ್ಮಗಳೇ ಜಾತಿಗಳಾಗಿ ಕುಗ್ಗಿ ಹೋಗಿವೆ. ಜಾತಿಗಳೇ ಧರ್ಮಗಳಾಗಿ ಹಿಗ್ಗಿ ಹೋಗಿವೆ" ಎಂದೆನ್ನುವರು. ಒಂದರ್ಥದಲ್ಲಿ ಈ ಮಾತು ನಿಜ ಎಂದೆನಿಸುತ್ತದೆ. ಭಾರತದಲ್ಲಿ ವೈದಿಕ ಧರ್ಮವು ಭಾರತದ ಜಾತಿವ್ಯವಸ್ಥೆಯಾಗಿ ಬೆಳೆದು ಬರಲು ಮೂಲ ಕಾರಣವಾಯಿತು ಎಂದು ಅನೇಕ ಸಂಶೋಧಕರು ಅಭಿಪ್ರಾಯ ಪಟ್ಟಿರುವರು. ಸನಾತನಕ್ಕೂ, ವೈದಿಕಕ್ಕೂ ವ್ಯತ್ಯಾಸವಿದೆ. ವೈದಿಕ ಧರ್ಮದಿಂದಾಗಿ ಭಾರತದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಸಮಾಜ ವಿಂಗಡಣೆ ಪ್ರಕ್ರಿಯೆಗಳು ಪ್ರಾರಂಭವಾದವು. ಮುಂದೆ ಇದು ಭಾರತದಲ್ಲಿ ಜಾತಿಗಳು ಬೆಳೆಯಲು ಪ್ರೇರಣೆಯಾಯಿತು. "ತಮ್ಮ ವಂಶಪಾರಂಪರ್ಯವಾದ ವೃತ್ತಿಯನ್ನು

ಉಳಿಸಿಕೊಳ್ಳಲು ಬಹುಶಃ ಪ್ರಾರಂಭವಾದ ಈ ಜಾತಿಗಳು ಬರುಬರುತ್ತಾ ವೈವಾಹಿಕ ಸಂಬಂಧಗಳನ್ನು ತೊರೆದು, ಭಿನ್ನತೆಯನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದವು. ಈ ನಿರ್ಬಂಧಗಳು. ಸಂಪರ್ಕ ವಿಹೀನತೆಗಳೇ ಜಾತಿಪದ್ಧತಿಯನ್ನು ಅಲ್ಲಗಳೆದು ಶಿವಭಕ್ತರೆಲ್ಲರೂ ಕುಲಜರೆಂದು ಬೋಧಿಸುವಂತೆ ವಚನಕಾರರನ್ನು ಪ್ರೇರೇಪಿಸಿದ್ದು."[5]

ಭಾರತದಂಥ ಧರ್ಮಭೂಮಿಯಲ್ಲಿ ಜಾತ್ಯತೀತ ಎಂದು ಸಂವಿಧಾನದ ಅಡಿಯಲ್ಲಿ ಹೇಳಿಕೊಳ್ಳುವ ಆಧುನಿಕ ಪ್ರಜಾಪ್ರಭುತ್ವ, ಸಮಾಜವಾದಿ ರಾಷ್ಟ್ರದಲ್ಲಿ, ಒಬ್ಬ ಧರ್ಮಸಂಸ್ಥಾಪಕನ ಕುರಿತು, ಪ್ರಚಾರಕನ ಕುರಿತು ಮಾತನಾಡುವ, ಬರೆಯುವ ಸಂದರ್ಭದಲ್ಲಿ ಅನೇಕ ದ್ವಂದ್ವಗಳು ದಿಗಿಲುಗಳು, ಅಪಾಯಗಳು, ಸಂಭವಿಸುವ ಅವಕಾಶವಿದೆಯಾದರೂ, ಜಗತ್ತಿಗೆ ಪೂರಕವಾಗಿರುವಂಥ ಒಂದು ಧಾರ್ಮಿಕ ವಿಚಾರದ ಸಂದರ್ಭದಲ್ಲಿ, ಮೇಲಿನವುಗಳೆಲ್ಲ ಗೌಣವಾಗಿ, ಹೊಸತನ್ನು ಹೇಳುವ ಕಲ್ಯಾಣ ಬಯಸುವ ಘಟನೆಗಳು ಯುಗಧರ್ಮಕ್ಕನುಸಾರವಾಗಿ ಮೇಲಿಂದ ಮೇಲೆ ಈ ನೆಲದ ಮೇಲೆ ಜರುಗಿರುವವು.

ಆದರ್ಶ ರಾಜ್ಯವಾಗಲಿ, ರಾಮರಾಜ್ಯವಾಗಲಿ, ಕಲ್ಯಾಣ ರಾಜ್ಯವಾಗಲಿ ಇಲ್ಲಿಯವರೆಗೂ ಇತಿಹಾಸ ಕಂಡ ಸಾಕ್ಷಿಗಳಿಲ್ಲ. ಇದರ ಸಾಕ್ಷಾತ್ಕಾರಕ್ಕಾಗಿ ಮಾಡಿದ ಅನೇಕ ವಿಫಲ ಪ್ರಯತ್ನಗಳು ಮಾತ್ರ ಸಾಕಷ್ಟಿವೆ. ಪ್ಲೇಟೋನ ಆದರ್ಶ ರಾಜ್ಯ, ವೈದಿಕತೆಯ ರಾಮರಾಜ್ಯ, ಬಸವೇಶ್ವರರ ಕಲ್ಯಾಣ ರಾಜ್ಯ ಇವೆಲ್ಲವುಗಳು ಮನುಷ್ಯನ ಶ್ರೇಯಸ್ಸನ್ನು ಬಯಸಿ ನಡೆಸಿದ ಅಭೂತಪೂರ್ವ ಪ್ರಯತ್ನಗಳು, ಹೋರಾಟಗಳು ಎಂದೆನ್ನಬಹುದು.

ಮಾನವನ ಕಲ್ಯಾಣರಾಜ್ಯದ ಅಭೀಪ್ಸೆಗೆ ಕಾಲಕಾಲಕ್ಕೆ ನಡೆದ ಅನೇಕ ಅಭೂತಪೂರ್ವ ಘಟನೆಗಳು ಸಾಕ್ಷಿಯಾಗುತ್ತವೆ. ಸಿಂಧೂ ನದಿಯ ಸಂಸ್ಕೃತಿಯ ಪಶುಪತಿಯಾಗಲಿ, ಆರ್ಯರ ಇಂದ್ರನಾಗಲಿ, ಬೌದ್ಧರ ಬುದ್ಧನಾಗಲಿ, ಜೈನರ ಮಹಾವೀರನಾಗಲಿ, ಮುಸ್ಲೀಮರ ಪೈಗಂಬರರಾಗಲಿ, ಕ್ರಿಶ್ಚಿಯನ್‌ರ ಯೇಸು ಆಗಲಿ, ರಾಮನಾಗಲಿ, ಕೃಷ್ಣನಾಗಲಿ ದಶಾವತಾರಗಳಾಗಲಿ, ಬಸವನಾಗಲಿ ಎಲ್ಲರೂ ಒಂದಿಲ್ಲ ಒಂದು ನೆಲೆಯಲ್ಲಿ ನೈಜಧರ್ಮದ ಸಾಕ್ಷಾತ್ಕಾರಕ್ಕೆ ಪ್ರಯತ್ನಪಟ್ಟವರು. ಮತ್ತು ಒಂದು ಹಂತದವರೆಗೆ ಯಶಸ್ವಿಯಾದವರು ಎಂದೆನ್ನಬಹುದು.

ವಿಶ್ವದ ವಿಸ್ತಾರಕ್ಕೆ, ಆಯುಷ್ಯಕ್ಕೆ ಹೋಲಿಸಿದರೆ ಮಾನವನ ನಾಗರಿಕತೆ, ಸಂಸ್ಕೃತಿಗಳು, ಸಣ್ಣ ಅತಿ ಸಣ್ಣ ಘಟಕಗಳಾಗುತ್ತವೆ. ಭೂಮಿಯು ೬.೪ ಬಿಲಿಯನ್ ವರ್ಷಗಳ ಹಿಂದೆ ಜನ್ಮತಾಳಿತು ಎಂಬ ವೈಜ್ಞಾನಿಕ ಸತ್ಯಗಳನ್ನು ವಿವೇಚಿಸುವ, ವಿಶ್ವದ ವಿಸ್ತಾರವನ್ನು ತಮ್ಮದೇ ಪರಿಭಾಷೆಯಲ್ಲಿ ಅವಲೋಕಿಸುವ ಅನೇಕ ವಿಜ್ಞಾನಿಗಳ ಧಾರ್ಮಿಕ ವಿಚಾರಗಳನ್ನು ಕಂಡಾಗ ಸೋಜಿಗವಾಗುತ್ತದೆ. ವಿಶ್ವದ ರಚನೆಗೂ ಮೊದಲೇ 'ಧರ್ಮ' ಎಂಬುದೊಂದಿತ್ತು. ಅದು ಎಲ್ಲದಕ್ಕೂ ಆದಿ, ಅನಾದಿ ಎಂಬ ವಿಚಾರಗಳನ್ನು ಕೇಳಿದಾಗ ಆಶ್ಚರ್ಯವಾಗುತ್ತದೆ. ಮನುಷ್ಯನ ಇಂದ್ರಿಯಗಳಿಗಿರುವ ಸೀಮಿತ ಸಾಮರ್ಥ್ಯವನ್ನು ಅವಲಂಬಿಸಿಯೇ, ಧರ್ಮದ, ವಿಶ್ವದ ಜಿಜ್ಞಾಸೆಗಳು

ಇಲ್ಲಿಯವರೆಗೆ ನಡೆದುಕೊಂಡು ಬಂದಿರುವುದಷ್ಟೇ ಅಲ್ಲ ಅಪಾರ ಪ್ರಮಾಣದ ಜ್ಞಾನದ ಫಲ ಸಿಕ್ಕಿರುವುದು ಮಾನವ ಜನಾಂಗದ ಪುಣ್ಯ ಎಂದು ಪರಿಭಾವಿಸುವಂತಾಗಿದೆ.

ಭಾರತದಲ್ಲಿ ಅನೇಕ ಸಂಸ್ಕೃತಿ ಹಾಗೂ ಧಾರ್ಮಿಕ ಅಧ್ಯಯನಗಳು ನಡೆದು ಬಂದುದನ್ನು ಗಮನಿಸಿದರೆ ಭಾರತದಲ್ಲಿ ಧರ್ಮದ ಕುರಿತಾದ ಸಾಂಸ್ಕೃತಿಕ ಅಧ್ಯಯನಕ್ಕೆ ಇರುವಷ್ಟು ಮಹತ್ವ ಮತ್ತಾವುದಕ್ಕೂ ಇದ್ದುದಿಲ್ಲ ಎಂದೆನಿಸುತ್ತದೆ. ಕರ್ನಾಟಕ ಕಂಡ ಅಪೂರ್ವ ಚಳುವಳಿ 'ಬಸವ ಚಳುವಳಿ', ಇದೊಂದು ಸಾಮಾಜಿಕ ಆಂದೋಲನವಾಗಿ, ಕರ್ನಾಟಕದ ಸಾಂಸ್ಕೃತಿಕ ಲೋಕಕ್ಕೆ ಕೊಟ್ಟ ಕಾಣಿಕೆ ಅನುಪಮವಾದುದು. ಶ್ರೀ ಬಸವೇಶ್ವರರ ನೇತೃತ್ವದಲ್ಲಿ ನಡೆದ ಚಳುವಳಿ ಒಮ್ಮೆಗೆ ಧುತ್ತೆಂದು ಕಾಣಿಸಿಕೊಳ್ಳಲಿಲ್ಲ. "ಚಳುವಳಿಗಳು ಅನಿವಾರ್ಯತೆಯಿಂದಾಗಿ ಘಟಿಸುತ್ತವೆ" ಎಂಬ ಮಾತೊಂದಿದೆ. ೧೨ನೇ ಶತಮಾನದ ಬಸವ ಚಳುವಳಿಗೆ ಕೂಡ ಹಿನ್ನೆಲೆಯಾಗಿ ಇಂಥ ಅನಿವಾರ್ಯ ಸ್ಥಿತಿಯೊಂದು ಕರ್ನಾಟಕದಲ್ಲಿ ರೂಪುಗೊಂಡಿತ್ತು. ಸಮಾಜದಲ್ಲಿ ಜೈನರು ಬಹುಸಂಖ್ಯಾತರಾಗಿದ್ದರೂ ಕೂಡ ಶೈವ, ವೈಷ್ಣವ, ಧರ್ಮದ ಅನುಯಾಯಿಗಳು ಗಣನೀಯ ಸಂಖ್ಯೆಯಲ್ಲಿದ್ದರು. ಅದರಲ್ಲೂ ಶೈವ ಧರ್ಮವು ೧೮ ಜಾತಿಗಳಲ್ಲಿ ಹಂಚಿಹೋಗಿ ಒಂದು ರೀತಿಯ ಸಂಕ್ರಮಣಾವಸ್ಥೆಗೆ ಬಂದು ನಿಂತಿತ್ತು. ಒಂದೆಡೆ ಬಸವಣ್ಣನವರು ಹೇಳುವಂತೆ "ಇಡುವುದು ಮೈಯೊಳಗರಸಿನವ ಕೊಡುವುದೆಕ್ಕನಾತಿ ಕವಡೆ ಅವರ ಗುರುವಾರೆಂದಡೆ ಕುರುಬರು" ಎಂಬಲ್ಲಿ ಕುರುಬರು ಮೈಲಾರನ ಭಕ್ತರು ಎಂಬ ಸೂಚನೆ ಇದ್ದಂತಿದೆ"[೪] ಎಂಬುದನ್ನು ಗಮನಿಸಿದಾಗ ಬಸವಣ್ಣನ ಪೂರ್ವದಲ್ಲಿದ್ದ ಸಮಾಜದ ಒಂದು ಜಾತಿಯಾಗಿದ್ದ ಕುರುಬರು ಮೈಲಾರಿಯ ಭಕ್ತರು ಎಂಬುದು ಮನದಟ್ಟಾಗುತ್ತದೆ. ಈ ಮೈಲಾರಿ ಶಿವನ ಇನ್ನೊಂದು ಹೆಸರು. ಕುರುಬರೆಂದರೆ ಕುರಿ ಕಾಯುವವರಲ್ಲ. ಅವರು ಬೆಟ್ಟಗಳಲ್ಲಿ ವಾಸಿಸುವವರು ಎಂಬುದು ಗಮನಾರ್ಹ ಸಂಗತಿಯಾಗಿ ಕಂಡುಬರುತ್ತದೆ. ಶ್ರೀ ಗೊಲ್ಲಾಳರು ಕುರುಬರು ಅವರ ಕರ್ಮಭೂಮಿಯಾದ ಗೋಲಗೇರಿಯನ್ನು ಗೊಲ್ಲ+ಗಿರಿ ಎಂದು ನಿಷ್ಪತ್ತಿ ಮಾಡಬಹುದು. ಬೆಟ್ಟದಲ್ಲಿ ವಾಸಿಸುವ ಈ ಗೊಲ್ಲ ಕುರುಬರು, ಶ್ರೀಶೈಲ ಗಿರಿಯಲ್ಲಿ ನೆಲೆಯಾದ ಮೈಲಾರಿ ಶಿವ ಮಲ್ಲಯ್ಯನನ್ನು ಕುರಿತು ಭಕ್ತಿ ತಳೆದದ್ದು ಸಹಜವಾದುದು ಎಂದೆನಿಸುತ್ತದೆ.

ಹೀಗೆ ಬಸವಣ್ಣನವರಿಗಿಂತ ಪೂರ್ವದ ಶೈವ ಧರ್ಮದ ಅನುಯಾಯಿಯಾಗಿದ್ದ ಗೊಲ್ಲಾಳರು, ಜೇಡರ ದಾಸಿಮಯ್ಯ, ಕೊಂಡಗೂಳಿ ಕೇಶಿರಾಜ, ಕೆಂಭಾವಿ ಬೋಗಣ್ಣನವರ ಸಮಕಾಲೀನವರಾಗಿದ್ದರು ಎಂದು ಇಲ್ಲಿ ಭಾವಿಸಲು ಅವಕಾಶವಿದೆ. ಈ ಆದ್ಯ ವಚನಕರಾರರೇ ಮುಂದಿನ ವೀರಶೈವ ಧರ್ಮಕ್ಕೆ ಅಡಿಪಾಯ ಹಾಕಿದವರು. "ಜೀವಾತ್ಮನೂ ಸತ್ಯ, ವೈವಿಧ್ಯಮಯವಾದ ಜಗತ್ತು ಸತ್ಯ, ದೇವರೂ ಸತ್ಯ, ಪ್ರತಿಯೊಂದು ತತ್ವಕ್ಕೂ ಉಳಿದ ತತ್ವಗಳ ಅವಶ್ಯಕತೆಯಿದೆ. ಸಂಬಂಧವಿದೆ. ಪರಸ್ಪರ ಸಂಬಂಧವನ್ನು ವಚನಕಾರರ ವಚನಗಳಲ್ಲಿ ಕಾಣುತ್ತೇವೆ. ಸಂಬಂಧಗಳು ನಿಜವೆಂದು ತಿಳಿದವರು ವಚನಕಾರರು."[೫]

ಬಸವಪೂರ್ವದಲ್ಲಿದ್ದ ಶೈವಧರ್ಮದಲ್ಲಿ ಪಾಶುಪತ ಕಾಳಾಮುಖ, ಲಕುಲೀಶ, ಭೈರವ ಮುಂತಾದ ಪಂಥಗಳು ಶಿವವನ್ನು ಆರಾಧಿಸುವ ಬೇರೆ ಬೇರೆ ಸಂಸ್ಕೃತಿಗಳನ್ನು ಅಳವಡಿಸಿಕೊಂಡವರು. ಅಂಥವರಲ್ಲಿ ಶ್ರೀ

ಗೊಲ್ಲಾಳರು ಒಬ್ಬರು. ಕುರಿಹಿಕ್ಕೆಯಲ್ಲಿ ಶಿವನನ್ನು ಕಂಡವರು. ಇದು ಶೈವಧರ್ಮದ ಕತೆಯಾಗಿ, ಮುಂದೆ ವೀರಶೈವಧರ್ಮಕ್ಕೆ ಪೀಠಿಕೆಯಾಗಿ ಕಾಲಾಂತರದಲ್ಲಿ ಅನೇಕ ಪರಿವರ್ತನೆಗಳನ್ನು ಕಂಡು ಬಸವನ ಯುಗದಲ್ಲಿ ಉತ್ಕರ್ಷದ ಹಂತಕ್ಕೆ ತಲುಪಿತು.

ಶ್ರೀ ಗೊಲ್ಲಾಳೇಶ್ವರರು ಕೂಡ ಬಸವಪೂರ್ವದ ಒಬ್ಬ ವಚನಕಾರರಾಗಿರುವುದನ್ನು ಗಮನಿಸಿ ಅವರ ಕಾಲ, ಪರಿಪಾಲಿಸಿದ ಧರ್ಮ, ಸಮಕಾಲೀನ ಸಮಾಜ ಸಂಸ್ಕೃತಿಗಳ ಒಂದು ನೋಟ, ಅವರ ಕಾಲದಲ್ಲಿದ್ದ ಕರ್ನಾಟಕದ ಧಾರ್ಮಿಕ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಗಳನ್ನು ಅಧ್ಯಯನಕ್ಕೊಳಪಡಿಸುವುದು ಉಚಿತವೆಂದೆನಿಸುತ್ತದೆ. ದೊರೆತ ಅವರ ಸೀಮಿತ ವಚನಗಳಲ್ಲಿ ಅವರ ಬದುಕು ಬರಹಗಳ ಸಾತ್ವಿಕ ಜೀವನವನ್ನು ಅನಾವರಣಗೊಳಿಸಲು ಸಾಧ್ಯವಿದೆ. ತತ್ಕಾಲದ ಸಮಕಾಲೀನ ಘಟನೆಗಳು ಅನೇಕ ಪೂರಕ ಸಂಗತಿಗಳನ್ನು ನೀಡುವುದರಿಂದಾಗಿ, ಈ ಮುಂದಿನಂತೆ ವಿಭಾಗ ಕ್ರಮ ಅಳವಡಿಸಿಕೊಂಡು ಹಂತ ಹಂತವಾಗಿ ಗೊಲ್ಲಾಳೇಶ್ವರನ ಕಾಲದ ಚಾರಿತ್ರಿಕ ಹಿನ್ನೆಲೆಯನ್ನು ದಾಖಲಿಸಬಹುದಾಗಿದೆ.

I. ರಾಜಕೀಯ ಹಿನ್ನೆಲೆ

II. ಧಾರ್ಮಿಕ ಹಿನ್ನೆಲೆ

III. ಆರ್ಥಿಕ ಹಿನ್ನೆಲೆ

## I. ರಾಜಕೀಯ ಹಿನ್ನೆಲೆ

ಒಬ್ಬ ಶರಣನ ಕುರಿತಾದ ಅಧ್ಯಯನದ ಸಂದರ್ಭದಲ್ಲಿ ರಾಜಕೀಯ ಅಂಶಗಳು ತುಂಬಾ ಪ್ರಮುಖವಾಗಿ ಕಾಣುವ ಸಂಗತಿಗಳಾಗುತ್ತವೆ. ಬಹುತೇಕವಾಗಿ ಭಾರತ ನೆಲದ ಮೇಲಿನ ಅನೇಕ ಧಾರ್ಮಿಕ ಘಟನೆಗಳಿಗೂ, ರಾಜಕೀಯ ಘಟನೆಗಳಿಗೂ, ನೇರವಾದ ಸಂಬಂಧವಿದೆ. ಈ ಪರಂಪರೆ ಭಾರತದಲ್ಲಿ ಮೊದಲಿನಿಂದಲೂ ಹೇಗೆ ನಡೆದುಕೊಂಡು ಬಂದಿದೆಯನ್ನುವುದನ್ನು ಸ್ಥೂಲವಾಗಿ ವಿವರಿಸುತ್ತಾ, ಶ್ರೀ ಗೊಲ್ಲಾಳೇಶ್ವರರ ಸಮಕಾಲೀನ ರಾಜಕೀಯ ವ್ಯವಸ್ಥೆಯನ್ನು ಅವಲೋಕಿಸುವ, ಪರಿಶೀಲಿಸುವ ಒಂದು ಪ್ರಯತ್ನ ಇಲ್ಲಿ ಮಾಡಬಹುದಾಗಿದೆ.

"ಬಸವಣ್ಣನವರು ತಮ್ಮ ಕಾರ್ಯಾಚರಣೆ ಸಂಘಟಿಸುವ ಹೊತ್ತಿಗೆ ಸಮಾಜ ಜೀವನ ಅತ್ಯಂತ ನಿಕೃಷ್ಟ ಸ್ಥಿತಿಗೆ ತಲುಪಿತ್ತು. ಅಗ್ರಹಾರ, ದೇವಾಲಯ, ರಾಜಸತ್ತೆ, ಪುರುಷ ಸತ್ತೆಗಳು ಒಟ್ಟಾಗಿ ನಿಂತು ಸಮಾಜ ಶೋಷಣೆಗೆ ತೊಡಗಿಸಿಕೊಂಡಿದ್ದವು"[5] ಎಂಬ ಅಂಶಗಳನ್ನು ಗಮನಿಸಿದಾಗ ಅಂದಿನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಸಮಾಜ ಹಾಗೂ ರಾಜಕೀಯದ ಸ್ಥಿತಿಗಳನ್ನು ಅರಿಯಬಹುದಾಗಿದೆ. ಶ್ರೀ ಗೊಲ್ಲಾಳರು ಬಸವಪೂರ್ವದ ಇತಿಹಾಸದ ಭಾಗವಾಗಿರುವುದರಿಂದ, ಗೊಲ್ಲಾಳೇಶ್ವರರು ಬಾಳಿ ಬದುಕಿದ ಕಾಲ, ದೇಶಗಳ ಬಗೆಗೆ ಸಹಜವಾಗಿ ನಾವು ಅಂದಿನ ಸ್ಥಿತಿಯನ್ನು ಇಲ್ಲಿ ಚಿತ್ರಿಸಬಹುದಾಗಿದೆ.

ಆ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಸಿಂಧೂಕೊಳ್ಳದ ಜನರು ಶೈವರಾಗಿದ್ದರು ಎಂದು ಅನೇಕರು ಅಭಿಪ್ರಾಯಪಡುತ್ತಾರೆ. ಅವರು ಪಶುಪತಿಯ ಆರಾಧಕರಾಗಿದ್ದರು. ವ್ಯಾಪಾರಿಗಳು ರಾಜ್ಯವನ್ನು

ನಿಯಂತ್ರಿಸುತ್ತಿದ್ದರು. ಆರ್ಯರ ಆಗಮನದಿಂದಾಗಿ ವ್ಯಾಪಾರಿಗಳ ಹಿಡಿತ ಶಿಥಿಲವಾಗಿ ಮುಂದಿನ ಹಂತದ ಭಾರತದಲ್ಲಿ ೧೬ ಗಣರಾಜ್ಯಗಳು ಕಂಡುಬಂದವು. ಇವುಗಳಲ್ಲಿ ರಾಜನೇ ಪ್ರಮುಖ ವ್ಯಕ್ತಿಯಾಗಿದ್ದನು.

ಬುದ್ಧನಿಗೆ ರಾಜಾಶ್ರಯವಿರುವುದರಿಂದಲೇ ಬೌದ್ಧಧರ್ಮವು ವೇಗವಾಗಿ ಪ್ರಸಾರವಾಯಿತು. ಜೈನಧರ್ಮಕ್ಕಂತೂ ದೊಡ್ಡಮಟ್ಟದ ರಾಜರು ಆಶ್ರಯ ನೀಡಿದರು. ಈ ನೆಲದ ವೈದಿಕ, ಜೈನ, ಬೌದ್ಧ, ವೀರಶೈವ, ಶೈವ ಮುಂತಾದ ಪ್ರಮುಖ ಧರ್ಮಗಳಿಗೆಲ್ಲಾ ರಾಜಾಶ್ರಯ ಸಿಕ್ಕಾಗಲೆಲ್ಲ ಅವು ಅರಳಿ ನಿಂತಿವೆ, ತಪ್ಪಿದಾಗಲೆಲ್ಲ ಅಪಾಯಕ್ಕೆ ಸಿಲುಕಿವೆ. ಅಷ್ಟೇ ಅಲ್ಲ ಕೆಲವು ಅವನತಿಯನ್ನು ಕಂಡಿವೆ.

ಬೌದ್ಧಧರ್ಮಕ್ಕೆ ಅಶೋಕ, ಕನಿಷ್ಕ, ಹರ್ಷವರ್ಧನರು ರಾಜಾಶ್ರಯ ನೀಡಿದ ಪ್ರಮುಖ ಅರಸರು. ಈ ರಾಜರು ಈ ಧರ್ಮಕ್ಕೆ ನೀಡಿದ ಕಾಣಿಕೆ ಅನುಪಮವಾದುದು. ಚಂದ್ರಗುಪ್ತಮೌರ್ಯನಿಂದ ಹಿಡಿದು ಕರ್ನಾಟಕದ ಗಂಗರ ವರೆಗೆ ಅನೇಕ ರಾಜರು ಜೈನಧರ್ಮದ ಅನುಯಾಯಿಗಳಾಗಿದ್ದರು. ಹೀಗೆ ಭಾರತದ ಇತಿಹಾಸದುದ್ದಕ್ಕೂ ಇದು ನಡೆದುಕೊಂಡು ಬಂದ ಪ್ರಕ್ರಿಯೆಯೇನೋ ಎಂಬಂತೆ ಭಾಸವಾಗುತ್ತದೆ.

ಕರ್ನಾಟಕದಲ್ಲಿ ಶಾತವಾಹನ, ಕದಂಬ, ಗಂಗ, ಚಾಲುಕ್ಯ, ಕಲ್ಯಾಣ ಚಾಲುಕ್ಯ, ಕಳಚೂರಿ ವಂಶಗಳು ಸಾಂಸ್ಕೃತಿಕ ದೃಷ್ಟಿಕೋನದಿಂದ ಬಹುಮುಖ್ಯವಾದ ಪಾತ್ರ ನಿರ್ವಹಿಸಿವೆ ಎಂದೆನ್ನಬಹುದು. ಕನ್ನಡದ ಮೊಟ್ಟಮೊದಲ ರಾಜಮನೆತನ ಎಂಬ ಹೆಗ್ಗಳಿಕೆಗೆ ಭಾಜನವಾದ ಮಯೂರಶರ್ಮನು ಧರ್ಮಾನುಯಾಯಿಯಾಗಿ ಅನೇಕ ದಾನಧರ್ಮಗಳನ್ನು ಮಾಡಿದ. ಪಲ್ಲವರೊಡನೆ ಜಗಳ ಕಾದು ಈತ ನೆಲೆ ನಿಂತ ಈ ನೆಲ ಶ್ರೀಶೈಲ. ಅಲ್ಲಿಂದಲೇ ಈತ ಪ್ರೇರಣೆ ಪಡೆದು, ಮತ್ತೆ ಸೈನ್ಯ ಸಂಘಟಿಸಿ ಪಲ್ಲವರನ್ನು ಹತ್ತಿಕ್ಕಿದ. ಶ್ರೀಶೈಲ ಶೈವಧರ್ಮದ ಒಂದು ಪ್ರಮುಖ ನೆಲೆ ಎಂಬುದನ್ನು ಇಲ್ಲಿ ನಾವು ಗಮನಿಸಬೇಕು.

ಕರ್ನಾಟಕದಲ್ಲಿ ಜೈನ, ಬೌದ್ಧ, ವೈಷ್ಣವ ಧರ್ಮಗಳಂತೆ ಶೈವ ಧರ್ಮ ಕೂಡ ಬೆಳೆದು ಬಂದಿತು. ಈ ಶೈವಧರ್ಮಕ್ಕೆ ಅನೇಕ ರಾಜರು ಆಶ್ರಯವಿತ್ತಿದ್ದನ್ನು ನಾವು ಗಮನಿಸಬಹುದು. ಬಾದಾಮಿ ಚಾಲುಕ್ಯರು ಈ ಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿರುವರೆಂಬುದಕ್ಕೆ ಬಾದಾಮಿಯ ಪ್ರಥಮ ಗುಹೆಯೇ ಸಾಕ್ಷಿಯಾಗಿದೆ. ಮಹಾಕೂಟವು ಕೂಡ ಶೈವಧರ್ಮದ ಒಂದು ಪ್ರಧಾನಕೇಂದ್ರವಾಗಿತ್ತಲ್ಲದೆ, 'ದಕ್ಷಿಣದ ಕಾಶಿ' ಎಂದು ಕರೆಯಿಸಿಕೊಂಡ ಸ್ಥಳ. ನಂತರದಲ್ಲಿ ಆಳಿದ ರಾಷ್ಟ್ರಕೂಟರು ಕೂಡ ಈ ಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿರುವರು. ಈ ವಂಶದ ಒಂದನೆ ಕೃಷ್ಣನು ಎಲ್ಲೋರಾದಲ್ಲಿ ಕಟ್ಟಿಸಿದ ಕೈಲಾಸನಾಥ ದೇವಾಲಯವು ಇದಕ್ಕೊಂದು ದೊಡ್ಡ ಹೆಗ್ಗುರುತಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಹತ್ತನೆಯ ಶತಮಾನ ಹಾಗೂ ಹನ್ನೊಂದನೆಯ ಶತಮಾನಗಳು ರಾಜಕೀಯವಾಗಿ ಅಸ್ಥಿರತೆ ಹೊಂದಿದ್ದ ಕಾಲವೆನ್ನಬಹುದು. ಕರ್ನಾಟವು ಹತ್ತನೆಯ ಶತಮಾನದಲ್ಲಿ ಸಾಹಿತ್ಯದಲ್ಲಿ

ಸುವರ್ಣಯುಗ ಕಂಡರೂ, ರಾಜಕೀಯವಾಗಿ ಸುವರ್ಣಮಯವಾದ ದಿನಗಳನ್ನು ಕಾಣಲಿಲ್ಲ. ರಾಷ್ಟ್ರಕೂಟರ ಕೊನೆಯ ದೊರೆಗಳು ದುರ್ಬಲರಾಗಿದ್ದರಿಂದ ತೈಲಪನು ಅವರನ್ನು ಬದಿಗೊತ್ತಿ ತನ್ನ ಪೂರ್ವಿಕರ ಸಾಮ್ರಾಜ್ಯವನ್ನು ಮತ್ತೆ ಪಡೆದುಕೊಂಡು ಕಲ್ಯಾಣದಿಂದ ರಾಜ್ಯವಾಳ ಹತ್ತಿದ. ಹತ್ತು ಹಾಗೂ ಹನ್ನೊಂದನೆಯ ಶತಮಾನಗಳಲ್ಲಿ ಕರ್ನಾಟಕವು ರಾಜಕೀಯವಾಗಿ ಸಂಕ್ರಮಣ ಕಾಲವನ್ನು ಎದುರಿಸಿತು ಎಂದು ಹೇಳಬಹುದು. ಈ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ಶೈವಧರ್ಮವು ಇತ್ತಾದರೂ, ಪಾಶುಪತ, ಕಾಳಾಮುಖ, ಲಕುಲೀಶ, ಸಿದ್ಧರು ಮುಂತಾದ ಪಂಗಡಗಳಾಗಿ ವಿಭಜನೆ ಹೊಂದಿತ್ತು. ಈ ಪಂಥಗಳು ತಮಿಳುನಾಡಿನ ಅರವತ್ತುಮೂರು ಪುರಾತನರ ಚರಿತ್ರೆಯಿಂದ ಪ್ರೇರಣೆ ಪಡೆದವರು. ಈ ಹಂತದಲ್ಲಿ ಶೈವ ಧರ್ಮದ ಪ್ರಮುಖ ಪ್ರತಿಪಾದಕರೆಂದರೆ, ಜೇಡರದಾಸಿಮಯ್ಯ ಕೊಂಡಗುಳಿ ಕೇಶಿರಾಜ, ಗೋಲಗೇರಿಯ ಗೊಲ್ಲಾಳ, ಬಾವೂರ ಬೊಮ್ಮಯ್ಯ ಪ್ರಮುಖರು. ಇವರನ್ನೇ ಬಸವೇಶ್ವರರು, ಆದ್ಯರು, ಪ್ರಮಥರು ಎಂದಿರುವುದು.

ಕರ್ನಾಟಕದಲ್ಲಿ ಶೈವಧರ್ಮವು ಮುಂದೆ ವೀರಶೈವ ಧರ್ಮಕ್ಕೆ ಪ್ರಧಾನ ಪ್ರೇರಕ ಶಕ್ತಿಯಾಯಿತು. ವೀರಶೈವದ ಮೂಲವಿರುವುದು ಈ ಶೈವಧರ್ಮದಲ್ಲೇ. ಶೈವ ಧರ್ಮದಲ್ಲಿ ಶಿವನೇ ಸರ್ವಶಕ್ತ. ಈ ಪರಶಿವನ ಆರಾಧಕರೆ ಶೈವರು. ಈ ಮೇಲೆ ಹೇಳಿದ ಜೇಡರದಾಸಿಮಯ್ಯ, ಕೊಂಡಗುಳಿ ಕೇಶಿರಾಜ, ಗೋಲಗೇರಿಯ ಗೊಲ್ಲಾಳ ಮುಂತಾದವರು ಬಸವಪೂರ್ವಕಾಲದಲ್ಲಿದ್ದವರು. ಜೇಡರ ದಾಸಿಮಯ್ಯ ಹಾಗೂ ಕೊಂಡಗುಳಿ ಕೇಶಿರಾಜರನ್ನು ನೆನೆಯುವ ಬಸವಣ್ಣ ಶ್ರೀ ಗೊಲ್ಲಾಳನನ್ನು ಮಾತ್ರ ನೆನೆಯುವುದಿಲ್ಲ. ಉರಿಲಿಂಗ ಪೆದ್ದಿ ಎಂಬ ವಚನಕಾರ ಉಲ್ಲೇಖಿಸಿರುವ 'ಮಣ್ಣು ದೈವ, ಮಡಕೆ ದೈವ, ಕುರಿಹಿಕ್ಕಿ ದೈವ' ಎಂಬ ಸಾಲುಗಳನ್ನು ಗಮನಿಸಿದರೆ, ಶ್ರೀ ಗೊಲ್ಲಾಳರು ಜೇಡರ ದಾಸಿಮಯ್ಯನ ಸಮಕಾಲೀನವನಾಗಲಿ ಅಥವಾ ಅವನಿಗಿಂತ ಪೂರ್ವದ ವಚನಕಾರರ ಎಂಬುದು ತರ್ಕ ಮಾಡುವುದಕ್ಕೆ ಆಸ್ಪದ ಕೊಡುತ್ತದೆ, ಆಗಿನ ಶೈವ ಪಂಥದವನಾಗಿದ್ದ, ಗೊಲ್ಲಾಳ ಕುರಿಹಿಕ್ಕೆಯನ್ನೇ ಲಿಂಗವಾಗಿ ಪೂಜಿಸಿದವನು. ಅದು ಆಗಿನ ಸಾಮಾನ್ಯ ಸಂಗತಿ. ಮುಂದೆ ಕಾಲಾಂತರದಲ್ಲಿ ಪರಿವರ್ತನೆ ಪಡೆದ ಶೈವ ಧರ್ಮದ ಈ ಘಟನೆಗಳೇ, ಇಷ್ಟಲಿಂಗ ಪ್ರಧಾನವಾದ ವೀರಶೈವ ಧರ್ಮಕ್ಕೆ ಪ್ರೇರಣೆ ನೀಡಿದವು.

"ಕರ್ನಾಟಕದಲ್ಲಿ ಇಂಥ ಶಿವಪ್ರಜ್ಞೆಯ ಪ್ರಸಿದ್ಧ ಧರ್ಮಗಳು ನಾಲ್ಕು. ಪಾಶುಪತ, ಕಾಳಾಮುಖ. ನಕುಲೀಶ, ಮಹಾವ್ರತಿ. ಬಸವ ಸಂಪ್ರದಾಯದಲ್ಲಿ ಕ್ರಮೇಣ ಸೇರಿಹೋದ ಇವುಗಳನ್ನು ಕುರಿತು ಸಾವಿರಾರು ಶಾಸನಗಳು, ಬಸವಪೂರ್ವ ಮತ್ತು ಬಸವೋತ್ತರ ಕಾಲದಲ್ಲಿ ಸಿಗುತ್ತವೆ. ಬಸವಪೂರ್ವ ವೈದಿಕ, ವೈದಿಕ ಸಿದ್ಧಾಂತಮುಖಿಯಾಗಿದ್ದ ಇವು ಬಸವೋತ್ತರ ಕಾಲದಲ್ಲಿ ಶರಣ ಸಿದ್ಧಾಂತಮುಖಿಯಾಗುತ್ತಲಿರುವ ಹೆಜ್ಜೆ ಗುರುತುಗಳು ಕಾಣಸಿಗುತ್ತವೆ."[2]

ಇದರಂತೆ ಬಸವಪೂರ್ವದ ರಾಜಕೀಯ ಚಿತ್ರಣವನ್ನು ನಾವು ಸಂಕ್ಷಿಪ್ತವಾಗಿ ಹೀಗೆ ಇಲ್ಲಿ ಅವಲೋಕಿಸಬಹುದಾಗಿದೆ. ಶಿವಪರ ಧರ್ಮದ ವಿಕಾಸದಲ್ಲಿ ನಾವು ನಾಲ್ಕು ರಾಜರ ಹೆಸರನ್ನು ಉಲ್ಲೇಖಿಸಬಹುದಾಗಿದೆ. ಅವರುಗಳೆಂದರೆ ತೈಲಪ, ಜಯಸಿಂಹ, ವಿಕ್ರಮಾದಿತ್ಯ ಹಾಗೂ ಬಿಜ್ಜಳ.

ತೈಲಪನು ರಾಷ್ಟ್ರಕೂಟರನ್ನು ಸೋಲಿಸಿ ಪುನಃ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದವ. ಬಾದಾಮಿ ಚಾಲುಕ್ಯರು ರಾಷ್ಟ್ರಕೂಟರಿಂದ ಸೋಲಿಸಲ್ಪಟ್ಟು ತಮ್ಮ ಸಾಮ್ರಾಜ್ಯ ಕಳೆದುಕೊಂಡಿದ್ದರು. ಸುಮಾರು ೩೦೦ ವರ್ಷಗಳ ಬಳಿಕ ಮತ್ತೆ ಚಾಲುಕ್ಯ ಸಾಮ್ರಾಜ್ಯ ಸ್ಥಾಪಿಸಿದ ಕೀರ್ತಿ ತೈಲಪನಿಗೆ ಸಲ್ಲುತ್ತದೆ. ತೈಲಪನನ್ನು ಸೋಲಿಸಿ ಕಲ್ಯಾಣದಲ್ಲಿ ಪ್ರತಿಷ್ಠಾಪಿತರಾದವರೆಂದರೆ ಕಳಚೂರಿಗಳು.

ತೈಲಪನ ನಂತರದಲ್ಲಿ ಅವನ ಮೊಮ್ಮಗನಾದ ಜಯಸಿಂಹನು ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿಯೇ ಶೈವಧರ್ಮವು ಬಹಳ ವೇಗವಾಗಿ ಪ್ರಸಾರವಾಗತೊಡಗಿತು. ಇವನ ಕಾಲ ಕ್ರಿ.ಶ. ೧೦೧೫-೪೨, ಮೊದಲು ಇವನು ಜೈನಮತಾವಲಂಬಿಯಾಗಿದ್ದ ಎಂಬ ಪ್ರತೀತಿ ಇದೆ. ಜಯಸಿಂಹನ ಹೆಂಡತಿಯಾಗಿದ್ದ ಸುಗ್ಗಲೆ ಆದ್ಯ ವಚನಕಾರ ಜೇಡರ ದಾಸಿಮಯ್ಯನ ಶಿಷ್ಯಳಾಗಿದ್ದಳು. ಮೇಲಾಗಿ ಶೈವಧರ್ಮದ ಆರಾಧಕಳಾಗಿದ್ದಳು. ಮೊದಮೊದಲು ಗಂಡಹೆಂಡತಿಯರು ಭಿನ್ನಮತಾವಲಂಬಿಯಾಗಿದ್ದರೂ ಮುಂದೆ ಇವರಿಬ್ಬರ ನಡುವೆ ವಾದವಿವಾದಗಳು ಜರುಗಿ, ಜೇಡರ ದಾಸಿನಮಯ್ಯನವರ ಪವಾಡದ ಪ್ರಭಾವದಿಂದಾಗಿ ಕೊನೆಗೆ ಜಯಸಿಂಹನು ಲಿಂಗದೀಕ್ಷೆ ಪಡೆಯುವಂತಾಯಿತು. ಈ ಘಟನೆಯ ನಂತರದಲ್ಲಿ ತನ್ನ ರಾಜಧಾನಿಯಾದ ಪೊಟ್ಟಲಕೆರೆಯಲ್ಲಿದ್ದ ಸುಮಾರು ೭೦೦ ಬಸದಿಗಳನ್ನು ನಾಶಮಾಡಿ ಅಲ್ಲಿ ಶಿವಾಲಯಗಳನ್ನು ನಿರ್ಮಿಸಿದನು ಎಂಬುದನ್ನು ಹಳಕಟ್ಟಿಯವರು ಸಂಪಾದಿಸಿದ ಕೃತಿಗಳಿಂದ ತಿಳಿದು ಬರುತ್ತದೆ.

ಜಯಸಿಂಹನು ಶೈವ ಧರ್ಮಕ್ಕೆ ಮತಾಂತರಗೊಂಡ. ಆದರೆ ಯಾವ ಶೈವಧರ್ಮದ ಪಂಗಡಕ್ಕೆ ಮತಾಂತರಗೊಂಡ ಎಂಬುದು ಸ್ಪಷ್ಟವಿಲ್ಲ. ಇವನ ಆಸ್ಥಾನ ಕವಿಯಾದ ಚಂದ್ರರಾಜನ ಮದನತಿಲಕದ ಪೀಠಿಕಾಸಂಧಿಯ ಈ ಪದ್ಯ ನಮ್ಮ ಗಮನ ಸೆಳೆಯುತ್ತದೆ.

"ಚೋಳಕುಲ ವಿಳಯಕಾಲಂ
ಕಾಳಾಮುಖಿ ಪ್ರಾಹಿತೋದ್ಧತಮಾಳಂ ।
ಮಾಳವ ರಾಜಕ ಶೂಲಂ ।
ಶೂಲಾಯುಧ ಚರಣಕಮಲ ಭೃಂಗಂ ಸಿಂಗಂ" ।

ಇಲ್ಲಿ ಕವಿ ವರ್ಣಿಸುವಂತೆ ಜಯಸಿಂಹರಾಜನು ತ್ರಿಶೂಲವನ್ನು ಆಯುಧವನ್ನಾಗಿಸಿಕೊಂಡ ಶಿವನ ಚರಣಕಮಲ ಭೃಂಗವಾಗಿದ್ದವೆಂದು ಹೇಳಲಾಗಿದೆ. "ತೈಲಪನ ಕಾಲದಿಂದ ಜಯಸಿಂಹನ ಕಾಲಕ್ಕೆ ಬರುವಲ್ಲಿ ಶಿವಧರ್ಮ ಹೆಚ್ಚು ಚೈತನ್ಯ ಪಡೆದುದು ಈ ಎಲ್ಲ ವಿವರಗಳಿಂದ ಸ್ಪಷ್ಟವಾಗುತ್ತದೆ."[೮] ಎಂದು ಡಾ. ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯ ಪಡುತ್ತಾರೆ.

ಕೊಂಡಗುಳಿಯ ಕೇಶಿರಾಜ. ತೆಲುಗು ಬೊಮ್ಮಯ್ಯ, ಬಾಹೂರ ಬೊಮ್ಮಯ್ಯ ಮುಂತಾದವರು ಜಯಸಿಂಹನ ಮೊಮ್ಮಗನಾದ ವಿಕ್ರಮಾದಿತ್ಯ VIನೆಯವನ ಕಾಲದಲ್ಲಿ ಶೈವ ಧರ್ಮದ ಪ್ರತಿಪಾದಕರಾಗಿದ್ದರು

ವೆಂಬುದು ಇತಿಹಾಸದಿಂದ ತಿಳಿದು ಬರುವ ಸಂಗತಿಯಾಗಿದೆ. ಈ ಸಂಕ್ರಮಣ ಕಾಲದಲ್ಲಿಯೇ ಶೈವಧರ್ಮದ ಅನೇಕ ಪಂಥಗಳು ವೀರಶೈವಧರ್ಮದಲ್ಲಿ ಹಂತ ಹಂತವಾಗಿ ಲೀನವಾಗತೊಡಗಿರುವುದನ್ನು ನಾವು ಗಮನಿಸಬಹುದು.

ಕೇವಲ ವಚನಗಳ ಆಧಾರದ ಮೇಲೆ ಕವಿಯ ಕಾಲಧರ್ಮಗಳನ್ನು ನಿರ್ಣಯಿಸವುದು ಬಹಳ ಕಷ್ಟಸಾಧ್ಯವಾದ ಸಂಗತಿ ; ಒಂದೆಡೆ ಡಾ. ಎಚ್.ಎಸ್. ಶಿವಪ್ರಕಾಶರು ಅಭಿಪ್ರಾಯಪಡುವಂತೆ "ಕನ್ನಡ ವಚನ ಸಮುಚ್ಚಯವನ್ನು ನೋಡಿದಾಗಲೂ ಅಲ್ಲಿ ಹಲವು ಪರಂಪರೆಗಳ ಮುಖಾಮುಖಿ ಮತ್ತು ಸಂಕರಗಳು ಏಕಕಾಲದಲ್ಲಿ ನಡೆದಿರುವುದು ವ್ಯಕ್ತವಾಗುವುದು. ಈ ಕಾರಣದಿಂದ ವಚನಕಾರರ ಅಂಕಿತಗಳೇ ಸಾಂಸ್ಕೃತಿಕ ಸಂಘರ್ಷ ಮತ್ತು ಸಂಕರಗಳ ಕುರುಹುಗಳು ಎಂದು ಗುರುತಿಸಬಹುದಾಗಿದೆ"[6] ಎಂಬ ಮಾತುಗಳು ಇಲ್ಲಿ ಮುಖ್ಯವೆನಿಸುತ್ತವೆ. ಯಾಕೆಂದರೆ ಶ್ರೀ ಗೊಲ್ಲಾಳೇಶನ ವಚನಾಂಕಿತ 'ವೀರ ಬೀರೇಶ್ವರ' ಎಂಬುದನ್ನೇ ಕೇಂದ್ರವಾಗಿಟ್ಟುಕೊಂಡು ನೋಡಿದರೆ, ಆತ ಕುರುಬ ಹಾಗೂ ಶೈವ ಮತಾವಲಂಬಿ ಎಂಬ ಸಂಗತಿಗಳು ಸ್ಪಷ್ಟವಾಗುತ್ತವೆ. ಬಸವಪೂರ್ವದ ಶೈವಧರ್ಮದಲ್ಲಿ ಅಸ್ತಿತ್ವದಲ್ಲಿದ್ದ ಹದಿನೆಂಟು ಜಾತಿಗಳಲ್ಲಿ ಈ ಕುರುಬ ಜಾತಿಯೂ ಒಂದು. ಅಂದಿನ ಶೈವ ಸಂಸ್ಕಾರಗಳಂತೆ, ಮಣ್ಣು, ಕಲ್ಲು ಮೊದಲಾದವುಗಳೆಲ್ಲ ದೈವತ್ವ ಪಡೆದ ಸಂಗತಿ ನಮಗೆ ಕರ್ನಾಟಕದ ಸಾಂಸ್ಕೃತಿಕ ಅಧ್ಯಯನದಿಂದ ತಿಳಿದುಬರುವಂಥದ್ದು, ಕುರಿ ಹಿಕ್ಕೆಯನ್ನು ಲಿಂಗವೆಂದು ಪರಿಭಾವಿಸಿ ಪೂಜಿಸಿದವ ಎಂಬ ದಂತಕತೆಯನ್ನೇ ತೆಗೆದುಕೊಂಡರೂ ಕಾಲಾಂತರದಲ್ಲಿ ನಡೆದ ಸಾಂಸ್ಕೃತಿಕ ಮುಖಾಮುಖಿಗಳಿಂದಾಗಿ ಒಬ್ಬ ಕುರುಬನಾಗಿದ್ದ ಗೊಲ್ಲಾಳ ವಚನಕಾರನಾಗಿ ಮಾರ್ಪಡುತ್ತಾ ವೀರಶೈವ ಧರ್ಮದ ಮುಂಗೋಳಿಗಳಾಗಿದ್ದ ಜೇಡರ ದಾಸಿಮಯ್ಯನವರಂತೆ ಕಾರ್ಯನಿರ್ವಹಿಸಿದರು ಎಂಬುದು ತಿಳಿದುಬರುತ್ತದೆ.

## II. ಧಾರ್ಮಿಕ ಹಿನ್ನೆಲೆ

ಬಸವಪೂರ್ವದ ಧಾರ್ಮಿಕ ಸಂಸ್ಕೃತಿ ಅನೇಕ ಧರ್ಮಗಳ, ಜಾತಿಗಳ ಸಂಕರದ ಸಂಕ್ರಮಣಾವಸ್ಥೆಯ ಸಂಸ್ಕೃತಿಯಾಗಿತ್ತೆಂದು ಈಗಾಗಲೇ ಅನೇಕ ಸಂಶೋಧಕರು ಅಭಿಪ್ರಾಯ ಪಟ್ಟಿರುವುದನ್ನು ಗಮನಿಸಿ, ಶ್ರೀ ಗೋಲಗೇರಿಯ ಗೊಲ್ಲಾಳೇಶ್ವರರು ಇಂಥ ಕಾಲಘಟ್ಟದಲ್ಲಿ ಮೂಡಿ ಬಂದವರು ಎಂಬುದನ್ನು ತೆಗೆದುಕೊಂಡಾಗ ಅಂದಿನ ಧಾರ್ಮಿಕ ಪರಿಸ್ಥಿತಿಯ ಸ್ಥೂಲ ಪರಿಚಯ ನಮಗಾಗುವುದು.

ವಚನಕಾರ ಶ್ರೀ ಗೊಲ್ಲಾಳೇಶ್ವರರ ಉಪಲಬ್ಧ ವಚನಗಳನ್ನು ಅನುಲಕ್ಷಿಸಿ ಹೇಳುವುದಾದರೆ, ಬಸವಣ್ಣನ ಬಗೆಗೆ ಎಲ್ಲಿಯೂ ಉಲ್ಲೇಖಗಳಿರುವುದಿಲ್ಲ. ಬದಲಿಗೆ, ಸಿರಿಗಿರಿ (ಶ್ರೀಶೈಲ) ಮುಂತಾದ ಪದಗಳು ಜಾನಪದ ಸಾಹಿತ್ಯದಲ್ಲಿ ಹೇರಳವಾಗಿ ದೊರಕುವುದರಿಂದ ಇವರು ಶೈವ ಧರ್ಮದ ಪ್ರಥಮ ಪ್ರಚಾರಕೇಂದ್ರವಾಗಿರುವ ಶ್ರೀಶೈಲದ ಮಲ್ಲಯ್ಯನ ಅನುಯಾಯಿ, ಪರಮಭಕ್ತನೆಂಬುದು ತಿಳಿದುಬರುವ ಸಂಗತಿಯಾಗಿದೆ. ಶ್ರೀಶೈಲವು ಸಕಲ ಶೈವರಿಗೆ ಆರಾಧನಾ ಕೇಂದ್ರ. ಹತ್ತು ಹನ್ನೊಂದನೆಯ ಶತಮಾನದಲ್ಲಿ ಬಹುತೇಕ ಶೈವರು, ವೀರಶೈವರು

ತಮ್ಮ ಬದುಕಿನಲ್ಲಿ ಶ್ರೀಶೈಲವನ್ನು ಪ್ರಾಮುಖ್ಯವಾಗಿ ಕಂಡಿರುವರು. ಅಲ್ಲಮ, ಅಕ್ಕಮಹಾದೇವಿ, ಸಿದ್ಧರಾಮರಂತೆ ಗೊಲ್ಲಾಳರು ಕೂಡ, ಮೊದಲು ಶೈವ ನಂತರದಲ್ಲಿ ವೀರಶೈವ ಧರ್ಮಕ್ಕೆ ಪರಿವರ್ತನೆ ಹೊಂದಿದ ಶರಣರಾಗಿರುವರು ಎಂಬುದು ಸ್ಪಷ್ಟವಾಗುತ್ತದೆ.

ಅಂದಿನ ಸಮಕಾಲೀನ ಸಂದರ್ಭಗಳಲ್ಲಿ ಅಂದರೆ ಬಸವಪೂರ್ವ ಯುಗದಲ್ಲಿ, ಕರ್ನಾಟಕದಲ್ಲಿ ಮತ ಸಂಘರ್ಷಗಳ ಕುರುಹುಗಳನ್ನು ಕಾಣುತ್ತೇವೆ. ಅದರಲ್ಲೂ ಮುಖ್ಯವಾಗಿ ಜೈನರಿಗೂ ಮತ್ತು ಶೈವರಿಗೂ ಹೆಚ್ಚಿನ ಸಂಘರ್ಷಗಳು ನಡೆದ ಉಲ್ಲೇಖಗಳಿವೆ. ಉದಾಹರಣೆಗೆ ಸುಗ್ಗಲೆಯನ್ನು ಜೇಡರ ದಾಸಿಮಯ್ಯನವರು ಶೈವಧರ್ಮಕ್ಕೆ ಮತಾಂತರಿಸಿದ್ದು ಮತ್ತು ಏಕಾಂತದ ರಾಮಯ್ಯನು ಬಸದಿಯಲ್ಲಿ ಲಿಂಗ ಪ್ರತಿಷ್ಠಾಪಿಸಿದ ಸಂಗತಿಗಳು ಆಗಿನ ಕಾಲದ ಧಾರ್ಮಿಕ ಸ್ಥಿತಿಯನ್ನು ಸೂಚಿಸುತ್ತವೆ.

ಶೈವರು ಬಹುಸಂಖ್ಯೆಯಲ್ಲಿ ಕಾಲಕ್ರಮೇಣ ವೀರಶೈವರಾಗುತ್ತಿರುವ ಕಾಲಘಟ್ಟದಲ್ಲಿಯೇ ಶ್ರೀ ಗೊಲ್ಲಾಳೇಶ್ವರರು ಮೂಡಿ ಬಂದವರು. ಈ ಸಂಧಿ ಕಾಲದ ಅಂದಿನ ಧಾರ್ಮಿಕ ಪರಿಸ್ಥಿತಿಯನ್ನು ಅವಲೋಕಿಸುವುದು ಇಲ್ಲಿಯ ಅಗತ್ಯವಾಗಿದೆ. ಜೈನರ ಕುರಿತಾದ ಅನೇಕ ಶಾಸನಗಳು ಕರ್ನಾಟಕದಲ್ಲಿ ಸಿಗುತ್ತವೆ. ಆದರೆ ಶರಣರು ಬರೆಯಿಸಿದ ಶಾಸನಗಳು ಮಾತ್ರ ಸಿಗುವುದಿಲ್ಲ. ಯಾಕೆಂದರೆ ಶಾಸನ ಬರವಣಿಗೆ ಶರಣರಿಗೆ, ಶರಣಧರ್ಮಕ್ಕೆ ಬಾಹಿರ. ಈ ಕಾರಣಕ್ಕಾಗಿಯೇ ೧೨ನೇ ಶತಮಾನದ ಶರಣರಾಗಲಿ ಆಮೇಲೆ ೧೬ನೇ ಶತಮಾನದ ಶರಣರಾಗಲಿ ತಾವಾಗಿ ಶಾಸನ ಬರೆಯಿಸಲೇ ಇಲ್ಲ. ಬಸವ ಪುರಾಣದಲ್ಲಿ ಬರುವ ಕಬ್ಬಿಲರ ಪ್ರಸಂಗ ಅಂದಿನ ಧಾರ್ಮಿಕ ಸ್ಥಿತಿಯನ್ನು ತುಂಬಾ ಚೆನ್ನಾಗಿ ಚಿತ್ರಿಸುತ್ತದೆ. ಈ ಕಬ್ಬಿಲರು ಪಾಶುಪತ ಧರ್ಮದವರು. ಈ ಧರ್ಮದವರು ತಮ್ಮ ಹೆಸರಿನ ಮುಂದೆ ಅಂದರೆ ಕೊನೆಯಲ್ಲಿ ಶಿವ ಎಂದು ಸೇರಿಸಿಕೊಳ್ಳುವ ರೂಢಿ ಇಟ್ಟುಕೊಂಡಿದ್ದರು. ಅಂಥವರಲ್ಲಿ ಪ್ರಮುಖರಾದ ಧರ್ಮಶಿವ, ಶ್ರೀಕಂಠಶಿವ, ಶಂಕರಶಿವ ಮುಂತಾದವರು ಬಸವಣ್ಣ ಹಾಗೂ ಬಿಜ್ಜಳನಲ್ಲಿಗೆ ಬಂದು ದೂರು ಹೇಳಿ ವೀರಶೈವ ಮತಾವಲಂಬಿಗಳಾದರು ಎಂದು ಶಾಸನಗಳಿಂದ ತಿಳಿದು ಬರುತ್ತದೆ.

ಶ್ರೀ ಗೊಲ್ಲಾಳೇಶ್ವರರು ಮೊದಲು ಶೈವ ನಂತರದಲ್ಲಿ ವೀರಶೈವರಾಗಿದ್ದರು ಎಂಬುದಕ್ಕೆ ಅವರು ರಚಿಸಿದ ವಚನಗಳೇ ಸಾಕ್ಷಿ. ಅಲ್ಲದೆ ಜನಪದ ಸಾಹಿತ್ಯದಲ್ಲಿ ಕಂಡುಬರುವ ಅವರ ಕುರಿತಾದ ಕುರಿಹಿಕ್ಕೆಯ ಕತೆ, ಜಂಗಮ ಲಿಂಗಗಳು ಅವರು ಪರಿಪಾಲಿಸಿದ ಧರ್ಮವನ್ನು ಸೂಚಿಸುವ ಸಂಗತಿಗಳಾಗುತ್ತವೆ.

## III. ಆರ್ಥಿಕ ಹಿನ್ನೆಲೆ

ಇತಿಹಾಸದುದ್ದಕ್ಕೂ ಆರ್ಥಿಕ ಸಂಗತಿಗಳು ಸಂಸ್ಕೃತಿಯಲ್ಲಿ ಪ್ರಧಾನ ಪಾತ್ರವಹಿಸಿ ಅಂದಂದಿನ ಜನಜೀವನವನ್ನು ನಿಯಂತ್ರಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಅನೇಕ ಯುದ್ಧಗಳಿಗೆ, ಹೊಸ ಧರ್ಮಗಳ ಉದಯವಾಗುವುದಕ್ಕೆ, ಸಾಮ್ರಾಜ್ಯದ ಸ್ಥಾಪನೆಗೆ, ಅವನತಿಗೆ ಆರ್ಥಿಕ ಅಂಶಗಳು ಸಾಕಷ್ಟು ಕಾರಣವಾಗಿವೆ.

"ಒಂದು ಸಂಘಟಿತ ಹೋರಾಟವಾಗಿ ರೂಪುಗೊಳ್ಳಲು ಸಮರ್ಥವಾದ ಯಾವುದೇ ಚಳುವಳಿಗಳು ಚರಿತ್ರೆಯಲ್ಲಿ ಕೇವಲ ಧಾರ್ಮಿಕ ಚೌಕಟ್ಟಿನಲ್ಲಿ ಮಾತ್ರ ಹುಟ್ಟಿ ಬಂದವುಗಳಾಗಿರುವುದಿಲ್ಲ. ಆಯಾ ಕಾಲದ

ಅನಿವಾರ್ಯತೆಯಿಂದಾಗಿ ಅವು ಧಾರ್ಮಿಕ ತೆರೆಯ ಹಿಂದೆ ಕೆಲಸ ಮಾಡಿದ್ದರೂ, ಅವುಗಳ ಮೂಲ ನೆಲೆ ಬದುಕಿನ ಮೂಲ ಸೂತ್ರವಾದಂತಹ ಆರ್ಥಿಕ ಜೀವನ ಸ್ವರೂಪವನ್ನು ಅವಲಂಬಿಸಿಕೊಂಡೇ ನಡೆದಿರುತ್ತವೆ. ಈ ದೃಷ್ಟಿಯಿಂದ ವಚನಕಾರರ ಚಳುವಳಿ ಎನ್ನುವುದು ಮೇಲು ನೋಟಕ್ಕೆ ಧಾರ್ಮಿಕ ಚಟುವಟಿಕೆಯಾಗಿ ಕಂಡರೂ, ಅದರ ಆಳದಲ್ಲಿ ಈ ಚಳುವಳಿ ಹುಟ್ಟುವುದಕ್ಕೆ ಕಾರಣವಾದ ಅಂಶಗಳು ಧಾರ್ಮಿಕ ಆಚರಣೆಗಳಿಗಿಂತ ಬೇರೆಯಾದವುಗಳೇ ಆಗಿವೆ ಎನ್ನವುದು ಅದರ ಸೂಕ್ಷ್ಮವಾದ ಅಧ್ಯಯನದಿಂದ ನಮಗೆ ತಿಳಿಯುತ್ತದೆ."[30]

ಜೇಡರ ದಾಸಿಮಯ್ಯನ ಕಾಲಕ್ಕೆ ಜೈನಧರ್ಮ ಪ್ರಭಾವಶಾಲಿಯಾಗಿದ್ದರೂ ಶೈವಧರ್ಮವು ಸಾಕಷ್ಟು ಪ್ರಾಬಲ್ಯಕ್ಕೆ ಬರುತ್ತಿತ್ತು. ಈ ಶೈವಮಠಗಳು ಮುಂದೆ ವೈದಿಕತೆಯನ್ನು ಅಳವಡಿಸಿಕೊಂಡು ಶೋಷಣೆಯ ಕೇಂದ್ರಗಳಾದವು. ಇವು ಕೂಡ ಹೋಮ, ಹವನ, ಪಂಚಾಂಗ, ವೇದಾಧ್ಯಯನಗಳನ್ನು ನಡೆಸಿಕೊಂಡು ಸಾಮಾನ್ಯ ಜನರನ್ನು ಶೋಷಣೆ ಮಾಡಹತ್ತಿದವು. ಒಂದು ನೆಲೆಯಲ್ಲಿ ವೈದಿಕರು ಹಾಗೂ ಈ ಮಠದ ಶೈವರು ಒಂದು ಸೌಹಾರ್ದ ಸಂಬಂಧವನ್ನು ಇಟ್ಟುಕೊಂಡು ಬರುತ್ತಿದ್ದರು ಮತ್ತು ಸಮಾಜವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು.

ಹನ್ನೊಂದನೇ ಶತಮಾನದ ಕೊನೆಯ ಭಾಗದ ಕರ್ನಾಟಕ ಸ್ಥಿತಿಗತಿಗಳನ್ನು ಗಮನಿಸಿದರೆ ಅದು ಅಷ್ಟೇನೂ ಮಹತ್ವಾಕಾಂಕ್ಷಿಗಳಲ್ಲದ ಕೊನೆಕೊನೆಯ ಚಾಲುಕ್ಯ ರಾಜರ ಆಳ್ವಿಕೆಗೆ ಸೇರಿತ್ತು. ಈ ಆಳರಸರ ಕಾಲ ತುಂಬಾ ಅಸ್ಥಿರವಾದ, ಅಭದ್ರವಾದ ಕಾಲವಾಗಿತ್ತು. ಇಂಥ ಕಾಲದಲ್ಲೇ ಸಾಮಾನ್ಯ ಜನರು ಮತ್ತು ಇತರ ಕೆಲಸದ ಕಾರ್ಮಿಕರು ಹೆಚ್ಚಿನ ಕಷ್ಟಕ್ಕೆ ಸಿಲುಕಿಕೊಳ್ಳುತ್ತಾರೆ. ಇವರು ಬಹಳ ದಂಡ ತೆರಬೇಕಾದ ಪರಿಸ್ಥಿತಿ ತಲೆದೋರುತ್ತದೆ. ರಾಜಕೀಯ ಅಸ್ಥಿರತೆ ತಲೆದೋರಿದಾಗ ರಾಜರು ತಮ್ಮತಮ್ಮಲ್ಲೇ ಕಾದಾಡುವುದು ಸಹಜ. ಯಾರು ಗೆದ್ದರೂ, ಸೋತರೂ ಎಲ್ಲಾ ಕಾಲದಲ್ಲೂ ಯಾವ ವ್ಯತ್ಯಾಸಗಳು ಇಲ್ಲದಂತೆ ತಮ್ಮ ವಿಶೇಷಾಧಿಕಾರವನ್ನು, ವೈಭವವನ್ನು ಅನುಭವಿಸಿಕೊಂಡು ಬರುತ್ತಿದ್ದ ಮಠಗಳು ಈ ಕಾಲದ ಮತ್ತೊಂದು ವಿಶೇಷವೆ! ಇದಲ್ಲದೆ ವ್ಯಾಪಾರಿಗಳು ಗೆದ್ದ ರಾಜರ ಬೆನ್ನು ಬಿದ್ದು ತಮ್ಮ ಸ್ಥಾನ ಭದ್ರವಾಗಿಸಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಈ ಮೂರು ಗುಂಪುಗಳು ಅಂದರೆ ರಾಜಸತ್ತೆ, ಪುರೋಹಿತಶಾಹಿ, ವ್ಯಾಪಾರಿ ಸಂಘಗಳು ಉಳಿದವರ ಸುಲಿಗೆಯನ್ನವಲಂಬಿಸಿಯೇ (ಆದಾಯ) ಬದುಕಿದ್ದವು.

ಅಂದು ಸಾಮಾನ್ಯ ಜನರ ಮೇಲೆ ಅನೇಕ ಬಗೆಯ ತೆರಿಗೆಗಳನ್ನು ವಿಧಿಸುತ್ತಿದ್ದರು. ಅದರಲ್ಲೂ ಕೆಳವರ್ಗದ ಜನ, ಕಾಯಕದ ಜನ ಅನೇಕ ತೆರಿಗೆಗಳನ್ನು ಕೊಡಬೇಕಾಗುತ್ತಿತ್ತು. ಗಾಣದ ತೆರ, ನೂಲು ತೆರ, ಮಗ್ಗದರ, ಬಣ್ಣ ದರ, ಕುಲುಮೆದರ ಮುಂತಾದ ರೀತಿಯ ತೆರಿಗೆಗಳನ್ನು ಹಾಕುತ್ತಿದ್ದರು. ಉಪ್ಪು ಮಾಡುವವರ ಮೇಲೆ, ದೋಣಿ ನಡೆಸುವವರ ಮೇಲೆ, ಬುಟ್ಟಿ ಹೆಣೆಯುವವರ ಮೇಲೆ ತೆರಿಗೆಗಳನ್ನು ಹಾಕಲಾಗುತ್ತಿತ್ತು. ಇಷ್ಟೆಲ್ಲಾ ತೆರಿಗೆಗಳು ಜನರಿಗೆ ಹೊರಲಾರದವುಗಳಾಗಿದ್ದವು ಮಾತ್ರವಲ್ಲ ಅವುಗಳನ್ನು ಕೊಡಲಾಗದೇ ಜನರು ಊರುಗಳನ್ನೇ ಬಿಟ್ಟು ಹೋದ ಸಂದರ್ಭಗಳು ಶಾಸನಗಳಲ್ಲಿ ಸಿಕ್ಕುತ್ತವೆ. ಬಸವಣ್ಣನವರು ತಮ್ಮ ಒಂದು ವಚನದಲ್ಲಿ "ಹಡೆದೊಡವೆ ವಸ್ತುವನ್ನು ಮೃಢಭಕ್ತರಿಗಲ್ಲದೆ, ಕಡ ಬಡ್ಡಿಯ ಕೊಡಲಾಗದು" ಎಂದಿದ್ದಾರೆ. ಅಂದಿನ ಅನೇಕ

ಶೈವ ಮಠಗಳು ಜನರಿಗೆ ಬಡ್ಡಿ ತೆಗೆದುಕೊಂಡು ಹಣ ಕೊಡುವ ಪದ್ಧತಿ ಇಟ್ಟುಕೊಂಡಿದ್ದವು ಎಂಬ ಸಂಗತಿಗಳು ಜೇಡರ ದಾಸಿಮಯ್ಯನವರ ವಚನಗಳಿಂದ ತಿಳಿದು ಬರುವುದನ್ನು ನೋಡಿದರೆ ಅಂದಿನ ಸಮಾಜ ಹಾಗೂ ಅಂದಿನ ಜನರ ಆರ್ಥಿಕ ಸ್ಥಿತಿಗತಿಗಳ ಬಗ್ಗೆ ನಮಗೆ ಗೊತ್ತಾಗುತ್ತದೆ.

ಅದಕ್ಕೆಂದೇ ಶೈವಮಠಗಳನ್ನು, ಶೈವ ಯತಿಗಳನ್ನು ಧಿಕ್ಕರಿಸುವ, ಸ್ಥಾವರಗಳನ್ನಿಟ್ಟುಕೊಂಡು ಹೋಮ ಹವನ ಪಂಚಾಂಗಗಳ ಹಿನ್ನೆಲೆಯಲ್ಲಿ ಶೋಷಣೆ ಮಾಡುತ್ತಿದ್ದ ಪುರೋಹಿತ ಶಾಹಿಯನ್ನು ಧಿಕ್ಕರಿಸುವ ಇಂದಿನ ಗೋಲಗೇರಿಯ ಶ್ರೀ ಗೊಲ್ಲಾಳೇಶ್ವರರ ಗುಡಿಯನ್ನು ಗಮನಿಸಿದರೆ ಅದು ಹೇಗೆ ಶೈವ ಮಠಗಳಂತೆ ಬೆಳೆದು ಉಳಿದುಕೊಂಡು ಬಂದಿರುವುದಲ್ಲದೆ, ಗೊಲ್ಲಾಳನ ಹೆಸರಲ್ಲಿ ಒಂದು ಪರಂಪರೆಯನ್ನುವಂತೆ ಅನೇಕ ದೇವಾಲಯಗಳು ಕರ್ನಾಟಕದ ತುಂಬೆಲ್ಲಾ ಬೆಳೆದು ಬಂದಿರುವುದನ್ನು ನಾವು ನೋಡುತ್ತೇವೆ. ಇದೊಂದು ಗೊಲ್ಲಾಳೇಶನಿಗೆ ಬಗೆದ ಅಪಚಾರ ಮಾತ್ರ ಎಂದೆನ್ನಬಹುದು. ಎಷ್ಟೋ ದೇವಸ್ಥಾನಗಳು ಖಾಸಗಿ ಆಸ್ತಿಗಳಾಗಿ, ಪುರೋಹಿತ ಶಾಹಿಯನ್ನು ಪ್ರತಿಬಿಂಬಿಸುವಂತೆ ಇಂದೂ ಅಸ್ತಿತ್ವದಲ್ಲಿರುವುದು ಅತ್ಯಂತ ಖೇದಕರ ಸಂಗತಿಯಾಗಿದೆ.

ಇಂದು ಕರ್ನಾಟಕದ ಅನೇಕ ಕಡೆ ಗೊಲ್ಲಾಳೇಶ್ವರನ ಹೆಸರಲ್ಲಿ ದೇವಾಲಯಗಳಿವೆ. ಅವುಗಳಿಗೆ ಒಬ್ಬ ಧರ್ಮಾಧಿಕಾರಿ ಎಂದು ಹೇಳಿಕೊಳ್ಳುವ ವಂಶ ಪಾರಂಪರ್ಯವಾಗಿ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುವ ಪುರೋಹಿತಶಾಹಿ ಮನಸ್ಥಿತಿಯ ಅರ್ಚಕರಿದ್ದಾರೆ. ಇವುಗಳಿಗೆಲ್ಲಾ ಶೈವಮಠಗಳಿಗೆ ಇದ್ದಂತೆ ಸಾಕಷ್ಟು ಆಸ್ತಿ ಇದೆ. ಇವು ಇಂದೂ ಕೂಡ ಜನರ ಶೋಷಣೆಯ ಕೇಂದ್ರವಾಗಿವೆ. ದೇವಾಲಯಗಳನ್ನು, ಸ್ಥಾವರಗಳನ್ನು ಧಿಕ್ಕರಿಸಿದ ಶರಣರ, ವಚನಕಾರರ ಹೆಸರಲ್ಲೇ ಈ ರೀತಿ ನಡೆದುದು ಆಶ್ಚರ್ಯದ ಸಂಗತಿಯಾಗಿದೆ.

ನಾವು ಕ್ಷೇತ್ರಕಾರ್ಯ ಮಾಡಿದಾಗ ನಮಗೆ ಸುಮಾರು ಹದಿನೈದು ದೇವಸ್ಥಾನಗಳು ಶ್ರೀ ಗೊಲ್ಲಾಳೇಶ್ವರನ ಹೆಸರಲ್ಲಿ ಕರ್ನಾಟಕದಾದ್ಯಂತ ಕಟ್ಟಿರುವುದು ಗಮನಕ್ಕೆ ಬಂದಿತು. ಈ ಎಲ್ಲ ದೇವಸ್ಥಾನಗಳಿಗೆ ಬಹುತೇಕವಾಗಿ 'ದೇವರಮನಿ' ಎಂಬ ಮನೆತನದವರು ವಂಶಪಾರಂಪರ್ಯವಾಗಿ ಈ ದೇವಾಲಯಗಳ ಉಸ್ತುವಾರಿ ನೋಡಿಕೊಂಡು ಬರುತ್ತಿರುವರು. ಇಂದು ಇವು ಇವರ ಖಾಸಗಿ ಆಸ್ತಿಯಾಗಿರುವುದನ್ನು ಗಮನಿಸಿದರೆ, ಹತ್ತು ಹನ್ನೊಂದನೆಯ ಶತಮಾನದಲ್ಲಿ ಶೈವಮಠಗಳು ಬೆಳೆದು ಬಂದಂತೆ ಗೊಲ್ಲಾಳನ ಹೆಸರಲ್ಲಿ ಈ ದೇವಾಲಯಗಳು ಬೆಳೆದು ಬಂದವು ಎಂದೆನ್ನಬಹುದು.

ಈ ವ್ಯವಸ್ಥೆಯ ವಿರೋಧಕ್ಕಾಗಿ ಜನಸಮೂಹವೇ ರೂಪುಗೊಳ್ಳತೊಡಗಿತು. ಮುಂದೆ ಅದುವೆ ಕಾಯಕ ಜೀವಿಗಳು (ಕಾರ್ಮಿಕರು) ಪ್ರಧಾನವಾದ 'ಬಸವ ಚಳುವಳಿ' ಎಂದು ಪ್ರಖ್ಯಾತವಾಯಿತು. ದೇವಸ್ಥಾನ, ಮಠಗಳು ಅಂದಿನ ಜನರಿಗೆ ಶೋಷಣೆಯ ಕೇಂದ್ರಗಳಾಗಿ ತೋರಿದವು. ಈ ಶೈವಮಠದ ಅಧಿಪತಿಗಳಾದರೂ ಹೊರಗಿನಿಂದ ಬಂದವರು ಎನ್ನುವುದು ಇನ್ನೊಂದು ಅಸಮಾಧಾನಕ್ಕೆ ಕಾರಣವಾದ ಸಂಗತಿಯಾಗಿತ್ತು. ಹೀಗೆ ದೇವಸ್ಥಾನ, ಮಠಗಳನ್ನು ಧಿಕ್ಕರಿಸುವ ಸ್ಥಾವರ ಸಂಸ್ಕೃತಿಯನ್ನು ವಿರೋಧಿಸುವ ಜಂಗಮ ಸಂಸ್ಕೃತಿಯನ್ನು ಅಪೇಕ್ಷಿಸುವ ಹೊಸಸಮಾಜ ಆಗ ಹಂತ ಹಂತವಾಗಿ ಅಸ್ತಿತ್ವಕ್ಕೆ ಬರತೊಡಗಿತ್ತು.

ಗೊಲ್ಲಾಳನು ಬದುಕಿದ್ದುದು ಒಂದು ಸಂಕ್ರಮಣದ ಕಾಲದಲ್ಲಿ. ಸಾಮಾನ್ಯ ಜನರು ಕಡುಕಷ್ಟ ಅನುಭವಿಸುತ್ತಿದ್ದ ಕಾಲದಲ್ಲಿ. ಅಂಬಿಗರ ಚೌಡಯ್ಯ, ಮೇದಾರ ಚೆನ್ನಯ್ಯನವರಂತೆ ಬಸವಪೂರ್ವದಲ್ಲಿ ಕಂಡುಬರುವ ಕಾಯಕ ಜೀವಿ ಶ್ರೀ ಗೊಲ್ಲಾಳೇಶ್ವರನು ಕಾಯಕ ಜೀವಿ. ವೃತ್ತಿಯಲ್ಲೇ ದಿನಗಳನ್ನು ಕಳೆಯುವವ ವೃತ್ತಿಯಲ್ಲೇ ಕೈಲಾಸವನ್ನು ಕಾಣುವವ. ಈ ತೆರನಾದ ಶರಣರಿಂದಾಗಿಯೇ ಮುಂದೆ, ಕಾಯಕ, ದಾಸೋಹ ಮುಂತಾದ ಆದರ್ಶಗಳಿಂದೊಡಗೂಡಿದ ಕಲ್ಯಾಣ ರಾಜ್ಯದ ಪ್ರಯತ್ನಗಳು ನಡೆಯಲು ಕಾರಣವಾದವು.

ಬಸವ ಚಳುವಳಿಗೆ ಹಿನ್ನೆಲೆಯಾಗಿ ಶ್ರೀ ಗೊಲ್ಲಾಳೇಶ್ವರರಂಥ, ಶ್ರೀ ಜೇಡರ ದಾಸಿಮಯ್ಯನವರಂಥ ಅಂಬಿಗರ ಚೌಡಯ್ಯನಂಥ ಕಾಯಕ ನಿರತ ಕಾರ್ಮಿಕರು ಸವೆಸಿದ ಸಾಂಸ್ಕೃತಿಕ ಹಾದಿ ನಮಗೆ ಕಂಡುಬರುತ್ತದೆ. ಜಗತ್ತಿನ ಬಹುತೇಕ ಚಳುವಳಿಗಳು ಕಾರ್ಮಿಕರ ಚಳುವಳಿಗಳಾಗಿರುವುದನ್ನು ಇಲ್ಲಿ ಗಮನಿಸಬಹುದಾದ ಸಂಗತಿಯಾಗಿದೆ.

ಶೈವಧರ್ಮ ಪ್ರವರ್ಧಮಾನಕ್ಕೆ ಬರುತ್ತಿದ್ದ ಸಂದರ್ಭದಲ್ಲಿ, ಕಾಯಕ ಜೀವಿಯಾಗಿದ್ದ ಶ್ರೀ ಗೊಲ್ಲಾಳೇಶ್ವರ ಬಾಳಿ ಬದುಕಿದವನು. ಈ ಸಂಗತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ನೋಡಿದರೆ ಶ್ರೀ ಗೊಲ್ಲಾಳೇಶ್ವರರು ಸ್ಥಾವರದ ವಿರೋಧಿಗಳೇ ಆಗಿದ್ದರು ಎಂಬುದನ್ನು ಗಮನಿಸಬಹುದು. ಆದರೆ ಇತಿಹಾಸದಲ್ಲಿ ಆದದ್ದು ಬೇರೆ, ಕಾಯಕ ಜೀವಿಯ ಹೆಸರಲ್ಲೇ ದೇವಾಲಯಗಳನ್ನು ನಿರ್ಮಿಸಿ, ಅವುಗಳು ಶೋಷಣೆಯ ಕೇಂದ್ರಗಳನ್ನಾಗಿ ಮಾಡಿದವರು ಮುಂದಿನವರು.

**ಕೊನೆಯ ಟಿಪ್ಪಣಿಗಳು :**

೧. ಮಜುಮದಾರ್ ರಾಮ ಚೌದರಿ ದತ್ತು ಅನು ; ಎನ್.ಎಸ್. ಶಾರದಾ ಪ್ರಸಾದ, ಭಾರತದ ಪ್ರೌಢ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೨ನೆಯ ಮು. -೨೦೦೮, ಪು. ೧೪

೨. ಡಾ. ಕುಳ್ಳಿ ಜಯವಂತ -ಬುದ್ಧ, ಬಸವ, ಗಾಂಧಿ, ಸಿರಿಗನ್ನಡ ಪ್ರಕಾಶನ, ಧಾರವಾಡ,ಪುಟ ೬, ೧೯೭೭

೩. ನಾರಾಯಣ ಪಿ.ವಿ. - ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ, ೧೯೮೩, ಪು. ೬೨

೪. ನಾರಾಯಣ ಪಿ.ವಿ.ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ,ಗದಗ, ೧೯೮೩, ಪು. ೬೧.

೫. ಹುಗ್ಗಿ ಪಿ. ಎಮ್. ವಚನಕಾರರ ಪರಿಕಲ್ಪನೆಯಲ್ಲಿ ದೇವರು- ಜೀವಜಗತ್ತು, ಮಹಾಂತೇಶ ಪ್ರಕಾಶನ, ಮಲ್ಲಮ್ಮ ನಗರ ಮುಧೋಳ, ಬಾಗಲಕೋಟ ಜಿಲ್ಲೆ ೨೦೦೭, ಪು. ೪೪

೬. ಬಾಳಿಕಾಯಿ ಎಸ್.ಆರ್. ಮತ್ತು Karnataka Journal of Politics Karnatak University, ವಿಜಯಲಕ್ಷ್ಮಿ ಕೆ. ಮಠ (ಲೇಖನ) Political Science Teachers Forum @, 2007, ಪು. ೪೧

೭. ಡಾ. ರುಮಾಲೆ ಮೃತ್ಯುಂಜಯ (ಸಂ) ಜಂಗಮದಿಂದ ಸ್ಥಾವರಕ್ಕೆ - ಲಿಂಗಾಯತ ಸಂಸ್ಕೃತಿಯನ್ನು ಕುರಿತ ಡಾ. ಎಂ.ಎಂ. ಕಲಬುರ್ಗಿಯವರ ಲೇಖನ ಸಂಪುಟ, ಸಾಯಿಮಣಿ ಪ್ರಕಾಶನ, ಹೊಸಪೇಟೆ, ಬಳ್ಳಾರಿ ಜಿಲ್ಲೆ ೨೦೦೯, ಪು. ೭೭.

೮. ಡಾ. ರುಮಾಲೆ ಮೃತ್ಯುಂಜಯ (ಸಂ) ಜಂಗಮದಿಂದ ಸ್ಥಾವರಕ್ಕೆ ಲಿಂಗಾಯತ ಸಂಸ್ಕೃತಿಯನ್ನು ಕುರಿತ ಡಾ. ಎಂ.ಎಂ. ಕಲಬುರ್ಗಿಯವರ ಲೇಖನ ಸಂಪುಟ ಸಾಯಿಮಣಿ ಪ್ರಕಾಶನ, ಹೊಸಪೇಟೆ, ಬಳ್ಳಾರಿ ಜಿಲ್ಲೆ, ೨೦೦೯, ಪು. ೨೦೯

೯. ಶೆಟ್ಟರ್ ಷ -ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ, ಅಭಿನವ 17/8-2 ಮೊದಲನೆಯ ಮುಖ್ಯ ರಸ್ತೆ ಮಾರೇನ ಹಳ್ಳಿ, ವಿಜಯನಗರ, ಬೆಂಗಳೂರು, ೨೦೦೭, ಪು. ಮುನ್ನುಡಿ XIV & XV

೧೦. ಯು.ಆರ್. ಅನಂತಮೂರ್ತಿ (ಸಂ) ವೀರಶೈವಧರ್ಮದರ್ಶನ ಸಂಪುಟ -೧, (ಲೇಖನ) - ಸಿ. ವೀರಣ್ಣ ಹನ್ನೆರಡನೆಯ ಶತಮಾನದ ಕಾಯಕ ಜೀವಿಗಳ ಚಳುವಳಿ;, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೩, ಪು. ೨೧೪.

# ಅಧ್ಯಾಯ - ೩
# ಗೋಲಗೇರಿ ಗೊಲ್ಲಾಳೇಶ್ವರ : ನೆಲೆಗಳು

ಭಾರತದ ಸಂಸ್ಕೃತಿ ತುಂಬಾ ಸಂಕೀರ್ಣವಾದುದು. ಕರ್ನಾಟಕವೂ ಇದಕ್ಕೆ ಹೊರತಲ್ಲ. ಈ ಸಂಕೀರ್ಣ ಸಮಾಜ ಸಂಸ್ಕೃತಿಗಳೇ ಭಾರತದ ವಿಶೇಷತೆಗೆ ಕಾರಣವಾಗಿವೆ. ಕರ್ನಾಟಕದ ಉದ್ದಗಲಕ್ಕೆ ಅನೇಕ ಮಹಾಮಹಿಮರು ಹುಟ್ಟಿ, ಜನ-ಮನಗಳಲ್ಲಿ ದೇವರಾಗಿ ಕನ್ನಡದ ನೆಲವನ್ನು ಶ್ರೀಮಂತಗೊಳಿಸಿದ್ದಾರೆ. ಇಂಥದರಲ್ಲಿ ಶರಣರು, ದಾಸರು, ಮುನಿಗಳು ಪ್ರಮುಖರಾಗಿದ್ದಾರೆ. "ಜಗತ್ತಿನ ಪ್ರತಿ ಮೂಲೆಯಲ್ಲೂ ದೇವರ ಬಗ್ಗೆ ಮಾತಾಡಲಾಗಿದೆ. ಆದರೆ ದೇವರು ಸದಾ ದೂರ ಇದ್ದಾನೆ, ನಕ್ಷತ್ರಗಳಾಚೆ ಇದ್ದಾನೆ. ಭಾರತವೊಂದೇ ದೇವರು ಮನುಷ್ಯನೊಳಗೇ ಇದ್ದಾನೆ ಎಂದು ತೋರಿಸಿಕೊಟ್ಟಿದೆ. ಹೀಗೆ ಮನುಷ್ಯನೊಳಗೇ ಇರುವ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು ಭಾರತವೊಂದೇ ಮನುಷ್ಯನಿಗೆ ಸಾಮರ್ಥ್ಯವನ್ನು ನೀಡಿದೆ. ಆತನೇ ದೇಗುಲವಾಗುವ, ಗುಡಿಯಾಗುವ, ಗೌರವ ಮತ್ತು ಸಂತೋಷವನ್ನುಂಟುಮಾಡಿದೆ.

"ಹೇಗೆ ಪ್ರತಿಯೊಬ್ಬರು ದೇಗುಲವಾಗಬಹುದು, ಹೇಗೆ ಪ್ರತಿಯೊಬ್ಬರು ಪ್ರತಿ ಕ್ಷಣದಲ್ಲೂ, ಒಂದು ಪ್ರಾರ್ಥನೆಯಾಗಬಹುದು"[1] ಎಂಬ ಮಾತಿನಂತೆ ಗೊಲ್ಲಾಳನು ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಜನರ ಭಾವನೆಯಲ್ಲಿ ದೇವರಾಗಿ, ಪ್ರಾರ್ಥನೆಗೆ ಅರ್ಹನಾಗಿ ನೆಲೆನಿಂತಿದ್ದಾನೆ.

ಕನ್ನಡ ನೆಲದ ಮೇಲೆ ಹನ್ನೆರಡನೆಯ ಶತಮಾನದಲ್ಲಿ ನಡೆದ ಅಪೂರ್ವ ಚಳುವಳಿಯೇ 'ಶರಣ ಚಳುವಳಿ'. ಇವರ ಕಾಣಿಕೆ ಸರ್ವೋದಯಕ್ಕೆ ದಾರಿನಕ್ಷೆ (Road Map ಇಂಗ್ಲೀಷಿನ ಭಾಷಾಂತರ ಇದು.) ಮಾನವ ಜನಾಂಗವೆಲ್ಲ ಒಂದೇ ಎಂಬ ಸಮಾಜವಾದದ ಚಿಂತನೆಗಳಡಿಯಲ್ಲಿ ಕಲ್ಯಾಣ ರಾಷ್ಟ್ರ (Welfare State) ಕಟ್ಟುವ ಅವರ ಪ್ರಯತ್ನಗಳು ಮಾರ್ಗಮಧ್ಯದಲ್ಲಿ ಭಗ್ನವಾಗಿರಬಹುದು. ಅವರ ಅಂದಿನ ಚಳುವಳಿ ಸಫಲ-ವಿಫಲ ಎನ್ನುವದಕ್ಕಿಂತ ಮುಖ್ಯವಾಗಿ ಅವರು ಅಂದು ನಡೆಸಿದ ಪ್ರಯತ್ನಗಳು ನಮಗೆ ಇಂದು ದಾರಿದೀಪವಾಗುವ ಸಾಧ್ಯತೆ ಇದೆ. ಒಂದು ಕಾಲಘಟ್ಟದಲ್ಲಿ ಜರುಗಿದ ಈ ಚಳುವಳಿಯ ಚಿಂತನೆಗಳು ಆಧುನಿಕ ಸಾಮಾಜಿಕ ಕಾಳಜಿಯನ್ನು ಪುನರ್ ರೂಪಿಸುವಲ್ಲಿ ನೆರವಾಗಬಲ್ಲವು.

ಶ್ರೀ ಗೊಲ್ಲಾಳೇಶ್ವರನು ಬಸವಪೂರ್ವದ ಅಜ್ಞಾತ ವಚನಕಾರರ ಸಾಲಿನಲ್ಲಿ ಬರುವ ಶರಣ. ಇವನು ಬರೆದಿರುವಂತಹ ವಚನಗಳು ಬೆರಳೆಣಿಕೆಯಷ್ಟು ಲಭ್ಯವಾಗಿರಬಹುದು. ಈತನ ಆದರ್ಶ ಕೆಲವು ವಚನಕಾರರಿಗಾದರೂ ಪ್ರೇರಣೆ ನೀಡಿರಬಹುದು. ಆದರೆ ಗೊಲ್ಲಾಳನ ಪ್ರಾಪಂಚಿಕ ಬದುಕಿನ ವಿಷಯವಾಗಿ ಆಕರ ಸಾಮಗ್ರಿಯ ಕೊರತೆ ಕಂಡುಬರುವುದು. ಇತಿಹಾಸೀಕರಣ ಸಂದರ್ಭದಲ್ಲಿ ಐತಿಹ್ಯಗಳು, ಪುರಾಣಗಳು, ಈ ಕುರಿತು ಏನನ್ನೂ ಹೇಳಲಾರವು. ಗೊಲ್ಲಾಳನು ಒಬ್ಬ ವಚನಕಾರ ಬಸವಪೂರ್ವ ಕಾಲದವನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಫ.ಗು. ಹಳಕಟ್ಟಿಯವರು "ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೇ ವೀರ ಬೀರೇಶ್ವರ" ಎಂಬ ಅಂಕಿತ ನಾಮದಿಂದ ಗೊಲ್ಲಾಳ ಒಬ್ಬ ಐತಿಹಾಸಿಕ ವ್ಯಕ್ತಿ ಎಂಬ ಊಹೆಯನ್ನು ಮಾಡಿದ್ದಾರೆ. ಡಾ. ಬಿ.ಎಸ್. ಗದ್ದಗಿಮಠರು ಹಳಕಟ್ಟಿಯವರು ಹೇಳುವ ವಿಚಾರವನ್ನು ಬೆಂಬಲಿಸಿದ್ದಾರೆ. (ಡಾ. ಬಿ.ಎಸ್.ಗದ್ದಗಿಮಠ:ಕಂಬಿಯ ಹಾಡುಗಳು ಪ್ರಸ್ತಾವನೆಯಲ್ಲಿ) ಈತ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದು ಬಸವಣ್ಣನವರಿಗಿಂತ ಪೂರ್ವದ ವ್ಯಕ್ತಿ. ಆದರೆ ಎಷ್ಟು ವರ್ಷಹಿಂದಿನವನು ಎಂದು ಹೇಳಲು ಸಾಧ್ಯವಾಗುವುದಿಲ್ಲ ಎಂಬ ತಮ್ಮ ವಾದವನ್ನು ಮಂಡಿಸುತ್ತಾರೆ. ಆರ್. ನರಸಿಂಹಾಚಾರ್ (ಕರ್ನಾಟಕ ಕವಿಚರಿತೆ ಪ್ರಥಮ ಸಂಪುಟ -ಪುಟ ೨೩೭)ರಲ್ಲಿ 'ವೀರ ಗೊಲ್ಲಾಳ' ಅಂಕಿತದ ವಚನವೊಂದನ್ನು ಉಲ್ಲೇಖಿಸಿ ಗೊಲ್ಲಾಳನ ಕಾಲ ಸು. ೧೧೬೦ ಎಂದು ಹೇಳಿದ್ದಾರೆ."[೨] ಇವರ ಅಭಿಪ್ರಾಯ ದೃಢೀಕರಿಸಲು ಹರಿಹರನ 'ಲಿಂಗಾರ್ಚನೆ' ರಗಳೆ ಗುಬ್ಬಿಯ ಮಲ್ಲಣಾರ್ಯ ವಿರಚಿತ, 'ವೀರಶೈವಾಮೃತ ಪುರಾಣ ತಾತ್ಪರ್ಯ ಚಂದ್ರಿಕೆ' ಎಂಟನೆಯ ಕಾಂಡ, ಮೊದಲ ಸಂಧಿ ಪುಟ -೩ರಲ್ಲಿ ಉಲ್ಲೇಖಿಸಿದಂತೆ ಹಾಗೂ ಎಂ. ಚಂದ್ರಶೇಖರವರು ಸಂಪಾದಿಸಿದ 'ವಿರೂಪಾಕ್ಷ ಪಂಡಿತ ಕೃತ 'ಚನ್ನಬಸವ ಪುರಾಣ'-ಪುಟ ೩೯ರಲ್ಲಿ ದಾಖಲಿಸಿದ ಹಾಗೆಯೇ ಗೊಲ್ಲಾಳನು ಬಸವಪೂರ್ವದ ವ್ಯಕ್ತಿಯಾಗಿದ್ದಾನೆ. "ಬಸವಪೂರ್ವಯುಗದ ಕೊಂಡಗೂಳಿ ಕೇಶಿರಾಜ, ಕೆಂಬಾವಿ ಭೋಗಣ್ಣ, ರಾಗದ ಸಂಕಣ್ಣ, ಇಳಿಹಾಳ ಬೊಮ್ಮಯ್ಯ ಇವರ ಸಮಕಾಲೀನ ವ್ಯಕ್ತಿ ಗೊಲ್ಲಾಳನಾಗಿರಬೇಕು. ಬಸವಣ್ಣನವರಿಗಿಂತ ಇಳಿಹಾಳ ಬೊಮ್ಮಯ್ಯ ೫೦-೬೦ ವರ್ಷ ಹಿರಿಯನಾಗಿರಬೇಕು ಎಂಬ ತರ್ಕ ಇದೆ."[೩] ಆದ್ದರಿಂದ ಗೊಲ್ಲಾಳನ ಕಾಲಮಾನವನ್ನು ಕುರಿತಾದ ಆರ್ ನರಸಿಂಹಾಚಾರರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ಗೊಲ್ಲಾಳೇಶ್ವರನ ಜನನ ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ 'ಡವಳಾರ'ದಲ್ಲಿ ಆಗಿದೆ. ಗೋಲಗೇರಿ ಈತನ ಕರ್ಮಭೂಮಿಯಾಗಿದೆ. ಈತನ ತಂದೆ ಬಲ್ಲುಗ, ತಾಯಿ ದುಗ್ಗಳೆ ಕ್ರಮವಾಗಿ ಇವಳನ್ನು ದಾವಳವ್ವಾ ಎಂತಲೂ ಕರೆಯಲಾಗಿದೆ. ಕುರುಬ ಜನಾಂಗದಲ್ಲಿ ಹುಟ್ಟಿ ಶೈವಮತಾನುಯಾಯಿ ಆಗಿ ಶರಣ ಎಂದೆನಿಸಿಕೊಂಡ ಈತನಿಗೆ ಗೊಲ್ಲಾಳ, ಗೊಲ್ಲಾಳರಾಯ, ವೀರಗೊಲ್ಲಾಳ ಕುರುಬರ ಗೊಲ್ಲಾಳ, ಗೊಲ್ಲೇಶ್ವರ, ಕಾಟಕೂಟ, ಸೂತ ಗೊಲ್ಲ, ಹೀಗೆ ವೈವಿಧ್ಯಮಯವಾಗಿ ಕರೆದರೂ ಗೊಲ್ಲಾಳನೆಂದೇ ಹೆಚ್ಚು ಪ್ರಸಿದ್ಧಿ ಪಡೆದಿದ್ದಾನೆ. ಶಿವ ಶರಣರ ಜನನ, ಬಾಲ್ಯ ಹಾಗೂ ಕಾರ್ಯಕ್ಷೇತ್ರಗಳ ವಿವರ ಸಿಗುವುದು ಬಹಳ ವಿರಳ. ದೊರೆತರೂ ಅವುಗಳಲ್ಲಿ ಸತ್ಯಾಂಶ ಕಡಿಮೆ. ಪೌರಾಣಿಕವಾದುದು ಹೆಚ್ಚು. "ಶರಣರ ಕ್ಷೇತ್ರಗಳನ್ನು ಕುರಿತು ಹೇಳುವಾಗ ಸಾಧ್ಯವಾದಷ್ಟು ಪೌರಾಣಿಕ ಕಥನದಿಂದ ಮುಕ್ತವಾಗಿರಬೇಕು. ನಿರೂಪಣೆ, ಶರಣರು ಹಾಗೂ ಅವರ ಮಹಿಮೆಗಳನ್ನು ಕುರಿತು ಹೇಳುವಾಗ ಪವಾಡಗಳಿಗೆ ಆದ್ಯತೆ ಕೊಡದೆ ವಾಸ್ತವವೆನ್ನುವ ರೀತಿಯಲ್ಲಿ ವಿವರಣೆ, ವ್ಯಾಖ್ಯಾನಗಳಿರಬೇಕು."[1] ಜನ ನಂಬುವಂತೆ ಎಂದಾದರೆ ಮೌಖಿಕ ಸಾಹಿತ್ಯವೂ ಮುಖ್ಯ ಆಕರಗಳಾಗುತ್ತವೆ. ಶಾಸನಗಳಲ್ಲಿ ಇದ್ದದ್ದು ಎಲ್ಲವೂ ಸತ್ಯಾಂಶದಿಂದ ಕೂಡಿದೆ ಎನ್ನಲಿಕ್ಕಾಗದು. ಬರಹ ರೂಪದಲ್ಲಿ ಹಾಗೂ ಮೌಖಿಕತೆಯಲ್ಲಿ ದತ್ತವಾಗಿ ಬಂದದ್ದು. ಇವೆರಡರ ಮಧ್ಯ ಸಾಮ್ಯತೆ ಇದ್ದರೆ, ಸತ್ಯಕ್ಕೆ ಸಮೀಪವಾಗಿರುತ್ತದೆ.

ಗೊಲ್ಲಾಳೇಶ್ವರ ಅಧ್ಯಯನಕ್ಕೆ ದೊರಕುವ ಶಾಸನ ಆಕರಗಳು ಅತ್ಯಂತ ವಿರಳ. ಗೋಲಗೇರಿಯಲ್ಲಿ ಎರಡು ಶಾಸನಗಳು ದೊರೆತರೂ ಅವು ಗೊಲ್ಲಾಳೇಶ್ವರ ಕುರಿತು ಏನನ್ನೂ ಸ್ಪಷ್ಟವಾಗಿ ವಿವರಿಸಲಾರವು. ಲಭ್ಯವಾಗಿರುವಂತಹ ಆಧಾರಗಳೆಂದರೆ ಸಾಹಿತ್ಯಕ ಆಕರಗಳು ಹಾಗೂ ಮೌಖಿಕ ಆಕರಗಳು. ಈ ಎರಡು ಮುಖ್ಯ ಆಕರಗಳನ್ನೇ ಇಟ್ಟುಕೊಂಡು ಗೊಲ್ಲಾಳನ ನೆಲೆ ಮತ್ತು ಸಾಧನೆಯ ಬದುಕನ್ನು ತಿಳಿಯುವುದು ಉಚಿತ ಎಂದೆನಿಸುತ್ತದೆ.

ಗೊಲ್ಲಾಳನ ಜೀವನ ಕುರಿತು ಸಿಗುವ ಪ್ರಮುಖ ಆಕರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಲಾಗಿದೆ.



## ಸಾಹಿತ್ಯೇತರ ಆಕರಗಳು

ಗೊಲ್ಲಾಳೇಶ್ವರ ಕುರಿತಾದ ಸಿಗುವ ಮುಖ್ಯ ಆಕರಗಳೆಂದರೆ, ನಾಡಿನಾದ್ಯಂತ 'ಗೊಲ್ಲಾಳನ' ಕುರಿತು ಕಟ್ಟಲ್ಪಟ್ಟ ದೇವಾಲಯಗಳು. ಗೊಲ್ಲಾಳನ ಭಕ್ತರಿಗೆ ಈ ಮಂದಿರಗಳು ಶಕ್ತಿಕೇಂದ್ರಗಳು. ಇಲ್ಲಿಗೆ ಸಾವಿರಾರು ಭಕ್ತರು ತಮ್ಮ ಇಷ್ಟಸಿದ್ಧಿಗಾಗಿ ಬಂದು ಹೋಗುವರು. ದೇವಾಲಯಗಳು "ವಾಸ್ತು ಹಾಗೂ ಆಗಮ ಶಾಸ್ತ್ರಕ್ಕೆ ಅನುಗುಣವಾಗಿ ಸ್ಥಾಪನೆಗೊಂಡು ಆರಾಧಿಸಲ್ಪಡುವ ದೇವಾಲಯಗಳಲ್ಲಿ ಇರುವ ದೇವರ ವಿಗ್ರಹಗಳಿಗೆ ಕಾಸ್ಮಿಕ್ ಶಕ್ತಿಯನ್ನು ಸೆಳೆದುಕೊಳ್ಳುವ ಮತ್ತು ಆ ಶಕ್ತಿಯನ್ನು ತನ್ನೊಂದಿಗೆ ಮನೋದೈಹಿಕ ಸಾಂಗತ್ಯವನ್ನು ಹೊಂದುವ ವ್ಯಕ್ತಿಗಳಿಗೆ ತಲುಪಿಸುವ ಸಾಮರ್ಥ್ಯ ಇರುತ್ತದೆ. ಇಂಥಿಂಥ ದೇವರುಗಳಿಗೆ ಇಂಥಿಂಥ ಸಂರಚನೆ, ಇಂಥಿಂಥ ಗರ್ಭಗುಡಿ, ಇಂಥಿಂಥ ಹರಳುಗಳ ತಳಹದಿ ಎಂದೆನ್ನುವ ಸ್ಥಪತಿ ನಿಯಮಗಳು ನಿಗದಿಯಾಗಿರುತ್ತವೆ"[೨] ಕಾಲಕಾಲಕ್ಕೆ ಗುಡಿಯ ವಿಸ್ತಾರವೂ ಅಲಂಕರಣವೂ ಬೆಳೆಯುತ್ತ ಬಂದಿದೆ.

"ಪ್ರಾಚೀನ ಕರ್ನಾಟಕದಲ್ಲಿ ಊರಿಗೆ ದೇವಸ್ಥಾನವೇ ಕೇಂದ್ರ ಬಿಂದು. ಅದರ ಸುತ್ತ ಆ ಊರಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವು ರೂಪಗೊಳ್ಳುತ್ತ ಬಂದಿವೆ. ದೇವಸ್ಥಾನವು ಜನರ ದೈವಭಕ್ತಿಯ ಕೇಂದ್ರವಾಗಿದ್ದಂತೆ ವಿದ್ಯಾಕೇಂದ್ರವೂ ಆಗಿದ್ದವು. ಶಿಲ್ಪ, ಚಿತ್ರ, ಸಂಗೀತ, ನರ್ತನಾದಿ ಕುಶಲ ಕಲೆಗಳು ದೇವಸ್ಥಾನದ ಆಶ್ರಯದಲ್ಲಿ ವರ್ಧಿಸಿದುವು. ದೇವಸ್ಥಾನವು ಜನರ ನ್ಯಾಯಾಲಯವೂ ಆಗಿದ್ದಿತು. ದುಃಖ ಬಂದಾಗ ಜನರು ದೇವಸ್ಥಾನಕ್ಕೆ ಹೋಗಿ ಅಲ್ಲಿ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದರು. ಹಬ್ಬ-ಹರಿದಿನಗಳಲ್ಲಿ ದೇವಸ್ಥಾನಗಳನ್ನು ಅಲಂಕರಿಸಿ ಪೂಜೋತ್ಸವಗಳನ್ನು ನಡೆಯಿಸಿ ಸುಖಿಸುತ್ತಿದ್ದರು. ದೇವಸ್ಥಾನವು ಬಡವರಿಗೆ ಸತ್ರವಾಗಿದ್ದಿತು. ಶ್ರೀಮಂತರ ಐಶ್ವರ್ಯವು ಹರಿದು ಹೊರಗೆ ಬರಲು ಕಾರಣವಾಗಿದ್ದಿತು. ಹೀಗೆ ಬಹುಮುಖವಾದ ಚಟುವಟಿಕೆಗಳಿಗೆ ಆಗರವಾಗಿ ಊರಿನ ಜೀವನವನ್ನು ನಿಯಂತ್ರಿಸುತ್ತಿದ್ದ ದೇವಸ್ಥಾನಕ್ಕೆ ಒಂದು ಸ್ವತಂತ್ರ ಅಸ್ತಿತ್ವವಿದೆಯೆಂಬ ಭಾವನೆ ಬರುತ್ತದೆ. ಹೀಗೆ ವಿದ್ವಾಂಸರಿಗೆ ವಿದ್ಯಾಕೇಂದ್ರಗಳಾಗಿ, ದೀನರಿಗೆ ಸತ್ರಗಳಾಗಿದ್ದ ದೇವಾಲಯಗಳ ಅಧಿಕಾರದ ವ್ಯಾಪ್ತಿಯಲ್ಲಿ ಹಬ್ಬಗಳೂ, ಜಾತ್ರೆಗಳೂ ನಡೆಯುತ್ತಿದ್ದು, ವ್ಯಾಪಾರಕ್ಕೆ ಸ್ವಾತಂತ್ರ್ಯವನ್ನೂ, ಭದ್ರತೆಯನ್ನೂ ಒದಗಿಸಿಕೊಟ್ಟವು. ಅಲ್ಲಿಯ ಅಧಿಕಾರಿಗಳೂ, ಸಂನ್ಯಾಸಿಗಳೂ ಜನತೆಯ ನೈತಿಕ ಮತ್ತು ದೈಹಿಕ ಆರೋಗ್ಯಕ್ಕಾಗಿ ಬಹು ವಿಧದಿಂದ ಶ್ರಮಿಸುತ್ತ ಬಂದಿದ್ದಾರೆ.

ಇಂಥ ದೇವಾಲಯಗಳು ನೂರಾರು ವರುಷ ಕಾಲ ಭಕ್ತರನ್ನು ಆಕರ್ಷಿಸುತ್ತ ನಿಲ್ಲಲಿಕ್ಕೆ ಸಾಧ್ಯವಾಗಿದೆ. ಗೊಲ್ಲಾಳೇಶ್ವರ ದೇವಾಲಯಗಳು ಅನೇಕ ಕಡೆ ಇವೆ. ಭಕ್ತರಿಗೆ ಏನೋ ಒಂದು ರೀತಿಯ ಮನಃಶ್ಯಾಂತಿ ನೀಡುತ್ತಿವೆ. ಇದು ಕೋಟ್ಯಾಂತರ ಭಕ್ತರ ಅನುಭವವಾಗಿದೆ. ಈ ದೇವಾಲಯಗಳಲ್ಲಿ ವರ್ಷವಿಡೀ ಆರಾಧನೆಗಳು ನಡೆಯುತ್ತವೆ. ಇಲ್ಲಿ ನಡೆಯುವ ಉಪಾಸನೆಯು ಮುಖ್ಯವಾಗಿ ಮೂರು ವಿಧದಲ್ಲಿ ಜರುಗುವುದು. ೧. ಶರೀರಾತ್ಮಕ, ೨. ಶಬ್ದಾತ್ಮಕ, ೩. ಮನನಾತ್ಮಕ ಅಥವಾ ಕಾಯಿಕ, ವಾಚಿಕ ಹಾಗೂ ಮಾನಸ ಎನ್ನುವ ಮೂರ್ತಿಪೂಜೆ ಎಂದೂ ಹೇಳಬಹುದು. ಒಬ್ಬ ಕುರಿಗಾಹಿ ಸಾಮಾನ್ಯನಾಗಿ ಹುಟ್ಟಿ ಮಹಾಪುರುಷನಾಗಿ ಬೆಳೆದು

ಪೂಜೆಗೆ ಅರ್ಹನಾಗಿರುವ ಗೊಲ್ಲಾಳ ಸಮ್ಮಂತೆ ಈ ನೆಲದ ಮಗುವೇ. ಆದರೆ ಆತನ ಜನ್ಮದ ಸಾಧನೆಗಳು ಮತ್ತವುಗಳ ಪ್ರಭಾವದಿಂದಾಗಿ ತನ್ನಲ್ಲಿ ಆತ ಉದ್ದೀಪಿಸಿಕೊಂಡ ಮಹಾಗುಣಗಳ ಕಾರಣದಿಂದಾಗಿ ದೇವನಾದ. ಪೂಜೆಗೆ ಯೋಗ್ಯನಾದ. ಈತನಿಗಾಗಿ ಅನೇಕ ದೇವಾಲಯಗಳು (ಗೊಲ್ಲಾಳನ ಹೆಸರಿನಲ್ಲಿ) ಕಟ್ಟಲ್ಪಟ್ಟವು. ವಿಜಾಪುರ ಜಿಲ್ಲೆಯಲ್ಲಿ : ಸಿಂದಗಿ : ತಾಲ್ಲೂಕಿನ ಗೋಲಗೇರಿಯಲ್ಲಿ ಮುಖ್ಯ ದೇವಸ್ಥಾನವಿದೆ. ಇದೇ ಜಿಲ್ಲೆಯ ಬಂಟನೂರ, ಬಂದಾಳ, ನಾಗರಳ್ಳಿ, ಬೈನೂರ, ಉಕ್ಕಲಿ, ನಂದ್ಯಾಳ, ತೊರವಿ, ಹಿಟ್ನಳ್ಳಿ ಗ್ರಾಮಗಳಲ್ಲಿ, ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಕುಕನೂರು, ಗದಗ ಜಿಲ್ಲೆಯ, ಲಕ್ಷ್ಮೇಶ್ವರ, ಕಪ್ಪತಗುಡ್ಡ, ಈ ಗ್ರಾಮಗಳಲ್ಲಿ ಗೊಲ್ಲಾಳೇಶ್ವರ ದೇವಾಲಯಗಳಿವೆ. ಬೀದರ ಜಿಲ್ಲೆ ಬಸವಕಲ್ಯಾಣದಲ್ಲಿ ಹಾಲು ಬಸವಣ್ಣನ ಗುಡಿಯನ್ನು ಗೊಲ್ಲಾಳನ ಗುಡಿಯೆಂದು ಹೇಳುವರು.

ಈ ಮೇಲಿನ ಎಲ್ಲಾ ದೇವಸ್ಥಾನಗಳೊಂದಿಗೆ ಗೊಲ್ಲಾಳನ ಜೀವನ ತಳಕು ಹಾಕಿಕೊಂಡಿದೆ. ಇಲ್ಲಿ ಗೊಲ್ಲಾಳೇಶ್ವರನಿಗೆ ಸಂಬಂಧಿಸಿದ ಭಕ್ತರಿದ್ದಾರೆ.

## ಗೋಲಗೇರಿ

ಇವತ್ತಿನ ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ "ಗೋಲಗೇರಿ" ಎಂಬ ಗ್ರಾಮದಲ್ಲಿ ಚಾಲುಕ್ಯ ಶೈಲಿಯ ಪುರಾತನ ದೇವಾಲಯವಿರುವದು. ಇದು ಗೊಲ್ಲಾಳೇಶ್ವರ, ಲಿಂಗಯ್ಯನ ದೇವಸ್ಥಾನವೆಂದು ಪ್ರಸಿದ್ಧಿ ಪಡೆದಿದೆ. ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ನೋಡಿದರೆ ಅಷ್ಟೇನೂ ಆಕರ್ಷಕ ಶಿಲ್ಪ ಸೌಂದರ್ಯ ಹೊಂದಿರುವುದಿಲ್ಲ. ಈ ದೇವಸ್ಥಾನದ ಸುತ್ತಲೂ ಪ್ರಾಂಗಣ ಇದ್ದು ಪೂರ್ವಕ್ಕೆ ಒಂದು ದೊಡ್ಡದಾದ ದ್ವಾರವನ್ನು ಹೊಂದಿದೆ. ಉತ್ತರ ದಕ್ಷಿಣದಲ್ಲಿ ಸಣ್ಣ ದ್ವಾರಗಳಿವೆ. ಪ್ರಾಂಗಣದ ಮಧ್ಯಭಾಗದಲ್ಲಿ ಗೊಲ್ಲಾಳೇಶ್ವರ ದೇವಸ್ಥಾನವಿದ್ದು, ಗರ್ಭಗುಡಿಯಲ್ಲಿ ಲಿಂಗವಿದೆ. ಈಗ ಲಿಂಗಕ್ಕೆ ಮುಖವಾಡ ಮಾಡಲಾಗಿದೆ. ಈ ಮೂರ್ತಿಯನ್ನು ಲಿಂಗದ ಮೇಲೆ ಹೊದಿಸಿ ಪೂಜೆ ಸಲ್ಲಿಸಲಾಗುತ್ತಿದೆ. 'ಈ ದೇವಾಲಯವು ಗರ್ಭಗೃಹ ಅಂತರಾಳ ಸಭಾಮಂಟಪಗಳಿಂದ ಕೂಡಿದೆ. ಇಲ್ಲಿಯ ಕ್ರಿ.ಶ. ೧೦೨೭ರ ಶಾಸನದಲ್ಲಿ ಬಾಚಗಾವುಂಡ ನಿರ್ಮಿಸಿದ (ಹೆಸರು ಹಾಳಾಗಿದೆ) ದೇವಾಲಯಕ್ಕೆ ದಂಡನಾಯಕ ರೆಬ್ಬರಸನು ಭೂದಾನ ನೀಡಿದ ಉಲ್ಲೇಖವಿದೆ. ಸರಳ ಶೈಲಿಯ ಪ್ರವೇಶದ್ವಾರವನ್ನು ಹೊಂದಿರುವ ಗರ್ಭಗೃಹದಲ್ಲಿ ಶಿವಲಿಂಗವಿದೆ. ಅಂತರಾಳ ಪ್ರವೇಶದ್ವಾರಕ್ಕೆ ಪದ್ಮ ಹೂವಿನ ಎಸಳುಗಳಿವೆ. ಸಭಾಮಂಟಪದ ಪ್ರವೇಶದ್ವಾರಕ್ಕೆ ಹೂವಿನ ಎಸಳು, ಪದ್ಮ, ಅರ್ಧಗಂಬಗಳು ಮತ್ತು ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಪೂರ್ಣ ಕಂಭಗಳಿವೆ. ಮಧ್ಯದ ನಾಲ್ಕು ಕಂಬಗಳು ಕೆಳಗೆ ಚೌಕಾಕಾರ ಮೇಲೆ ಅಷ್ಟಭಾಗದಲ್ಲಿವೆ. ದೇವಾಲಯದ ಹೊರಗಡೆ ಗರ್ಭಗೃಹದ ಮೇಲಿನ ಶಿಖರ ಮತ್ತು ಸಭಾಮಂಟಪದ ಮುಂದಿನ ಮಂಟಪವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಸುತ್ತಲೂ ವಿಶಾಲವಾದ ಪ್ರಾಕಾರವಿದೆ. ಅದರಲ್ಲಿ ಸಾಲುಮಂಟಪ ಅಲ್ಲಲ್ಲಿ ಪ್ರಾಚೀನ ಕಾಲದ ಉಮಾಮಹೇಶ್ವರ, ನಂದಿ ಮೊದಲಾದ ಶಿಲ್ಪಗಳು ಮತ್ತು

ದೇವಾಲಯದ ಅವಶೇಷಗಳಿವೆ."[೭] ದೇವಾಲಯಗಳ ರಚನೆಯಲ್ಲಿ ಧಾರ್ಮಿಕ ಪರಿಸರವು ಮುಖ್ಯವಾಗುತ್ತವೆ. ಗೊಲ್ಲಾಳನ ಭಕ್ತರು ಶಿವನ ಆರಾಧಕರಾಗಿದ್ದಾರೆ. ಆದ್ದರಿಂದ ಇದನ್ನು ಶೈವ ದೇವಾಲಯ ಎಂದು ಗುರುತಿಸಬಹುದು. "ದೇವಾಲಯ ರಚನೆಗೆ ಆಯಾ ಕಾಲದ ಧಾರ್ಮಿಕ ಪರಿಸರ, ಅಂದಿನ ರಾಜ ಮಹಾರಾಜರ ಧಾರ್ಮಿಕ ದೃಷ್ಟಿ, ಕಲೋಪಾಸನೆ ಇತ್ಯಾದಿ ಅಂಶಗಳು ನೆರವಾದವು. ದೇವಾಲಯಗಳನ್ನು ಶೈವ, ವೈಷ್ಣವ, ಜೈನ ಮುಂತಾಗಿ ವಿಂಗಡಿಸಬಹುದು."[೮]

ಮೇಲೆ ಹೇಳಿದ ಹಾಗೆಯೇ ಇದೊಂದು ಶೈವ ದೇವಾಲಯ , ದೇವಾಲಯದ ಆಕಾರ ಶೈಲಿಯನ್ನು ಆಯಾ ಧರ್ಮ ಸಂಸ್ಕೃತಿ, ಅಭಿರುಚಿಗೆ ತಕ್ಕಂತೆ ನಿರ್ಮಿಸಿರುವರು. ಈ ದೇವಾಲಯ ಯಾವ ಶೈಲಿಗೆ ಸೇರಿದ್ದು ಎಂಬುದನ್ನು ಗುರುತಿಸಲು ನಿರ್ದಿಷ್ಟ ಮಾನದಂಡವಿರುವದು. "ದೇವಾಲಯಗಳ ಶೈಲಿಗಳನ್ನು ಗುರುತಿಸುವಲ್ಲಿ ಶಿಖರವೇ ಪ್ರಮುಖ ಪಾತ್ರವಹಿಸುತ್ತದೆ. ಈ ವಾಕ್ಯವು ದಾಕ್ಷಿಣಾತ್ಯ ಶೈಲಿಗಳಿಗೆ ಸೀಮಿತಗೊಳ್ಳದೆ, ಔತ್ತರೇಯ ಸಂಪ್ರದಾಯದ ಶೈಲಿಗಳಿಗೂ ವಿಸ್ತರಿಸಬಹುದು. ಅಜಿತಾಗಮ ಗ್ರಂಥದ ಪ್ರಕಾರ (ಎನ್.ಆರ್. ಭಟ್ :೧೯೬೪ :೮೨) ದಾಕ್ಷಿಣಾತ್ಯ ಶೈಲಿಗಳ ವಿವರಣೆ ಕೆಳಕಂಡಂತಿದೆ.

ಪ್ರಾಸಾದ ಸ್ತ್ರೀ ವಿಧಃ ಪ್ರೊಕ್ತಃ ತ್ರೈವಿಧ್ಯಮಪಿ ಕಥ್ಯತೇ

ನಾಗರಂ ದ್ರಾವಿಡಂ ಚೈವ ವೇಸರಂ ಚೇಕಿ ನಾಮತಃ

ಚೌಮಾದಿ ಸ್ತುಪಿ ಪರ್ಯತಂ ನಾಗರಂ ಚತುರಶ್ರಕಂ

ಕಂಠಾತ್‌ಪ್ರಭೃತಿ ಚಾಷ್ಟಾಶ್ರಂ ದ್ರಾವಿಡಂ ಪರಿಕೀರ್ತಿತತ್

ಕಂಠಾತ್ ಪ್ರಭೃತಿ ವೃತ್ತಂ ಯದ್ವೇಸರಂ ಧಾಮ ಕಥ್ಯತೇ

ಭೂಮಿಯಿಂದ ಸ್ತೂಪಿಯವರೆಗೆ ಚತುರಶ್ರವವೆನಿಸಿದ್ದು ನಾಗರ ಶೈಲಿ, ಕಂಠದಿಂದ ಮೇಲಕ್ಕೆ ಅಷ್ಟಾಶ್ರವವೆನಿಸಿದ್ದು ದ್ರಾವಿಡ ಶೈಲಿ, ಕಂಠದಿಂದ ಮೇಲಕ್ಕೆ ವೃತ್ತಾಕಾರವುಳ್ಳದ್ದು ವೇಸರ ಶೈಲಿ. ಇದೇ ಅಭಿಪ್ರಾಯವನ್ನು ಹಲವಾರು ಗ್ರಂಥಗಳು ಅನುಮೋದಿಸಿವೆ."[೯] ಗೊಲ್ಲಾಳೇಶ್ವರ ದೇವಾಲಯವನ್ನು ವೇಸರ ಶೈಲಿಯಲ್ಲಿದೆಯೆಂದು ಗುರುತಿಸಲಾಗಿದೆ.

ಒಬ್ಬ ವ್ಯಕ್ತಿಯ ಕುರಿತು ಕೈಗೊಳ್ಳುವ ಸಂಶೋಧನೆಗಳಲ್ಲಿ ಸ್ಥಾವರಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ಆ ಸ್ಥಾವರಗಳು ಬಹುಮುಖ್ಯ ಸಾಕ್ಷಿಗಳಾಗಿ ಅವರ ಇರುವಿಕೆಯನ್ನು ಅವರ ಜೀವನವನ್ನು ದೃಢೀಕರಿಸುತ್ತವೆ. ಇವತ್ತು ರಾಮಮಂದಿರ ಹಾಗೂ ಬಾಬ್ರಿ ಮಸೀದಿ ವಿಷಯದಲ್ಲಿ ಅಲಹಾಬಾದ್ ಉಚ್ಚನ್ಯಾಯಾಲಯವು ಇಂತಹ ಸ್ಥಾವರ ಆಧಾರಗಳನ್ನೇ ಮುಖ್ಯ ಪುರಾವೆಯನ್ನಾಗಿಸಿ, ಮಸೀದಿ ಮತ್ತು ಮಂದಿರದ ಅಸ್ತಿತ್ವವನ್ನು ದೃಢಪಡಿಸಿವೆ. ಈ ಹಿನ್ನೆಲೆಯಲ್ಲಿ ಗೋಲಗೇರಿಯ ದೇವಾಲಯವು, ಗೊಲ್ಲಾಳನು ಈ ಸ್ಥಳದಲ್ಲಿ ಇದ್ದನು ಎಂಬುದನ್ನು ದೃಢಪಡಿಸುತ್ತದೆ. ಇದನ್ನು ಪುಷ್ಟೀಕರಿಸುವಂತೆ ಇದು ಸಾಕಷ್ಟು ಪುರಾತನವಾದ

ದೇವಾಲಯವಾಗಿದ್ದುದಲ್ಲದೆ ಈ ಭಾಗದ ಜನರ ದೊಡ್ಡ ಆರಾಧನಾ ಕೇಂದ್ರ ಕೂಡ ಆಗಿದೆ. ಆದರೆ ಖಚಿತ ದಿನಾಂಕ ನಿರ್ದಿಷ್ಟ ಸಮಯಗಳ ಬಗ್ಗೆ ಹೇಳಲು ಸಾಧ್ಯವಿರದಿದ್ದರೂ, ಗೊಲ್ಲಾಳೇಶ್ವರ ಎಂಬ ಶರಣ ಈ ನೆಲದಲ್ಲಿ ಇದ್ದ ಎಂಬುದನ್ನು ಈ ದೇವಾಲಯದ ಹಿನ್ನೆಲೆಯಲ್ಲಿ ದೃಢಪಡಿಸುತ್ತದೆ.

## ಲಕ್ಷ್ಮೇಶ್ವರ

ಈ ದೇವಾಲಯವು ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಗೋಲಗೇರಿಯ ದೇವಸ್ಥಾನಕ್ಕಿಂತ ಭಿನ್ನವಾದುದು. ಇಲ್ಲಿನ ವಾಸ್ತುಶಿಲ್ಪ ಗೋಲಗೇರಿಯ ದೇವಸ್ಥಾನಕ್ಕಿಂತ ಉತ್ಕೃಷ್ಟವಾದುದು. ದೇವಾಲಯದ ಗರ್ಭಗುಡಿಯ ಮುಂದೆ ಕಂಬಗಳಿದ್ದು ಆಕರ್ಷಕವಾಗಿವೆ. ನೋಡಲೂ ಪ್ರಾಚೀನದೇವಾಲಯ ಎಂದೆನಿಸುತ್ತದೆ. ಇಲ್ಲೂ ಕೂಡ ದೇವಾಲಯ ನಿರ್ಮಾಣ, ನಿರ್ಮಾಪಕರ ಬಗ್ಗೆ ಖಚಿತ ಆಧಾರಗಳು ದೊರಕುವುದಿಲ್ಲ.

ಲಕ್ಷ್ಮೇಶ್ವರಕ್ಕೆ ಕರ್ನಾಟಕದ ಸಂಸ್ಕೃತಿಯಲ್ಲಿ ಮಹತ್ವದ ಸ್ಥಾನವಿದೆ. ಇದಕ್ಕೆ 'ಪುಲಿಗೆರೆ' ಎಂದು ಕರೆಯತ್ತಿರುವುದು ನಾವೆಲ್ಲ ಬಲ್ಲ ಸಂಗತಿ. ಈ ದೇವಾಲಯದ ರಚನೆಯ ಹಿನ್ನೆಲೆಯಲ್ಲಿ ಒಂದು ಕತೆ ಪ್ರಚಲಿತದಲ್ಲಿದೆ. ನಂದಯ್ಯ ಎಂಬವನೊಬ್ಬ ಭಕ್ತ ಪ್ರತಿ ಹುಣ್ಣಿಮೆಗೆ ಲಕ್ಷ್ಮೇಶ್ವರದಿಂದ ಗೋಲಗೇರಿಗೆ ಕಾಲ್ನಡಿಗೆಯ ಯಾತ್ರೆ ಕೈಗೊಂಡು ತನ್ನ ಭಕ್ತಿಯನ್ನು ಸಮರ್ಪಿಸಿ ಬರುತ್ತಿದ್ದ. ತಪ್ಪದೇ ಇದನ್ನು ವ್ರತವೆಂದು ಭಾವಿಸಿ ಗೋಲಗೇರಿಗೆ ಹೋಗುತ್ತಿದ್ದ. ನಂದಯ್ಯ ಒಂದು ಬಾರಿ ಮಾರ್ಗಮಧ್ಯದಲ್ಲಿ ಬರುವ ಕೃಷ್ಣಾ ನದಿಯು ತುಂಬಿ ಹರಿಯುತ್ತಿದ್ದುದರಿಂದ ಇವನ ವ್ರತಭಂಗವಾಗುವ ಸನ್ನಿವೇಶ ನಿರ್ಮಾಣವಾಯಿತು. ಗೊಲ್ಲಾಳನಿಗೆ ನೈವೇದ್ಯ ಒಯ್ಯುವುದನ್ನು ತಪ್ಪಿಸುವಂತಿಲ್ಲ. ನದಿ ದಾಟಲು ಹರಿಗೋಲು ಹುಡುಕಿದ ಸಿಗಲಿಲ್ಲ. ತನ್ನ ನೇಮಕ್ಕೆ ಭಂಗ ಬರುವದಲ್ಲಾ ಎಂದು ಚಿಂತಿತನಾದ. ಗೊಲ್ಲಾಳನನ್ನು ನಂಬಿ ನದಿಯಲ್ಲಿ ಕಾಲಿಟ್ಟ, ಕೃಷ್ಣೆ ದಾರಿಕೊಟ್ಟಳು. ಗೋಲಗೇರಿಗೆ ಬಂದು ತಲುಪಿದ. ಅಂದು ರಾತ್ರಿ ಸುಖ ನಿದ್ರೆಯಲ್ಲಿರುವಾಗ ಸ್ವಪ್ನವಾಗಿ ನೀನಿರುವೆಡೆಗೆ ನಾನೇ ಬರುವೆ, ನಿನ್ನ ಮಂದಿರದೊಳಗಿರುವೆ. ಹಿಂದೆ ನೋಡದೆ ನೀ ನಡೆ, ನಡೆ, ಎನ್ನುತ್ತಿರುವಂತೆಯೇ ನಂದಯ್ಯನಿಗೆ ಎಚ್ಚರವಾಯಿತು. ಇದು ಸ್ವಪ್ನವೆಂದು ಅಲಕ್ಷಿಸಿ ಸುಮ್ಮನಾದ. ಮತ್ತೆ ಅಮವಾಸ್ಯೆ ಬರಲು ನಂದಯ್ಯನು ಗೋಲಗೇರಿಗೆ ಹೊರಡುವ ತಯಾರಿ ಮಾಡಿಕೊಂಡು ರಾತ್ರಿ ನಿದ್ರೆ ಹೋದ. ಮತ್ತೆ ಕನಸಿನಲ್ಲಿ ನಡೆ ನೀನಿದ್ದಲ್ಲಿಯೇ ನಾ ಬರುವೆ" ಎಂಬ ನುಡಿಗೆ ಯೋಚನಾಪರನಾದ. ಇದಕ್ಕೆ ದೇವನಿಂದ ಉತ್ತರವನ್ನು ಪಡೆದನು. "ಪುಲಿಗೇರಿಯಲ್ಲಿ ಗುರುಸೋಮನಾಥ ನೆಲೆಸಿದ ಸ್ಥಳದಲ್ಲಿ ನೋಡು, ಎಂಬ ದೇವವಾಣಿಯಂತೆ ಈಕ್ಷಿಸು.... ಕರಿಯಮಲ್ಲಿಗೆ ಹೂ ಹೂವಿನ ಪರಿಮಳದಿಂದ ಪೂಜೆಗೊಂಡುದನ್ನು ಕಂಡು ಭಕ್ತಿಯಿಂದ ಪುಳಕಿತನಾದ. ತನ್ನ ನೇಮವನ್ನು ತನ್ನ ಊರಲ್ಲಿಯೇ ಪೂರೈಸಿದುದು, ಅರ್ಪಿತವಾದುದು, ಅವನಿಗೆ ಮೇರೆ ಮೀರಿದ ಸಂತೋಷವನ್ನು ನೀಡಿತು. ಭಕ್ತನ ಒಲುಮೆಗೆ ಮನಸೋತು ಅವನಿದ್ದಲ್ಲಿಯೇ ಬಂದು ನೆಲೆಸಿದ ಪವಾಡ ಸದೃಶ ಸಂಗತಿ ತಿಳಿದು ಊರಭಕ್ತರು, ಪರ ಊರಿನ ಭಕ್ತರು, ಲಕ್ಷ್ಮೇಶ್ವರಕ್ಕೆ ಧಾವಿಸಿದರು. ನಂದಪ್ಪನಿಂದಾಗಿ ಗೋಲಗೇರಿ

ಗೊಲ್ಲಾಳೇಶ್ವರನು ಪುಲಿಗೆರೆಯಲ್ಲಿ - ಅಂದರೆ ಲಕ್ಷ್ಮೇಶ್ವರದಲ್ಲಿ ನೆಲೆಸಿದುದನ್ನು ಭಕ್ತರು ಕೊಂಡಾಡಿದರು. ಈ ಐತಿಹಾಸಿಕ ಸಂಗತಿಗೆ ಮೌಖಿಕ ಸಾಹಿತ್ಯವೇ ಆಧಾರವಾಗಿದೆ.

ಈ ದೇವಸ್ಥಾನದಲ್ಲಿ ಈಗ ಜಾತ್ರೆ-ಉತ್ಸವ ನಡೆಯುವುದಿಲ್ಲ. "ದೇವಾಲಯದ ಉಸ್ತುವಾರಿಯನ್ನು ಮಾದನಶೆಟ್ಟಿ ಎಂಬ ಕುಟುಂಬ ನೋಡಿಕೊಳ್ಳುತ್ತಿದ್ದು ಇವರುಗಳೂ ಯಾರೂ ಇಲ್ಲಿರುವುದಿಲ್ಲ. ಈಗ್ಗೆ ಹುಬ್ಬಳ್ಳಿಯಲ್ಲಿ ವಾಸವಾಗಿದ್ದಾರೆ. ದೇವಾಲಯಕ್ಕೆ ಎಲ್ಲ ಜಾತಿ-ವರ್ಗದ ಜನರು ನಡೆದುಕೊಳ್ಳುವರು. ಪೂಜೆಯನ್ನು (ನಿತ್ಯವೂ) ಹಿರೇಮಠ ಎಂಬ ಕುಟುಂಬ ನೆರವೇರಿಸಿಕೊಂಡು ಬರುತ್ತಿದೆ. ಇವರು ದೇವಾಲಯದ ಪಕ್ಕದಲ್ಲಿಯೇ ವಾಸವಾಗಿದ್ದಾರೆ." (ಈ ಮಾಹಿತಿಯನ್ನು ಶ್ರೀ ಚನ್ನವೀರಯ್ಯ, ನಿಜಗುಣಯ್ಯ ಗೋಲಗೇರಿಮಠ ಸಾ. ಲಕ್ಷ್ಮೇಶ್ವರ ಇವರಿಂದ ಪಡೆಯಲಾಯಿತು,)

ಲಕ್ಷ್ಮೇಶ್ವರ ದೇವಾಲಯವು ಚಾಲುಕ್ಯ ಶೈಲಿಯಲ್ಲಿ ರಚನೆಗೊಂಡಿದೆ. ದೇವಸ್ಥಾನದಲ್ಲಿ ಒಟ್ಟು ಇಪ್ಪತ್ತನಾಲ್ಕು ಕಂಬಗಳಿದ್ದು, ಒಳಗೆ ಗರ್ಭಗೃಹದಲ್ಲಿ ಆರು ಕಂಬಗಳಿವೆ. ಗರ್ಭಗುಡಿಯಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈಗ್ಗೆ ಇಲ್ಲಿಯೂ ಗೊಲ್ಲಾಳನ ಮೂರ್ತಿಯನ್ನು ಇರಿಸಿ ಪೂಜಿಸುತ್ತಾರೆ.

## ಕಪ್ಪತ್ತಗುಡ್ಡ

ಗದಗ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ 'ಕಪ್ಪತ್ತಗುಡ್ಡ'ದಲ್ಲಿ ಗೋಲಗೇರಿ ಮಠ ಬೆಟ್ಟದ ಮೇಲಿದೆ. ಇಲ್ಲಿ ಕೇವಲ ಹನ್ನೆರಡು ಕುಟುಂಬಗಳು ವಾಸವಾಗಿವೆ. ಇವರುಗಳ ಆರಾಧ್ಯ ದೈವ "ಗೊಲ್ಲಾಳೇಶ್ವರ"ನಾಗಿದ್ದಾನೆ. ಇಲ್ಲಿ ನಿಸರ್ಗದ ಚೆಲುವು ತುಂಬಿ ಹರಡಿದೆ. ಅದರಂತೆ ಇಲ್ಲಿ ಸಸ್ಯ ಔಷಧಿ ಸಂಪತ್ತು ತುಂಬಿ ತುಳುಕುತ್ತಿದೆ. ಇತ್ತೀಚೆಗೆ ಕರ್ನಾಟಕದ ಘನ ಸರಕಾರವು ಸಂರಕ್ಷಿತ ಅರಣ್ಯ ಪ್ರದೇಶವೆಂದು ಆದೇಶ ಹೊರಡಿಸಿದೆ. ಎಲ್ಲ ರೋಗಕ್ಕೂ ಮದ್ದಾಗುವ ಸಸ್ಯ ಸಂಪತ್ತಿದೆ. ಇಲ್ಲಿ ವಾಸಿಸುವ ಋಷಿಗಳು, ಇತರರು ಔಷಧಿಯನ್ನು ಕೊಡುತ್ತಾರೆ. ಇದು ಈಗ ಪ್ರಸಿದ್ಧವಾಗಿದೆ. ಎಪ್ಪತ್ತು ಗಿರಿಗಿಂತ ಕಪ್ಪತ್ತಗಿರಿ ಮೇಲೆಂದು ಎಲ್ಲರೂ ಹೇಳುವರು. ದೇವಾನುದೇವತೆಗಳು ಕಪ್ಪತ್ತಗುಡ್ಡದಲ್ಲಿ ಸೇರಿದ್ದರು. ಭಾರತದ ಸಿದ್ಧರು, ಸಾಧಕರು, ಮುನಿಗಳು ಬಂದು ಹೋಗುತ್ತಾರೆಂದು ಹೇಳಲಾಗುತ್ತದೆ.

ಕಪ್ಪತ್ತಗುಡ್ಡದಲ್ಲಿ ಗೊಲ್ಲಾಳಲಿಂಗಯ್ಯನ ದೇವಸ್ಥಾನವಿದ್ದು "ಗೊಲ್ಲಾಳನು ಒಂದು ಸಾವಿರದ ವರುಷಗಳ ಹಿಂದೆ ಗೋಲಗೇರಿಯಿಂದ ಇಲ್ಲಿ ಬಂದು ನೆಲೆಸಿದ್ದಾನೆಂದು" (ವಕ್ತೃ ವಿವರ - ಸಿದ್ಧಲಿಂಗಯ್ಯ ಮಲ್ಲಯ್ಯ, ಗೋಲಗೇರಿಮಠ) ಹೇಳಿದರು. ಶ್ರಾವಣಮಾಸದಲ್ಲಿ ವಿಶೇಷ ಪೂಜೆಯನ್ನು ಮಾಡಲಾಗುವುದು. ಅಂದು ಲಿಂಗಯ್ಯನಿಗೆ ಅಕ್ಕಿಕಾಳು ಹಾಕುವ ಪದ್ಧತಿ ಇದೆ.

ಗೋಲಗೇರಿ ಮಠದವರು ದೇವಾಲಯುದ ಉಸ್ತುವಾರಿಯನ್ನು ವಂಶಪಾರಂಪರ್ಯವಾಗಿ ನೋಡಿಕೊಂಡು ಬಂದಿರುವರು. ದೇವಾಲಯದ ಅರ್ಚಕ ಸ್ಥಾನದಲ್ಲಿರುವನು ಗೃಹಸ್ಥನಾಗದೆ ಸೇವೆಯನ್ನು

ಸಲ್ಲಿಸುವನು. ಇದು ಹನ್ನೆರಡು ತಲೆಮಾರಿನಿಂದ ನಡೆದುಬಂದಿರುತ್ತದೆ. ಈ ಹೇಳಿಕೆಯನ್ನು ಗಮನಿಸಲಾಗಿ ದೇವಾಲಯದ ಇತಿಹಾಸ ಸಾವಿರ ವರುಷಗಳ ಆಚೆಗೆ ನಿಲ್ಲುತ್ತದೆ. ದೇವಾಲಯವು ಬೃಹತ್ ಬೆಟ್ಟದ ಮೇಲಿದ್ದು ಬೆಟ್ಟದ ಕಲ್ಲಿನಲ್ಲಿಯೇ ಗುಹೆಯಾಕಾರದ ದೇವಾಲಯವನ್ನು ಕೊರೆಯಲಾಗಿದೆ. ಈ ದೇವಸ್ಥಾನಕ್ಕೆ ಶಿರಹಟ್ಟಿ ತಾಲ್ಲೂಕಿನ ಕಡಕೋಳ ಗ್ರಾಮದವರು ಭಕ್ತರಾಗಿದ್ದು, ಅವರು ಎಲ್ಲ ವರ್ಗದವರಾಗಿರುತ್ತಾರೆ. ಇಲ್ಲಿಯೂ ಗೋಲಗೇರಿ ಮಠದ ವಂಶಸ್ಥರು ಮರಣ ಹೊಂದಿದರೆ ದೇವಸ್ಥಾನದ ಎದುರುಗಡೆ ಗದ್ದುಗೆ ಮಾಡಿ ಶವಸಂಸ್ಕಾರ ಮಾಡುತ್ತಾರೆ.

## ಖೈನೂರು

ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಖೈನೂರು ಗ್ರಾಮದಲ್ಲಿಯೂ ಗೊಲ್ಲಾಳನ ಪುರಾತನ ದೇವಾಲಯವಿದೆ. ಈ ದೇವಾಲಯವು ಗೊಲ್ಲಾಳನ ಚರಿತ್ರೆಗೆ ಪುಷ್ಟಿ ನೀಡುವ ದೇವಸ್ಥಾನವಾಗಿದೆ. "ಕಲ್ಯಾಣಕ್ಕೆ ಗೊಲ್ಲಾಳ ಹೋಗಿದ್ದುದರ ಕುರಿತು ವೀರಶೈವಾಮೃತ ಪುರಾಣ ಸುಳಿವನ್ನು ಕೊಡುತ್ತದೆ. ಕಲ್ಯಾಣ ಕ್ರಾಂತಿಯ ನಂತರ ಮರಳಿ ಗೊಲ್ಲಾಳ ಗೋಲಗೇರಿಯ ಕಡೆಗೆ ಬರುವಾಗ ಖೈನೂರಲ್ಲಿ ತಂಗಿದ್ದಿರಬಹುದು. ಗೋಲಗೇರಿಯಿಂದ ಸು. ೪-೫ ಕಿ.ಮಿ. ದೂರದಲ್ಲಿರುವ ಊರಾಗಿದ್ದು, ಇಲ್ಲಿ ಗೊಲ್ಲಾಳನ ದೇವಸ್ಥಾನವಿದ್ದು, ಗೋಲಗೇರಿಯಲ್ಲಿ ನಡೆಯುವಂತೆ ಇಲ್ಲಿಯೂ ಎಲ್ಲ ರೀತಿಯ ಆಚರಣೆಯ ವಿಧಿವಿಧಾನಗಳು ನಡೆಯುತ್ತವೆ. ಖೈನೂರಲ್ಲಿಯೇ ಗೊಲ್ಲಾಳ ಸಮಾಧಿ ಇರಬಹುದೆಂಬ ವಿದ್ವಾಂಸರ ಊಹೆಗೆ ಕಾರಣ, ಖೈನೂರು ಪಕ್ಕದಲ್ಲಿಯೇ ಮಾಣ ಶಿವಣಗಿ ಎಂಬ ಗ್ರಾಮವಿದ್ದು. ಅಲ್ಲಿ ವೀರಘಂಟಿ ಮಡಿವಾಳನ ಸಮಾಧಿ ಇರುವುದು. ಕಲ್ಯಾಣದಿಂದ ಬರುವಾಗ ಆತ ಖೈನೂರಲ್ಲಿಯೇ ನೆಲೆಸಿದನೆಂದು (ಐಕ್ಯವಾದನೆಂದು) ಜನರ ಹೇಳಿಕೆಗಳು ಇದ್ದು, ಗೊಲ್ಲಾಳನ ಸಮಾಧಿಯೇ ಈಗಿನ ಗೊಲ್ಲಾಳೇಶ್ವರ ದೇವಸ್ಥಾನವಾಗಿರಬೇಕು."[೧೦] ಡಾ. ಎಸ್.ಸಿ. ಪಾಟೀಲರು ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಗೊಲ್ಲಾಳನು ಕಲ್ಯಾಣ ಕ್ರಾಂತಿಯಲ್ಲಿ ಭಾಗವಹಿಸಿದ್ದರ ಕುರಿತು ಖಚಿತ ಮಾಹಿತಿಗಳಿಲ್ಲ ಹಾಗೂ ಗೋಲಗೇರಿಯಲ್ಲಿರುವ ಈಗಿನ ದೇವಸ್ಥಾನ ಗೊಲ್ಲಾಳನ ಗದ್ದುಗೆಯಾಗಿದೆಯೆಂದು, ಶ್ರೀ ಹೊಳೆಪ್ಪ, ಶ. ದೇವರಮನಿ ಇವರು ಹೇಳುವರು. ಇದಕ್ಕೆ ಆಧಾರವಾಗಿ ಭಕ್ತರ ಅಭಿಪ್ರಾಯವೂ ಇದೇ ಆಗಿದೆ. ಆದ್ದರಿಂದಲೇ ಪ್ರತಿವರ್ಷ ಜಾತ್ರೆ ನೆರವೇರುವುದು ಎಂದು ಜನಪದರು ಹೇಳುವರು. ಈ ಜಾತ್ರೆಗೆ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮುಂತಾದ ರಾಜ್ಯಗಳ ಭಕ್ತರು ಬಂದು ಪಾಲ್ಗೊಳ್ಳುವರು. ಒಟ್ಟಾರೆ ಗೊಲ್ಲಾಳನ ಸಮಾಧಿ ಗೋಲಗೇರಿಯಲ್ಲಿ ಆಗಿದೆ, ಎನ್ನುವದು ಸೂಕ್ತವೆನಿಸುತ್ತದೆ. ಇಲ್ಲಿ ಗಮನಿಸಬಹುದಾದ ಒಂದು ಬಹು ಮುಖ್ಯ ವಿಚಾರವೇನೆಂದರೆ - ಖೈನೂರು ಗ್ರಾಮದ ಈ ದೇವಾಲಯ ಅನೇಕ ಅಂಶಗಳಲ್ಲಿ ಗೋಲಗೇರಿ ಗ್ರಾಮದ ದೇವಾಲಯವನ್ನು ಹೋಲುವುದು. ಖೈನೂರು ಹಾಗೂ ಗೋಲಗೇರಿ ಅಕ್ಕಪಕ್ಕದ ಗ್ರಾಮಗಳಾಗಿದ್ದರಿಂದ ದೇವಾಲಯಗಳ ರಚನೆಯ ಸಂದರ್ಭದಲ್ಲಿ ಈ ಸಮೀಕರಣ ಸಾಧ್ಯವಾಗಿರಬೇಕೆಂದು ಅನಿಸುವುದು ಸಹಜ.

ಖೈನೂರು ಗ್ರಾಮದ ಅನೇಕ ಹಿರಿಯ ನಾಗರಿಕರನ್ನು ವಿಚಾರಿಸಲಾಗಿ ಗೋಲಗೇರಿಯಲ್ಲಿ ಮೊದಲು ಶ್ರಾವಣಮಾಸದಲ್ಲಿ ಜಾತ್ರೆ ನಡೆಯುತ್ತಿತ್ತು. (ಗೊಲ್ಲಾಳನು ಆವಾಗ್ಗೆ ಜನಿಸಿದ್ದು) ಆಗ್ಗೆ ಮಳೆಗಾಲವಿದ್ದುದರಿಂದ ಜಾತ್ರೆಗೆ ಹೋಗಿ ಬರಲು ಎರಡು ಊರುಗಳ ಮಧ್ಯ ಬರುವ ಹಳ್ಳವೂ ತೊಂದರೆಯನ್ನು ಮಾಡುತ್ತಿತ್ತು. ಹೀಗಾಗಿ ಗೊಲ್ಲಾಳೇಶ್ವರನ ಜಾತ್ರೆಯಲ್ಲಿ ಪಾಲ್ಗೊಳ್ಳಲು ಆಗುತ್ತಿರಲಿಲ್ಲ. ಆದ್ದರಿಂದ ಗೊಲ್ಲಾಳನು ಊರಿನ ಗೌಡರ ಮನೆತನವಾದ ಪಾಟೀಲರ ಕನಸಿನಲ್ಲಿ ನಾನು ಇಲ್ಲಿಯೇ ಬಂದು ನೆಲೆಸುವೆನು ಎಂದು ಹೇಳಿದನು. ಅದರಂತೆ, ಪೂಜಿಸಲು, ಆರಾಧಿಸಲು ದೇವಾಲಯವನ್ನು ಕಟ್ಟಿದರು. (ಹಿರಿಯರು) ಎಂದು ಹೇಳಿದರು. (ಶ್ರೀ ಎನ್.ಎಸ್. ಪಾಟೀಲ) ಹೀಗೆ ಗೊಲ್ಲಾಳನನ್ನು ಇಲ್ಲಿಯೇ ಪ್ರತಿಷ್ಠಾಪಿಸಿ ಪೂಜಿಸುವೆವು ಹಾಗೂ ಗ್ರಾಮಸ್ಥರ ಆಶಯದಂತೆ ಈ ದೇವಾಲಯ ನಿರ್ಮಾಣವಾಯಿತೆಂದು ವಿವರಿಸಿದರು. ಒಟ್ಟಾರೆಯಾಗಿ ಗೊಲ್ಲಾಳನು ತನ್ನ ಬದುಕಿನ ಸಮಯದಲ್ಲಿ ಈ ಗ್ರಾಮದಲ್ಲಿ ನೆಲೆನಿಂತು ಭಕ್ತರ ಮೇಲೆ ತನ್ನ ಪ್ರಭಾವಳಿಯನ್ನು ಬೀರಿದ್ದು ಸತ್ಯ. ಹೀಗಾಗಿ ಗೊಲ್ಲಾಳನ ಅಸ್ತಿತ್ವ, ಜೀವನ ಸಾಧನೆಗೆ ಪೂರಕವೆನಿಸುವ ಸ್ಥಾವರ ಸಾಕ್ಷಿ ಈ ದೇವಾಲಯ ಎನಿಸುತ್ತದೆ.

## ಬಸವಕಲ್ಯಾಣ

ಈ ದೇವಸ್ಥಾನದಲ್ಲಿರುವ ದೇವರು 'ಹಾಲು ಬಸವಣ್ಣ'. ಹಾಲು ಬಸವಣ್ಣ ಎಂದರೆ ಹಾಲುಮತ, ಕುರುಬಮತ ಬಸವಣ್ಣ ಅಂದರೆ ಗೊಲ್ಲಾಳನೇ ಈ ದೇವಸ್ಥಾನದಲ್ಲಿರುವ ದೇವರು ಎಂದು ನಿಷ್ಪತ್ತಿ ಸಾಧಿಸುವ ಬಗೆ ಈ ದೇವಾಲಯದ ರಚನೆಯ ಹಿನ್ನೆಲೆಯಲ್ಲಿ ತಿಳಿದು ಬರುವಂಥದ್ದು. "ವೀರಗೊಲ್ಲಾಳನು ಕುರುಬರವನು ಎಂಬುದಕ್ಕೆ ಹೊರಗಿನ ಸಾಕ್ಷ್ಯಾಧಾರಗಳ ಅಗತ್ಯವಿಲ್ಲ. ಅವನ ವಚನಗಳೇ ಇದನ್ನು ಪ್ರಮಾಣೀಕರಿಸುತ್ತವೆ"[??] ಎಂಬ ಪ್ರೊ. ಎಸ್.ಜಿ. ಸಿದ್ಧರಾಮಯ್ಯನವರ ಅಭಿಪ್ರಾಯ ಸಮಂಜಸವಾದುದು.

ಕಲ್ಯಾಣ ಬಸವಣ್ಣ - ಶರಣ ಗೊಲ್ಲಾಳ ಯಾವುದೋ ಒಂದು ನೆಲೆಯಲ್ಲಿ ಸಮೀಕರಣಗೊಳ್ಳುವ ಅಂಶಗಳು. ಕಲ್ಯಾಣ ಸಮಾಜವಾದದ ಕ್ರಾಂತಿಯ ರಾಜಧಾನಿಯಾದರೆ, ಬಸವಣ್ಣ ಇದರ ದಂಡನಾಯಕ. ಈ ವಾದಕ್ಕೆ ಗೊಲ್ಲಾಳನು ಪೂರ್ವಾನ್ವಯವಾಗಿ ಬದುಕಿದವನೆಂದು ಊಹಿಸಬಹುದು. ಆರಾಧನೆಯು ಕೆಲವೊಮ್ಮೆ ಅತಿಶಯೋಕ್ತಿ ಎನಿಸಿದಿರೂ ಸರಿಯೇ. ಇಂಥ ಸಮನ್ವಯಗಳನ್ನು ಮಾಡಿ ವಿಶಿಷ್ಟ ಸಂಸ್ಕೃತಿ ರಚನೆಗೆ ಕಾರಣವಾಗುತ್ತಾರೆ. ಕಾಳಿದಾಸನಿಗೂ, ಬಸಪ್ಪಶಾಸ್ತ್ರಿಗಳಿಗೂ ಸುದೀರ್ಘವಾದ ಕಾಲದ ಅಂತರವಿದ್ದರೂ, ಬಸಪ್ಪಶಾಸ್ತ್ರಿಗಳನ್ನು 'ಕರ್ನಾಟಕದ ಕಾಳಿದಾಸ' ಎನ್ನುವ ಅನ್ವಯ ಇಲ್ಲಿ ನೆನಪಾಗುವ ಅಂಶ. ಈ ದೇವಸ್ಥಾನದ ಹೆಸರಿನ ವಿಶ್ಲೇಷಣೆ ಈ ರೀತಿಯಲ್ಲಿ ಬೆಳೆದು ಬಂದಿರುವುದು ಸರಿಯೋ, ತಪ್ಪೋ? ನಿರ್ಣಯಿಸುವುದು ಕಷ್ಟ. ಜನಪದರ ಆರಾಧನೆಗೆ ಭಾಜನವಾಗುವ ಇಂಥ ಅಂಶಗಳು ಅನೇಕ ರೀತಿಯಲ್ಲಿ ರೂಪಾಂತರ ಪಡೆಯುತ್ತಾ ಹೋಗುತ್ತವೆ. ಇವುಗಳನ್ನೆಲ್ಲಾ ನಿಯಂತ್ರಿಸುವುದು ಕಷ್ಟ.

## ಡಂಬಳ

ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನಲ್ಲಿರುವ ಡಂಬಳ ಗ್ರಾಮ ಗೋಲಗೇರಿಯ ಪಕ್ಕದಲ್ಲಿರುವ ಇನ್ನೊಂದು ಹಳ್ಳಿ. ಒಂದು ರೀತಿಯಲ್ಲಿ ಇವು ಡಂಬಳ-ಧವಳಾರ ಅವಳಿ ಗ್ರಾಮಗಳು. (Twin Villages)

ಡಂಬಳದಲ್ಲಿರುವ ಗೌರಮ್ಮ ದೇವಾಲಯ ವಾಸ್ತುಶಿಲ್ಪದ ದೃಷ್ಟಿಯಿಂದ ಅಷ್ಟೇನೂ ಮಹತ್ವದ ದೇವಾಲಯ ಅಲ್ಲ. ಆದರೆ ಈ ದೇವಾಲಯ ಗೊಲ್ಲಾಳನ ಜೀವನಕ್ಕೆ ತಳಕು ಹಾಕಿಕೊಂಡಿರುವುದರಿಂದ ಇದರ ಉಲ್ಲೇಖ ಇಲ್ಲಿ ಅನಿವಾರ್ಯ.

ಗೋಲಗೇರಿಯ ಜಾತ್ರೆಯ ಸಂದರ್ಭದಲ್ಲಿ ಒಂದು ಸಂಪ್ರದಾಯವನ್ನು ತಪ್ಪದೇ ಪರಿಪಾಲಿಸಿಕೊಂಡು ಬರಲಾಗುತ್ತಿದೆ. ಅದೆಂದರೆ ಜಾತ್ರೆಯ ದಿನದಂದು ಡಂಬಳದ ಗೌರಮ್ಮಳ ದೇವಸ್ಥಾನದ ಪಕ್ಕದಲ್ಲಿರುವ ಭಾವಿಯಿಂದ ನೀರು ತೆಗೆದುಕೊಂಡು ಬಂದು, ಅಂದಿನ ವಿಶೇಷ ದಿನದಂದು ಗೊಲ್ಲಾಳನ ಲಿಂಗಕ್ಕೆ ಮಜ್ಜನ ಮಾಡಿಸಲಾಗುವುದು. ಈ ಮಜ್ಜನದ ನಂತರ ಪೂಜೆ ನೆರವೇರಿಸಲಾಗುತ್ತದೆ. ಈ ಕಾರ್ಯಕ್ರಮವನ್ನು ಇಂದಿನ ದೇವಸ್ಥಾನದ ಧರ್ಮಾಧಿಕಾರಿಗಳಾದ ದೇವರಮನಿಯ ಕುಟುಂಬ ವರ್ಗದ ಹೆಣ್ಣುಮಕ್ಕಳು ನಡೆಸಿಕೊಡುತ್ತಾರೆ.

ಇಲ್ಲಿ ಒಂದು ಕತೆ ಪ್ರಚತಲಿದಲ್ಲಿದೆ. ಡಂಬಳದಲ್ಲಿ ಗೌರಮ್ಮ ಎಂಬ ಹೆಣ್ಣುಮಗಳಿದ್ದು, ದೊಡ್ಡಮನೆತನದ ಸೊಸೆಯಾಗಿ ಸುಂದರವಾಗಿ ತುಂಬು ಬಾಳನ್ನು ಬದುಕುತ್ತಿದ್ದಳು. ಜೊತೆಗೆ ಪಕ್ಕದಲ್ಲಿಯೇ ಇರುವ ಗೋಲಗೇರಿಯ ಆರಾಧ್ಯ ದೈವನಾದ ಗೊಲ್ಲಾಳೇಶ್ವರನ ದೇವಸ್ಥಾನಕ್ಕೆ, ತಾನು ಉಣ್ಣುವುದಕ್ಕಿಂತ ಪೂರ್ವದಲ್ಲಿಯೇ ಗೊಲ್ಲಾಳನಿಗೆ ನೈವೇದ್ಯ ಮಾಡಿ ನಂತರದಲ್ಲಿ ತಾನು ಉಣ್ಣುವ ವ್ರತ ಪರಿಪಾಲಿಸಿಕೊಂಡು ಬರುತ್ತಿದ್ದಳು. ಈ ವೃತವನ್ನು ಗುಪ್ತವಾಗಿ ಮಾಡುತ್ತಿದ್ದಳು. ಒಂದು ದಿನ ಗುಟ್ಟು ರಟ್ಟಾಗಿ, ಮನೆಯವರೆಲ್ಲಾ ಸಂಶಯಗೊಂಡು ಅವಳನ್ನು ಹಿಂಬಾಲಿಸಿ, ಅವಳು ದೇವಸ್ಥಾನಕ್ಕೆ ಗುಪ್ತವಾಗಿ ಹೋಗುವ ವಿಚಾರ ತಿಳಿದುಕೊಳ್ಳುತ್ತಾರೆ. ಗೌರಮ್ಮಳಿಗೆ ಈ ವಿಷಯ ಕೇಳಿದಾಗ, ಮೊದಲು ಗೊಲ್ಲಾಳನು ಉಂಡ ಮೇಲೆಯೇ ತಾನು ಉಣ್ಣುವ ತನ್ನ ವ್ರತವನ್ನು ಕುರಿತು ಹೇಳುತ್ತಾಳೆ. ಇದನ್ನು ನಂಬದ ಮನೆಮಂದಿ ತಮ್ಮ ಕಣ್ಣೆದುರಿನಲ್ಲಿ ಗೊಲ್ಲಾಳನಿಗೆ ಉಣಿಸಬೇಕೆಂದು ಹೇಳುತ್ತಾರೆ. ಅವಳು ಅದೇ ರೀತಿ ನಡೆದು ಗೊಲ್ಲಾಳ ಲಿಂಗಕ್ಕೆ ಉಣ್ಣಿಸಲಾಗಿ, ಲಿಂಗವು ಅವಳ ನೈವೇದ್ಯ ಸ್ವೀಕರಿಸಿದಾಗ (ಉಂಡಾಗ)ಅವರೆಲ್ಲಾ ಇವಳ ಲಿಂಗ ಭಕ್ತಿಗೆ ಮೆಚ್ಚಿದರು. ಗೌರಮ್ಮಳನ್ನು ಕೊಂಡಾಡಿದರು. ಮುಂದೆ ಗೌರಮ್ಮ ಗೊಲ್ಲಾಳನ ಮಹಾಭಕ್ತೆ ಎನಿಸಿದಳು. ಡಂಬಳದ "ಸೋಮಕಾಶಿ ಮತ್ತು ಅವನ ಸತಿ ಮಂಗಲೆಗೆ ಏಳು ಜನ ಗಂಡು ಮಕ್ಕಳು. ಏಳು ಜನ ಸಹೋದರರಲ್ಲಿ ಮಲ್ಲಗನೆಂಬುವವನ ಹೆಂಡತಿ ಗೌರಮ್ಮ. ಅವಳು ಗೊಲ್ಲಾಳೇಶ್ವರನ ಆರಾಧಕಳಾಗಿದ್ದಳು."[೧೨]

ಹೀಗೆ ಗೊಲ್ಲಾಳನ ಮಹಿಮೆಯನ್ನು ವಿವರಿಸುವ ಈ ಕತೆ ಗೌರಮ್ಮಳ ದೇವಸ್ಥಾನದ ಸಂಪ್ರದಾಯ ಆಚರಣೆಗಳ ಹಿನ್ನೆಲೆ -ಮುನ್ನೆಲೆಗಳಲ್ಲಿ ನಿಂತಿರುವುದರಿಂದ ಈ ದೇವಸ್ಥಾನವು ಪ್ರಮುಖವೆಂದೆನಿಸುತ್ತದೆ. ಇಂದಿಗೂ ಡಂಬಳ ಗ್ರಾಮದಲ್ಲಿ ಈ ದೇವಾಲಯವಿದ್ದು ಗೌರಮ್ಮ, ಗೊಲ್ಲಾಳರ ದೈವಭಕ್ತಿಯ ಸಂಬಂಧಕ್ಕೆ ಸಾಕ್ಷಿ ಎನ್ನುವಂತಿದೆ.

## ಹಿಟ್ನಳ್ಳಿ

ಈ ದೇವಾಲಯವು ವಿಜಾಪೂರ ನಗರದಿಂದ ಆರೇಳು ಕಿ.ಮಿ. ಅಂತರದಲ್ಲಿರುವದು. ಈ ಗ್ರಾಮವು ಹಿಂದೆ ಒಂದು ಕುರಿ ಹಟ್ಟಿಯಾಗಿತ್ತು. ಇಲ್ಲಿ ಕೂಡ ಗೊಲ್ಲಾಳನ (ಲಿಂಗಯ್ಯನ) ದೇವಸ್ಥಾನವಿದೆ. ಈ ಗ್ರಾಮದ ಹಿರಿಯರು, ಅದರಲ್ಲೂ, ಈ ದೇವಸ್ಥಾನದ ಪರಮಭಕ್ತರಾಗಿರುವ ಶ್ರೀ ದುಂಡನಗೌಡ, ಬ. ಪಾಟೀಲ ಅಭಿಪ್ರಾಯಪಡುವಂತೆ, ಹಿಂದೆ ಈ ಗ್ರಾಮವು 'ಗಿಡನಕೋಡಿ, ಹುಚ್ಚೇನಕಂಠಿ, ಕಾಲಕದ್ದಿ, ಟಕ್ಕನ, ಈ ಹಟ್ಟಿಗಳಿಂದ ಕೂಡಿತ್ತು. ಇದು ನಂತರ ಹಿಟ್ನಳ್ಳಿ ಎಂಬ ಗ್ರಾಮವಾಯಿತೆಂದು ಹೇಳುವರು. ಗೊಲ್ಲಾಳನ ಭಕ್ತರು ಮೊದಲು ರಾಯಚೂರ ಜಿಲ್ಲೆಯ ನೀಲಂಗಿಯಲ್ಲಿ ವಾಸವಾಗಿದ್ದರು. ನಂತರ ಹಿರಿಯರು ಪೇಶ್ವೆ ಕಾಲಕ್ಕೆ ಇಲ್ಲಿ ಬಂದು ನೆಲೆಸಿದ್ದೇವೆಂದು ಹೇಳುತ್ತಾರೆ.

ಈ ದೇವಾಲಯದ ನಿರ್ಮಾಣದ ಹಿಂದೆ ಪ್ರಚಲಿತವಿರುವ ಕಥೆಯ ತಾತ್ಪರ್ಯದಂತೆ, ಈ ದೇವಸ್ಥಾನ ಹದಿಮೂರನೇ ಶತಮಾನದಲ್ಲಿ ಕಟ್ಟಲ್ಪಟ್ಟಿದೆ. ಈ ಕಟ್ಟಡದ ಇತಿಹಾಸ ವಿವರಿಸುವ ಹಾಗೆ "ಹಿಟ್ನಳ್ಳಿಯಲ್ಲಿ ವಾಸವಾಗಿರುವ ಪಾಟೀಲರ ಮನೆತನವು ಮೂಲತಃ ರಾಯಚೂರ ಜಿಲ್ಲೆಯ ನಿಲಂಗಿ ಗ್ರಾಮದಿಂದ ಬಂದಂಥದ್ದು. ಅಲ್ಲಿಂದ ಇವರ ಪೂರ್ವಿಕರಾದ ಬಂಗಾರ ನಿಂಗೊಂಡ, ಬೆಳ್ಳಿ ನಿಂಗೊಂಡ ಹಾಗೂ ನೀಲಗಂಗಮ್ಮಾ ಕೂಡಿಕೊಂಡು ಇಂದಿನ ಹಿಟ್ನಳ್ಳಿ ಗ್ರಾಮಕ್ಕೆ ಬಂದರು. ಇವರು ಗೋಲಗೇರಿ ಗೊಲ್ಲಾಳನ ಪರಮ ಭಕ್ತರಾಗಿದ್ದರು. ಪ್ರತಿವರ್ಷವೂ ತಪ್ಪದೇ ಗೋಲಗೇರಿಗೆ ಹೋಗಿ ಬರುತ್ತಿದ್ದರು. ಭಕ್ತರ ಈ ಕಷ್ಟ ಕಂಡ ಗೊಲ್ಲಾಳ, ನಿಮ್ಮೂರಿನಲ್ಲಿಯೇ ಬಂದು ನೆಲೆಸುವನೆಂದು ಹೇಳಲಾಗಿ, ಗೊಲ್ಲಾಳನು ಹಿಟ್ನಳ್ಳಿಗೆ ಬಂದು ನೆಲೆನಿಂತನು. ಗೋಲಗೇರಿಗೆ ಹೋಗುವ ದಾರಿಯಲ್ಲಿ ಇವರ ಸಹೋದರಿಯಾದ ನೀಲಗಂಗಮ್ಮಾ ಮಾರ್ಗಮಧ್ಯದ ಊರು ಸಿಂದಗಿಯಲ್ಲಿ ಐಕ್ಯಳಾದಳು ಎಂದೆನ್ನುವರು.

ಸಿಂದಗಿಯಲ್ಲಿ ನೀಲಗಂಗಮ್ಮಾ ಐಕ್ಯಳಾಗುವುದಕ್ಕೆ ಪ್ರಮುಖ ಕಾರಣವೆಂದರೆ, ನನ್ನ ಸಹೋದರರು ಪ್ರತಿವರ್ಷ ಗೋಲಗೇರಿಗೆ ತಪ್ಪದೇ ಹೋಗುವುದರಿಂದ ಮಾರ್ಗಮಧ್ಯ'ದಲ್ಲಿ ನನ್ನ ಐಕ್ಯಸ್ಥಳವಿದ್ದರೆ ಅವರು ತಪ್ಪದೇ ತನ್ನ ದರ್ಶನಕ್ಕೆ ಬರುತ್ತಾರೆ ಎಂದು ತಿಳಿದೇ ಐಕ್ಯಳಾದಳು ಎಂಬ ಪ್ರತೀತಿ ಇದೆ. ಈ ಅಂಶವನ್ನು ಹಿಟ್ನಳ್ಳಿ ಗ್ರಾಮದ ದೇವರಮನೆ (ಪಾಟೀಲ) ಮನೆತನದವರು ಹೇಳುತ್ತಾರೆ.

ಈ ಕಥೆಯು ನಿಜಾಂಶದಿಂದ ಕೂಡಿದೆ ಎಂದೆನ್ನಬಹುದು. ಅಂದರೆ ಇಂದಿಗೂ ಶ್ರೀಶೈಲದ ಪರಿಷೆಗೆ ಹೋಗುವ ಭಕ್ತರು ಸಿಂದಗಿಯ ನೀಲಗಂಗಮ್ಮಾ ಹಾಗೂ ಗೋಲಗೇರಿಯ ಗೊಲ್ಲಾಳ ಎರಡೂ ದೇವಸ್ಥಾನಕ್ಕೆ ಭೇಟಿ ನೀಡುವುದನ್ನು ಗಮನಿಸಿದರೆ ಪರಿಷೆ ಹೊರಟ ಜಂಗಮ ನಂದಯ್ಯ ಗೊಲ್ಲಾಳ- ಶ್ರೀಶೈಲದ ಲಿಂಗ, ಕುರಿಹಿಕ್ಕಿಯ ಲಿಂಗ ಮುಂತಾದ ಸನ್ನಿವೇಷಗಳಲ್ಲಿ ಬಿಚ್ಚಿಕೊಳ್ಳುವ ಈ ಕಥೆ ಘಟಿಸಿದ ಕತೆಯಾಗುತ್ತದೆ. ಚರಿತ್ರೆಯಾಗಿ ಉಳಿಯಬೇಕಾಗಿದ್ದ ಕತೆ ದಾಖಲೆಗಳಲ್ಲಿದೆ. ಜಾನಪದ ಕತೆಯಾಗಿ ಬಳಕೆಯಲ್ಲಿದೆ. ಲಭ್ಯವಿರುವ ಎಲ್ಲ ದೇವಸ್ಥಾನ ಸಂಪ್ರದಾಯಗಳನ್ನು ಅನುಲಕ್ಷಿಸಿದರೆ ಗೊಲ್ಲಾಳನೆಂಬ ವಚನಕಾರನ ಇತಿಹಾಸಕ್ಕೆ ಸಾಕಷ್ಟು

ಪುರಾವೆಗಳು ದೊರೆಯುತ್ತವೆ. ಈ ಹಿಟ್ನಳ್ಳಿ ಗ್ರಾಮದ ದೇವಸ್ಥಾನವು ಕೂಡ ಗೊಲ್ಲಾಳೇಶನ ಜೀವನ ಸಂದರ್ಭಗಳನ್ನು ಒತ್ತಿ ಹೇಳುತ್ತದೆ. ಅದರಂತೆ ಸಿಂದಗಿಯ ನೀಲಗಂಗಮ್ಮ ದೇವಸ್ಥಾನ ಗೊಲ್ಲಾಳೇಶನ ಚರಿತ್ರೆಗೆ ಪೂರಕವಾಗಿ ನೆಲೆನಿಂತಿದೆ.

## ಬಂದಾಳ

ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ 'ಬಂದಾಳ' ಗ್ರಾಮವು ಸಿಂದಗಿಯ ಸಮೀಪದ ಒಂದು ಗ್ರಾಮವಿದ್ದು, ಈ ಗ್ರಾಮದ ಊರ ಹೊರವಲಯದಲ್ಲಿ ಒಂದು ವಿಶಾಲ ಪ್ರಾಂಗಣ ಹೊಂದಿದ ಪ್ರಾಚೀನ ದೇವಾಲಯವಿದೆ. ಈ ದೇವಾಲಯದ ಅರ್ಚಕರು 'ದೇವರ ಮನೆ' ಎಂದೇ ಕರೆಯಿಸಿಕೊಳ್ಳುವ ಮನೆತನದವರು ಅರ್ಚನೆ ಮಾಡುವರು. ಈ ದೇವಾಲಯವು ಕೂಡ ಅನೇಕ ನೆಲೆಗಳಲ್ಲಿ ಗೋಲಗೇರಿಯ ದೇವಾಲಯವನ್ನೇ ಹೋಲುತ್ತದೆ.  ಹಾಗೂ ಇಲ್ಲಿ ಜಾರಿಯಲ್ಲಿರುವ ಸಂಪ್ರದಾಯಗಳು ಕೂಡ ಗೋಲಗೇರಿಯ ಆಚರಣೆ, ಸಂಪ್ರದಾಯಗಳನ್ನು ಯಥಾವತ್ತಾಗಿ ಹೋಲುತ್ತವೆ.

ಗೋಲಗೇರಿಯಲ್ಲಿರುವ ದೇವಾಲಯದ ವಾಸ್ತು-ಶಿಲ್ಪದಂತೆ ಈ ದೇವಾಲಯವೂ ಕಟ್ಟಲ್ಪಟ್ಟಿದೆ. ದೇವಾಲಯಕ್ಕೆ ಸುತ್ತಲೂ ಮೂರು ಬಾಗಿಲುಗಳಿವೆ. ದೇವಸ್ಥಾನದ ಮುಂದೆ ದೇವರ ಮನೆಯ ವಂಶಸ್ಥರ ಸಮಾಧಿಗಳಿವೆ. ಈ ದೇವಾಲಯಕ್ಕೆ ಒಬ್ಬ ಪ್ರಾಚೀನ ಹೆಣ್ಣುಮಗಳ ಕಥೆಯೊಂದು ಹೆಣೆದುಕೊಂಡಿದೆ. ಗೋಲಗೇರಿಯಲ್ಲಿ ಅವ್ವಮ್ಮ-ಲಕ್ಕಮ್ಮರ ಗುಡಿ ಇರುವಂತೆ ಇಲ್ಲಿಯೂ ದೇವಾಲಯದ ಹಿಂದುಗಡೆ ಲಕ್ಕಮ್ಮಳ ದೇವಸ್ಥಾನವಿದೆ. ಇಲ್ಲಿಯೂ ಅವ್ವಮ್ಮಳು ಗೊಲ್ಲಾಳನ ಪರಮ ಭಕ್ತೆಯಾಗಿದ್ದಳು ಎಂದು ವಿವರಿಸುವರು.

ಈ ದೇವಸ್ಥಾನವು ಕೂಡ ಗರ್ಭಗುಡಿ ಹೊಂದಿದ್ದು, ಗರ್ಭಗುಡಿಯ ಮುಂದೆ ಕಂಬಗಳ ಮುಖಮಂಟಪವಿದ್ದು, ಇದೂ ಕೂಡ ಗೊಲ್ಲಾಳನ ಚರಿತ್ರೆಗೆ ಪುಷ್ಟಿ ನೀಡಿ ಅನೇಕ ರೋಚಕ ಸಂಗತಿಗಳ ಕಡೆಗೆ ಗಮನ ಹರಿಯುವಂತೆ ಮಾಡುತ್ತದೆ. ಇಲ್ಲಿಯೂ ಮೊದಲು ಜಾತ್ರೆ ನೆರವೇರುತ್ತಿತ್ತು. (ಈಗಲೂ ನಡೆಯುತ್ತಿದೆ) ಆದರೆ ಅಂದು ತೇರನ್ನು ಎಳೆಯುತ್ತಿದ್ದರು. ಇದಕ್ಕೆ ಆಧಾರವೆಂಬಂತೆ ಇಲ್ಲಿ ಪಾದಗಟ್ಟೆ ಇರುವದು. ಇದಕ್ಕೆ ತೇರಿನ ಪಾದಗಟ್ಟೆ ಎಂದು ಕರೆಯುವರು.

ಈ ದೇವಾಲಯಕ್ಕೆ ಅಂದರೆ ದೇವರ ಮನೆಯವರು ನೂರಾರು ಎಕರೆ ಜಮೀನನ್ನು ಹೊಂದಿದವರಾಗಿದ್ದರು. ದೇವಾಲಯದ ಆಗು-ಹೋಗುಗಳನ್ನು ನೋಡಿಕೊಳ್ಳಲು, ದಿನಾಲು ಪೂಜೆಗೊಳ್ಳಲು, ದೇವರ ಹೆಸರಿನಲ್ಲಿ ಎಣ್ಣೆ ಹೊಲವಿದೆ. ಈ ಎಣ್ಣೆಯ ಹೊಲದಿಂದ ಬರುವ ಆದಾಯವನ್ನು ಮುನ್ನೂರಾ ಅರವತ್ತೈದು ದಿನಗಳವರೆಗೆ ದೇವಾಲಯದಲ್ಲಿ ನಂದಾದೀಪಕ್ಕೆ ಬೇಕಾಗುವ ಎಣ್ಣೆಯ ಖರ್ಚನ್ನು ಇದರಿಂದಲೇ ಸರಿದೂಗಿಸುತ್ತಾರೆ. (ಗೋಲಗೇರಿಯಲ್ಲಿ ಉಕ್ಕಲಿ ಗೌಡರು ಎಣ್ಣೆ ಕೊಡುತ್ತಾರೆ.) ಹಾಗೂ ಹೂವಿನ ಹೊಲವಿದೆ. ಈ ಜಮೀನನ್ನು ಸಾಗುವಳಿ ಮಾಡುವವರು. ದೇವರಿಗೆ ಹೂ-ಪುಷ್ಪಗಳನ್ನು ವರುಷವಿಡೀ ಕೊಡಬೇಕು. ಈ

ರೀತಿ ಇನ್ನುಳಿದ ದೇವಾಲಯಗಳಿಗೆ ಭೂಮಿ ಇದ್ದು ದೇವರ ಕಾರ್ಯಗಳ ನಿಮಿತ್ತ ಆದಾಯವನ್ನು ಉಪಯೋಗಿಸುವರು. ಈ ರೀತಿ ಉಸ್ತುವಾರಿ ನೋಡಿಕೊಂಡು ಹೋಗುವ ಮನೆತನದವರಿಗೆ ಜಮೀನುಗಳಿರುವುದು ಪ್ರಮುಖ ಸಂಗತಿಯಾಗಿದೆ. ಅದರಂತೆ ಈ ಗ್ರಾಮವು ಹಿಂದೆ ಒಂದು ಹಳ್ಳಿಯಾಗಿತ್ತು ಎಂಬ ಅಭಿಪ್ರಾಯವನ್ನು ಗ್ರಾಮಸ್ಥರು ನೀಡುತ್ತಾರೆ. ಈಗ್ಗೆ ದೇವಾಲಯವು ಊರಿನ ಹಳ್ಳದಾಚೆ ಹೊರಭಾಗದಲ್ಲಿದ್ದು ವಿಶಾಲವಾದ ಹತ್ತಾರು ಎಕರೆ ಪ್ರಾಂಗಣ ಹೊಂದಿರುತ್ತದೆ. ಅಲ್ಲೀಗ ಹಾಳು ಮಣ್ಣಿನ ಕಲ್ಲುಗುಂಡಿಗಳ ಕುರುಹುಗಳನ್ನು ನೋಡಿದರೆ ಮೊದಲು ಇಲ್ಲಿಯೇ ಗ್ರಾಮವಿತ್ತು ಎಂದು ಖಚಿತವಾಗಿ ಹೇಳಬಹುದು. ಇಲ್ಲಿ ಉತ್ಖನನ ಮಾಡಿದರೆ ಚರಿತ್ರೆಗೆ ಪೂರಕವಾದ ಇನ್ನಷ್ಟು ಮಾಹಿತಿಗಳು ಲಭ್ಯವಾಗಬಹುದು ಎಂದೆನಿಸುತ್ತದೆ.

## ಬಂಟನೂರು

ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನಲ್ಲಿ ಬಂಟನೂರ ಎಂಬ ಗ್ರಾಮವಿದೆ. ಇಲ್ಲಿಯೂ ಸಹಿತ ಊರ ಹೊರವಲಯದಲ್ಲಿ ಗೊಲ್ಲಾಳೇಶ್ವರನ ದೇವಾಲಯ ಇರುವದು. ಎಲ್ಲ ಗೊಲ್ಲಾಳೇಶ್ವರನ ದೇವಾಲಯದ ಹಾಗೆಯೇ ಈ ದೇವಾಲಯದ ಹೋಲಿಕೆಯಿರುವುದು. ಇಲ್ಲಿ ಅಪ್ಪಣ್ಣ ಎಂಬ ಭಕ್ತನ ಸಮಾಧಿ ಗುಡಿಯ ಪಕ್ಕದಲ್ಲಿದೆ. ಗೋಲಗೇರಿ, ಬಂದಾಳ, ಹಿಟ್ನಳ್ಳಿ, ನಾಗರಾಳ, ಉಕ್ಕಲಿ ದೇವಾಲಯಗಳ ಮುಂದೆ ಇರುವಂತೆಯೇ ಇಲ್ಲಿಯೂ ದೀಪಸ್ಥಂಬವಿರುವದು. ಇನ್ನುಳಿದ ಕಡೆ ಕೇಳಿ ಬರುವ ಕತೆಯಂತೆ ಇಲ್ಲಿಯೂ ಭಕ್ತರ ಕೋರಿಕೆಯಂತೆ ಗೊಲ್ಲಾಳನು ಬಂದು ನೆಲೆಸಿದ್ದಾನೆಂಬ ಪ್ರತೀತಿ ಇದೆ. ಇಲ್ಲಿಯ ದೇವಾಲಯ ಉಸ್ತುವಾರಿಯನ್ನು ನೋಡಿಕೊಂಡು ಹೋಗುವವರಿಗೆ 'ದೇವರಮನೆ'ಯವರು ಎಂದೇ ಕರೆಯುವರು. ಇವರು ಊರಿನ ಗೌಡಕಿ (ಪಾಟೀಲ) ಮನೆತನದವರಾಗಿದ್ದಾರೆ. ಅಂದರೆ - ಗೋಲಗೇರಿ, ಖೈನೂರು, ಡಂಬಳ, ಬಂದಾಳ, ನಾಗರಾಳ ಇಪ್ಪತ್ತು ಮೂವತ್ತು ಕಿ.ಮಿ. ವ್ಯಾಪ್ತಿಯೊಳಗೆ ಬಂದರೂ ಇಷ್ಟೊಂದು ಅಪಾರವಾದ ಭೂಮಿ ಲಿಂಗಾಯತರೆಂದು ಕರೆಯಿಸಿಕೊಳ್ಳುವವರ ಒಡೆತನದಲ್ಲಿವೆ.

ದೇವಾಲಯದ ರಚನೆಯನ್ನು ಗಮನಿಸಿದರೆ, ಇದು ಪ್ರಾಚೀನ ದೇವಸ್ಥಾನವಿದ್ದು ಇಲ್ಲಿಯೂ ಉಳಿದ ದೇವಾಲಯಗಳಂತೆ ಆಚರಣೆ, ಸಂಪ್ರದಾಯಗಳು ಜಾರಿಯಲ್ಲಿವೆ. ಗೊಲ್ಲಾಳನ ಈ ಸ್ಥಾವರವು ಆತನ ಕಾರ್ಯಕ್ಷೇತ್ರ ವ್ಯಾಪ್ತಿಯನ್ನು ಪರಿಗಣಿಸಲು ಮುಖ್ಯ ಸಾಕ್ಷಿಯಾಗಿದೆ.

## ಜಾಲಹಳ್ಳಿ

ರಾಯಚೂರ ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಈ ಗ್ರಾಮವಿದೆ. ಇಲ್ಲಿ ಗೊಲ್ಲಾಳೇಶ್ವರನ ಪುರಾತನ ದೇವಾಲಯವಿರುತ್ತದೆ. ಗೋಲಗೇರಿಯಿಂದ ಶ್ರೀಶೈಲಕ್ಕೆ ಹೋಗಬೇಕಾದರೆ ದಾರಿಯ ಮಧ್ಯದಲ್ಲಿ ಹುಣಸಗಿ, ಕನಗಂಡನಹಳ್ಳಿ, ಮಂಜಲಾಪೂರ, ಕಕ್ಕೇರಾ, ಘೀರಗಾರ ದೊಡ್ಡಿ, ಹುಣಸ್ಯಾಳ, ತಿಂಥಿಣಿ, ಬಣ್ಣದೊಡ್ಡಿ, ವೀರಗೊಟ್ಟ, ಬೆಂಚೊಳ್ಳಿ, ಜಾಲಹಳ್ಳಿ ಈ ಹಳ್ಳಿಗಳ ಮುಖಾಂತರ ಶ್ರೀಶೈಲಕ್ಕೆ ಕಾಲ್ನಡಿಗೆಯಲ್ಲಿ ಕಂಜಿ (ಪರಸೆ)

ಹೋಗುವದು. ಈ ಪ್ರದೇಶವು ಬೆಟ್ಟ ಗುಡ್ಡ. ಗಿಡಗಂಟಿಗಳಿಂದ ತುಂಬಿದ ಪರಿಸರವಿರುವದು. ಬಹುತೇಕ ಗ್ರಾಮಗಳಲ್ಲಿ ಇಂದಿಗೂ ಕುರಿಸಾಕಣೆ ಪ್ರಮುಖ ಉದ್ಯೋಗವಾಗಿಸಿಕೊಂಡಿದ್ದಾರೆ. ಈ ಪ್ರದೇಶದಲ್ಲಿ ಗೊಲ್ಲಾಳನ ಭಕ್ತರಿದ್ದಾರೆ. ಈ ಗ್ರಾಮದಲ್ಲಿ ಸೌದ್ರಿ ಎಂಬ ಅಡ್ಡಹೆಸರಿನ ಬಣಜಿಗ ಜಾತಿಗೆ ಸೇರಿದ ಎರಡುನೂರಾ ಐವತ್ತು ಕುಟುಂಬಗಳು ಗೊಲ್ಲಾಳೇಶ್ವರನನ್ನು ಮನೆದೇವರೆಂದು ಪೂಜಿಸುತ್ತಾರೆ. ಈ ಗ್ರಾಮದ ಬೆಟ್ಟದ ಕೆಳಗೆ ಊರ ಹೊರಗೆ ಗೊಲ್ಲಾಳೇಶ್ವರ ದೇವಸ್ಥಾನವಿದೆ. ದೇವಸ್ಥಾನದ ಮುಂದುಗಡೆ ಸಮಾಧಿ ಸ್ಥಳವಿರುವುದು. ದೇವಾಲಯಕ್ಕೆ ಅರ್ಚಕರನ್ನು ನೇಮಿಸಿದ್ದಾರೆ. ದಿನಾಲು ಎರಡು ಸಲ ಮುಂಜಾನೆ-ಸಾಯಂಕಾಲ ಪೂಜೆ ಮಾಡಲಾಗುವದು. ಈ ದೇವಸ್ಥಾನದಲ್ಲಿಯೂ ಅಮವಾಸೆ-ಹುಣ್ಣಿಮೆ ದಿನದಂದು ರುದ್ರಾಭಿಷೇಕ ಮಾಡಲಾಗುವದು. ಶಿವರಾತ್ರಿ ದಿನದಂದು ಜಾತ್ರೆ ನೆರವೇರುತ್ತದೆ.

ಗೊಲ್ಲಾಳನು ಕಾಯಕ ನಿರತನಾಗಿ ಕುರಿಗಳನ್ನು ಕಾಯುತ್ತಾ ಶ್ರೀಶೈಲಕ್ಕೆ ಬೇಟಿ ನೀಡಿರಬಹುದು. ಭಕ್ತರು ಹೇಳುವಂತೆ ಸುಮಾರು ಹನ್ನೆರಡನೆ ಶತಮಾನದಲ್ಲಿ ಕುರುಬ ಜನಾಂಗದವರು ಹೇಳುವಂತೆ ಸುಮಾರು ಹನ್ನೆರಡನೆ ಶತಮಾನದಲ್ಲಿ ಕುರುಬ ಜನಾಂಗದವರು ಗೊಲ್ಲಾಳ, ಲಿಂಗಯ್ಯನನ್ನು ಪೂಜಿಸಲು ಒಪ್ಪದೆ, ಈ ದೇವರನ್ನು ನಮಗೆ ಪೂಜಿಸಲು ಬಿಟ್ಟುಕೊಟ್ಟಿರುವರು. ಕೊಡುವಾಗ ತಾಮ್ರ ಪತ್ರದಲ್ಲಿ ಒಪ್ಪಂದವಾಗಿದೆ. ಆ ಪತ್ರವು ಈಗಿನ ಮಠದ ಸ್ವಾಮಿಗಳ ಹತ್ತಿರವಿದೆಯೆಂದು ಹೇಳಿದರು. ಆದರೆ ಶ್ರೀಮಠದ ಪೀಠಾಧೀಶರು ಅಂತಹ ಯಾವ ದಾಖಲೆಗಳು ನಮ್ಮಲ್ಲಿಲ್ಲ. ಗೊಲ್ಲಾಳೇಶ್ವರ ದೇವಸ್ಥಾನದ ಸುತ್ತಮುತ್ತಲಿರುವ ನಲವತ್ತು ಎಕರೆ ಜಮೀನು ನಮ್ಮದಾಗಿದೆಂದು ಜಯಶಾಂತಲಿಂಗೇಶ್ವರ ಮಠದ ಶ್ರೀಗಳು ಹೇಳಿದರು. ಲಿಂಗಯ್ಯನೆಂದು ಗೊಲ್ಲಾಳ ಭಕ್ತರಿಂದ ಪೂಜೆಗೊಳ್ಳುತ್ತಿದ್ದಾನೆ. ಈ ಮಠಕ್ಕೂ ಗೊಲ್ಲಾಳನಿಗೂ ಸಂಬಂಧವಿರುವದನ್ನು ಪೀಠಾಧೀಶರು ಒಪ್ಪಿಕೊಂಡರೂ. ಚಾರಿತ್ರಿಕವಾಗಿ ಮೊದಲು ಹತ್ತು-ಹನ್ನೆರಡನೆ ಶತಮಾನದಲ್ಲಿ ನಮ್ಮ ಗುರುಗಳು ಆ ಪ್ರದೇಶದಲ್ಲಿ ಇದ್ದರೆಂದು ಹೇಳಿ ಗೊಲ್ಲಾಳನೂ ನಮ್ಮ ಭಕ್ತನೆಂದೇ ಹೇಳಿರುವರು. ಒಟ್ಟಾರೆ ಆಕರಗಳ ಕೊರತೆಯಿಂದ ಮತ್ತು ಹೇಳಿಕೆಗಳ ಭಿನ್ನತೆಯಿಂದ ಸ್ಪಷ್ಟವಾದ ಮಾಹಿತಿ ದೊರೆಯದಿದ್ದರೂ ಗೊಲ್ಲಾಳ ಲಿಂಗಯ್ಯನೆಂದು ಎಲ್ಲ ದೇವಸ್ಥಾನಗಳಲ್ಲಿ ಭಕ್ತರಿಂದ ಪೂಜೆಗೊಳ್ಳುತ್ತಿರುವದು ಸತ್ಯವಾಗಿದೆ. ಗೊಲ್ಲಾಳ ಚಾರಿತ್ರಿಕ ವ್ಯಕ್ತಿಯಾಗಿ ಈ ಪ್ರದೇಶದ ಭಕ್ತ ಮನಗಳಲ್ಲಿ ನೆಲೆಸಿದ್ದಾನೆ.

## ನಾಗರಳ್ಳಿ

ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ 'ನಾಗರಳ್ಳಿ' ಗ್ರಾಮದಲ್ಲಿ ಗೊಲ್ಲಾಳೇಶ್ವರನ ದೇವಸ್ಥಾನವಿದೆ. ಈ ಗ್ರಾಮದಲ್ಲಿ ಗೊಲ್ಲಾಳೇಶ್ವರನ ದೇವಾಲಯದಲ್ಲಿರುವ 'ಲಿಂಗ'ವು ಗ್ರಾಮ ದೇವರಾಗಿ ಪೂಜೆಗೊಳ್ಳುವದು. ಈ ಗ್ರಾಮದಲ್ಲಿ ಕೆಲ ಶಾಸನಗಳು ದೊರೆತರೂ ಗೊಲ್ಲಾಳನ ಕುರಿತು ಯಾವ ಮಾಹಿತಿಯನ್ನು ನೀಡುವುದಿಲ್ಲ. ದೇವಾಲಯದ ಉಸ್ತುವಾರಿಯನ್ನು ಶ್ರೀಗುರುಪಾದಗೌಡ ನಿ. ಪಾಟೀಲ (ದೇವರಮನೆ) ಇವರು ನೋಡಿಕೊಳ್ಳುತ್ತಿದ್ದಾರೆ.

ಆ ದೇವಸ್ಥಾನವು ಕೂಡ ಅನೇಕ ನೆಲೆಗಳಲ್ಲಿ ಇತರೆ ಗೊಲ್ಲಾಳೇಶ್ವರನ ಗುಡಿಯನ್ನೇ ಹೋಲುತ್ತದೆ. ಇಲ್ಲಿ ಜಾತ್ರಾ ಸಂದರ್ಭಗಳಲ್ಲಿ ಉಚಾಯಿ ಎಳೆಯುವ ಪದ್ಧತಿ ಇತ್ತು. ಇತ್ತೀಚೆಗೆ ೨೦-೨೫ ವರುಷಗಳಿಂದ ಈ ಪದ್ಧತಿ ನಿಂತುಹೋಗಿದೆ.

ದೇವಸ್ಥಾನದ ಎದುರುಗಡೆ ದೇವರಮನೆಯವರ ಸ್ಮಶಾನವಿತ್ತು. ಇತ್ತೀಚೆಗೆ ಗ್ರಾಮವು ಬೆಳೆದಂತೆ ಹತ್ತು, ಹದಿನೈದು ವರುಷಗಳಿಂದ ಸಮಾಧಿ ಮಾಡುವದು ನಿಂತುಹೋಗಿದೆ. ದೇವಸ್ಥಾನದ ದ್ವಾರದಲ್ಲಿ ತಮ್ಮ ಪೂರ್ವಜರ ಸಮಾಧಿಗಳಿದ್ದವು ಎಂಬುದನ್ನು ದೇವರಮನಿ ಕುಟುಂಬದ ಸದಸ್ಯರು ಖಚಿತ ಅಭಿಪ್ರಾಯ ನೀಡಿರುವರು. ಈ ದೇವಸ್ಥಾನದ ಪಕ್ಕದಲ್ಲಿ ಒಂದು ಸಮಾಧಿ ಇದ್ದು, ದೇವಸ್ಥಾನದ ಹಿಂದಿನ ಭಾಗದಲ್ಲಿ 'ಲಕ್ಕಮ್ಮ'ನ ದೇವಸ್ಥಾನವಿದೆ. ಒಟ್ಟಾರೆ ಗೋಲಗೇರಿ, ಬಂದಾಳ ಇತರೆ ದೇವಸ್ಥಾನಗಳನ್ನು ಇದು ಹೋಲುವುದಲ್ಲದೆ, ಅಲ್ಲಿ ಪ್ರಚಲಿತ ವಿರುವ ಕತೆಯೂ ಇಲ್ಲಿಯೂ ಸಹಿತ ಪ್ರಚಲಿತದಲ್ಲಿದೆ. ಕಥೆಗೆ ತಕ್ಕಂತೆ ಪೂರಕ ಸ್ಥಾವರ ಅಂಶಗಳಿವೆ. ಹೀಗಾಗಿ ಗೊಲ್ಲಾಳೇಶನ ಅಧ್ಯಯನ ಸಂದರ್ಭದಲ್ಲಿ ಈ ಗುಡಿಯೂ ಚಾರಿತ್ರಿಕವಾಗಿ ಪ್ರಮುಖವಾಗಿದೆ.

ಮೇಲಿನ ಈ ಎಲ್ಲ ದೇವಸ್ಥಾನಗಳನ್ನು ಅನುಲಕ್ಷಿಸಿ ಕೆಲವು ಸಾಮಾನ್ಯ ಅಂಶಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಎಲ್ಲ ದೇವಾಲಯಗಳು "ಚಾಲುಕ್ಯ"ಶೈಲಿಯಲ್ಲಿವೆ.

೨. ಈ ಎಲ್ಲ ದೇವಾಲಯಗಳು ಬಹುತೇಕ ಮೊದಲು 'ಕುರಿಹಟ್ಟಿ'ಯಲ್ಲಿ ನೆಲೆಗೊಂಡಿರುವವು.

೩. ಇಲ್ಲಿ ಪ್ರಮುಖ ದೇವರು-ಗೊಲ್ಲಾಳೇಶ್ವರ (ಲಿಂಗಯ್ಯ)

೪. ಈ ದೇವಸ್ಥಾನದ ಉಸ್ತುವಾರಿ ಮಾಡುವವರು ಇತ್ತಿತ್ತಲಾಗಿ ಧರ್ಮದರ್ಶಿಗಳೆಂದು ಹೇಳಿಕೊಳ್ಳುತ್ತಿದ್ದಾರೆ. 'ದೇವರಮನೆ' ಎಂಬ ಅಡ್ಡಹೆಸರಿನಿಂದ ಕರೆಯಿಸಿಕೊಳ್ಳುತ್ತಾರೆ.

೫. ಎಲ್ಲಾ ದೇವಸ್ಥಾನಗಳಿಗೆ ಮೂರು ಬಾಗಿಲುಗಳಿದ್ದು ಪಕ್ಕದಲ್ಲಿ ಒಂದು ಭಾವಿ ಇರುವುದು. ಮುಖ್ಯದ್ವಾರ ಪೂರ್ವಾಭಿಮುಖವಾಗಿ ಇರುತ್ತದೆ.

೬. ಗರ್ಭಗುಡಿ ಚಿಕ್ಕದಾಗಿರುವದು ಹಾಗೂ ಗುಡಿಯ ಮುಂದೆ ಕಂಬಗಳ ಮುಖಮಂಟಪ ಇರುವದು ಹಾಗೂ ಮಾಲಗಂಬ ಇರುವದು.

೭. ಅರ್ಚಕರ ಕುಟುಂಬ ಪುರುಷ ಸದಸ್ಯರು ಮೃತರಾದರೆ ಅವರ ಶರೀರವನ್ನು ದೇವಸ್ಥಾನದ ದ್ವಾರದ ಎದುರಲ್ಲೇ ಹೂಳುವ ಸಂಪ್ರದಾಯ ಜಾರಿಯಲ್ಲಿರುವುದು.

೮. ಭಕ್ತರ ಕೋರಿಕೆಯ ಮೇರೆಗೆ ಗೋಲಗೇರಿಯಿಂದ ಲಿಂಗಯ್ಯನು ಆಯಾ ಊರುಗಳಿಗೆ ಬಂದು ಈ ದೇವಸ್ಥಾನಗಳಲ್ಲಿ ನೆಲೆ ನಿಂತಿರುವನು ಎಂಬ ಪ್ರತೀತಿ.

೯. ಎಲ್ಲ ದೇವಸ್ಥಾನಗಳಲ್ಲಿ ಗೊಲ್ಲಾಳೇಶನ ಲಿಂಗದ ಸಮೀಪ ಒಬ್ಬ ಭಕ್ತನ ಸಮಾಧಿ ಹಾಗೂ ಗುಡಿಯ ಹಿಂದುಗಡೆ ಒಬ್ಬಳು ಭಕ್ತೆಯ ದೇವಾಲಯ ಇರುವುದನ್ನು ಗಮನಿಸಬಹುದು.

೧೦. ಈ ಎಲ್ಲಾ ದೇವಾಲಯದ ಅರ್ಚಕರ (ಉಸ್ತುವಾರಿಗಳು) ಕುಟುಂಬವು ಆಯಾ ಗ್ರಾಮಗಳಲ್ಲಿ ಜಾತಿಯಿಂದ ಲಿಂಗಾಯತರಾಗಿದ್ದಾರೆ ಹಾಗೂ ಜಮೀನು ಹೊಂದಿದವರಾಗಿದ್ದಾರೆ.

೧೧. ಅನೇಕ ದೇವಸ್ಥಾನಗಳಿಗೆ ಜಮೀನುಗಳ ದತ್ತಿ ಇದ್ದು, ಅವನ್ನು ಎಣ್ಣಿಹೊಲ, ಹೂವಿನ ಹೊಲ, ಪತ್ರಿ ಹೊಲ, ಕಂಬಿ ಹೊಲ ಎಂದು ಜಮೀನುಗಳನ್ನು ಮೀಸಲಿರಿಸಲಾಗಿದೆ.

೧೨. ಈ ಎಲ್ಲಾ ದೇವಾಲಯಗಳ ನಡುವೆ ಅಂತರ್‌ಸಂಬಂಧವಿದೆ. ಗೋಲಗೇರಿಯ ಗೊಲ್ಲಾಳೇಶನ ಕತೆಯೇ ದೇವಾಲಯಗಳ ನಿರ್ಮಾಣದ ಹಿನ್ನೆಲೆಯಲ್ಲಿ ಕೇಳಿಬರುತ್ತದೆ.

೧೩. ಎಲ್ಲ ದೇವಸ್ಥಾನಗಳು ಇಂದಿಗೂ ಆರಾಧನಾ ಸ್ಥಳಗಳಾಗಿದ್ದು ಲಿಂಗಕ್ಕೆ ಪೂಜೆ ನಡೆಯುತ್ತದೆ.

೧೪. ಅನೇಕ ದೇವಸ್ಥಾನಗಳಲ್ಲಿ ಉಚಾಯಿ ಎಳೆಯುವ ಪದ್ಧತಿ ರೂಢಿಯಲ್ಲಿತ್ತು.

೧೫. ದವನದ ಹುಣ್ಣಿಮೆಗೆ ಕೆಲ ದೇವಸ್ಥಾನಗಳಲ್ಲಿ ಪಲ್ಲಕ್ಕಿ ಉತ್ಸವ ನಡೆಯುತ್ತದೆ.

೧೬. 'ಸುರಪುರ' ಎಂಬ ಗ್ರಾಮದಲ್ಲಿ ಗೊಲ್ಲಾಳನ ಉಸ್ತುವಾರಿ ನೋಡಿಕೊಳ್ಳುವವರ ಮೂಲ ಊರುಗಳು ಇದರ ಸುತ್ತ-ಮುತ್ತಲಿನಲ್ಲಿ ಇರುವದು ಒಂದು ವಿಶೇಷ.

೧೭. ಈ ಎಲ್ಲ ದೇವಾಲಯಗಳ ನಿರ್ಮಾಣ ಒಂದು ಸಂಪ್ರದಾಯಕ್ಕೆ ಕಟ್ಟುಬಿದ್ದು ರಚನೆಗೊಂಡಂತಿವೆ.

೧೮. ಗೊಲ್ಲಾಳೇಶನ ಭಕ್ತರಲ್ಲಿ ಪುರುಷರಿಗಿಂತಲೂ ಮಹಿಳೆಯರು ಪ್ರಮುಖವಾಗಿ ಭಕ್ತಿಯನ್ನು ಮೆರೆದಿದ್ದಾರೆ.

ಈ ಮೇಲಿನ ಹಲವು ಪ್ರಮುಖ ಅಂಶಗಳನ್ನು ಗಮನಿಸಿ ನಾವು ಈ ಮುಂದಿನಂತೆ ವಿಶ್ಲೇಷಣೆ ಮಾಡುವುದು ಸಾಧ್ಯವಿದೆ.

ಗೋಲಗೇರಿಯ, ಗೊಲ್ಲಾಳೇಶನ ಅಧ್ಯಯನ ಕೈಗೊಂಡ ನಮಗೆ ಇತರೆ ಗ್ರಾಮಗಳಲ್ಲಿ (ಪ್ರದೇಶಗಳಲ್ಲಿ) ಗೊಲ್ಲಾಳೇಶನ ದೇವಸ್ಥಾನಗಳು (ನೆಲೆಗೊಂಡಿರುವ) ಅಧ್ಯಯನಕ್ಕೆ ಅವಶ್ಯವೆನಿಸಿದ್ದರಿಂದ ಮತ್ತು ಈ ದಿಸೆಯಲ್ಲಿ ನಾವು ಕಾರ್ಯೋನ್ಮುಖರಾದಾಗ ಗೋಲಗೇರಿಯ ಸುತ್ತಮುತ್ತಲು ಗ್ರಾಮಗಳಲ್ಲಿ ಗೊಲ್ಲಾಳೇಶನ ಜೀವನಕ್ಕೆ ಸಂಬಂಧಿಸಿದಂತೆ ಹಲವಾರು ದೇವಾಲಯಗಳು ಕಂಡುಬಂದವು. ಆ ಎಲ್ಲ ದೇವಾಲಯಗಳ ಪಟ್ಟಿಯನ್ನು ಈ ಹಿಂದೆ ನೀಡಲಾಗಿದೆ.

ಇಲ್ಲಿ ಮುಖ್ಯವಾದ ವಿಚಾರವೇನೆಂದರೆ ಈ ಎಲ್ಲ ದೇವಾಲಯಗಳು ಸ್ಥಾಪಿತಗೊಂಡಿರುವುದು ಒಂದು ಹಟ್ಟಿಯಲ್ಲಿ. "ಹಟ್ಟಿಯೆಂದರೆ - ದನ, ಕುರಿ, ಮೊದಲಾದವುಗಳನ್ನು ಕೂಡಿಹಾಕುವ ಸ್ಥಳ, ಕೊಟ್ಟಿಗೆ, ಕೊಪ್ಪ, ಚಿಕ್ಕಹಳ್ಳಿ, ಬಾಡ, ಗುಡಿಸಲ, ಮನೆ, ಮನೆಯ ಮುಂಭಾಗ, ಅಂಗಳ, ವಠಾರ, ಇತ್ಯಾದಿ ಅರ್ಥಗಳಿವೆ."[೧೩] ನಮಗೆ ದತ್ತ ಆಧಾರಗಳ ಮೇಲೆ ನಾವು ಆಗಲೇ ಪರಿಭಾವಿಸಿದಂತೆ ಗೊಲ್ಲಾಳ ಕುರುಬ ಜನಾಂಗಕ್ಕೆ ಸೇರಿದ

ವ್ಯಕ್ತಿ ಎಂಬ ಸಂಗತಿ, ಈ ಹಟ್ಟಿಗಳ ಹಿನ್ನೆಲೆಯಲ್ಲಿ ಇನ್ನಷ್ಟು ಗಟ್ಟಿಯಾಗುತ್ತದೆ. ಬಹುತೇಕ ಕುರುಬರು ಹಟ್ಟಿಗಳಲ್ಲಿ ವಾಸಿಸುವರು. ಈ ವಿಚಾರದ ಹಿನ್ನೆಲೆಯಲ್ಲಿ ಗೊಲ್ಲಾಳನು ಕುರುಬ ಜನಾಂಗಕ್ಕೆ ಸೇರಿದವನು ಎಂಬ ವಿಷಯ ಸಾಧಿತವಾಗುತ್ತದೆ.

## ಈ ದೇವಾಲಯಗಳಲ್ಲಿರುವ ಪ್ರಮುಖ ದೇವರು ಶ್ರೀ ಗೋಲ್ಲಾಳೇಶ್ವರ (ಲಿಂಗಯ್ಯ)

ಈಗಾಗಲೇ ಸಂಶೋಧಿಸಿದ ದೇವಾಲಯಗಳಲ್ಲಿ ಕಂಡುಬರುವ ಪ್ರಮುಖ ದೇವರು ಶ್ರೀ ಗೊಲ್ಲಾಳೇಶ್ವರನು (ಲಿಂಗಯ್ಯ) ಒಬ್ಬ ವ್ಯಕ್ತಿಯ ಕುರಿತು ಇಷ್ಟು ಸಂಖ್ಯೆಯಲ್ಲಿ ಒಂದೇ ಪ್ರದೇಶದಲ್ಲಿ ಸಿಗುವ ದೇವಾಲಯಗಳನ್ನು ಗಮನಿಸಿದಾಗ ಇದು ಕರ್ನಾಟಕ ಸಂಸ್ಕೃತಿಯಲ್ಲೇ ವಿಶಿಷ್ಟವೆನಿಸುತ್ತದೆ. ಮೇಲಾಗಿ ಈತನ ಕುರಿತ ದೇವಾಲಯಗಳ ಒಂದು ಜಾಲವೇ ಹರಡಿದೆ. ಹೀಗಾಗಿ ಇವನೊಬ್ಬ ಪ್ರಭಾವಿ ವ್ಯಕ್ತಿಯಾಗಿರಲು ಸಾಧ್ಯ. ವಚನಕಾರನಾಗಿ, ಅಜ್ಞಾತ ವಚನಕಾರನೆಂದು ಕರೆಯಿಸಿಕೊಂಡರೂ ಜನಪದರ ಮಾನಸದಲ್ಲಿ ಇಷ್ಟೊಂದು ಜನಪ್ರಿಯ ವ್ಯಕ್ತಿಯಾಗುವುದನ್ನು ಗಮನಿಸಿದರೆ, ಇವನೊಬ್ಬ ಕಾಯಕಯೋಗಿ ಎಂದು ಭಾವಿಸಬಹುದಾಗಿದೆ. ಇವನು ರಚಿಸಿದ ವಚನಗಳು ಬಹಳಷ್ಟು ಲಭ್ಯವಾಗದಿದ್ದರೂ. ಇರುವ ವಚನಗಳಲ್ಲೇ ಆತನ ಕಾಯಕ ನಿಷ್ಠೆ, ಸಾಮಾಜಿಕ ಕಳಕಳಿ, ಇತರೆ ಸಮಾಜಮುಖಿ ವಿಷಯಗಳ ಪ್ರಸ್ತಾಪವನ್ನು ಗಮನಿಸಬಹುದು. ಆಗಿನ ಸಾಮಾಜಿಕ ಸಂದರ್ಭದಲ್ಲಿ ಶೈವಸಿದ್ಧಾಂತದ ಪ್ರತಿಪಾದನೆಗೆ ಬದುಕನ್ನು ಮೀಸಲಾಗಿರಿಸಿದ್ದನು. ಇದಕ್ಕಾಗಿ ಹೋರಾಟಮಾಡಿ, ಅಲ್ಲಲ್ಲಿ ಪ್ರಚಾರಕಾರ್ಯ ಕೈಗೊಂಡು ತನ್ನ ಪ್ರಭಾವಿ ವಿಚಾರಗಳು ಬೇರೂರಲು ಜನ-ಮನದಲ್ಲಿ ನೆಲೆಗೊಂಡನು.

ಗೊಲ್ಲಾಳೇಶ್ವರ ಎಲ್ಲ ವರ್ಗದ ಜನರ ಆರಾಧ್ಯ ದೈವನಾಗಿದ್ದಾನೆ. ದೇವಾಲಯದಲ್ಲಿ ಎಲ್ಲರೂ ಎಲ್ಲಾ ಕಾರ್ಯಕ್ರಮಗಳಲ್ಲಿ ಮುಕ್ತವಾಗಿ ಪಾಲ್ಗೊಳ್ಳುತ್ತಾರೆ. ಅಲ್ಲಿ ಜರುಗುವ ಪೂಜೆ, ಜಾತ್ರೆ, ಸಂಪ್ರದಾಯಗಳನ್ನು ಗಮನಿಸಿದರೆ, ಇವನೊಬ್ಬ ಮಹಾಮಾನವತಾವಾದಿ ಎಂದೆನ್ನಬಹುದು.

## ದೇವಸ್ಥಾನದ ಅರ್ಚಕರು (ಉಸ್ತುವಾರಿ)ಗಳ ಅಡ್ಡ ಹೆಸರು (Surname) ದೇವರಮನೆ (ಸಾಹುಕಾರ, ಪಾಟೀಲ ಬಿರಾದಾರ) ಎಂದಿದೆ.

ಗೊಲ್ಲಾಳೇಶ್ವರನ ಕಾರ್ಯಕ್ಷೇತ್ರಗಳ ವ್ಯಾಪ್ತಿಯನ್ನು ಕಂಡುಕೊಳ್ಳುವ ಸಂದರ್ಭದಲ್ಲಿ ಬೇರೆ ಬೇರೆ ಊರುಗಳಲ್ಲಿರುವ ಗೊಲ್ಲಾಳೇಶನ ದೇವಸ್ಥಾನ ಸಂದರ್ಶನದ ಸಮಯದಲ್ಲಿ ಈ ಅಂಶ ಗೋಚರವಾಯಿತು. ಗೋಲಗೇರಿಯ ದೇವಾಲಯದ ಅರ್ಚಕರನ್ನು ಹಿಡಿದು, ಈಗಾಗಲೇ ಪಟ್ಟಿಮಾಡಿದ ಬಹುತೇಕ ದೇವಾಲಯಗಳ ಅರ್ಚಕರ ಅಡ್ಡ ಹೆಸರು 'ದೇವರಮನೆ'. ಉರ್ಫ/ಪಾಟೀಲ, ಬಿರಾದಾರ, ಸಾಹುಕಾರ ಎಂದಿದೆ. ಇವರು ವೀರಶೈವ ಪಂಥದ ವಿವಿಧ ಉಪಜಾತಿಗಳಿಗೆ ಸೇರಿದವರಾಗಿದ್ದಾರೆ. (ಪಂಚಮಸಾಲಿ, ಬಣಜಿಗ, ಗಾಣಿಗೇರ, ಜಂಗಮ) ಆದರೆ ಈಗ್ಗೆ ನಾವು ಸಂಶೋಧಿಸಿದ ಯಾವ ದೇವಾಲಯದಲ್ಲಿಯೂ 'ಕುರುಬ' ಜನಾಂಗದವರು ಅರ್ಚಕರಾಗಿಲ್ಲ ಪರಂತು ಭಕ್ತರಿದ್ದಾರೆ.

ಎಲ್ಲೋ ಯಾವುದೋ ಕಾಲದಲ್ಲಿ ಮೇಲಿನ ಶಿವಭಕ್ತರು ಒಂದೇ ಕುಟುಂಬದವರಾಗಿದ್ದರು. ದಿನಗಳೆದಂತೆ ಕುಟುಂಬ ಬೆಳೆದಂತೆ, ಕಾರ್ಯಕ್ಷೇತ್ರ ವಿಸ್ತರಿಸಿದಂತೆ, ಬೇರೆ ಬೇರೆ ಕೆಲಸಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಯಿತು. ಅವರಲ್ಲಿಯೇ ಬಣಜಿಗರು, ಗಾಣಿಗೇರ, ಪಂಚಮಸಾಲಿ, ಒಕ್ಕಲಿಗರು, ಹೂಗಾರರು, ಹಡಪದರು, ಆದರೇನೋ? ದೇವರಪೂಜೆ ಮಾಡುವವರು ದೇವರಮನೆಯೆಂದು ಕರೆಯಿಸಿಕೊಂಡಿರಬಹುದು. ಹೀಗೆಯೇ ವೀರಶೈವ ಲಿಂಗಾಯತ ಒಳಪಂಗಡಗಳು ಬೆಳೆದು ಬಂದಿರಬಹುದು. ಈ ಕುರಿತು ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆಯೆಂದೆನಿಸುತ್ತದೆ. ಈ ಎಲ್ಲ ದೇವರಮನಿ (ಅರ್ಚಕರ) ಕುಟುಂಬಗಳು ಆಯಾ ಗ್ರಾಮಗಳಲ್ಲಿ ಸುಸಂಸ್ಕೃತರು, ಆಚಾರವಿಚಾರವುಳ್ಳ ಭಕ್ತರು, ಪ್ರಭಾವಿ ವ್ಯಕ್ತಿಗಳು, ಪಂಚಾಯತ, ನ್ಯಾಯ ಕಟ್ಟೆಯಲ್ಲಿ ಮುಖ್ಯಸ್ಥರು, ಎಲ್ಲ ಧಾರ್ಮಿಕ, ಸಾಂಸ್ಕೃತಿಕ ಜೀವನದಲ್ಲಿ ಪಾಲ್ಗೊಳ್ಳುವಿಕೆ, ಸಾಮಾಜಿಕ ಜೀವನದಲ್ಲಿ ಸಹಬಾಳ್ವೆಗೆ ಒತ್ತು ಕೊಟ್ಟಿರುವುದನ್ನು ಗಮನಿಸಬಹುದು. ಒಂದು ದೃಷ್ಟಿಯಲ್ಲಿ ಇಂಥ ಸುಸಂಪನ್ನ ವ್ಯಕ್ತಿಗಳು, ಗೊಲ್ಲಾಳನ 'ಆದರ್ಶ' ಬದುಕನ್ನು ಅವನ ದಿವ್ಯ ವ್ಯಕ್ತಿತ್ವವನ್ನು ಲೋಕಕ್ಕೆ ಪರಿಚಯಿಸುತ್ತಿರುವವರು.

ಗೊಲ್ಲಾಳನ ಸತ್ವಯುತವಾದ ಬದುಕಿಗೆ, ಆದರ್ಶಗಳಿಗೆ ಒಲಿದ ಭಕ್ತರಿಗೆ ಅವರ ಬೆಂಬತ್ತಿ ಹೋಗಿ ಅವರವರ ಊರುಗಳಲ್ಲಿ ನೆಲೆಸಿ ತನ್ನ ಪ್ರಭಾವಲಯವನ್ನು ಬೀರಿದ್ದಾನೆ. ಮೊದಲಲ್ಲಿ ಒಬ್ಬ ವ್ಯಕ್ತಿ ಮತ್ತು ಗೊಲ್ಲಾಳನ ಮಧ್ಯ ನಡೆದ ಘಟನೆಯಾಗಿ, ನಂತರ ಸಾರ್ವತ್ರಿಕವಾಗಿ ಕಾಲಾಂತರದಲ್ಲಿ ಬೆಳೆದು ಅವನನ್ನು ಇತರ ಜನರು ಪೂಜಿಸಲು ಪ್ರಾರಂಭಿಸಿರಬಹುದು. ಒಂದು ಸಂಗತಿ ಇಲ್ಲಿ ನಿಜವೆನಿಸುತ್ತದೆ. ಗೊಲ್ಲಾಳನು ಮೊದಲು ದೇವರಮನೆ ಕುಟುಂಬದೊಡನೆ ಅವಿನಾಭಾವ ಹೊಂದಿದ ವ್ಯಕ್ತಿ (ದೇವರು) ದೇವರಮನೆ ಅಡ್ಡ ಹೆಸರಿನ ಕುಟುಂಬಗಳೆಲ್ಲಾ ಗೊಲ್ಲಾಳನ ಭಕ್ತರಲ್ಲಿಯೇ ಮೊದಲಿಗರೆನ್ನಬಹುದು.

**ಎಲ್ಲ ದೇವಾಲಯಗಳಿಗೆ ಮೂರು ಬಾಗಿಲುಗಳಿದ್ದು ಪಕ್ಕದಲ್ಲಿ ಒಂದು ಭಾವಿ ಇರುವುದು.**

ಈ ಮೇಲಿನ ಸಂಗತಿ ಗೊಲ್ಲಾಳನ ದೇವಾಲಯಗಳಲ್ಲಿ ಕಂಡುಬರುವ ಒಂದು ಪ್ರಮುಖ ಅಂಶವಾಗಿದೆ. ಇದೊಂದು ನಿಯಮದಂತೆ ಬಳಕೆಯಾಗಿರುವುದನ್ನು ಗಮನಿಸಬಹುದು. ಗೊಲ್ಲಾಳೇಶನ ದೇವಸ್ಥಾನ ಹೀಗೇ ಇರಬೇಕು ಎಂದು ನಿಯಮ ಮಾಡಿಕೊಂಡು ಕಟ್ಟಿದಂತಿದೆ. ಈ ಎಲ್ಲ ದೇವಾಲಯಗಳ ಗರ್ಭಗುಡಿಯ ಎದುರಿಗೆ ಪ್ರಧಾನವಾದ, ದೊಡ್ಡದಾದ ಮುಖ್ಯ ದ್ವಾರವಿದ್ದರೆ, ಗುಡಿಯ ಇಕ್ಕೆಲಗಳಲ್ಲಿ ಎರಡು ಬಾಗಿಲುಗಳು ಇರುತ್ತವೆ. ಇಂಥ ಸಂಪ್ರದಾಯ ಅದು ಹೇಗೆ ಬೆಳೆದು ಬಂದಿತೋ ಎಂಬುದಕ್ಕೆ ಕಾರಣಗಳು ನಿರ್ದಿಷ್ಟವಾಗಿ ತಿಳಿದು ಬರುವುದಿಲ್ಲ. ಯಾವುದೇ ಊಹೆಗಳು ಸಮಂಜಸವೆನಿಸವು. ಆದರೆ ಈ ಮೂರು ಬಾಗಿಲುಗಳು ಇರುವ ಕ್ರಮ ಮಾತ್ರ ತಪ್ಪದೇ ಎಲ್ಲಾ ಗುಡಿಗಳಲ್ಲಿ ಕಂಡುಬರುತ್ತದೆ. ಜೊತೆಗೆ ಶ್ರೀ ಲಿಂಗದ ಪೂಜೆಗೆ ಅನುಕೂಲವಾಗಲೆಂದು ಪಕ್ಕದಲ್ಲಿ ನೀರಿನ ಭಾವಿ ಇರುವುದು ಕೂಡ ಗಮನಾರ್ಹ ಸಂಗತಿ. ಆದರೂ ಎಲ್ಲಿ ಜನ, ದನ. ಕುರಿ ಇವುಗಳ ವಾಸವಿರುತ್ತದೋ ಅಲ್ಲಿ ನೀರಿನ ವ್ಯವಸ್ಥೆಗಾಗಿ ಹಳ್ಳ, ಹೊಂಡ, ಭಾವಿ ಇರಲೇಬೇಕು. ಹಾಗೆಯೇ ಇಲ್ಲಿಯೂ ಆಗಿರಬಹುದು.

## ಗರ್ಭಗುಡಿಯು ಚಿಕ್ಕದಾಗಿದ್ದು, ಗುಡಿಯ ಮುಂದೆ ಕಂಬಗಳ ಮುಖಮಂಟಪವಿರುವುದು

ಈ ಮೇಲಿನ ಸಂಗತಿಯು ಸಹಿತ ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಕಂಡುಬರುವ ಇನ್ನೊಂದು ಪ್ರಧಾನ ಅಂಶವಾಗಿದೆ. ಬಾಗಿಲುಗಳು ಭವ್ಯವಾಗಿ ಆಕರ್ಷಕವಾಗಿದ್ದರೂ, ಗರ್ಭಗುಡಿಗಳು ಮಾತ್ರ ಚಿಕ್ಕದಾಗಿ, ಸರಳವಾಗಿ ರಚನೆಗೊಂಡಿರುವುದು ಗಮನಿಸುವ ಅಂಶ. ಇಲ್ಲಿ, ದ್ರಾವಿಡ, ನಾಗರ, ವೇಸರ, ಗಾಂಧಾರ, ಶಿಲ್ಪಕಲೆಗಳನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು ಹುಡುಕಿದಾಗ ಈಗಾಗಲೇ ಗುರುತಿಸಿದ ಹಾಗೂ ಚಾಲುಕ್ಯಶೈಲಿ, ವೇಸರ ಶಿಲ್ಪಕಲೆಯನ್ನು ಹೋಲುತ್ತದೆ. ದೇವಸ್ಥಾನದ ಗರ್ಭಗುಡಿಯ ಮುಂಭಾಗದಲ್ಲಿ ಹದಿನೆಂಟು ಕಂಬಗಳ ಚೌಕಾಕಾರದಲ್ಲಿ ಮುಖಮಂಟಪವಿರುವುದು. ಇದರ ಮಧ್ಯಭಾಗದಲ್ಲಿ ನಂದಿ ಮೂರ್ತಿಯನ್ನು ಪ್ರತಿಷ್ಠಾನ ಮಾಡಲಾಗಿದೆ.

ಗೊಲ್ಲಾಳನು ಭಕ್ತರ ಕೋರಿಕೆಯ ಮೇರೆಗೆ ವಿವಿಧ ಊರುಗಳಿಗೆ ಹೋಗಿ ನೆಲೆನಿಂತಿರುವುದು.

ಈ ಎಲ್ಲಾ ದೇವಾಲಯಗಳ ಗ್ರಾಮಸ್ಥರು ಅಭಿಪ್ರಾಯ ಪಡುವಂತೆ ಗೋಲಗೇರಿಯ ಲಿಂಗಯ್ಯನು ಭಕ್ತರ ಆಶಯದಂತೆ ಆಯಾ ಊರುಗಳಲ್ಲಿ ನೆಲೆನಿಂತಿರುವುದು ಇನ್ನೊಂದು ಪ್ರಮುಖ ಅಂಶವಾಗಿದೆ.

ಒಂದೇ ಕತೆ ಎಲ್ಲ ದೇವಾಲಯಗಳ ಹಿಂದೆ ಪ್ರಚಲಿತವಿದೆ. ಅದೆಂದರೆ, ಪ್ರತಿವರ್ಷವೂ ಬೇರೆ ಬೇರೆ ಊರುಗಳಿಂದ ಗೋಲಗೇರಿಗೆ ಹೋಗುವ ಭಕ್ತರು ಕೆಲವೊಂದು ಸಲ ನೈಸರ್ಗಿಕ ಆಪತ್ತುಗಳಿಗೆ ಗುರಿಯಾಗುತ್ತಾರೆ. ಮುಖ್ಯವಾಗಿ ಮಳೆ ಬಂದು, ಹೊಳೆ ತುಂಬಿ ಹರಿಯುವುದರಿಂದ ಅವರಿಗೆ ಗೋಲಗೇರಿಗೆ ಹೋಗುವ ಪ್ರಯಾಣ ಕಷ್ಟಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಗೊಲ್ಲಾಳೇಶ್ವರನು ತನ್ನ ಭಕ್ತರಿಗಾಗುವ ಈ ಕಷ್ಟವನ್ನು ಗಮನಿಸಿ, ಭಕ್ತರ ಕಷ್ಟ ತಪ್ಪಿಸಲು ಅವರವರ ಊರುಗಳಿಗೇ ಹೋಗಿ ನೆಲೆ ನಿಲ್ಲಲು ಮನಸ್ಸು ಮಾಡುತ್ತಾನೆ. ಆ ಪ್ರಕಾರವಾಗಿ ಭಕ್ತರಿಗೆ ಕುರುಹು (ಸಂಕೇತ) ನೀಡುತ್ತಾನೆ. ಆ ಸಂಕೇತ ಅಲ್ಲಿ ಕಂಡು ಬಂದಲ್ಲಿ, ಅದು ತನ್ನ ಬರುವಿಕೆ, ಇರುವಿಕೆ ಎಂದು ಭಾವಿಸಬೇಕೆಂದು ಹೇಳುತ್ತಾನೆ. ಅದೇ ರೀತಿ ತಿಪ್ಪೆಯಲ್ಲಿ ಹೊಗೆ, ಕರಿಕಣಗಿಲ ಬಳ್ಳಿ, ಅಳುವಡೆಯಲ್ಲೆಲ್ಲಾ ತನ್ನ ಸಂಕೇತಗಳೆಂದು ಹೇಳುತ್ತಾನೆ. ಆ ಪ್ರಕಾರವಾಗಿ ಘಟಿಸಿದಲ್ಲೆಲ್ಲಾ ದೇವಾಲಯಗಳ ನಿರ್ಮಾಣವಾದವು. ಅಲ್ಲಿ 'ಲಿಂಗ'ವನ್ನು ಪ್ರತಿಷ್ಠಾಪಿಸಿದರು. "ಇಷ್ಟಲಿಂಗವು ಕುರುಹಿಕ್ಕೆಯಲ್ಲಿ ಕಳೆದಾಗ, ಅದನ್ನು ಹುಡುಕುವಾಗ ಶಿವತಾನೇ ಪ್ರತ್ಯಕ್ಷವಾಗುವದು - ಇಷ್ಟಲಿಂಗವು ಶಿವನ ಪ್ರತೀಕವೇ ಎಂಬ ತತ್ತ್ವ ಅಲ್ಲಿ ಅಡಗಿರುವಂತಿದೆ."[೨೫] ಹೀಗೆ ಲಕ್ಷಾಂತರ ಭಕ್ತಾದಿಗಳು ಗೊಲ್ಲಾಳೇಶ್ವರನನ್ನು 'ಲಿಂಗ'ದಲ್ಲಿ ಸ್ಮರಿಸುವುದು, ಆರಾಧಿಸುವುದು ಮಾಹೇಶ್ವರ ನಿಷ್ಠೆಯೆನಿಸುತ್ತದೆ.

## ಅರ್ಚಕರ ಕುಟುಂಬದ ಸದಸ್ಯರು ಮೃತರಾದರೆ, ಅವರ ಶವವನ್ನು ಗೊಲ್ಲಾಳೇಶ್ವರ ದೇವಸ್ಥಾನದ ದ್ವಾರದ ಬಳಿ ಹೂಳುವ (ಸಮಾಧಿ ಮಾಡುವ) ಸಂಪ್ರದಾಯ

ಇದೊಂದು ತೀರ ವಿಶಿಷ್ಟ ಸಂಪ್ರದಾಯ, ಗೋಲಗೇರಿ, ಬಂದಾಳ, ನಾಗರಳ್ಳಿ ಮುಂತಾದ ಗ್ರಾಮಗಳಲ್ಲಿ ಗೊಲ್ಲಾಳೇಶ್ವರನ ದೇವಾಲಯಗಳಿದ್ದು, ಈ ಮೇಲಿನ ಸಂಪ್ರದಾಯ ಎಲ್ಲ ಕಡೆಗೂ ನಡೆದುಕೊಂಡು ಬಂದಿದೆ.

ಇದಕ್ಕೆ ಸ್ಪಷ್ಟವಾದ ಕಾರಣಗಳು ತಿಳಿದುಬರುವುದಿಲ್ಲ. ಆದರೂ ಅರ್ಚಕರು ಹೇಳುವಂತೆ, ಶರೀರ ನಶ್ವರ, ಆತ್ಮ ಅಮರ ಹೀಗಾಗಿ ಜೀವ ಹೋದ ಮೇಲೆ ಆತ್ಮ ದೇವರ ಸುತ್ತ ಸುತ್ತುತ್ತದೆ ಎನ್ನುವ ನಂಬಿಕೆಯಿರಿಸಿದ್ದಾರೆ. ದೇವರು ಹಾಗೂ ಭಕ್ತರ ನಡುವಿನ ಗಾಢ ಸಂಬಂಧಕ್ಕೆ ಈ ಸಂಪ್ರದಾಯ ಸಾಕ್ಷಿ ಹೇಳಿದರೂ, ಈ ಸಂಪ್ರದಾಯದ ಹಿಂದೆ ಅದೇನೋ ಬೇರೆ ಕಾರಣಗಳು ಇರಬಹುದು ಎಂದೆನಿಸುತ್ತದೆ.

ದೇವಾಲಯದ ಅರ್ಚಕರ ಈ ರೀತಿಯ ಶವಸಂಸ್ಕಾರ ಪದ್ಧತಿ ಅನೇಕ ಸಂಗತಿಗಳನ್ನು ನೆನಪಿಸುವಂತೆ ಮಾಡುತ್ತದೆ. ಉದಾಹರಣೆಗೆ ಈಜಿಪ್ಟಿನ ಪಿರಮಿಡ್‌ಗಳಲ್ಲಿ ಶವಗಳನ್ನು ಹೂಳದೆ ಪೆಟ್ಟಿಗೆಗಳಲ್ಲಿ ಕಾಯ್ದಿರಿಸಲಾಗುತ್ತಿರುವ ಒಂದು ವಿಶೇಷ ಪದ್ಧತಿ. ಆದರೆ ಭಾರತದಲ್ಲಿ ಮಾತ್ರ ಹೂಳುವ ಹಾಗೂ ದಹನ ಮಾಡುವ ಎರಡು ಪ್ರಮುಖ ಪದ್ಧತಿಗಳಿವೆ. ಆದರೆ ಕೊಮರು ಶವಸಂಸ್ಕಾರ ಮಾಡುವ ಪದ್ಧತಿಯನ್ನು ಇಲ್ಲಿ ಉಲ್ಲೇಖಿಸಬಹುದು. " ಇವರು ಅಲೆಮಾರಿಗಳಾಗಿದ್ದಾಗ ಮೃತ ವ್ಯಕ್ತಿಯ ಹೆಣವನ್ನು ಗುಡಿಸಲಿನಲ್ಲಿಯೇ ಮುಚ್ಚಿಬರುತ್ತಿದ್ದ ಸಂಪ್ರದಾಯ ಆದಿಮಕಾಲದ ಶವ ಸಂಸ್ಕಾರದ ಪಳಿಯುಳಿಕೆಯಾಗಿದೆ. ಶವವನ್ನು ಮರಕ್ಕೆ ಒರಗಿಸಿ ಇತರರಿಗೆ ಕಾಣದಿರುವಂತೆ ಕಲ್ಲುಚಪ್ಪಡಿ ಮುಚ್ಚುವ ಮತ್ತೊಂದು ವಿಧದ ಶವ ಸಂಸ್ಕಾರ ಪದ್ಧತಿಯೂ ಪ್ರಚಲಿತದಲ್ಲಿತ್ತು. ಇದಕ್ಕೆ ಕಲ್ಲು ಮಲ್ಲಯ್ಯನನ್ನು ಮಾಡುವುದು ಎನ್ನುತ್ತಾರೆ."[19] ಈ ಸಂಪ್ರದಾಯದಂತೆ ಗೋಲಗೇರಿಯ ಅರ್ಚಕರ ಕುಟುಂಬದಲ್ಲಿ ಕಲ್ಲು ಚಪ್ಪಡಿ ಎಳೆದು ಸಂಸ್ಕಾರ ಮಾಡುವ ಪದ್ಧತಿ ಇದೆ.

ಈ ಸಂಸ್ಕಾರ ಪದ್ಧತಿಯು ದೇವರ ಮನೆಯವರು ಮುಂದುವರಿಸಿಕೊಂಡು ಬರಲಿಕ್ಕೆ ದೇವಾಲಯದ ಒಡೆತನದಲ್ಲಿ ಅನ್ಯರು ಮೂಗು ತೂರಿಸಬಾರದು ಎಂಬ ಉದ್ದೇಶವಿರುವಂತೆ ಕಂಡುಬರುತ್ತಿದೆ. ನಮ್ಮಲ್ಲಿ ರುದ್ರಭೂಮಿಯನ್ನು ಆಯಾ ಜನಾಂಗಕ್ಕೆ ಇದೇ ಪ್ರದೇಶವೆಂದು ನಿರ್ದಿಷ್ಟವಾಗಿ ಹದ್ದಿ ಹಾಕಿರುತ್ತಾರೆ. ಅಲ್ಲಿ ಅವರವರೇ ಶವಸಂಸ್ಕಾರ ಮಾಡಬೇಕು. ಇದು ಇಂದಿಗೂ ಗ್ರಾಮ, ನಗರಗಳಲ್ಲಿ ಕಂಡುಬರುವ ವಿಷಯವೇ ಆಗಿದೆ. ಸ್ಮಶಾನ ಭೂಮಿಯಲ್ಲಿ ಅನ್ಯ ವರ್ಗದವರಾಗಲೀ, ಇನ್ನಾರದೋ ಶವ ಸಂಸ್ಕಾರ ಮಾಡುವ ಹಾಗಿಲ್ಲ. ಒಂದು ರೀತಿಯಲ್ಲಿ ಆಯಾ ಜನಾಂಗದ ಆಯಾ ಪ್ರದೇಶ ಅವರವರ ಅಧೀನಕ್ಕೆ ಒಳಪಟ್ಟಿರುತ್ತದೆ. ಇದರಿಂದ ಇದು ನಮ್ಮದು ಎಂಬುದಕ್ಕೆ ಅಧಿಕೃತ ಮುದ್ರೆಯನ್ನು ಒತ್ತಿದ ಹಾಗೆ ಆಗುತ್ತದೆ. ಈ ಕಾರಣದಿಂದಲೇ ಇಂತಹ ಸಂಪ್ರದಾಯ ಮುಂದುವರೆಸಿಕೊಂಡು ಬಂದಿರುವಂತೆ ಕಾಣುತ್ತದೆ.

ಇನ್ನೊಂದು ಅರ್ಥದಲ್ಲಿ ಮೇಲುನೋಟಕ್ಕೆ, ದೇವರ ಸನ್ನಿಧಾನದಲ್ಲಿ ತಮ್ಮ ದೇಹದ ಅಂತ್ಯಸಂಸ್ಕಾರವಾದರೆ ನಮಗೆ ಮುಕ್ತಿ ಸಾಧ್ಯ ಎಂದು ಅರ್ಚಕರ ಕುಟುಂಬಗಳು ಭಾವಿಸಿರುವ ಸಾಧ್ಯತೆಯಿದೆ. ಈ ಸಂಪ್ರದಾಯ ಶೈವ ಮಠಗಳಲ್ಲಿ ಜಾರಿಯಲ್ಲಿರುವುದನ್ನು ಗಮನಿಸಬಹುದು. ಶೈವ ಮಠಗಳಲ್ಲಿ ಗುರುಪರಂಪರೆಯಲ್ಲಿ ಇರುವವರು ನಿಧನರಾದರೆ ಅವರ ಸಮಾಧಿಯನ್ನು ಮಠದಲ್ಲೇ ಮಾಡಿ ಕರ್ತೃ ಗದ್ದುಗೆ ನಿರ್ಮಿಸುತ್ತಾರೆ. ನಂತರ ಆ ಗದ್ದುಗೆಗೆ ಪೂಜೆ ಸಲ್ಲಿಸಲಾಗುತ್ತದೆ. ಈ ಸಂಪ್ರದಾಯವನ್ನು ನಾವು ಶೈವ ಪರಂಪರೆಗೆ

ಆಚಾರ್ಯ ಸ್ಥಾನದಲ್ಲಿರುವ ಬಾಳೆಹೊನ್ನೂರಿನ ರಂಭಾಪುರಿ ಮಠದಲ್ಲಿ ನೋಡಬಹುದು. ಆದರೆ ಇವೆಲ್ಲವುಗಳು ಗುರುಗಳ (ದೇವರ) ಸಮಾಧಿಗಳೆಂದು ಹೇಳುವರು.

ಗೊಲ್ಲಾಳೇಶನ ಭಕ್ತರಾದ ಅರ್ಚಕರ ಕುಟುಂಬದ ಸದಸ್ಯರು ಗುರುಗಳಾಗಲು ಮಠ ಸಂಸ್ಕೃತಿಯನ್ನು ಈ ರೀತಿಯಾಗಿ ಬೆಳೆಸಿಕೊಂಡು ಬಂದಿರಲೂಬಹುದೆಂದು ಊಹಿಸಲು ಸಾಧ್ಯವಿದೆ.

ಬಹುತೇಕ ವೀರಶೈವ ಮಠ, ದೇವಸ್ಥಾನಗಳಲ್ಲಿ ಮೊದಮೊದಲು ಜಂಗಮಜಾತಿಯ ಜನರು ಅರ್ಚಕರಾಗಿರುತ್ತಿದ್ದರು. ವೀರಶೈವ ಮತಾವಲಂಬಿಗಳು ಈ ಜಂಗಮರನ್ನು ಗುರುಗಳು ಎಂದು ಪರಿಭಾವಿಸಿ ನಮಸ್ಕರಿಸುವರು. ಆದರೆ ಗೊಲ್ಲಾಳೇಶ್ವರನ ದೇವಾಲಯದ ವಿಷಯದಲ್ಲಿ ಜಂಗಮರು ಅರ್ಚಕರಾಗದೇ (ಒಂದೆರಡು ಹೊರತುಪಡಿಸಿ) ಬೇರೆ ಜಾತಿಯ ಜನರು ಅರ್ಚಕರಾಗಿರುವರು. ಬಹುಶಃ ಇದಕ್ಕೆ ಆರ್ಥಿಕ ಹಾಗೂ ರಾಜಕೀಯ ಕಾರಣಗಳನ್ನು ಊಹಿಸಬಹುದು. (ಗೋಲಗೇರಿ ದೇವಸ್ಥಾನದ ಪೂಜೆ ಹಾಗೂ ಒಡೆತನದ ವಿಷಯದಲ್ಲಿ ಸರ್ವೋಚ್ಚ ನ್ಯಾಯಾಲಯದವರೆಗೂ ದಾವೆ ದಾಖಲಾಗಿ ನ್ಯಾಯಾಲಯದ ತೀರ್ಪು ಬಂದಿದೆ. ಜಂಗಮರನ್ನು ದೇವಾಲಯದಿಂದ ಹೊರಹಾಕಲಾಗಿದೆ) ಕಾರಣ ದೇವಾಲಯದ ಭಕ್ತರು ನೀಡುವ ಕಾಣಿಕೆ ಹಾಗೂ ದೇವಾಲಯದ ಭೂಮಿಯನ್ನು ದೇವರ ಮನೆಯವರೇ ಉಪಭೋಗಿಸುತ್ತಾ ಇರುವರು. ಇವರು ಸಾಮಾಜಿಕ, ರಾಜಕೀಯ, ವಿಷಯಗಳಲ್ಲಿ ಹೆಚ್ಚು ಶಕ್ತರಾಗಿ ತೋರುತ್ತಾರೆ. ಇಂತಹ ವಿಷಯಗಳು ನ್ಯಾಯಾಲಯದಲ್ಲಿ, ಸಮಾಜದಲ್ಲಿ ಭಕ್ತರಲ್ಲಿ (ಸಮಾಧಿ ಮಾಡುವ ಸಂಪ್ರದಾಯ) ಹೆಚ್ಚು ಪರಿಣಾಮ ಬೀರಿದೆ. ಇದರಲ್ಲಿ ಅರ್ಚಕರು ಸಫಲರಾಗಿದ್ದಾರೆ ಎಂದೆನ್ನಬಹುದು.

ಇದು ಆ ಸಮಾಜದ ಜನರಿಗೂ ಉಚಿತವೆಂದೆನಿಸಿರಬೇಕು. ಇದು ಹಾಗೆ ಮುಂದುವರೆದುಕೊಂಡು ಬಂದು ಮುಂದೆ ಒಂದು ಸಂಪ್ರದಾಯ ಆಗಿರಬಹುದು. ಈಗ್ಗೆ ಹಲವು ಕಡೆ, ನಾಗರಳ್ಳಿ, ಬಂದಾಳದಲ್ಲಿ ಸ್ಥಗಿತಗೊಂಡಿದೆ. ಒಟ್ಟಾರೆ ದೇವಾಲಯದ ಒಡೆತನಕ್ಕಾಗಿ ಇಂತಹ ಜಾಣತನ ಸಂಪ್ರದಾಯ ಬೆಳೆದುಬಂದಿರುವ ಸಾಧ್ಯತೆಗಳಿವೆ.

### ಗೊಲ್ಲಾಳೇಶನ ಲಿಂಗದ ಸಮೀಪ ಒಬ್ಬ ಭಕ್ತನ ಸಮಾಧಿ ಹಾಗೂ ದೇವಸ್ಥಾನದ ಹಿಂದುಗಡೆ ಒಬ್ಬ ಭಕ್ತಳ ಸಮಾಧಿ ಇದೆ.

ಬಹುತೇಕ ಗೊಲ್ಲಾಳೇಶನ ಗುಡಿ ಪಕ್ಕದಲ್ಲಿಯೇ ಒಬ್ಬ ಭಕ್ತನ ಸಮಾಧಿ ಇರುವುದು. ಪ್ರಮುಖ ಅಂಶವಾಗಿ ತೋರುತ್ತದೆ. ಅವರೆಲ್ಲಾ ದೇವರಮನೆ ಕುಟುಂಬದ ಪೂರ್ವಜರೆಂದು ನಂಬಲಾಗಿದೆ. ನಾಗರಾಜ, ಬಂಟನೂರ ಅಪ್ಪಣ್ಣಪ್ಪ, ಗೋಲಗೇರಿಯ ಮರಿಯಪ್ಪ ಸಾಹುಕಾರ, ಇವರೆಲ್ಲಾ ಗೊಲ್ಲಾಳನ ಭಕ್ತರು. ನಾಗರಾಜ ಅಪ್ಪಣಪ್ಪ ಮುಂತಾದವರ ಸಮಾಧಿಗಳು ಗರ್ಭಗುಡಿಯ ಪಕ್ಕದಲ್ಲೇ ಇರುವುದು ಕಂಡುಬರುತ್ತದೆ. ಇವರೆಲ್ಲಾ ದೇವರಮನಿ ಕುಟುಂಬದ ಪೂರ್ವಜರೇ ಬಹುಶಃ ಈ ವಿಷಯ ಚರ್ಚಿತವಾಗಿ ಇವರ ವಂಶಸ್ಥರ ಸಮಾಧಿಗಳು ಮುಖ್ಯದ್ವಾರದ ಬಳಿ ಸ್ಥಳಾಂತರವಾಗಿರಬಹುದು. ಸಮಾಧಿ ಗದ್ದುಗೆಗೆ ನಾಗರಕಟ್ಟೆ ಎಂದು ಕರೆಯುತ್ತಾರೆ.

ಇನ್ನು ಲಕ್ಷ್ಮೀ, ಲಕ್ಕಮ್ಮ, ಅವ್ವಮ್ಮ ಮುಂತಾಗಿ ಕರೆಯಿಸಿಕೊಳ್ಳುವ ಹೆಣ್ಣುಮಗಳ ಸಮಾಧಿಗಳು, ಇಂದು ದೇವಾಲಯಗಳಾಗಿವೆ. ಇವು ಗುಡಿಯ ಹಿಂದುಗಡೆ ಇರುವುದು ಕಂಡುಬರುತ್ತದೆ. ಇದು ಇನ್ನೊಂದು ಪ್ರಮುಖ ಅಂಶವಾಗಿದೆ. ಸ್ವಲ್ಪ ವಿಚಾರ ಮಾಡಿ ನೋಡಿದರೆ ಗೊಲ್ಲಾಳೇಶನಿಗೆ ಭಕ್ತರಿಗಿಂತ ಭಕ್ತೆಯರ ಸಂಖ್ಯೆ ಜಾಸ್ತಿ. ಕರ್ನಾಟಕದ ಅನೇಕ ದೇವಾಲಯಗಳನ್ನು ಅವಲೋಕಿಸಲಾಗಿ, ಗೊಲ್ಲಾಳೇಶನಿಗೆ ಸಂಬಂಧಿಸಿದಂತೆ ಧವಳಾರದ ಗೌರಮ್ಮ, ಬಂದಾಳದ ಲಕ್ಕಮ್ಮ, ನಾಗರಹಳ್ಳಿಯ ಲಕ್ಷ್ಮೀ, ಸಿಂದಗಿಯ ನೀಲಗಂಗಾ, ಉಕ್ಕಲಿಯ ಹೆಣ್ಣುಮಕ್ಕಳಾದ ಅವ್ವಮ್ಮ-ಲಕ್ಕಮ್ಮರ ಸಮಾಧಿಗಳು ಗೋಲಗೇರಿಯ ದೇವಸ್ಥಾನದ ಹಿಂದುಗಡೆ ಇರುವದನ್ನು ಗಮನಿಸಿ ಇದು ಕೂಡ ಅಧ್ಯಯನದ ಪ್ರಮುಖ ಅಂಶವಾಗಿದೆ. ಇವರ ಕುರಿತಾದ ಪವಾಡ, ಐತಿಹ್ಯಗಳನ್ನು ಗುರುತಿಸಲಾಗಿದೆ.

**ಗೊಲ್ಲಾಳೇಶನ ದೇವಾಲಯಗಳ ಅರ್ಚಕರು ಆಯಾ ಗ್ರಾಮಗಳಲ್ಲಿ ಸಾಕಷ್ಟು ಸ್ಥಿತಿವಂತರಾಗಿದ್ದು ಪ್ರಭಾವಿ ವ್ಯಕ್ತಿಗಳಾಗಿರುವರು.**

ಗೊಲ್ಲಾಳೇಶ್ವರನ ದೇವಾಲಯಗಳನ್ನು ಆರ್ಥಿಕತೆಯ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡಲಾಗಿ ಚರಿತ್ರೆಯಲ್ಲಿ ದೇವಾಲಯಗಳು ಸಂಪತ್ತಿನ ಕೇಂದ್ರಗಳಂತೆ ಕಂಡುಬರುತ್ತವೆ. ಇತಿಹಾಸವನ್ನು ಸಿಂಹಾವಲೋಕನ ಮಾಡಲಾಗಿ ಭಾರತದಲ್ಲಿ ದೇವಾಲಯಗಳ ಮೇಲೆ ಹೆಚ್ಚು ದಾಳಿಗಳಾಗಿವೆ. ಆದರೆ ಇದಕ್ಕೆ ಧಾರ್ಮಿಕ ಕಾರಣಗಳನ್ನೇ ಹೆಚ್ಚಿಗೆ ನೀಡಿದ್ದು ಕಂಡುಬರುವುದು. ಮುಖ್ಯವಾಗಿ ಇವು ಪ್ರಾಚೀನ ಕಾಲದ ಬ್ಯಾಂಕ್ ಎಂದೇ ತಿಳಿದು ವಿಶ್ಲೇಷಣೆ ಮಾಡಿದರೆ, ದೇವಾಲಯದ ಚರಿತ್ರೆಯುದ್ದಕ್ಕೂ ಹೆಚ್ಚು ಆರ್ಥಿಕ ಹಾಗೂ ಒಡೆತನಕ್ಕೆ ಸಂಬಂಧಿಸಿದ ಸಂಗತಿಗಳು ಬೆಸೆದುಕೊಂಡಿರುವುದನ್ನು ಗಮನಿಸಬಹುದು. ಇತ್ತೀಚೆಗೆ ಕೇರಳ ರಾಜ್ಯದ ಪದ್ಮನಾಭ ದೇವಸ್ಥಾನದಲ್ಲಿ ಒಂದು ಲಕ್ಷ ಕೋಟಿಗೂ ಅಧಿಕ ಸಂಪತ್ತು ದೊರೆತದ್ದು ಉಲ್ಲೇಖಾರ್ಹವಾಗಿದೆ.

ಇವತ್ತು ತಿರುಪತಿ ತಿಮ್ಮಪ್ಪ ಜಗತ್ತಿನಲ್ಲೇ ಅತ್ಯಂತ ಶ್ರೀಮಂತ ದೇವರು ಎಂದೆನಿಸಿದ್ದಾನೆ. ನಿರಾಕಾರಿಯಾದ ಆಸೆಗಳೇ ಇಲ್ಲದ ಭಕ್ತಿಪ್ರಿಯನಾದ ದೇವರಿಗೆ ಬಂಗಾರ, ವಜ್ರ. ವೈಢೂರ್ಯಗಳ ಅವಶ್ಯಕತೆ ಇದೆಯೇ ? ಇವತ್ತಿನ ಅನೇಕ ಧಾರ್ಮಿಕ ಕೇಂದ್ರಗಳು, ದೇವಸ್ಥಾನಗಳು ಸರಕಾರಕ್ಕೆ ಆದಾಯ ತರುತ್ತಿವೆ. ಇಂದು ಎಷ್ಟೋ ದೇವಾಲಯಗಳು ಸರಕಾರದ ಆಡಳಿತದಿಂದ ಹೊರಗಿವೆ. ಆದ್ದರಿಂದ ಬರುವ ಆದಾಯವನ್ನು ನಾವೇ ಆ ದೇವನ ನಿಜವಾದ ಭಕ್ತರು ಆತನ ಹೊಣೆಗಾರಿಕೆ ನಮಗೇ ಯೋಗ್ಯವೆಂದು ಸಾಮಾನ್ಯ ಭಕ್ತರಲ್ಲಿ ಭಾವ ಮೂಡಿಸಿ ಬರುವ ಆದಾಯದಿಂದ ಅರ್ಚಕರು ಅಂದು-ಇಂದಿಗೂ ಸ್ಥಿತಿವಂತರಾಗಿದ್ದಾರೆನ್ನಬಹುದು. ಹಾಗೂ ಜಾತಿಯಿಂದ ವೀರಶೈವ ಪಂಥಕ್ಕೆ ಸೇರಿದ, ಬಣಜಿಗ, ಪಂಚಮಸಾಲಿ, ಗಾಣಿಗೇರ ಪ್ರಬಲ ವರ್ಗಕ್ಕೆ ಸೇರಿದವರಾಗಿದ್ದಾರೆ. ಈಗ್ಗೆಯೂ ಹೆಚ್ಚು -ಕಡಿಮೆ ಗ್ರಾಮದಲ್ಲಿ ಪ್ರಮುಖರಾಗಿ ಬದುಕುತ್ತಿದ್ದಾರೆಂದರೆ ಅತಿಶಯೋಕ್ತಿಯೇನಲ್ಲ.

**ದೇವಸ್ಥಾನದ ಪೂಜಾ ವಿಧಿವಿಧಾನಗಳನ್ನು ಪೂರೈಸಲು ಜಮೀನುಗಳಿದ್ದು ಅವುಗಳನ್ನು ಎಣ್ಣೆಹೊಲ, ಹೂವಿನ ಹೊಲ, ಪತ್ರಿ ಹೊಲ, ಕಂಬಿಹೊಲ ಎಂದು ಕರೆಯುವ ರೂಢಿ ಇರುವುದು.**

ನಮ್ಮಲ್ಲಿ ಹೆಚ್ಚಾಗಿ ದೇವಸ್ಥಾನ ಮಠಮಾನ್ಯಗಳಿಗೆ ಜಮೀನು (ಆಸ್ತಿ)ಗಳಿದ್ದಂತೆ, ಗೊಲ್ಲಾಳನ ದೇವಾಲಯಗಳಿಗೂ ಸಂಪ್ರದಾಯಗಳನ್ನು, ಪೂಜಾ ಕಾರ್ಯಗಳನ್ನು ಮುನ್ನಡೆಸಿಕೊಂಡು ಹೋಗಲು ಸಾಕಷ್ಟು ಜಮೀನುಗಳಿರುವುದು ಕಂಡುಬರುತ್ತದೆ. ಅಂದು ಕೃಷಿಯೇ ಮೂಲ ವೃತ್ತಿಯಾಗಿರುವುದರಿಂದ, ದೇವಾಲಯದ ಸಮಸ್ತ ವ್ಯವಹಾರ ನಿರ್ವಹಣೆಗೆ ಆಸ್ತಿಯ ಅಗತ್ಯ ಇತ್ತೆಂದು ಕಂಡುಬರುತ್ತದೆ. ಇದರಿಂದ ಹತ್ತಾರು ಕುಟುಂಬಗಳು (ಆಚರಣೆಗಳನ್ನು ನಡೆಸಿಕೊಡುವವರು., ಜಂಗಮ, ಹೂಗಾರ, ಇತ್ಯಾದಿ) ದೇವಾಲಯಕ್ಕೆ ಸಂಬಂಧಿಸಿದ ಆಗುಹೋಗುಗಳನ್ನು ಮಾಡುತ್ತಿರುವರು. ಆದ್ದರಿಂದಲೇ ಆಯಾ ಕೆಲಸದ ವ್ಯಾಪ್ತಿಯನ್ನು ಸಂಕೇತಿಸುವ ಹೆಸರುಗಳನ್ನು ನೀಡಲಾಗಿದೆ. ಇಂದಿಗೂ ಹೊಲಗಳಿಗೆ ಮೇಲಿನಂತೆ ಕರೆಯುವ ರೂಢಿ ಇರುವುದು.

**ಈ ಎಲ್ಲಾ ದೇವಾಲಯಗಳ ನಡುವೆ ಅಂತರ್ ಸಂಬಂಧ ಇರುವುದು.**

ಉತ್ತರ ಕರ್ನಾಟಕದಲ್ಲೂ ಅನೇಕ ಕಡೆ ಸಿಗುವ ಗೊಲ್ಲಾಳೇಶ್ವರನ ಗುಡಿಗಳಲ್ಲಿ ಒಂದು ಅಂತರ್ ಸಂಬಂಧವಿದೆ. ಈ ಎಲ್ಲ ದೇವಾಲಯಗಳಲ್ಲಿರುವ ದೇವರು ಗೋಲಗೇರಿಯ ಗೊಲ್ಲಾಳನೇ ಆಗಿದ್ದಾನೆ. ಊರುಗಳು ಬೇರೆ ಬೇರೆಯಾದರೂ ಅಲ್ಲಿರುವ ದೇವರು ಗೊಲ್ಲಾಳನೇ ಇರುವನು.

ಇಲ್ಲಿ ಎರಡು ಅಂಶಗಳನ್ನು ಊಹಿಸಲು ಸಾಧ್ಯವಿದೆ. ಈ ರೀತಿಯ ಒಂದೇ ತೆರನಾದ, ಒಂದೇ ಸಂಪ್ರದಾಯದ ದೇವಾಲಯದ ನಿರ್ಮಾಣದ ಹಿಂದೆ ವ್ಯವಸ್ಥಿತವಾದ ಒಂದು ಧಾರ್ಮಿಕ ಮನಸ್ಸಿನ ಹೊಂದಾಣಿಕೆ ಅಥವಾ ಸಂಪ್ರದಾಯ ಅಂದಿನ ಕಾಲಕ್ಕೆ ಜನಪ್ರಿಯವಾಗಿರಬಹುದು. ಪವಾಡ ಪುರುಷರು ಬಂದಾಗಲೆಲ್ಲಾ ಭಕ್ತರು ಸಮೂಹ ಸನ್ನಿಯಂತೆ ಅವರ ಆರಾಧನೆಗೆ ಮುಂದಾಗುವರು. ಇಲ್ಲಿಯೂ ಹಾಗೇ ಆಗಿರಬಹುದು.

**ಈ ಎಲ್ಲ ದೇವಾಲಯಗಳಲ್ಲಿ ಇಂದಿಗೂ ಪೂಜೆ ಮುಂತಾದ ಧಾರ್ಮಿಕ ಕ್ರಿಯೆಗಳು ನಡೆಯುತ್ತವೆ.**

ಗೊಲ್ಲಾಳೇಶನ ಈ ಎಲ್ಲ ಗುಡಿಗಳಲ್ಲಿ ಇಂದಿಗೂ ಪೂಜೆ ನಡೆಯುತ್ತಿದ್ದು, ಇಂದೂ ಸಹ ಇವು ಭಕ್ತರಿಗೆ ಆರಾಧನಾಕೇಂದ್ರಗಳಾಗಿ ಉಳಿದು ಬೆಳೆದು ಬರುತ್ತಿವೆ. ಇದರ ಅರ್ಥವೇನೆಂದರೆ ಈ ದೇವಾಲಯಗಳು ಯಾರ ಆಕ್ರಮಣಕ್ಕೂ ಒಳಗಾಗದೆ ತಮ್ಮ ಮೂಲ ಧಾರ್ಮಿಕ ಸ್ವರೂಪವನ್ನು ಕಾಪಾಡಿಕೊಂಡು ಬಂದ ಪವಿತ್ರ ತಾಣಗಳಾಗಿವೆ. ಭಾರತದ ಸಂಸ್ಕೃತಿಯನ್ನು ಗಮನಿಸಿ ಹೇಳುವುದಾದರೆ ಬಹುತೇಕ ದೇವಾಲಯಗಳಲ್ಲಿ ಪೂಜೆ ನಡೆಯಬೇಕಾದರೆ ಅದು ಪವಿತ್ರವಾಗಿರಬೇಕು. ಕರ್ನಾಟಕದ ಅನೇಕ ದೇವಾಲಯಗಳ ಪವಿತ್ರತೆ ಅಚ್ಚಳಿದಿದ್ದುದಾಗಿರಬೇಕು. ಕರ್ನಾಟಕದ ಅನೇಕ ದೇವಾಲಯಗಳ ಪಾವಿತ್ರ್ಯತೆ ನಾಶವಾಗಿ ಅಲ್ಲಿ ಪೂಜೆ ನಡೆಯದಿರುವುದನ್ನು ಇಲ್ಲಿ ಗಮನಿಸಬಹುದು.

ಗೊಲ್ಲಾಳೇಶ್ವರನ ಗುಡಿಗಳು ತೋರಿಕೆಗೆ ಅತ್ಯಂತ ಸರಳವಾದ, ವಾಸ್ತು ಶಿಲ್ಪದಲ್ಲಿವೆ. ಯಾವ ವೈಭವವೂ ಇಲ್ಲದ ರಚನೆಗಳಾಗಿವೆ. ದೇವಾಲಯಗಳ ಮೇಲೆ ದಾಳಿ ಮಾಡಬೇಕಾದರೆ ಅವು ವೈಭವೋಪೇತವಾಗಿದ್ದು, ಅಲ್ಲಿ ಸಂಪತ್ತಿದೆ ಎಂಬ ಭಾವನೆಗಳೇ ಕಾರಣವಾಗುತ್ತವೆ. ಈ ಹಿನ್ನೆಲೆಯಲ್ಲಿ ಈ ಸರಳ ಗುಡಿಗಳ ರಚನೆ ನಡೆದು ಬಂದಿದೆಯೇನೋ ಎಂದೆನ್ನಿಸುತ್ತದೆ. ಆದರೆ ಜನಪದರ ಪ್ರಕಾರ ಆಯಾ ಗ್ರಾಮದ ಸಾಮಾನ್ಯ ಜನರು ಅಭಿಪ್ರಾಯ ಪಡುವಂತೆ ಗುಡಿಯ ಸುತ್ತಲೆಲ್ಲೋ ನಿಧಿ ಇದೆ ಎಂಬ ಸಂಗತಿ ಕೇಳಿಬರುತ್ತದೆ. ಈ ನಿಧಿಯನ್ನು ಪಡೆಯಲು ಹಲವು ವ್ಯರ್ಥ ಪ್ರಯತ್ನಗಳು ನಡೆದದ್ದುಂಟು. ಉದಾ : ಬಂದಾಳದಲ್ಲಿರುವ ಗೊಲ್ಲಾಳೇಶ್ವರ ದೇವಸ್ಥಾನದ ಹಿಂದುಗಡೆ ಲಕ್ಕಮ್ಮನ ದೇವಸ್ಥಾನವಿದೆ. ಅಲ್ಲಿ ನಿಧಿ ಇರಬಹುದೆಂದು ಮೂರು - ನಾಲ್ಕು ಬಾರಿ ಭೂಮಿಯನ್ನು ಅಗೆದಿದ್ದಾರೆ ಎಂಬ ವಿಷಯವನ್ನು ಗ್ರಾಮಸ್ಥರು ಹೇಳುವರು. ಈ ಮಾತು ನಿಜವೂ ಎಂದೆನ್ನಿಸುತ್ತದೆ. ಭಾರತ ದೇಶದಲ್ಲಿ ಬಂಗಾರ, ವಜ್ರದ ಹರಳುಗಳು, ದೇವಾಲಯದಲ್ಲಿ ಅಡಗಿಸಿ ಇಡುತ್ತಿದ್ದರು. ದೇವಾಲಯಗಳು ಧಾರ್ಮಿಕ ಹಾಗೂ ಆರ್ಥಿಕ ಸಂಪತ್ತಿನ ಆಗರಗಳಾಗಿವೆ. ಉದಾಹರಣೆಗೆ ಕೇರಳದ ಪದ್ಮನಾಭ ದೇವಸ್ಥಾನವೇ ಸಾಕ್ಷಿಯಾಗಿದೆ.

ಗೊಲ್ಲಾಳನು ಕುರುಬ ಜನಾಂಗದವನಾಗಿ 'ಲಿಂಗ'ಕ್ಕಾಗಿ ಬಿಂದಿಗೆ ಹೊನ್ನನ್ನು ನಂದಯ್ಯನಿಗೆ ನೀಡಿದ ಎನ್ನುವ ಪುರಾಣ ಕಥೆಯಾಗಲಿ. ಜನಪದರ ಹಾಡುಗಳಲ್ಲಿ, ಅವನೊಬ್ಬ ಸಾಕಷ್ಟು ಸ್ಥಿತಿವಂತ ಆಗಿದ್ದ ಎಂದು ಪ್ರಸ್ತಾಪವಾಗುವ ಅಂಶ ಇಲ್ಲಿ ಗಮನಾರ್ಹವಾದುದು. ಏಕೆಂದರೆ ಒಬ್ಬ ಶ್ರೀಮಂತನ ಹಿಂದೆ, ಒಬ್ಬ ಪ್ರವಾದಿಯ ಹಿಂದೆ, ಪವಾಡ ಪುರುಷನ ಹಿಂದೆ ಈ ತೆರನಾದ ಗಟ್ಟಿಯಾದ ಸಂಪ್ರದಾಯ ಬೆಳೆದು ಬರಲು ಸಾಧ್ಯವಿದೆ.

ದೇವಾಲಯಗಳು ಅತ್ಯಂತ ಸುರಕ್ಷಿತ ತಾಣಗಳಾಗಿದ್ದು, ಸಂಪತ್ತು ಸಂಗ್ರಹಿಸುವ ಅದನ್ನು ಜೋಪಾನವಾಗಿಡುವ ಒಂದು ತಂತ್ರ ಅನುಸರಿಸಿರಬಹುದು. ಈ ಎಲ್ಲಾ ಅಂಶಗಳು ಹೆಚ್ಚೆಚ್ಚು ಅಧ್ಯಯನಕ್ಕೊಳಪಡಿಸಬಹುದಾದ ಸಂಗತಿಗಳಾಗಿವೆ. ಆರಾಧನಾ ಕೇಂದ್ರಗಳಾಗಿ ಸಮಸ್ತ ಭಕ್ತರ ಭಕ್ತಿಗೆ ಭಾಜನವಾಗಿ ಯಾವತ್ತೂ ಚಟುವಟಿಕೆಯ ಸ್ಥಳಗಳಾಗಿ ಅವು ಖಾಸಗಿ ಆಸ್ತಿಗಳಾದರೂ ಸಹ ಸಾರ್ವಜನಿಕರ ಕಣ್ಗಾವಲಿಗೆ ಒಳಗಾಗಿರುತ್ತವೆ. ಮೇಲಾಗಿ ದೇವಸ್ಥಾನದ ಒಂದು ಕಲ್ಲು ಮುಟ್ಟುವುದು (ಕಳ್ಳತನ ಮಾಡುವುದು) ಕೂಡ ಒಂದು ಪಾಪ ಎಂಬ ಪ್ರಜ್ಞೆ ಸಾಮಾನ್ಯ ಜನರಲ್ಲಿರುವುದರಿಂದ, ಈ ದೇವಾಲಯಗಳು ಅಭೇದ್ಯ ರಕ್ಷಣಾ ಕೋಟೆಗಳಂತೆ ಇರುವವು.

### ಉಚ್ಚಾಯಿ ಎಳೆಯುವ ಪದ್ಧತಿ ರೂಢಿಯಲ್ಲಿರುವುದು

ಉಚ್ಚಾಯಿ ಎಂದರೆ ಸಣ್ಣ ತೇರು. ಇದನ್ನು ಉಚ್ಚಾಯಿ, ಹುಚ್ಚಾಯ ತೇರು ಎಂದು ಕರೆಯುತ್ತಾರೆ. ಹೀಗಾಗಿ ಉಚ್ಚಾಯಿ ಎಳೆಯುವ ಪದ್ಧತಿಯನ್ನು ಕೆಲವು ಕಡೆ ಹುಚ್ಚಾಯ ಪದ್ಧತಿಯೆಂದೂ ಕರೆಯುತ್ತಾರೆ. ಜಾತ್ರೆಯ ಪ್ರಾರಂಭದ ಸೂಚನೆಯಾಗಿ ಊರಿನ ಜನರನ್ನು ಜಾತ್ರೆಯೆಡೆಗೆ ಗಮನ ಸೆಳೆಯಲು ಈ ಪದ್ಧತಿಯನ್ನು ರೂಢಿಯಲ್ಲಿ ತಂದಿರಬಹುದು. "ಹುಚ್ಚಾಯ ಇಲ್ಲದ ಜಾತ್ರೆಗಳಲ್ಲಿ ಧ್ವಜಾರೋಹಣ ಮಾಡುವರು. ಉತ್ಸವ ಮೂರ್ತಿಯ ಮೆರವಣಿಗೆ ಮಾಡಿ ಜಾತ್ರೆ ಪ್ರಾರಂಭದ ಸೂಚನೆ ನೀಡುತ್ತಾರೆ. ನಂತರ ರಥೋತ್ಸವ ಜರುಗುತ್ತದೆ."[2]

ರಥವನ್ನು ಅಂದೇ ಎಳೆಯುವ ಪದ್ಧತಿ ಕೆಲವು ಕಡೆ ಇದ್ದರೆ ಇನ್ನೂ ಕೆಲವು ಕಡೆ ಐದು ದಿನಕ್ಕೆ ಇಲ್ಲವೆ ಒಂಬತ್ತು ದಿನಕ್ಕೆ ರಥವನ್ನು ಎಳೆಯುವರು.

ಗೋಲಗೇರಿಯಲ್ಲಿ ಒಂಬತ್ತು ದಿನಗಳವರೆಗೆ 'ಉಚಾಯಿ' ಎಳೆಯುವರು. ನಂತರ ಹತ್ತನೇ ದಿನದಂದು ದೊಡ್ಡ ತೇರನ್ನು ಎಳೆಯುವರು. ಇದು ಬಹಳ ಅದ್ದೂರಿಯಾಗಿ ನಡೆಯುತ್ತದೆ. "ಎಲ್ಲ ಜಾತಿಗಳ ಹಿಂದೂ ಜನರು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಪ್ರತಿವರ್ಷ ಚೈತ್ರ ವದ್ಯ ಪ್ರತಿಪದೆಯಲ್ಲಿ ಈ ದೇವರ ಜಾತ್ರೆಯಲ್ಲಿ ಸುಮಾರು ೫೦೦೦ ಜನ ಕೂಡುತ್ತಾರೆ. ಅದರಲ್ಲಿ ೫೦೦೦ ರೂಪಾಯಿ ವ್ಯವಹಾರವಾಗುತ್ತದೆ."[೧೭] ಒಂದು ನೂರಾ ಹದಿನೆಂಟು ವರುಷಗಳ ಹಿಂದೆಯೇ ಇಷ್ಟೊಂದು ಜನ ಸೇರುತ್ತಿದ್ದರು. ಅಂದರೆ ಜಾತ್ರೆಯ ಭವ್ಯತೆಯನ್ನು ಇದರ ಮೇಲಿಂದ ಅರಿಯಬಹುದಾಗಿದೆ ಮತ್ತು ಗೊಲ್ಲಾಳೇಶನ ಜನಪ್ರಿಯತೆ ಅಲ್ಲಿ ನಡೆಯುತ್ತಿದ್ದ (ಜಾತ್ರೆಯಲ್ಲಿ) ವಾಣಿಜ್ಯ ವ್ಯವಹಾರಗಳ ಬಗ್ಗೆ ನಾವು ಊಹಿಸಿಕೊಳ್ಳಬಹುದು.

ಉಚಾಯಿ ಕೇವಲ ಜನರನ್ನು ಸೇರಿಸುವ ಉತ್ಸವಗಳಾಗದೆ ಅವು ಐಕ್ಯತೆ, ಭಕ್ತಿ, ಮನರಂಜನೆ ಮುಂತಾದವುಗಳನ್ನು ಬೆಳೆಸುವ ಒಂದು ಜಾನಪದ ಮಾಧ್ಯಮವಾಗಿವೆ. ಗೋಲಗೇರಿಯ ಉಚಾಯಿ ಉತ್ಸವ ಸಂದರ್ಭದಲ್ಲಿ ಉಚಾಯಿ ಅಲಂಕರಿಸಿ, ಅದರಲ್ಲಿ ಗೊಲ್ಲಾಳನ ಮೂರ್ತಿಯನ್ನಿರಿಸುತ್ತಾರೆ. ಎಡ ಬಲಕ್ಕೆ ಚೌರ ಬೀಸಲು ಪ್ರಾರಂಭಿಸುತ್ತಾರೆ. ನಂತರ ಜನರು ಬಂಡಿಯನ್ನು ಎಳೆಯುತ್ತಾ ಸಾಗುತ್ತಾರೆ. ಈ ಮೆರವಣಿಗೆಯ ಮುಂಚೂಣಿಯಲ್ಲಿ ಡೊಳ್ಳು ಮೇಳ, ಬಾಜಾ, ಶಹನಾಯಿ ಮೇಳಗಳಿದ್ದರೆ, ಉಚಾಯಿ ಹಿಂದೆ ಮಹಿಳೆಯರು ಆರತಿ ಹಿಡಿದು ಬರುತ್ತಾರೆ. ಗೊಲ್ಲಾಳೇಶ್ವರನ ಹೆಸರಿನಲ್ಲಿ ಭಕ್ತರು ಘೋಷಣೆಗಳನ್ನು ಕೂಗುತ್ತಾ, ಈ ಮೆರವಣಿಗೆಯನ್ನು ದೇವಸ್ಥಾನದಿಂದ ಪಾದಗಟ್ಟೆಯವರೆಗೆ ಸಾಗಿ, ಪಾದಗಟ್ಟೆಗೆ ಪೂಜೆ ಸಲ್ಲಿಸಿ, ಮರಳಿ ದೇವಸ್ಥಾನದ ಮುಂದೆ ಅಂಗಳದಲ್ಲಿ ಬಂದು ನಿಲ್ಲುತ್ತದೆ. ಈ ಕಾರ್ಯಕ್ರಮವು ಸಂಜೆ ವೇಳೆಯಲ್ಲಿ ಒಂಬತ್ತು ದಿನಗಳವರೆಗೆ ನಡೆದು ಉಚಾಯಿ ಉತ್ಸವ ಮುಕ್ತಾಯವಾಗುತ್ತದೆ. ಈ ಆಚರಣೆ ಗೊಲ್ಲಾಳನ ಭಕ್ತರು ಜಾತ್ರೆಯಲ್ಲಿ ಸಂಭ್ರಮಿಸುವ ಸಂದರ್ಭವಾಗಿದೆ. ಇದು ದೇವರ ಪರಿಕಲ್ಪನೆಯನ್ನು, ಸಾಮಾಜಿಕ ಬದುಕನ್ನು ಸುಂದರವಾಗಿ ಸಾದರಪಡಿಸುವ ಸಂಪ್ರದಾಯ.



## ದವನದ ಹುಣ್ಣಿಮೆಗೆ ಎಲ್ಲ ದೇವಾಲಯಗಳಲ್ಲಿ ಪಲ್ಲಕ್ಕಿ ಉತ್ಸವ ಜರುಗುವುದು.

ಗೊಲ್ಲಾಳನ ಬಹುತೇಕ ದೇವಾಲಯಗಳಲ್ಲಿ ದವನದ ಹುಣ್ಣಿಮೆಗೆ ಪಲ್ಲಕ್ಕಿ ಉತ್ಸವ ಜರುಗುತ್ತದೆ. ಪಲ್ಲಕ್ಕಿ ಉತ್ಸವ ಕೂಡ ಅನೇಕ ದೇವಾಲಯಗಳಲ್ಲಿ, ಮಠಗಳಲ್ಲಿ ನಡೆದುಕೊಂಡು ಬಂದಿರುವ ಸಂಪ್ರದಾಯವಾಗಿದೆ. ಪಲ್ಲಕ್ಕಿ ಎಂದರೆ ಸಾರಿಗೆ ಸಾಧನ, ಡೋಲಿ, ಮೇಣೆ, ಅಂದಣ, ದಂಡಿಗೆ ಎಂಬವು ಪರ್ಯಾಯ ಪದಗಳು. ದೇವರು, ಋಷಿಗಳು, ಮಠಾಧೀಶರು, ರಾಜ ರಾಣಿಯರು ಮದುವೆ ವರ ಇವರನ್ನು ಹೊತ್ತೊಯ್ಯುವ ವಿಶೇಷ ಸಾಧನ"[೧೮] ಪಲ್ಲಕ್ಕಿಯಲ್ಲಿರುವ ದೇವರ ಮೂರ್ತಿಯನ್ನು ಕೂಡ್ರಿಸುವ ಜನಪದರ ಈ ಆಚರಣೆಯಲ್ಲಿ ದೇವರು ನಮಗಿಂತ ಶ್ರೇಷ್ಠ ನಾವು ಜೀವಾತ್ಮರು, ಹುಲುಮಾನವರು, ದೇವರು ಪರಮ,

ಆತ್ಮ ಶ್ರೇಷ್ಠನು ಎಂಬ ಭಾವನೆ ಇದ್ದಂತಿದೆ. ಹಲವು ಕಡೆಯಲ್ಲಿ ದೇವರ ಬದಲಾಗಿ ಅಲ್ಲಿ ಮಾನವರು ಕೂಡ್ರುವ, ಸಂಪ್ರದಾಯ ಬೆಳೆಯತೊಡಗಿತು. ಉದಾ : ಜಗದ್ಗುರುಗಳ ಅಡ್ಡಪಲ್ಲಕ್ಕಿ ಉತ್ಸವಗಳು. ಇವರನ್ನೂ ದೇವರೆಂದು ತಿಳಿದು ಅವರಿಗೆ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮೆರವಣಿಗೆ ಮಾಡುವುದನ್ನು ಇಲ್ಲಿ ಗಮನಿಸಬಹುದು. ಮುಂದೆ ಇದು ಎಷ್ಟು ಆಕರ್ಷಕ ಸಂಪ್ರದಾಯವಾಯಿತೆಂದರೆ, ಹಲವು ರಾಜರು ಪಲ್ಲಕ್ಕಿ ಉತ್ಸವಗಳನ್ನು ಮಾಡಿಕೊಳ್ಳಲು ಮುಂದಾದರು. ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆನೆಯ ಮೇಲೆ ಪಲ್ಲಕ್ಕಿಯನ್ನಿರಿಸಿ ಅದರಲ್ಲಿ ಕುಳಿತು, ತಮ್ಮ ಶ್ರೇಷ್ಠತೆಯನ್ನು ಪ್ರದರ್ಶಿಸಲು ಮುಂದಾದ ಸಂಗತಿಗಳು ಇಂದಿಗೂ ಇರುವವು. ಜನಪದರ ಪಲ್ಲಕ್ಕಿಗಳಲ್ಲಿ ಪವಡಿಸುವ ಮಹಾಮಹಿಮರೆಂದರೆ, ತಮ್ಮ ಇಷ್ಟದೇವರು, ಇಲ್ಲವೆ ಶರಣರು, ಅಥವಾ ಪವಾಡ ಪುರುಷರು. ಆದರೆ ಗೋಲಗೇರಿಯ ಎಲ್ಲ ಪಲ್ಲಕ್ಕಿಉತ್ಸವಗಳಲ್ಲಿ ಗೊಲ್ಲಾಳೇಶ್ವರನೇ ಪ್ರತಿಷ್ಠಾಪಿತನಾಗಿರುವುದು ಪ್ರಮುಖ ಅಂಶವಾಗಿದೆ.

**'ಸುರಪುರ' ಗೊಲ್ಲಾಳೇಶನ, ಅರ್ಚಕರ ಇತಿಹಾಸದಲ್ಲಿ ಮತ್ತೆ ಮತ್ತೆ ಬರುವ ಪಟ್ಟಣವಾಗಿದೆ**

ಸುರಪುರವು ಇಂದು ಗುಲಬರ್ಗಾ ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಸ್ಥಳವಾಗಿದ್ದು ಐತಿಹಾಸಿಕತೆ ಹೊಂದಿದ ಪಟ್ಟಣ ಎಂದೆನ್ನಬಹುದು. ಈ ಪ್ರದೇಶದಲ್ಲಿ ಅನೇಕ ಶಿವಶರಣರು ವಾಸವಾಗಿದ್ದರು. (ಈಗಾಗಲೇ 'ಸಗರ ನಾಡಿನ ಶಿವಶರಣರು' ಎಂಬ ಪ್ರಬಂಧವು ಹೊರಬಂದಿದೆ.) ಇಲ್ಲಿ ಗೊಲ್ಲಾಳೇಶ್ವರನ ಚರಿತ್ರೆಯಲ್ಲಿ 'ಸುರಪುರ' ಗ್ರಾಮವು ಅಲ್ಲಲ್ಲಿ ಉಲ್ಲೇಖವಾಗುತ್ತದೆ.

ಗೋಲಗೇರಿಯ ಗೊಲ್ಲಾಳೇಶನ ಗುಡಿ ನಿರ್ಮಿಸಿದವರು ನಾವೇ ಎಂದು ಹೇಳಿಕೊಳ್ಳುವ, ಹೇಳಲಾಗುವ, ದೇವರಮನೆಯವರ ಮೂಲ ಪುರುಷ ಶ್ರೀ ಮರಿಯಪ್ಪ ಸಾಹುಕಾರ. ಇವರು ಸುರುಪುರ ಪಟ್ಟಣದ ಹತ್ತಿರವಿರುವ ಹಳಿಸಗರ ಗ್ರಾಮದಿಂದ ಬಂದವರು. "ಶಾಲಿವಾಹನ ಶಕೆ ೧೧೨೬ ರಾಕ್ಷಸನಾಮ ಸಂವತ್ಸರ ಕಾರ್ತಿಕ ಶುದ್ಧ ಪಂಚಮಿಯಂದು ಗೊಲ್ಲಾಳಲಿಂಗನ ಗುಡಿ ಕಟ್ಟಿಸಿದ ವಿವರವಿದೆ. ಶಾಲಿವಾಹನ ಶಕೆ ೧೧೨೬ (ಅಂದರೆ ಕ್ರಿ. ಶ. ೭೮ ಕೂಡಿಸಿದರೆ) ಕ್ರಿ.ಶ. ೧೨೦೪ರಲ್ಲಿ ಗುಡಿ ಕಟ್ಟಿಸಿದ್ದು ತಿಳಿದುಬರುತ್ತದೆ. ಈ ದಾಖಲೆಯಿಂದ ಗೊಲ್ಲಾಳ ಒಬ್ಬ ಐತಿಹಾಸಿಕ ವ್ಯಕ್ತಿ ಎಂಬುದು ಸ್ಪಷ್ಟವಾಗುತ್ತದೆ."[೧೯] ಗುಡಿಕಟ್ಟಿಸಿದ ದೇವರಮನೆಯವರು ಹಳಿಸಾಗರದವರಾಗಿದ್ದಾರೆ. ಈ ಮಾಹಿತಿಯನ್ನು ನಿಂಗಪ್ಪ ಶಿವಪ್ಪ ಹೆಳವರ, ಮಾರುತಿ ಶಿವಪ್ಪ, ಹೆಳವರ ಊರು ಜಕಾನಹಟ್ಟಿ ಅಂಚೆ- ದ್ರಮಟ್ಟ ತಾ।। ಗೋಕಾಕ ಜಿ. ಬೆಳಗಾಂವ. ಹೆಳವರಲ್ಲಿದ್ದ ವಂಶಾವಳಿಯ ಪೂರ್ಣ ವಿವರ ಈ ರೀತಿಯಲ್ಲಿದೆ.

"ಶಾಲಿವಾಹನ ಶಕೆ ೧೧೨೬ ರಾಕ್ಷಸನಾಮ ಸಂವತ್ಸರ ಕಾರ್ತಿಕ ಶುದ್ಧ ಪಂಚಮಿ ಇವರ ಗುರುಗಳು ಹಾಲಸಾಗರ ಬಿಟ್ಟು ಸಂತಿ ಶಿರೂರ ಹತ್ತಿರ ನಂದೂರ ಹಿರೇಮಠದ ಪಟ್ಟದ ದೇವರು, ಮುನಿದೇವರು ಇರಭದ್ರದೇವರು ಗೋಲಯ್ಯಲಿಂಗದೇವರು ತಳಾ ಕಂಚಿಕಾಳಹಸ್ತಿ ದೇಸಗತಿ ಗಳಿಸಿದವರು ಹಿರೇಬಸಪ್ಪ ಸಣ್ಣಬಸಪ್ಪ, ದೇಸಾಯರು ಆಗ ಏಳು ಮಂದಿನ ಕಡಿದುಬಿಟ್ಟ ಬಿದರ ಕೋಟೆಗೆ ಬಂದರು. ಶೆಟ್ಟಿತನ ಗಳಿಸಿದರು.

ಅದನ್ನು ಬಿಟ್ಟು ಹಳೇಸಾಗರಕ್ಕೆ ಬಂದರು. ಅಲ್ಲಿ ದೇಶಗತತನ ಗಳಿಸಿದರು. ಆಗ ಹಳೇಸಾಗರ ಬಿಟ್ಟು ಬಂದು ಗೋಲಯ್ಯಲಿಂಗನ ಗುಡಿ ಕಟ್ಟಿಸಿ ಸ್ಥಾಪನಾ ಮಾಡಿದರು. ಅವರ ಹೆಸರು ಮರೆಪ್ಪ ಅಡ್ಡಹೆಸರು ಹಳೇಸಾಗರದವರು"[೨೦] ದೇವರಮನೆ ಕುಟುಂಬದ ಪೂರ್ವಜರು ಹಳಿಸಗರದಿಂದ ಬಂದರು ಎಂಬ ಸಂಗತಿ ಇದರಿಂದ ಸ್ಪಷ್ಟವಾಗುವುದು.

ಇನ್ನಿತರ ದೇವಾಲಯದ ಅರ್ಚಕರನ್ನು ಸಂದರ್ಶಿಸಲಾಗಿ ಅವರೂ ಕೂಡ ತಮ್ಮ ಪೂರ್ವಜರು ಸುರಪುರ ಕಡೆಯಿಂದ ಬಂದವರೆಂದು ಹೇಳುತ್ತಾರೆ. ಹಿಟ್ನಳ್ಳಿ ಗ್ರಾಮದ ಅರ್ಚಕರು ತಮ್ಮ ಮೂಲ ರಾಯಚೂರು ಜಿಲ್ಲೆಯ 'ನೀಲಂಗಿ' ಗ್ರಾಮವೆಂದು, ನಾಗರಹಳ್ಳಿಯ ಅರ್ಚಕರು 'ಆದೋನಿ' ಗ್ರಾಮವೆಂದೂ ಹೇಳುತ್ತಾರೆ. ನೀಲಂಗಿ, ಆಧೋನಿ, ಹಳಿಸಗರ ಇವೆಲ್ಲಾ ಸುರಪುರಕ್ಕೆ ಸಮೀಪದ ಊರುಗಳು ಎಂಬುದನ್ನು ಗಮನಿಸಿದಾಗ ಸುರಪುರದ ದೊರೆಗಳು ಹಾಗೂ ದೇವರಮನಿ ಕುಟುಂಬದವರ ನಡುವೆ ಯಾವುದೋ ಒಂದು ರೀತಿಯ ಸಂಬಂಧವಿದೆ. ಕಾಲಾಂತರದಲ್ಲಿ ಮರಿಯಪ್ಪ ಗೋಲಗೇರಿಗೂ, ಬಂಗಾರಗೊಂಡ ಹಿಟ್ನಳ್ಳಿಗೂ, ಅಪ್ಪಣ್ಣ ಬಂಟನೂರಿಗೂ ನಾಗರಾಜ ಬಂದಾಳ ಗ್ರಾಮಕ್ಕೆ ಬಂದಿರುವ ಹೇಳಿಕೆಯನ್ನು ಗಮನಿಸಿದರೆ ಈ ಪ್ರದೇಶದಲ್ಲಿ (ಸಗರ ನಾಡಿನಲ್ಲಿ) ಗೊಲ್ಲಾಳನ ಪ್ರಭಾವಲಯ ಹರಡಿದ್ದು ಕಂಡುಬರುವುದು. ಜೇವರ್ಗಿ ತಾಲ್ಲೂಕಿನ ಕುಕನೂರ, ಕನ್ನೇರಿಯಲ್ಲಿ ಗೊಲ್ಲಾಳೇಶ್ವರ ದೇವಾಲಯಗಳು ಇರುತ್ತವೆ.

## ಗೊಲ್ಲಾಳೇಶನ ಎಲ್ಲಾ ದೇವಸ್ಥಾನಗಳು ಒಂದು ಸಂಪ್ರದಾಯಕ್ಕೆ ಕಟ್ಟುಬಿದ್ದು ರಚನೆಗೊಂಡಂತಿವೆ.

ಲಕ್ಷ್ಮೇಶ್ವರ, ಗೋಲಗೇರಿ, ಬಂದಾಳ, ಬಂಟನೂರು, ಹಿಟ್ನಳ್ಳಿ, ನಾಗರಳ್ಳಿ ಮುಂತಾದ ದೇವಾಲಯಗಳನ್ನು ಅನುಲಕ್ಷಿಸಲಾಗಿ, ಇವು ಒಂದು ನಿರ್ದಿಷ್ಟ ಸಂಪ್ರದಾಯ ಪರಿಪಾಲಿಸಲು ರಚನೆಗೊಂಡಂತಿವೆ, ಸುತ್ತಲೂ ಸಾಕಷ್ಟು ಪ್ರಾಂಗಣ ಹೊಂದಿರುವ ಈ ದೇವಾಲಯಗಳು ಒಂದು ವಿಶಾಲ ಬಯಲಿನಲ್ಲಿ ನಿಂತಿವೆ. ಗರ್ಭಗುಡಿ ಅದರ ಮೇಲೆ ವೇಸರ ಶೈಲಿಯನ್ನು ಹೋಲುವ ಶಿಖರಗಳು, ಗರ್ಭಗುಡಿಯ ಮುಂಭಾಗದಲ್ಲಿ ಕಂಬಗಳಿರುವ ಮುಖಮಂಟಪ, ಮಂಟಪದ ಎದುರಿಗೆ ನಂದಿವಿಗ್ರಹ, ತದನಂತರದಲ್ಲಿ ದ್ವಾರಬಾಗಿಲು, ದ್ವಾರಬಾಗಿಲಿಗೆ ಎದುರಾಗಿ ಮಾಲಗಂಭ (ದೀಪಸ್ಥಂಭ) ಹೀಗೆ ಎಲ್ಲ ದೇವಸ್ಥಾನಗಳು ರಚನೆಗೊಂಡಿವೆ.

ಇಲ್ಲಿನ ದೇವಾಲಯಗಳಲ್ಲಿ ಇಂದಿಗೂ ಕೂಡ ಯಾವ ಗಮನಾರ್ಹ ಬದಲಾವಣೆ ಕಂಡುಬಂದಿಲ್ಲ. ಇಂದಿಗೂ ಈ ದೇವಸ್ಥಾನಗಳಿಗೆ ಮೂರು ಬಾಗಿಲು ಮುಖ್ಯ ದ್ವಾರದ ಮುಂದುಗಡೆ ದೇವರಮನಿ ಕುಟುಂಬದವರ ಸಮಾಧಿಗಳು, ಉಚ್ಚಾಯಿ, ರಥೋತ್ಸವಗಳು, ದವನದ ಹುಣ್ಣಿಮೆಗೆ ಜರುಗುವ ಪಲ್ಲಕ್ಕಿ ಉತ್ಸವಗಳು, ಒಂದು ಸಂಪ್ರದಾಯವೆಂಬಂತೆ ನಡೆದುಕೊಂಡು ಬರುತ್ತಿವೆ. ಈ ಸಂಪ್ರದಾಯದ ಆಚರಣೆಯ ಹಿಂದಿರುವವನು ನಿಸ್ಸಂದೇಹವಾಗಿ ವಚನಕಾರ ವೀರ ಗೊಲ್ಲಾಳನೇ, ಗೊಲ್ಲಾಳನಿಗೆ ವೀರ ಎಂಬ ವಿಶೇಷಣ ಬಂದಿರುವುದನ್ನು ಗಮನಿಸಿದರೆ ಬಹುಶಃ ಶೈವ ಸಂಪ್ರದಾಯದ ಮಾಹೇಶ ನಿಷ್ಠೆಯ ಉಗ್ರ ಪ್ರತಿಪಾದಕನಾಗಿ ಗೊಲ್ಲಾಳ ಗೋಚರಿಸುತ್ತಾನೆ. ಶೈವ ಪರಂಪರೆಯನ್ನು ಪಸರಿಸುವ, ಪ್ರಚಾರಮಾಡುವಲ್ಲಿ ದೀಕ್ಷೆ ತೊಟ್ಟಂತೆ ಸುತ್ತಲ

ಸೀಮೆಗಳಲ್ಲಿ ವೀರಶೈವ ಪರಂಪರೆಯಂತೆ ಗೊಲ್ಲಾಳನು ಸಂಘಟನೆಯ ಹೋರಾಟ ಮಾಡಿದ್ದಂತೆ ಕಂಡುಬರುವುದು.

ಶರಣರ ದೃಷ್ಟಿಯಲ್ಲಿ, ತತ್ವದಲ್ಲಿ, 'ಸ್ಥಾವರಗಳಿಗೆ ಬೆಲೆ ಇಲ್ಲವಾದರೂ, ಗೊಲ್ಲಾಳನ ದೇವಾಲಯಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿದಾಗ, ಸಾಮಾನ್ಯ ಜನರಲ್ಲಿ ಭಕ್ತಿ ಭಾವ ಬಿತ್ತಿ ಬೆಳೆವಲ್ಲಿ ಕೆಲವು ಹಂತದವರೆಗೆ ಸ್ಥಾವರಗಳು (ದೇವಾಲಯಗಳು) ಬಹುತೇಕವಾಗಿ ಅವಶ್ಯ ಎಂದೆನಿಸುತ್ತದೆ. ಶರಣ ಚಳುವಳಿಯಲ್ಲಿ ಪಾಲ್ಗೊಂಡವರು ಜನಸಾಮಾನ್ಯರು. ಹೀಗಾಗಿ ಗೊಲ್ಲಾಳನಂಥವರು ಇಂಥ ಸಂಪ್ರದಾಯಗಳನ್ನು ಹುಟ್ಟುಹಾಕಿರಬಹುದು ಎಂದೆನಿಸುತ್ತದೆ. ಅಂದು ಈ ದೇವಾಲಯಗಳು ಬೆಳೆದು ಬರದಿದ್ದರೆ ಇಂದು ಇಂಥ ಸಂಪ್ರದಾಯ, ಆಚರಣೆ, ಚರಿತ್ರೆ ಸ್ಪಷ್ಟವಾಗಿ ಸಿಗುತ್ತಿರಲಿಲ್ಲವೇನೋ ?

## ಗೊಲ್ಲಾಳನ ಭಕ್ತರಲ್ಲಿ ಪುರುಷರಂತೆ ಮಹಿಳೆಯರು ಪ್ರಮುಖರು.

ಸಮಗ್ರ ಶರಣ ಚಳುವಳಿಯನ್ನು ಗಮನಿಸಿದಾಗ ಅಲ್ಲಿ ಲಿಂಗತಾರತಮ್ಯದ ವಿರುದ್ಧ ಒಂದು ಪ್ರಚಂಡವಾದ ಆಂದೋಲನ ಜರುಗಿ ಸ್ತ್ರೀ ಸಮಾನತೆಗೆ ಹೋರಾಡಿರುವ ಅಂಶ ನಮ್ಮ ಗಮನಕ್ಕೆ ಬರುತ್ತದೆ. ಇಂಥ ಲಿಂಗತಾರತಮ್ಯದ, ಸ್ತ್ರೀ ಶೋಷಣೆಯ, ವಿರುದ್ಧವಾದ ಧ್ವನಿಗಳು ಉದಿಸಿದ್ದು ಬಸವಪೂರ್ವದಲ್ಲೆ ಎಂದು ಭಾವಿಸಲು ಅವಕಾಶವಿದೆ. ಒಂದು ಕಾಲದ ಚಳುವಳಿ ಪರಿಪಕ್ವತೆಯಿಂದ ಹೊರಹೊಮ್ಮಲು ಅದಕ್ಕಿಂತ ಮೊದಲು ಹಲವು ಸಣ್ಣ ಪ್ರಮಾಣದ ಪ್ರಯತ್ನಗಳು ನಡೆದಿರಲೇಬೇಕಾಗುತ್ತದೆ. ಗೊಲ್ಲಾಳ ಮುಂತಾದ ಶರಣರು ಬಸವಪೂರ್ವ ಕಾಲದಲ್ಲಿ ಇಂಥ ಪ್ರಯತ್ನಗಳು ಮಾಡಿರಲೇಬೇಕೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಗೊಲ್ಲಾಳನಿಗೆ ನಾಗರಾಜ, ಅಪ್ಪಣ್ಣ, ನಿಂಗೊಂಡ, ಮರೆಯಪ್ಪ, ಪ್ರಮುಖರು, ಅದರಂತೆ ಡಂಬಳ ಗೌರಮ್ಮ, ಉಕ್ಕಲಿ ಗ್ರಾಮದ ಸಹೋದರಿಯರಾದ ಅವ್ವಮ್ಮ, ಲಕ್ಕಮ್ಮ, ಸಿಂದಗಿಯ ನೀಲಗಂಗಾ ಗೋಲಗೇರಿಯ ಜಾನಮ್ಮ, ಪ್ರಧಾನವಾಗಿ ಕಂಡುಬರುವುದನ್ನು ಗಮನಿಸಿದರೆ ಅವರು ಸ್ತ್ರೀಯರಿಗೆ ಧಾರ್ಮಿಕ ವಿಧಿವಿಧಾನಗಳಲ್ಲಿ ಕೊಟ್ಟಂತಹ ಪ್ರಮುಖಸ್ಥಾನದ ಅಂಶ ಗಮನಕ್ಕೆ ಬರುತ್ತದೆ.

ಪ್ರಪಂಚದ ಜನಸಂಖ್ಯೆಯಲ್ಲಿ ಅರ್ಧದಷ್ಟು ಸಂಖ್ಯೆ ಸ್ತ್ರೀಯರಿದ್ದು, ಮಾನವ ಸಂಪನ್ಮೂಲ ಎಂದಿಗೂ ನಾಡಿನ ಒಂದು ದೊಡ್ಡ ಆಸ್ತಿಯೇ ಆಗಿದೆ. ಸ್ತ್ರೀ, ಮಾನವ ಸಂಪನ್ಮೂಲವನ್ನು ಕಡೆಗಣಿಸಿದ ಸಮಾಜಗಳು ಇಂದಿನ ಆಧುನಿಕ ಜಗತ್ತಿನ ಜಾಗತಿಕರಣದ ಪ್ರಬಲ ಸವಾಲುಗಳನ್ನು ಎದುರಿಸಲಾಗದೇ ತತ್ತರಿಸಿ ಹೋಗುತ್ತಿವೆ. ಸಾಕಷ್ಟು ಹಿಂದೆಯೇ ಈ ಪ್ರಚ್ಛನ್ನ ಮಹಿಳಾ ಶಕ್ತಿಯನ್ನು ಮನಗಂಡ ಗೊಲ್ಲಾಳನಂಥ ಶರಣರು ಅವರನ್ನು ಸಮಾಜಮುಖಿಯಾಗಿ ಸತ್ಕಾರ್ಯದಲ್ಲಿ ತೊಡಗಿಸಿಕೊಂಡಂತೆ ಕಂಡುಬರುವುದು.

ಇಂದು ಸಂಶೋಧನಾ ವ್ಯಾಪ್ತಿಯು ದಿನದಿನಕ್ಕೆ ವಿಸ್ತಾರಗೊಳ್ಳುತ್ತಿದೆ. ಎಲ್ಲವೂ ಸೂಕ್ಷ್ಮ ದೃಷ್ಟಿಯಿಂದ ನೋಡುವ ಪರಿಜ್ಞಾನ ಬೆಳೆಯುತ್ತಿದೆ. ಅದರ ಫಲವಾಗಿ ಗೊಲ್ಲಾಳನಂಥವರು ಮೊದಲು ಒಂದು ಸಂಸಾರದವನೆಂದು, ತದನಂತರ ಒಂದು ಕುಲದವನೆಂದು ಬಾಳಿ ಮಾನವರೆಲ್ಲ ಒಂದು ಅಖಂಡ ಜಗತ್ತಿನವರೆಂಬ ವಿಶಾಲ ದೃಷ್ಟಿಯೆಡೆಗೆ ಕಣ್ಣೋಟ ಬೀರಿದವನು. ಮನುಷ್ಯ ಮನುಷ್ಯರ ನಡುವೆ ನಾನು-ನೀನು, ಗಂಡು- ಹೆಣ್ಣು, ಎಂಬ ಭೇದವನ್ನು ಎಣಿಸಲಾರದೆ, ತನ್ನ ಶಕ್ತಿ ಸಾಮರ್ಥ್ಯದಲ್ಲಿಯೇ ತನ್ನ ಕ್ಷೇತ್ರಕಾರ್ಯವನ್ನು ಹಾಕಿಕೊಂಡು,

ವಿಶಾಲ ದೃಷ್ಟಿಯಲ್ಲಿ ಪ್ರಭಾವವನ್ನು ಬೀರಿದ್ದಾನೆ. ಗೊಲ್ಲಾಳ ಒಬ್ಬ ಕುರುಬ ಕುಲದವನಾಗಿದ್ದರೂ, ತನ್ನ ಸುತ್ತು-ಮುತ್ತಲು ಬದುಕುತ್ತಿರುವ ವಿವಿಧ ಕುಲದವರಾದ ಬಣಜಿಗ, ಪಂಚಮಸಾಲಿ, ಹೂಗಾರ, ಕಂಬಾರ, ಕುಂಬಾರ, ಗಾಣಿಗೇರ, ಕುಡುಒಕ್ಕಲಿಗ, ಸಮಗಾರ, ಮಾದಿಗ, ಹರಿಜನ, ಹಡಪದ, ಜಂಗಮ ಇತ್ಯಾದಿ ಜನಾಂಗದವರು ಆರಾಧಿಸುವಂತೆ ದೈವತ್ವಕ್ಕೆ ಏರಿದವನು. ಇದಕ್ಕೆಲ್ಲ ಅವನಲ್ಲಿರುವ ಮಾನವತೆ, ನಂಬಿಕೆ, ಕಾರ್ಯಕ್ಷಮತೆಯೇ ಪ್ರಮುಖ ಕಾರಣವಾಗಿರಬಹುದಾಗಿದೆ. ಇಂದು ಮನುಷ್ಯ ಮಾನವೀಯತೆಯನ್ನು ಕಳೆದುಕೊಳ್ಳುತ್ತಿದ್ದಾನೆ. ಐದು ವರ್ಷದ ಮಗುವಿನ ಮೇಲೆ ಅತ್ಯಾಚಾರ ಮಾಡುವಷ್ಟು ಕ್ರೂರಿಯಾಗಿದ್ದಾನೆ. ಯಾವುದೇ ಸಂಘರ್ಷ, ವೈರತ್ವವಿಲ್ಲದಿದ್ದರೂ ವೀಳ್ಯ ಸ್ವೀಕರಿಸಿ ಹಣಕ್ಕಾಗಿ ಕೊಲೆಮಾಡುತ್ತಿದ್ದಾನೆ. ಇದಕ್ಕೆ ಕೊನೆ ಇಲ್ಲವೇನೋ ಅನಿಸುತ್ತದೆ. ಆದ್ದರಿಂದ ನಮ್ಮ ವಿದ್ಯಾರ್ಥಿಗಳಿಗೆ, ಯುವಕರಿಗೆ ಗೊಲ್ಲಾಳನಂಥವರ ಬದುಕನ್ನು, ಬಾಳಿದ ರೀತಿಯನ್ನು, ಜನ-ಮನಗಳಲ್ಲಿ ಒಳ್ಳೆಯ ಭಾವನೆಯನ್ನು ಮೂಡಿಸಿ, ಚಾರಿತ್ರಿಕವಾದ ನಮ್ಮ ಸಂಸ್ಕೃತಿಯನ್ನು, ಸಾಹಿತ್ಯವನ್ನು ಕಲೆಯನ್ನು ಪರಿಚಯಿಸುವ ಅಗತ್ಯತೆಯಿದೆ.

**ಕೊನೆಯ ಟಿಪ್ಪಣಿಗಳು :**

೧. ಲೇ: ಓಶೋ 'ನನ್ನ ಪ್ರಿಯ ಭಾರತ' - ಕನ್ನಡ (ಪ್ರ. ಅವುಭವ ಪ್ರಕಾಶನ. ೧೮/೧ (೮) ಶ್ರೀ ವಿಶ್ವೇಶ್ವರ ಭಟ್ಟ, ೮ ಆಸ್ಕರ ರಸ್ತೆ ಬೆಂಗಳೂರು. ೧೯೯೯ - ಪುಟ -೧೮
೨. ಲೇ. ಪಾಟೀಲ ಎಸ್.ಸಿ. ಕುರುಬರ ಜನಪದ. (ಪ್ರ) ಕನಕ ಜಯಂತ್ಯುತ್ಸವ ಸಮಿತಿ ಸಿಂದಗಿ -(ಸಂ) ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್. ಎಸ್. ವಾಡೇದ, ಜಿ. ವಿಜಾಪೂರ - ೧೯೯೭, ಪು-೪೧
೩. ಅದೇ- ಪುಟ - ೪೩
೪. ಚನ್ನಬಸಪ್ಪ ಗೊ. ರು. (ಸಂ) ಶರಣ ತತ್ವಚಿಂತನ ಐದನೆಯ ಸಮ್ಮೇಳನ ಬೆಳಗಾವಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, ಜೆ.ಎಸ್.ಎಸ್. ಕಾಲೇಜ, ೮ನೇ ಅಡ್ಡರಸ್ತೆ, ೮ನೇ ವಿಭಾಗ ಜಯನಗರ, ಬೆಂಗಳೂರು-೨೦೦೦, ಪುಟ - ೧೮೦
೫. ಶ್ರೀನಿವಾಸ್ ಎಂ. ದೇವರು ಹಾಗೆಂದರೇನು? ದೇವರ ಕುರಿತಾಗೊಂದು ಅಪೂರ್ಣ ಚರ್ಚೆ, ಅಂಕಿತ ಪುಸ್ತಕ, ೫೩, ಶ್ಯಾಮ್‌ಸಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ ಮುಖ್ಯರಸ್ತೆ ಬಸವನಗುಡಿ, ಬೆಂಗಳೂರು ೨೦೦೮ ಪುಟ ೪೬
೬. ಡಾ. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೬೬-ಪುಟ ೨೨೫
೭. ಬಡಿಗೇರ ವಾಸುದೇವ, ಕರ್ನಾಟಕ ದೇವಾಲಯ ಕೋಶ, ವಿಜಾಪೂರ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ಪು- ೪೮
೮. ಪ್ರಭಾಕರ ಎಂ.ಎಸ್.ದೇವಾಲಯ ಚಂದ್ರಿಕೆ, ಪ್ರ. ಪ್ರೊ. ಎ.ವಿ. ನಾವಡ, ನಿರ್ದೇಶಕರು ಪ್ರಸಾರಾಂಗ, ಕ.ವಿ.ವಿ. ಹಂಪಿ, ವಿದ್ಯಾರಣ್ಯ -೨೦೦೦, ಪು. ೩೨
೯. ಅದೇ ಪು. ೩೨
೧೦. ಡಾ. ಪಾಟೀಲ ಎಸ್.ಸಿ. ಕುರುಬ ಜನಪದ, ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ, ಸಂ. ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್.ಎಸ್. ವಾಡೇದ ವಿಜಾಪೂರ -೧೯೯೭, ಪು. ೪೫
೧೧. ಸಿದ್ಧರಾಮಯ್ಯ ಎಸ್.ಜಿ. (ಸಂ) ಭಾಲಚಂದ್ರ ಜಯಶೆಟ್ಟಿ ಬಿಲ್ವ-ಬೆಳವಲ, ಬಸವಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ, ಜಿ. ಬೀದರ ೨೦೧೦, ಪು. ೪೯
೧೨. ಡಾ. ದುರಗಿ ಶಕುಂತಲಾ ಸಿದ್ಧರಾಮ, ಶರಣ ಗೊಲ್ಲಾಳ - ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, ಜಯನಗರ, ಬೆಂಗಳೂರು, ೨೦೦೯- ಪು. ೫೯
೧೩. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು - ೨೦೦೧ ಪು. ೧೩೬೨
೧೪. ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ , ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,ಮೈಸೂರು, ಜಯನಗರ ಬೆಂಗಳೂರು ೨೦೦೯, ಮುನ್ನುಡಿ- ವೀರಣ್ಣ ದಂಡೆ ಪು.V
೧೫. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಜಾನಪದ ಕನ್ನಡ ವಿಷಯ ವಿಶ್ವಕೋಶ, ಮೈಸೂರು, ವಿಶ್ವವಿದ್ಯಾಲಯ ೨೦೦೬, ಪು. ೯೪೨
೧೬. ಚಪ್ಪರಬಂದ ಆರ್. ಆರ್., ಬಿಜಾಪೂರ ಜಿಲ್ಲೆಯ ಜಾತ್ರೆಗಳು, ಯಾಸ್ಮಿನ್ ಪ್ರಕಾಶನ, ವಿಜಾಪೂರ- ೨೦೦೬ ಪು. ೯೦
೧೭. ಕಟ್ಟಿ ವೆಂಕಟ ರಂಗೋ (ಕನ್ನಡದಲ್ಲಿ ಭಾಷಾಂತರ) ಗೆಝೆಟೀಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಮುಂಬಯಿ ಗವರ್ನಮೆಂಟ್ ಸೆಂಟ್ರಲ್ ಬುಕ್ ಡೀಪೋ ಭಾಗ -೧೪ ಗ್ರಾಮಗಳು ವಿಜಾಪೂರ, ಪು.೫೪೪
೧೮. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಕನ್ನಡ ವಿಷಯ ವಿಶ್ವಕೋಶ ಜಾನಪದ, ಮೈಸೂರು ವಿಶ್ವವಿದ್ಯಾಲಯ, ೨೦೦೬ ಪು. ೮೨೦
೧೯. ಡಾ. ಎಸ್.ಸಿ. ಪಾಟೀಲ ಕುರುಬ ಜನಪದ ಕನಕ ಜಯಂತ್ಯುತ್ಸವ ಸಮಿತಿ ಸಿಂದಗಿ- ೧೯೯೭ (ಸಂ) ಪ್ರೊ. ಚನ್ನಪ್ಪ ಕಟ್ಟಿ. ಪ್ರೊ. ಆರ್. ಎಸ್. ವಾಡೇದ, ಪು. ೪೩
೨೦. ಅದೇ - ಪು. ೪೨

# ಅಧ್ಯಾಯ - ೪
# ಗೊಲ್ಲಾಳೇಶ್ವರ : ವಚನಗಳು

ಭಾರತವನ್ನು ಅನೇಕ ತತ್ವಜ್ಞಾನಿಗಳು "ಪುಣ್ಯಭೂಮಿ" ಎಂದು ಕರೆದಿರುವರು. ಇಲ್ಲಿ ಅರಳಿದಂತೆ "ಧರ್ಮ" ಇನ್ನೆಲ್ಲೂ ಅರಳಿಲ್ಲ. ಭಾರತ ವಿವಿಧ ಧರ್ಮಗಳ ನೆಲೆವೀಡಾಗಿ ಸಾಹಿತ್ಯ ಸಂಸ್ಕೃತಿಯ ಅಧ್ಯಯನಕ್ಕೆ ಇಂಬಾಗಿ ನಿಂತಿದೆ. ಭಾರತದ 'ಗಂಧದ ಗುಡಿ' ಎಂದೇ ಪ್ರಸಿದ್ಧವಾದ ಕರ್ನಾಟಕದ ಕಣಕಣದಲ್ಲೂ ಈ ಮಣ್ಣಿನ, ಈ ನಾಡಿನ ಸಾಹಿತ್ಯ ಸಂಸ್ಕೃತಿ ಅಡಗಿದೆ. ಕರ್ನಾಟಕದುದ್ದಕ್ಕೂ ಕಿಕ್ಕಿರಿದ ದೇವಾಲಯಗಳು ಈ ನಾಡಿನ ಸಾಂಸ್ಕೃತಿಕ ಅಧ್ಯಯನದ ಪ್ರಮುಖ ಆಕರಗಳಾಗಿವೆ. ಕನ್ನಡ ನಾಡಿನಲ್ಲಿ ಬಾಳಿ ಬದುಕಿಹೋದ ಪುಣ್ಯಪುರುಷರು ಅನೇಕರು. ಅವರ ಜೀವನ ಕ್ರಮ ಬದುಕಿದ ಪರಿ ಇಂದಿಗೂ (ವರ್ತಮಾನದಲ್ಲಿ) ದಿಕ್‌ಸೂಚಿಯಾಗಿ ದಿವ್ಯ ಬೆಳಕನ್ನು ನೀಡುತ್ತಿವೆ.

ಇಂದಿನ ಜಾಗತೀಕರಣ, ಉದಾರೀಕರಣದ, ಬೆಳ್ಳಿಪರದೆ ಹಾಗೂ ದೂರದರ್ಶನಗಳ ಅಲೆಯಲ್ಲಿ ಒಂದು ನಾಡಿನ, ಅದರಲ್ಲೂ ಒಬ್ಬ ಮನುಷ್ಯನ ಕುರಿತಾದ ಅಧ್ಯಯನಗಳು ಬಹಳ ವಿಶಿಷ್ಟ ಎನಿಸುತ್ತವೆ. ಇತ್ತೀಚೆಗೆ ಬಹುಶಿಸ್ತೀಯ ಹಾಗೂ ಸ್ಥಳೀಯವಾದ ಅಧ್ಯಯನಗಳು ತುಂಬಾ ನಡೆದಿವೆ. ಅದರಲ್ಲೂ ಶರಣ ಚಳುವಳಿಯಲ್ಲಿ ತೀರ ಉಪೇಕ್ಷಿತರಾದವರನ್ನು ಕುರಿತು ನಿತ್ಯನೂತನವಾದ ಸಂಶೋಧನಾ ಅಧ್ಯಯನ ಮಾಡಲಾಗುತ್ತಿದೆ. ಇಂಥ

ಸಂಶೋಧನೆ ಅನುಭಾವಿಗಳ ಅನುಭವ ಸಾಹಿತ್ಯ ಹಾಗೂ ವಿಶ್ವದಾರ್ಶನಿಕರ ತತ್ವ ವಿಚಾರಗಳನ್ನೂ ಒಳಗೊಂಡಿದೆ. ತತ್ಪರಿಣಾಮವಾಗಿ ಇಲ್ಲಿರುವ ಸಾಮಾಜಿಕ ಯೋಜನೆ-ಯೋಚನೆಗಳು ಸೂಕ್ಷ್ಮ ಅಧ್ಯಯನದಿಂದ ಪರಿಚಿತವಾಗುತ್ತಿವೆ. ಈ ಸಂದರ್ಭದಲ್ಲಿ ವಿಶ್ವಸಂಸ್ಥೆಯ ಸದಾಶಯದಂತೆ, ಜಗತ್ತಿನ ವೈವಿಧ್ಯತೆಯ ಉಳಿವಿಗೆ ಸುಂದರತೆಗೆ, ಸಂಸ್ಕೃತಿಯ - ಅದರಲ್ಲೂ ಉಪಸಂಸ್ಕೃತಿಯ - ಅಧ್ಯಯನಗಳು ಮುಖ್ಯವೆನಿಸುವುದರಿಂದ ಕರ್ನಾಟಕದ ಪುಣ್ಯ ಪುರುಷರಲ್ಲಿ ಒಬ್ಬರಾದ ಗೊಲ್ಲಾಳನ ವಚನ ಸಾಹಿತ್ಯದ ಸಮೀಕ್ಷೆ ಮತ್ತು ವಿಶ್ಲೇಷಣೆ ತುಂಬಾ ಮುಖ್ಯವಾಗುತ್ತದೆ.

ಕನ್ನಡ ಸಾಹಿತ್ಯವು ಹನ್ನೊಂದನೆಯ ಶತಮಾನದ ಕೊನೆಯ ಭಾಗದಲ್ಲಿ ಪಂಡಿತ ವರ್ಗದಿಂದ ಮತ್ತು ರಾಜಾಶ್ರಯದಿಂದ ದೂರ ಸರಿದು ಜನಸಾಮಾನ್ಯರನ್ನು ಬೆಳಕಿನೆಡೆಗೆ ಸಾಗುವಂತೆ ಮಾಡಿತು. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಜೀವನ ವಿಪ್ಲವಗಳಿಂದ ಕೂಡಿದ ಕಾಲ. ಈ ಸಂದರ್ಭದಲ್ಲಿ ವೈದಿಕ ಮತಾಚರಣೆಗಳು ಜನಸಾಮಾನ್ಯರ ಪ್ರಜ್ಞೆಯನ್ನು ಕಲಕಿದವು. ತತ್ಸಂದರ್ಭದಲ್ಲಿ ಈ ಧರ್ಮ- ಸುಧಾರಕರ ಒಂದು ಜಂಗಮ ಪರಂಪರೆಯೇ ಹುಟ್ಟಿಕೊಂಡಿತು. ಅದುವೇ ಶರಣ ಪರಂಪರೆ. ಈ ಪರಂಪರೆಯು ಮೇಲು-ಕೀಳು ಭೇದಗಳನ್ನು ಸರಿಸಿ ಸಮಾನವಾದ ಮಾನವ ಸಮಾಜ ಕಟ್ಟಲು ಪ್ರಯತ್ನಿಸಿತು. ಈ ಶರಣ ಪರಂಪರೆ ಸಮಾಜದಲ್ಲಿದ್ದ ಅನಿಷ್ಟಗಳನ್ನು ತಿರಸ್ಕರಿಸಿ ಸಹಬಾಳ್ವೆಯ ಪಾಠ ಕಲಿಸಿತು. ಈ ಪ್ರಯತ್ನದಲ್ಲಿ ಅದು ಯಾವ ಅಸಾಧು ಮಾರ್ಗವನ್ನೂ ಸ್ವೀಕರಿಸಲಿಲ್ಲ. ಸಮಾಜ ಒಪ್ಪಿತ ಮಾರ್ಗದಿಂದ ಮಾನವ ಸಮಾಜದಲ್ಲಿ ಮಾನವತಾವಾದದ ಭಾವವನ್ನು ನೆಲೆಗೊಳಿಸಿತು. ಅವರದೇ ಆದ ಭಕ್ತಿ, ನೀತಿ, ಆಚಾರ, ವಿಚಾರಗಳನ್ನು 'ವಚನಗಳ' ಮುಖಾಂತರ ನೀಡಿದರು.

ಹನ್ನೆರಡನೆಯ ಶತಮಾನದಂದು ಕರ್ನಾಟಕದಲ್ಲಿ ಜರುಗಿದ ಶಿವಶರಣರ ಬಹುಮುಖೀ ಕ್ರಾಂತಿಯು ಜಾಗತಿಕ ಇತಿಹಾಸದಲ್ಲಿಯೇ ಒಂದು ಅಪೂರ್ವ ಘಟನೆ. ಅಂದಿನ ಕಲುಷಿತವಾಗಿದ್ದ ಧಾರ್ಮಿಕ ಮತ್ತು ಸಾಮಾಜಿಕ ಪರಿಸರ ಈ ಕ್ರಾಂತಿಗೆ ಮೂಲಕಾರಣವಾಗಿತ್ತು.

**ವಚನಗಳ ಮೂಲ ಉದ್ದೇಶಗಳು :** ಮಾನವೀಯ ಮೌಲ್ಯಗಳಿಗೆ ಒತ್ತುಕೊಟ್ಟು ಧರ್ಮಪ್ರಸಾರ ಮತ್ತು ಸರ್ವಸಮಾನತೆಯ ತತ್ವವನ್ನಾಧರಿಸಿ ಆದರ್ಶ ಸಮಾಜದ ನಿರ್ಮಾಣ. ಹಾಗೂ ಇಡೀ ಮನುಕುಲದ ಸಮುದ್ಧರಣ ಈ ಕ್ರಾಂತಿಯ ಉದ್ದೇಶ. ಈ ಮಹೋದ್ದೇಶವನ್ನು ಸಾಧಿಸಲು ಒಂದು ಸಮರ್ಥ ಸಾಹಿತ್ಯ ಮಾಧ್ಯಮದ ಅಗತ್ಯವಿತ್ತು. ಆದ್ದರಿಂದ ಪಂಡಿತ ಕವಿಗಳ ಛಂದೋ ಬದ್ಧವಾದ ಸಾಹಿತ್ಯಕ್ಕೆ ಬದಲಾಗಿ ಶರಣರು ತಾವೇ ಸೃಷ್ಟಿಸಿದ ಸರಳವಾದ ವಚನಸಾಹಿತ್ಯ ಅವರ ಕ್ರಾಂತಿಯ ಹಿನ್ನೆಲೆಯಲ್ಲಿ ಮೂಡಿದ್ದರಿಂದ ಅದರಲ್ಲಿ ಕ್ರಾಂತಿಯ ಕಾವಿದೆ. ಹತ್ತು ಮತ್ತು ಹನ್ನೊಂದನೆಯ ಶತಮಾನದಲ್ಲಿ ಮೊಳೆತ ಈ ಸಾಹಿತ್ಯ ಹನ್ನೆರಡನೆಯ ಶತಮಾನದಲ್ಲಿ ಹುಲುಸಾಗಿ ಹಾಗೂ ಸತ್ವಯುತವಾಗಿ ಬೆಳೆಯಿತು. ಈ ಕಾಲ ವಚನ ಸಾಹಿತ್ಯದ ಸುವರ್ಣಕಾಲ. ಅಸಂಖ್ಯಾತ ಶಿವಶರಣರು ಕನ್ನಡ ನಾಡಿನಲ್ಲಿ ಏಕಕಾಲದಲ್ಲಿ ಕಾಣಿಸಿಕೊಂಡು ಅಪಾರವಾದ ವಚನ ಸಾಹಿತ್ಯವನ್ನು ಸೃಷ್ಟಿಸಿರುವುದು ಜಗತ್ತಿನ ಇತಿಹಾಸದಲ್ಲಿಯೇ ಮೊಟ್ಟಮೊದಲನೆಯದು.

"ವಚನ ಸಾಹಿತ್ಯ ಗದ್ಯಪದ್ಯಗಳೆರಡರ ಹೃದ್ಗುಣಗಳನ್ನು ಮೇಳೈಸಿಕೊಂಡಿರುವ ಒಂದು ವಿಶಿಷ್ಟ ಬಗೆಯ ಸಾಹಿತ್ಯ ಪ್ರಕಾರ. ಚನ್ನಬಸವಣ್ಣನವರು ಇದನ್ನು 'ಗೀತಾಮಾತೆಂಬ ಜ್ಯೋತಿ' ಎಂದಿದ್ದಾರೆ. ಇದು ಪ್ರಧಾನವಾಗಿ ಅನುಭಾವ ಸಾಹಿತ್ಯ, ಆತ್ಮ ಪರಮಾತ್ಮರ ಐಕ್ಯಾನುಭಾವವೇ ಅನುಭಾವ. ಅದನ್ನು ಭಾಷೆಯಲ್ಲಿ ಮೂರ್ತೀಕರಿಸಿದ ಫಲವೇ ಅನುಭಾವ ಸಾಹಿತ್ಯ"[೧]

ವಚನಕಾರರು ಅಂಕಿತಗಳನ್ನಿಟ್ಟುಕೊಂಡು ವಚನಗಳನ್ನು ಬರೆದಿರುವುದು ಮತ್ತೊಂದು ವಿಶೇಷ. ವಚನಗಳಲ್ಲಿ ಬರುವ ಅಂಕಿತಗಳಿಂದ ವಚನ ಕರ್ತೃವನ್ನು ಗುರುತಿಸಬಹುದಾಗಿದೆ.

ವಚನಕಾರರು ಅಲ್ಲಲ್ಲಿ ವೇದ, ಉಪನಿಷತ್ ಆಗಮ ಪುರಾಣಗಳಿಂದ ಕೆಲವು ಉಕ್ತಿಗಳನ್ನು ಉದ್ಧರಿಸಿರುವುದುಂಟು. ಇವುಗಳನ್ನು ತಮಗೆ ಸಮ್ಮತವಲ್ಲದ ಅಭಿಪ್ರಾಯಗಳನ್ನು ವಿರೋಧಿಸುವದಕ್ಕೆ ಅಂತೆಯೇ ತಮ್ಮ ಸ್ವಂತ ಅಭಿಪ್ರಾಯಗಳನ್ನು ಸಮರ್ಥಿಸುವುದಕ್ಕೂ ಬಳಸಿರುವಂತಿದೆ. ಅಲ್ಲದೆ ಅಂದು ಜನಸಾಮಾನ್ಯರಲ್ಲಿ ಪ್ರಚಲಿತವಿದ್ದ ಗಾದೆಗಳನ್ನು ಸಾಕಷ್ಟು ಬಳಸಿರುವುದು ಕಂಡುಬರುತ್ತದೆ ಜೊತೆಗೆ ಸಾಮಾಜಿಕ ನ್ಯೂನ್ಯತೆಗಳನ್ನು ತಿದ್ದಿ ಸಮಾಜವನ್ನು ಸುಧಾರಿಸುವ ಆಶಯವೂ ವಚನಗಳಲ್ಲಿ ಕಂಡುಬರುತ್ತದೆ.

ವಚನಗಳಲ್ಲಿ ಶರಣ ಸಿದ್ಧಾಂತಕ್ಕೆ ಸ್ಥಲ, ಲಿಂಗ, ಅಂಗ, ಶೂನ್ಯ, ಲಿಂಗಾಂಗ ಸಾಮರಸ್ಯ, ಷಟಸ್ಥಲ, ಅಷ್ಟಾವರಣ, ಪಂಚಾಚಾರ, ಕಾಯಕ, ದಾಸೋಹ, ಪ್ರಸಾದ ಮುಂತಾದ ಪಾರಿಭಾಷಿಕ ಶಬ್ದಗಳನ್ನು ಬಳಸಿರುವುದಲ್ಲದೆ ಅವುಗಳನ್ನು ಅರ್ಥೈಸಿರುವುದು ಈ ಸಿದ್ಧಾಂತದ ಸ್ಪಷ್ಟತೆಗೆ ಶರಣರು ಕೊಟ್ಟ ಮಹತ್ವವೇನೆಂಬುದನ್ನು ಎತ್ತಿ ತೋರಿಸುತ್ತದೆ. ಅಲ್ಲದೆ ವಚನಗಳಲ್ಲಿ, ಸಾಹಿತ್ಯ ಹಾಗೂ ಶಾಸ್ತ್ರಗಳು ಹೇಗೆ ವ್ಯಕ್ತವಾಗಿವೆ ಎಂಬುದನ್ನು ಮನಗಾಣಬಹುದು.

"ಧಾರ್ಮಿಕ, ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದ ಹೊಸದೊಂದು ವೈಚಾರಿಕ ಕ್ರಾಂತಿಗೆ ನೂತನ ಸಮಾಜ ನಿರ್ಮಾಣಕ್ಕೆ ಬಸವಾದಿ ಶರಣರ ಚಿಂತನೆ, ಮಾತು ಮತ್ತು ಆಚರಣೆ ಕಾರಣ. ಈ ಎಲ್ಲ ಶರಣರ ಮೇಲೆ ಮಹತ್ತರವಾದ ಮತ್ತು ಗಾಢವಾದ ಪ್ರಭಾವ ಬೀರಿದ ಧೀಮಂತ ವ್ಯಕ್ತಿ ಅಲ್ಲಮಪ್ರಭುದೇವರು. ಜ್ಞಾನ-ವೈರಾಗ್ಯದ ಸಾಕಾರಮೂರ್ತಿಯಂತಿದ್ದ ಇವರನ್ನು ಭಕ್ತಿಭಂಡಾರಿ ಬಸವಣ್ಣನವರು ಅನುಭವ ಮಂಟಪದ ಅಧ್ಯಕ್ಷರನ್ನಾಗಿ ಮಾಡಿದರು. ಅಲ್ಲಮರು ಎಲ್ಲ ಶರಣರ ಚಿಂತನೆ, ಸಾಧನೆ, ಅನುಭಾವಗಳಿಗೆ ಮತ್ತು ಸ್ಪಷ್ಟವಾದ ಅಭಿವ್ಯಕ್ತಿಗೆ ನಿರ್ದೇಶನ ನೀಡಿದರು."[೨]

ಹನ್ನೆರಡನೆಯ ಶತಮಾನವು ಕನ್ನಡ ಸಾಹಿತ್ಯ ಚರಿತೆಯ ಪರ್ವಕಾಲ, ಪರಿವರ್ತನೆಯ ಕಾಲ. ಅಂದು ಸೃಷ್ಟಿಯಾದ ವಚನ ಸಾಹಿತ್ಯ ಕನ್ನಡದ ಅಪೂರ್ವ ಸಾಹಿತ್ಯರೂಪ. ವಿಶ್ವಸಾಹಿತ್ಯಕ್ಕೆ ಕನ್ನಡ ನೀಡಿದ ಅತ್ಯಪೂರ್ವ ಕಾಣಿಕೆ. ಸಮಾಜದ ವಿವಿಧ ಸ್ತರಗಳಿಂದ ಬಂದ ಶರಣಸಮೂಹ ಸ್ತ್ರೀ-ಪುರುಷರೆನ್ನದೇ ಸಮಾನ ಭಾವದಿಂದ ಅನುಭವ ಮಂಟಪದಲ್ಲಿ ಒಂದೆಡೆ ಸೇರಿ, ನಡೆಸಿದ ಮೌಲಿಕ ವಿಚಾರ ಮಂಥನದಿಂದ ಹೊರಹೊಮ್ಮಿದ ವಚನಸಾಹಿತ್ಯ ಇಂದು ಶ್ರೇಷ್ಠ ಅನುಭಾವ ಸಾಹಿತ್ಯವಾಗಿ ಪರಿಣಮಿಸಿದೆ.

"ಆತ್ಮಕಲ್ಯಾಣದ ಜೊತೆಗೆ ಸಮಾಜ ಕಲ್ಯಾಣವು ಸಂಗಮಿಸಿದ ಸಾಹಿತ್ಯ ಸೃಷ್ಟಿಯೊಂದಿಗೆ ಸಂಗ್ರಹಕಾರ್ಯವೂ ಪ್ರಾರಂಭವಾಗಿರಬಹುದಾಗಿದೆ. ಇದಕ್ಕಾಗಿ ಒಂದು ಭಂಡಾರವಿದ್ದು, ಅದನ್ನು ನೋಡಿಕೊಳ್ಳಲು ಶಾಂತರಸ ಎಂಬ ಭಂಡಾರಿ ಇದ್ದನೆಂದು ತಿಳಿದುಬರುತ್ತದೆ. ಆದರೆ ಈ ಸಂಗ್ರಹಕಾರ್ಯದ ಸ್ವರೂಪ ಗೊತ್ತಾಗುವುದಿಲ್ಲ. ಬಹುಶಃ ಒಬ್ಬೊಬ್ಬ ವಚನಕಾರನ ಹೆಸರಿನಡಿಯಲ್ಲಿ ಆ ವಚನಗಳು ಸಂಗ್ರಹವಾಗುತ್ತಿರಬೇಕು. ಈ ಅವಧಿಯನ್ನು ವಚನ ಸಾಹಿತ್ಯ ಸಂಯೋಜನೆಯ ಪ್ರಥಮ ಘಟ್ಟವೆಂದು ಕರೆಯಬಹುದು."[೩]

ವಚನಕಾರರು ತಮ್ಮ ಒಳಗಣ ಶುದ್ಧಭಾವದಂತೆ ತಾವು ಬದುಕುತ್ತಿರುವ ಸಮಾಜವು ಪರಿಶುದ್ಧವಾಗಿರಬೇಕೆಂಬುದರ ಜೊತೆಗೆ ಜನಸಮುದಾಯ ನಿರಂತರವಾಗಿ ನೆಮ್ಮದಿಯ ಬದುಕನ್ನು ಸಾಗಿಸಬೇಕು ಎಂಬ ಸದಾಶಯ ಅವರದಾಗಿತ್ತು.

"ಹೀಗೆ ಹನ್ನೆರಡನೆಯ ಶತಮಾನದಲ್ಲಿ ವಚನಗಳ ಸೃಷ್ಟಿ ಸಂಯೋಜನೆ ಜರುಗುತ್ತಿದ್ದಂತೆಯೇ ಕಲ್ಯಾಣ ಕ್ರಾಂತಿಗೆ ಕಾರಣವಾಗಿ ಈ ಸಾಹಿತ್ಯ ರಾಶಿ ದಿಕ್ಕು ದಿಕ್ಕಿಗೂ ಚಲ್ಲವರಿದು ಹೋಯಿತು. ಹಾಗೆ ಚದುರಿಹೋದ ವಚನ ಸಾಹಿತ್ಯವನ್ನು ಹುಡುಕಿ ಸಂಗ್ರಹಿಸುವ, ವಿವಿಧ ಸ್ಥಲಕಟ್ಟಿಗನುಗುಣವಾಗಿ ಸಂಕಲನಗೊಳಿಸುವ ಕಾರ್ಯ ಹದಿನೈದನೆಯ ಶತಮಾನದ ವಿಜಯನಗರದ ಅರಸು ಪ್ರೌಢದೇವರಾಯನ ಕಾಲದಲ್ಲಿ ನಡೆಯಿತು. ಇದನ್ನು ವಚನ ಸಾಹಿತ್ಯದ ಸಂಯೋಜನೆಯ ದ್ವಿತೀಯ ಘಟ್ಟವೆಂದು ಕರೆಯಬಹುದಾಗಿದೆ. ಈ ಅವಧಿಯಲ್ಲಿ ವಚನಗಳ ಸಂಗ್ರಹ ಕಾರ್ಯ ಭರದಿಂದ ನಡೆಯಿತು. ವಿವಿಧ ಉದ್ದೇಶಗಳ ಹಿನ್ನೆಲೆಯಲ್ಲಿ ವಚನಗಳನ್ನು ವಿಂಗಡಿಸುವ, ಅವುಗಳಿಗೆ ಟೀಕೆ ಟಿಪ್ಪಣೆ ವ್ಯಾಖ್ಯಾನಗಳನ್ನು ಬರೆಯುವ ಉತ್ತರ -ಪ್ರತ್ಯುತ್ತರ ರೂಪದ ಶೂನ್ಯ ಸಂಪಾದನೆಯಂತಹ ಕಥಾ ಪ್ರಸಂಗವನ್ನು ರೂಪಿಸುವ ಪ್ರಯೋಗಗಳು ಇಲ್ಲಿ ಜರುಗಿದವು. ಮಹಲಿಂಗದೇವ, ಜಕ್ಕಣಾಚಾರ್ಯ, ಕಲ್ಲುಮಠದ ಪ್ರಭುದೇವ, ಶಿವಗಣ ಪ್ರಸಾದಿ ಮಹಾದೇವಯ್ಯಾ ಮೊದಲಾದವರು ಈ ಕಾರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಂಡರು."[೪]

"ತೋಂಟದ ಸಿದ್ಧಲಿಂಗ ಯತಿಗಳ ಕಾಲವನ್ನು ವಚನ ಸಾಹಿತ್ಯ ಸಂಯೋಜನೆಯ ಮೂರನೆಯ ಘಟ್ಟವೆಂದು ಗುರುತಿಸಲಾಗುತ್ತದೆ. ಈ ಅವಧಿಯಲ್ಲಿ ಬಂದ ಏಳುನೂರೊಂದು ವಿರಕ್ತರು ತೋಂಟದ ಸಿದ್ಧಲಿಂಗರ ಶಿಷ್ಯ ಪ್ರಶಿಷ್ಯರು. ಇವರು ಸ್ವತಂತ್ರ ವಚನ ರಚನೆಯೊಂದಿಗೆ ವಚನ ಸಂಗ್ರಹ ಸಂಕಲನ ಸಂಪಾದನಾ ಕಾರ್ಯವನ್ನು ವ್ಯಾಪಕವಾಗಿ ಕೈಗೆತ್ತಿಕೊಂಡರು. ಈ ಕಾಲದಲ್ಲಿ ಸಂಪಾದನಾ ಸಮಯ ಎಂಬುದೊಂದು ಹುಟ್ಟಿಕೊಂಡು ವಚನ ಸಾಹಿತ್ಯ ಸಂಪಾದನೆಯನ್ನೇ ಕೆಲವರು ತಮ್ಮ ಬದುಕಿನ ಮುಖ್ಯ ಮಣಿಹವನ್ನಾಗಿ ಮಾಡಿಕೊಂಡರು.

ಹೀಗೆ ಮೂರು ಘಟ್ಟಗಳಲ್ಲಿ ನಡೆದುಬಂದ ವಚನ ಸಾಹಿತ್ಯ ಸಂಯೋಜನೆಯ ಕಾರ್ಯವನ್ನು ಮುಖ್ಯವಾಗಿ

ಮೂರು ಪ್ರಕಾರಗಳಲ್ಲಿ ಗುರುತಿಸಬಹುದು.

೧. ಸಂಗ್ರಹ

೨. ಸಂಕಲನ

೩. ಸಂಪಾದನೆ "

**ವಚನ ವೈಶಿಷ್ಟ್ಯ :**

ಈ ಶರಣರ ವಚನಗಳು ಅನುಭಾವಿಕ ಪ್ರಪಂಚಕ್ಕೆ ದೊರೆತ ಅನರ್ಘ್ಯ ರತ್ನಗಳಂತಿವೆ. ಅವು ಅನುಭಾವದ ರಸಘುಟ್ಟಿಗಳು. ಅವು ಸತ್ಯದರ್ಶನ ಮಾಡಿಸುವ ಹಾಗೂ ಬದುಕಿದವರ ಅಭಿವ್ಯಕ್ತಿಗಳಾಗಿರುವುದರಿಂದ ವಿಶಿಷ್ಟವಾಗಿ ತೋರುತ್ತವೆ. ಅವರವರ ವೃತ್ತಿ ಕಾಯಕಗಳ ಪರಿಭಾಷೆಯ ಮೂಲಕ ಜನರಿಗೆ ಬೋಧಿಸುತ್ತಿದ್ದುದು ಅವರ ವಚನಗಳಿಂದ ತಿಳಿದುಬರುತ್ತದೆ.

ಶಿವಶರಣರು ಶಬ್ದಕ್ಕೆ ನಿಲುಕದ ತಮ್ಮ ಆಧ್ಯಾತ್ಮಿಕ ಅನುಭವವನ್ನು ಅಭಿವ್ಯಕ್ತಿಸಲು ವಿನೂತನ ಶೈಲಿಯ ವಚನಗಳನ್ನು ಬಳಸಿದ್ದಾರೆ. ಅವುಗಳು ಬೆಡಗಿನ ವಚನಗಳೆಂದು ಪ್ರಸಿದ್ಧವಾಗಿವೆ, ದೇಹ, ಇಂದ್ರಿಯ, ಮನಸ್ಸು, ಆತ್ಮ, ಪರಮಾತ್ಮ ಮುಂತಾದ ತತ್ತ್ವಗಳಿಗೆ ಸಾಂಕೇತಿಕ ಪದಗಳನ್ನು ಬಳಸಿ ಅಸಂಗತತೆ ಮತ್ತು ವಿರೋಧೋಕ್ತಿಗಳ ಮೂಲಕ ರಚಿಸಿದ ಒಗಟುಗಳಂತೆ ಕಾಣುವ ವಚನಗಳು ಬೆಡಗಿನ ವಚನಗಳು. ಕೇವಲ ಬೌದ್ಧಿಕ ಚಮತ್ಕಾರವಾಗಿರದೆ ಆಧ್ಯಾತ್ಮಿಕ ಅನುಭಾವವನ್ನು ಗರ್ಭೀಕರಿಸಿಕೊಂಡಿರುವ ಕಲಾತ್ಮಕ ಕಾವ್ಯಮಯ ಸೃಷ್ಟಿಗಳು. ಬೆಡಗಿನ ವಚನಗಳು ಅವರ ಆಧ್ಯಾತ್ಮ ಒಲವು-ನಿಲುವುಗಳನ್ನು ಮಾತ್ರವಲ್ಲದೆ ಅಭಿವ್ಯಕ್ತಿಯ ಅದ್ವಿತೀಯ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತವೆ.

**ವಚನಗಳಲ್ಲಿ ಕಾವ್ಯಾಂಶ :**

ಶರಣರು ವಚನಗಳನ್ನು ಸಾಹಿತ್ಯೋದ್ದೇಶಕ್ಕಾಗಿ ರಚಿಸಿರಲಿಲ್ಲ. ವಚನಗಳಲ್ಲಿ ಕಾವ್ಯಾಂಶ ಇದೆ, ಇಲ್ಲ ಎಂಬುದನ್ನು ಪರಿಶೀಲಿಸುವುದಾಗಲಿ, ಕಾವ್ಯ ಲಕ್ಷಣ, ಛಂದ ಬಂಧ, ಕಾವ್ಯಗುಣಗಳು ಇತ್ಯಾದಿ ಮಾನದಂಡವಾಗಿ ಅವುಗಳ ಮೌಲ್ಯಮಾಪನ ಮಾಡುವುದಾಗಲಿ, ಅಪ್ರಕೃತವಾದುದು. ಆದರೆ ಅವುಗಳಲ್ಲಿ ಕಾವ್ಯ ಗುಣವೂ ಅಲ್ಲಲ್ಲಿ ಮಿಂಚಿದೆ. ಕಾವ್ಯಗುಣ ವಚನಗಳ ಅಭಿವ್ಯಕ್ತಿಗೆ ವಿಶೇಷತೆಯನ್ನು, ಮೆರಗನ್ನು ನೀಡಿದ್ದಲ್ಲಿ ಅದನ್ನು ಗುರುತಿಸಿ ಮೆಚ್ಚುವದು ಯೋಗ್ಯವೇ ಆಗಿದೆ. ಸಹೃದಯನಿಗೆ ರಸಾಸ್ವಾದನೆ, ರಂಜನೆ, ವಚನಗಳ ಆಶಯವಲ್ಲ. ಶಿವಶರಣರು ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ ಸ್ವತಂತ್ರ ಹಕ್ಕುಗಳು ಸಮಾಜೋದ್ಧಾರಕ್ಕಾಗಿ ವಿನೂತನವೂ ಆದ ಚಿಂತನ-ಮಂಥನ, ಮಂಡನೆ-ಖಂಡನೆ ಮಾಡಬಲ್ಲ ನಿಷ್ಠುರಿಗಳಾಗಿದ್ದರೆ. ತಮ್ಮ ತಮ್ಮ ಅನುಭಾವಗಳನ್ನು ಆಧ್ಯಾತ್ಮ ಮನೋಧರ್ಮದ ಜನಸಾಮಾನ್ಯರೊಂದಿಗೆ ಹಂಚಿಕೊಳ್ಳಲು ಈ ಮಾಧ್ಯಮ ಸಮರ್ಥವಾದುದು ಉಪಯುಕ್ತವಾದುದು. ಬಹುಶಃ ಇದೇ ಕಾರಣದಿಂದಲೇ ಈ ಸಾಹಿತ್ಯ ಪ್ರಕಾರವನ್ನು ಈ (ವಚನರೂಪದ) ಅಭಿವ್ಯಕ್ತಿಯನ್ನು ಆರಿಸಿಕೊಂಡಿರಬಹುದಾಗಿದೆ.

ಹನ್ನೊಂದನೆಯ ಶತಮಾನದ ಅಂಚಿಗೆ ಸಿದ್ಧ ಸ್ವರೂಪವನ್ನು ಪಡೆದುಕೊಂಡಿರತಕ್ಕಂಥ ವಚನ ಸಾಹಿತ್ಯವನ್ನು ಹನ್ನೆರಡನೆಯ ಶತಮಾನದ ಶಿವಶರಣರು ವ್ಯಾಪಕವಾಗಿ ಬಳಸಿದರು, ಸಮೃದ್ಧವಾಗಿ ಬೆಳೆಸಿದರು. ದೇವರದಾಸಿಮಯ್ಯ, ಬಸವಣ್ಣ, ಅಕ್ಕಮಹಾದೇವಿ ಇವರ ವಚನಗಳಲ್ಲಿ ಕಾವ್ಯಗುಣ ಸಹಜವಾಗಿ ಹೊಮ್ಮುತ್ತದೆ. ಅವರ ಭಕ್ತಿಯ ಭಾವಾಭಿವ್ಯಕ್ತಿಯಲ್ಲಿ ಸಾಮಾಜಿಕ ಹಾಗೂ ವ್ಯವಹಾರಿಕ ನೀತಿಬೋಧೆ ಮೌಲ್ಯಪ್ರತಿಪಾದನೆಯಲ್ಲಿ ವಚನಗಳ ಕಾವ್ಯಸೌಂದರ್ಯ ಹಾಗೂ ಲಾಲಿತ್ಯವನ್ನು ಪಡೆದುಕೊಂಡಿದೆ.

ವಚನಗಳು ದರ್ಶನ ಅನುಭಾವಗಳ ಸಂವಹನೆಯ ಸಾಧನವಾಗಿ ಬಳಕೆಯಾಗಿದ್ದರೂ ಎಲ್ಲ ವಚನಗಳಲ್ಲಿ ಕಾವ್ಯಾಂಶ ಕಾಣದಿದ್ದರೂ ಇರುವೆಡೆ ಬಹು ಸುಂದರವಾಗಿವೆ. ಮಾರ್ಗ ಅಥವಾ ಚಂಪೂ ಸಾಹಿತ್ಯದಲ್ಲಿ ವಚನದ ಬಳಕೆ ಕಂಡುಬರುತ್ತದೆ. ಬಸವಣ್ಣನವರ ವಚನಗಳಲ್ಲಿ ಶಿಲ್ಪ ಮತ್ತು ಸೌಂದರ್ಯ ಕಾವ್ಯಭಾಗದ ಮಧ್ಯ, ಅಲ್ಲಲ್ಲಿ ವಿವರಣೆಗಾಗಿ ಇಲ್ಲವೇ ವಿಶ್ಲೇಷಣೆಗಾಗಿ ಮಾತ್ರ ಅದು ಮೀಸಲಿದ್ದು, ಕಾವ್ಯದ ಓಟಕ್ಕೆ ಸಹಕಾರಿಯಾಗಿದೆ. ಕನ್ನಡದ ಮೊಟ್ಟ ಮೊದಲ ಲಕ್ಷಣ ಗ್ರಂಥವಾದ ಕವಿರಾಜ ಮಾರ್ಗದಿಂದ ಹಿಡಿದು ನವೋದಯದ ಕಾಲದವರೆಗೂ ಅದು ವಿಸ್ತರಿಸಿದೆ. ಇಷ್ಟೇ ಅಲ್ಲ ಕನ್ನಡದ ಪ್ರಸಿದ್ಧ ವ್ಯಾಕರಣ ಗ್ರಂಥ ಕರ್ತೃಗಳಾದ ನಾಗವರ್ಮ, ಜಯಕೀರ್ತಿ ಮತ್ತು ಕೇಶಿರಾಜರು ಕ್ರಮವಾಗಿ ತಮ್ಮ ಛಂದೋಂಬುದ್ಧಿ, ಛಂದೋನುಶಾಸನ ಹಾಗೂ ಶಬ್ದಮಣಿದರ್ಪಣ ಮೊದಲಾದ ವ್ಯಾಕರಣ ಕೃತಿಗಳಲ್ಲೆಲ್ಲ ವಚನವನ್ನು ಸರಳವಾದ ಪ್ರತಿಪಾದನೆಗಾಗಿ ಉಪಯೋಗಿಸಿಕೊಂಡಿದ್ದಾರೆ. ವಚನವು ಮಾರ್ಗಸಾಹಿತ್ಯದಲ್ಲಿ ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ಈ ಕೆಳಗಿನ ಕಾರಣಗಳಿಗಾಗಿ ಬಳಕೆಯಾಗುತ್ತಿತ್ತು.

೧. ವಿವರಣೆಯ ಸಂದರ್ಭದಲ್ಲಿ

೨. ಕಾವ್ಯದ ಏಕತಾನತೆಯ ನಿವಾರಣೆಗಾಗಿ

೩. ಕಾವ್ಯಕ್ಕೆ ಒಗ್ಗದ ಭಾವತೀವ್ರತೆಯನ್ನು ಪ್ರಕಟಪಡಿಸುವುದಕ್ಕಾಗಿ

೪. ಕ್ಲಿಷ್ಟ ವಿಚಾರಗಳ ಸರಳ ನೇರ ಪ್ರತಿಪಾದನೆಗಾಗಿ

೫. ಕಾವ್ಯದಲ್ಲಿ ವಿಶೇಷ ಪ್ರಭಾವ ಮತ್ತು ಪರಿಣಾಮ ಸೃಷ್ಟಿಗಾಗಿ

೬. ಓದುಗಬ್ಬವಾಗಿ ಬಳಸಿಕೊಳ್ಳುವುದಕ್ಕಾಗಿ

ಪೂರ್ವದ ಕನ್ನಡ ಕವಿಗಳು ಕಾವ್ಯಕ್ಕೆ ಕೊಟ್ಟ ಪ್ರಾಮುಖ್ಯತೆಯನ್ನು ವಚನಕ್ಕೆ ಕೊಡದಿದ್ದರೂ, ವಚನವಿಲ್ಲದೆ ಕಾವ್ಯ ರಚನೆ ಮಾಡಿದ ಕವಿಗಳು ತೀರ ವಿರಳ. ಮುಂದೊಮ್ಮೆ ಮುದ್ದಣನು ಸಂಪೂರ್ಣವಾಗಿ ವಚನಕ್ಕೆ ಕಟ್ಟುಬಿದ್ದು ಶ್ರೀರಾಮಾಶ್ವಮೇಧವನ್ನು ರಚಿಸಿದ್ದಾನೆ.

ಮುದ್ದಣನು ರಚಿಸಿದ ಹಳಗನ್ನಡದ ವಚನವು ಗದ್ಯವಾಗಿಯೂ, ಹಿಂದಿನ ಕವಿಗಳಲ್ಲಿ ಗದ್ಯ ಕಾವ್ಯವಾಗಿಯೂ ಬಳಕೆಯಲ್ಲಿದ್ದಿರಬಹುದು. ವಚನ ಮತ್ತು ಗದ್ಯಗಳಲ್ಲಿ ಗೆರೆ ಎಳೆದು ತೋರಿಸುವಂಥ

ಭಿನ್ನತೆಗಳೇನೂ ಇಲ್ಲ. ಸಂಸ್ಕೃತ ಕವಿಗಳು ಪದ್ಯಕಾವ್ಯ ಮತ್ತು ಗದ್ಯಕಾವ್ಯ ಎಂದೆರಡು ಭಾಗಗಳಲ್ಲಿ ಸಾಹಿತ್ಯ ರಚಿಸುತ್ತಿದ್ದರು ಎಂದು ಕಂಡುಬರುತ್ತದೆ.

"ವಚನದ ಅರ್ಥ ವಿಶ್ಲೇಷಣೆಯ ಬಹುವ್ಯಾಪಕವಾದ ಚರ್ಚೆಗೆ ಒಳಗಾಗಿ. ಕೆಲವರು ಅದಕ್ಕೆ 'ಗದ್ಯ ಎಂದರೆ ಮತ್ತೆ ಕೆಲವರು ಪದ್ಯದ ಮಾದರಿ ಎಂದಿದ್ದಾರೆ. ಗದ್ಯ-ಪದ್ಯ ಮಿಶ್ರಿತ 'ಗಪದ್ಯ' ಎಂತಲೂ, ಗದ್ಯಕಾವ್ಯ ಎಂತಲೂ ಇನ್ನು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ."

ಫ.ಗು. ಹಳಕಟ್ಟಿಯವರಿಂದ ಹಿಡಿದು ಎಂ.ಆರ್.ಶ್ರೀಯವರವರೆಗೆ ಒಂದು ರೀತಿಯ ಚರ್ಚೆ ನಡೆದರೆ, ಇತ್ತೀಚಿನ ವಿಮರ್ಶಕರು, ಸಂಶೋಧಕರು ವಿಮರ್ಶೆಯ ವಿಬಿನ್ನ ನೆಲೆಗಳಲ್ಲಿ ವಚನಗಳನ್ನು ವಿಶ್ಲೇಷಿಸಿದ್ದಾರೆ. ಆ ಕಾರಣಕ್ಕಾಗಿ ವಚನಗಳ ಭಾಷಿಕ, ಸಾಹಿತ್ಯಕ, ಅಂತರಂಗಿಕ ಗುಣಗಳ ಪ್ರಸನ್ನತೆಯಿಂದಾಗಿ ಅವುಗಳನ್ನು 'ಅರ್ಥಪೂರ್ಣವಾದ ಶ್ರೇಷ್ಠ ಕಾವ್ಯ' ಎಂದು ನಿರ್ಧರಿಸಲಾಗಿದೆ. 'ಕಂದ ವೃತ್ತಾದಿ ಪದ್ಯಗಳಂತೆ ವಚನಗಳು ಛಂದೋಬದ್ಧವಲ್ಲವಾದರೂ ಗದ್ಯದಂತೆ ಸ್ವಚ್ಛಂದವಾದವೂ ಅಲ್ಲ. ಇವುಗಳ ರಚನೆಯಲ್ಲಿ ತೋರುವ ಒಂದು ವಿಧದ ಲಯಬದ್ಧತೆ ಇವುಗಳನ್ನು ಹಾಡುಗಳಂತೆ ಅನ್ನಲು ಅನುಕೂಲ ಕಲ್ಪಿಸಿದೆ' ಎಂಬ ಚಿದಾನಂದಮೂರ್ತಿಯವರ ಮಾತು ವಚನಗಳು ಕಾವ್ಯ ಎಂಬುದನ್ನು ಸಮರ್ಥಿಸುತ್ತದೆ. ಇಲ್ಲಿನ 'ಹಾಡುಗಳಂತೆ' 'ಹಾಡಲು' ಎಂಬ ಪದಗಳನ್ನು ಬಳಸಿದ್ದೇ ಅವು ಕವನಗಳಾಗಿವೆ ಎಂದು ತಿಳಿಸುವ ಉದ್ದೇಶಕ್ಕೆ, ವಚನಗಳು ಹಾಡಲು ಹಾಡಾಗಿ, ಓದಲು ನೆನಪಿಟ್ಟುಕೊಳ್ಳಲು, ಥಟ್ಟನೇ ಹೇಳಲೂ ಅನುಕೂಲವಾದ ಶ್ರೇಷ್ಠ ರಚನೆಗಳೆಂಬುದನ್ನು ಯಾರೂ ಅಲ್ಲಗಳೆಯಲಾರರು.

ಆದರೂ ವಚನಗಳನ್ನು ಕಾವ್ಯವೆಂದು ಖಚಿತವಾಗಿ ಗುರುತಿಸುವುದಕ್ಕೆ ನವ್ಯಕಾವ್ಯ ಬರುವವರೆಗೆ ಕಾಯಬೇಕಾಯಿತು. ನವ್ಯ ಕಾವ್ಯದ ಆಗಮನವಾದ ಮೇಲೆ ವಚನಗಳನ್ನು ಕಾವ್ಯವೆಂದು ಖಚಿತವಾಗಿ ಸಮರ್ಥಿಸುವ ಅಗತ್ಯವೇ ಇಲ್ಲದಂತೆ ಅವು ತಂತಾನೇ ಕಾವ್ಯವಾಗಿ ಬಿಟ್ಟವು. ಸಾಹಿತ್ಯದ ಇತಿಹಾಸದಲ್ಲಿ ಆಗಾಗ ಕಾಣಿಸಿಕೊಳ್ಳುವ ಹೊಸ ಚಳುವಳಿಗಳು ತಮ್ಮ ಹಿಂದಿನ ಸಾಹಿತ್ಯ ಪರಂಪರೆಗೆ ಹೇಗೆ ಹೊಸ ಅರ್ಥ ಕೊಡಬಲ್ಲವೆಂಬುದಕ್ಕೆ ಇದೊಂದು ಸ್ಪಷ್ಟ ನಿದರ್ಶನ. ಇಲ್ಲಿಂದ ಮುಂದೆ ವಚನಗಳಲ್ಲಿ 'ಕಾವ್ಯಾಂಶ'ಗಳನ್ನು ಕಷ್ಟಪಟ್ಟು ಹುಡುಕುವ ಅಗತ್ಯ ಉಳಿಯಲಿಲ್ಲ. ಬದಲಾಗಿ ವಚನಗಳನ್ನು ಮುಖ್ಯವಾಗಿ ಕಾವ್ಯದ ಮಾನದಂಡಗಳಿಂದಲೇ ವಿಶ್ಲೇಷಿಸುವ, ವಿಮರ್ಶಿಸುವ ಹೊಸ ಉಪಕ್ರಮ ಆರಂಭವಾಯಿತು. ನಂತರದಲ್ಲಿ ಅನೇಕರು, ಅಂದರೆ ಎಂ.ಜಿ. ಕೃಷ್ಣಮೂರ್ತಿ, ಎ.ಕೆ. ರಾಮಾನುಜನ್, ಜಿ.ಎಸ್.ಶಿವರುದ್ರಪ್ಪ, ಚನ್ನವೀರ ಕಣವಿ, ಕುವೆಂಪು, ದಾಮೋದರ್‌ರಾವ್, ಕೆ. ಕೃಷ್ಣಮೂರ್ತಿ, ಕೀ.ರಂ. ನಾಗರಾಜ, ಡಿ.ಆರ್. ನಾಗರಾಜ, ತಿಪ್ಪೇರುದ್ರಸ್ವಾಮಿ, ಶ್ರೀಮತಿ ಉಷಾ, ಡಾ. ಎಸ್. ವಿದ್ಯಾಶಂಕರ, ಎಸ್.ಎಂ. ಪಾರ್ವತಮ್ಮ ಹಾಗೂ ಇತ್ತೀಚಿನ ಎಲ್ಲ ಯುವ ಬರಹಗಾರರು ಬಸವಾದಿ ಶರಣರ ವಚನಗಳನ್ನು ಕಾವ್ಯದ ಪರಿಕಲ್ಪನೆಯೆಂತಲೇ ಗಟ್ಟಿಗೊಳಿಸುತ್ತಿದ್ದಾರೆ.[೭]

ಶಿವಶರಣರ ಅನುಭಾವಿಕ ಪರಿಸರದಲ್ಲಿ ಸಾಹಿತ್ಯಿಕ ಸಂವಹನದಲ್ಲಿ ಬಳಕೆಗೊಂಡಿದ್ದ 'ವಚನ'ಗಳು ಇದ್ದಕ್ಕಿದ್ದಂತೆ ಮಾರ್ಗ ಸ್ವರೂಪದ ತನ್ನೆಲ್ಲ ಮೂಲ ಗುಣಗಳನ್ನು ಕಳಚಿಕೊಂಡು ದೇಸೀ ನೆಲೆಯಾಗಿ ರಚನೆಯಾಗಬಹುದಾಗಿದೆ.

"ವಚನ ಎಂಬ ಪದಕ್ಕೆ ಬಳಕೆಯಾಗಿರುವ ಅರ್ಥ ಸಮೂಹಗಳು: ವಚನ (ನಾ) ಮಾತನಾಡುವದು; ಮಾತು; ಪ್ರತಿಜ್ಞೆ; ಗದ್ಯ; ಕನ್ನಡ ಗದ್ಯ ಸಾಹಿತ್ಯದಲ್ಲಿ ಒಂದು ಪ್ರಕಾರ; ವ್ಯಾಕರಣದಲ್ಲಿ ನಾಮ ಪದದ ಸಂಖ್ಯೆಯನ್ನು ಸೂಚಿಸುವ ಪದ."[೮]

"ವಚನ ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯ ಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ, ಆತ್ಮಸಾಕ್ಷಿಯ ಮಾತು ಎಂದು ಅರ್ಥ. ನಡೆ ಹೇಗೆ ಇರಲಿ ನುಡಿ ಮಾತ್ರ ಕಲಾತ್ಮಕವಾಗಿದ್ದುದು 'ರಚನೆ'ಯಾದರೆ ನಡೆದಂತೆ ನುಡಿದ ಆತ್ಮಸಾಕ್ಷಿಯ ವಾಣಿ ವಚನವೆನಿಸುತ್ತದೆ."

"ವಚನ ಎಂದರೆ ಪ್ರಮಾಣ ಎಂದರ್ಥ- ಇದು ಸಾಹಿತ್ಯ ಪರಿಭಾಷೆಯಾಗಿ ಒಂದು ಪ್ರಕಾರದ ಕಾವ್ಯ. ಹಾಡಿದರೆ ಹಾಡಾಗುವ, ಓದಿದರೆ ಗದ್ಯವಾಗುವ ಕನ್ನಡದ ವಿಶಿಷ್ಟ ಕಾವ್ಯ ಪ್ರಕಾರ. ಇದು ಶರಣರ ಆಂದೋಲನ ಮತ್ತು ಅಭಿವ್ಯಕ್ತಿಗೆ ಸಂಗಾತಿಯಾಗಿತ್ತು. ವಚನ ಸಾಹಿತ್ಯ, ಕನ್ನಡ ಸಾಹಿತ್ಯದಲ್ಲಿ ಪ್ರಭಾವಶಾಲಿ ಆತ್ಮವಿಮರ್ಶೆಯ ಮಾಧ್ಯಮವಾಗಿ ಸ್ವತಂತ್ರವಾಗಿ ಬೆಳೆದು ವಿಜೃಂಭಿಸುವ ಮುಂದಿನ ಸಾಹಿತ್ಯ ಪರಂಪರೆಗಳ ಮೇಲೆ ಪ್ರಭಾವ ಬೀರಿ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ವಿಶ್ವಸಾಹಿತ್ಯದಲ್ಲಿ ಒಂದು ಅವಿಭಾಜ್ಯ ಅಂಗವಾಗಿದೆ."[೯]

'ವಚನ' ಎಂಬುದು ಸಂಸ್ಕೃತ ಪದ. ವಚನ ಎಂಬಲ್ಲಿ 'ವಚ್' ಎಂಬ ಧಾತು 'ಮಾತಾಡು' ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಅದಕ್ಕೆ ಉಪಯುಕ್ತ ಷಷ್ಠೀ ವಿಭಕ್ತಿ ಪ್ರತ್ಯಯ ನ್+ಅ=ನ ಸೇರಿ ವಚನ ಎಂಬ ಶಬ್ದ ಪೂರ್ಣಗೊಳ್ಳುತ್ತದೆ. ವಚಿಸು, ವಾಚನ, ವಾಚಿಸು ಎಂಬ ಕ್ರಿಯಾಪದಗಳ ಸೃಷ್ಟಿಯು ಈ ಹಿನ್ನೆಲೆಯಲ್ಲಿ ಆಗಿರುವುದನ್ನು ಗಮನಿಸಬೇಕು. ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ಈ ಶಬ್ದವನ್ನು ಈ ತೆರನಾಗಿ ವಿಂಗಡಿಸಿ ವಿವರಣೆ ನೀಡಬಹುದು. ವ್+ಅ+ಚ್+ಅ+ನ್+ಅ ಈ ಆರು ಧ್ವನಿಗಳು ಉಪಯುಕ್ತ ಘಟಕಗಳಾಗಿದ್ದರಿಂದ ಮೊದಲ ನಾಲ್ಕು ಧ್ವನಿಗಳ ಮೊತ್ತ ವಚ ಎಂದಾಗುತ್ತದೆ. ಇದು ಸಂಸ್ಕೃತ ಪದವಾದ್ದರಿಂದ ವ್ಯಜನಾಂತವಾಗಿ 'ವಚ್' ಎಂದು ಬಳಸಲ್ಪಟ್ಟಿದೆ. ವಚ್ ಎಂದರೂ ಅದೇ ಅರ್ಥ ಬರುತ್ತದೆ. ಇಲ್ಲಿ ಯಾವುದೇ ರೀತಿ ಅರ್ಥ ವ್ಯತ್ಯಾಸವಾಗುವುದಿಲ್ಲ. ಆದರೆ ಇಷ್ಟಕ್ಕೇ ವಚ ಎಂಬ ಪದವು ನಿಂತು ಬಿಟ್ಟರೆ ಅದು ಕೇವಲ ಮೂಲಧಾತು ಮಾತ್ರ ಆಗಿ ಉಳಿದುಕೊಂಡು ಬಿಡುತ್ತದೆ. ಹಾಗಾಗಿ ನಾಮಪದ ಕ್ರಿಯಾಪದ ಧಾತು ರೂಪ ಎಲ್ಲವೂ ಸಂಗಮಿಸಿ ವಚನ ಎಂಬ ಶಬ್ದ ಲಭಿಸಿದೆ.

"ವಚನ ಸಾಹಿತ್ಯ ಎಂಬ ಪದವು ಬಹು ವಿಶಾಲಾರ್ಥವನ್ನು ಪಡೆದ ಪದವಾಗಿದ್ದು ಅದು ಗದ್ಯ, ಪದ್ಯ, ಗೀತ, ಹಾಡು ಮತ್ತು ವಚನ ಇವೆಲ್ಲವುಗಳಿಗೂ ಅನ್ವಯವಾಗುತ್ತದೆ. ಆದುದರಿಂದ ಅದು ಕನ್ನಡ ಸಾಹಿತ್ಯದ ವಿಶೇಷ ರೂಪವೆಂದು ಹೇಳಬಹುದಾಗಿದೆ"[೧೦]

"ವಚನಸಾಹಿತ್ಯ ಎಂಬ ಪ್ರಭೇದವು ಸುಲಭವೂ, ಸಹಜವೂ ಆದ ಕನ್ನಡ ನುಡಿಯಲ್ಲಿ ಲೋಕಾನುಭವವನ್ನು, ಆಂತರಿಕ ಅನುಭಾವವನ್ನು, ರಸವತ್ತಾದ ಬೆಡಗಿನಿಂದ ಅಭಿವ್ಯಕ್ತಿಗೊಳಿಸುವ ಒಂದು ಹೊಸದಾದ ಗದ್ಯ ಪ್ರಯೋಗವಾಗಿದೆ. ಬಸವಾದಿ ಶರಣರು, ಬಸವಣ್ಣನವರು ತಮ್ಮ ಭಕ್ತಿಯುತವಾದ ಜೀವನದ ಆತ್ಯಂತಿಕ ಪ್ರಭಾವದಿಂದ ಹಾಗೂ ಅದರ ದಿವ್ಯ ಅಭಿನಿವೇಶದಿಂದ ಸಾಹಿತ್ಯದ ಹೊಸ ಪ್ರಯೋಗವನ್ನಾಗಿ ರೂಪಿಸಿದರು. ಹನ್ನೆರಡನೆಯ ಶತಮಾನದಲ್ಲಿ ಅವರು ಪ್ರಾರಂಭಿಸಿದ ಕ್ರಾಂತಿಗೆ ಅದು ಪ್ರತಿಮುಖವಾಯಿತು. ಆ ಕಾಲದ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಕ್ರಾಂತಿಗಳೆಲ್ಲವುಗಳಿಗೂ ಅದು ಅಪೂರ್ವವಾದ ವಾಹನವಾಯಿತು."[೧೧]

ಬಸವಣ್ಣನವರ ಅಭಿವ್ಯಕ್ತಿಯಂತೆ "ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪ ನೀರನುಂಬುವ ವಿಧಿಯಂತೆ" ಎಂಬ ಮಾತಿನಲ್ಲಿ ಹಿರಿಯ ಶರಣ ಶರಣೆಯರ ನುಡಿಯಾಗಿ ಮಹತ್ತರ ರೀತಿಯಲ್ಲಿ ಬಳಕೆಯಾಗಿದೆ.

ಕನ್ನಡ ನಾಡಿನಲ್ಲಿ ಉದಯಿಸಿದ ವಚನ ಸಾಹಿತ್ಯವೂ ಈ ಮಣ್ಣಿನ ಸತ್ವವನ್ನು ಅರಗಿಸಿಕೊಂಡು ಬೆಳೆದು ಹೆಮ್ಮರವಾದದ್ದು ಕುತೂಹಲಕರ ಸಂಗತಿಯಾಗಿದೆ. ಸಂಸ್ಕೃತದ ಪದ್ಯಗಂಧಿ, ಪಕ್ಕದ ತಮಿಳುನಾಡಿನ ನಾಯನ್ಮಾರ ಸಂಸ್ಕೃತಿಯ 'ತೇವಾರಂ' ಹಾಗೂ ಕನ್ನಡ ಜಾನಪದ ಈ ಮೂರೂ ವಚನ ಕಾವ್ಯಗಳಿಗೆ ಗಾಢವಾದ ಪ್ರಭಾವವನ್ನು ಉಂಟುಮಾಡಿವೆ. ಏಕೆಂದರೆ ಪ್ರೇರಣೆ-ಪ್ರಭಾವಗಳಿಲ್ಲದೇ ಯಾವ ಹೊಸ ಪ್ರಯೋಗಗಳು ಹುಟ್ಟಿಕೊಳ್ಳುವುದಿಲ್ಲ.

ಈ ಅಂಶವನ್ನೇ ಇರಿಸಿಕೊಂಡು ನಾವು ಲಕ್ಷವಹಿಸಬೇಕಾದ ಸಂಗತಿಯೆಂದರೆ ಶರಣರಿಗೆ ಆಗಿರುವ ಪ್ರಭಾವವೆಂದರೆ ಅದರ ಮೂಲ ಜನಪದ ಸಂಸ್ಕೃತಿ. ಇದನ್ನೇ ಜಾನಪದವೆಂತಲೂ ಕರೆಯುತ್ತಾರೆ. ಜಾನಪದ ಒಂದು ಜನಾಂಗದ ಅಧ್ಯಯನ, ಇದರಲ್ಲಿ ಆ ಸಮೂಹದ ಒಟ್ಟು ಬದುಕು ಹಾಸುಹೊಕ್ಕಾಗಿರುತ್ತದೆ. ಅಧ್ಯಯನದ ವ್ಯಾಪ್ತಿ ಹೆಚ್ಚಾದಂತೆ ಇದನ್ನೇ ದೇಶೀ ಸಂಸ್ಕೃತಿ ಎಂದು ಗುರುತಿಸಿದ್ದುಂಟು.

ಈ ವಚನ ಸಾಹಿತ್ಯದ ಉಗಮದ ಬಗೆಗೆ ಕೆಲವು ವಿದ್ವಾಂಸರು ತಮ್ಮದೇ ಆದ ದೃಷ್ಟಿಕೋನದಲ್ಲಿ ಅಭಿವ್ಯಕ್ತಿಸಿದ್ದನ್ನು ಈ ಕೆಳಗಿನ ಹೇಳಿಕೆಗಳ ಮೇಲೆ ಗ್ರಹಿಸಬಹುದಾಗಿದೆ.

ಈ ಮೇಲಿನ ಹೇಳಿಕೆಯಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದದ್ದು ಡಾ. ಪಿ.ಸಿ. ನಾರಾಯಣರದ್ದು. ಒಂದು ಅಖಂಡ ಸಮಾಜ ನಿರ್ಮಾಣಕ್ಕಾಗಿ ಹುಟ್ಟಿಕೊಂಡ ಚಳುವಳಿಯ ಮೇಲೆ ಆಗಬಹುದಾದ ಪ್ರಭಾವ ಪ್ರೇರಣೆಗಳು ಮತ್ತು ಇವುಗಳ ತಳಪಾಯ ಯಾವುದು ? ಎನ್ನುವುದಕ್ಕೆ ಸ್ಪಷ್ಟವಾದ ಆಧಾರಗಳು ಕಂಡುಬರುವುದಿಲ್ಲ.

ಆದರೆ ಇನ್ನುಳಿದ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಒಮ್ಮತದ ತೀರ್ಮಾನಕ್ಕೆ ಬರಬಹುದಾಗಿದೆ. ಯಾವುದೇ ವಚನದ ಭಾಷೆ, ಶೈಲಿ, ವಿಷಯ ಮಂಡನೆ, ಸರಳತೆ, ಅರ್ಥಗ್ರಹಿಕೆ, ಶುದ್ಧ ದೇಸೀತನವನ್ನು

ಪ್ರತಿಬಿಂಬಿಸುತ್ತದೆ. ಈ ಹಿನ್ನೆಲೆಯಲ್ಲಿ ಡಾ. ಎಂ. ಚಿದಾನಂದಮೂರ್ತಿ, ಡಾ. ಶಂಕರ ಮೊಕಾಶಿ ಪುಣೇಕರ, ಪ್ರೊ. ಶಿ.ಶಿ.ಬಸವನಾಳ್ ಇವರೆಲ್ಲರ ವಾದವೇನೆಂದರೆ ವಚನಗಳು ಜನಪದರ ಬದುಕಿಗೆ ಹತ್ತಿರವೂ ಸ್ಪಷ್ಟವೂ ಹಾಗೂ ಸತ್ಯಕ್ಕೆ ಸಮೀಪವಾಗಿವೆ ಎಂದಿದ್ದಾರೆ. ಆದ್ದರಿಂದ ವಚನಗಳಿಗೆ ದೇಸಿಯೇ ಮೂಲವೆಂದು ಒಪ್ಪಿಕೊಳ್ಳಬಹುದಾಗಿದೆ.

**ಗೊಲ್ಲಾಳೇಶ್ವರ ವಚನಗಳು :**

ಗೊಲ್ಲಾಳನು ತನ್ನ ಜೀವಿತಾವಧಿಯಲ್ಲಿ ಬರೆದಿದ್ದು ಎಷ್ಟು ವಚನಗಳು ಎಂಬುದಕ್ಕೆ ಅಧಿಕೃತವಾದ ಮಾಹಿತಿಗಳಿಲ್ಲ. ಈತನು ತನ್ನ ಇಷ್ಟದೈವ 'ವೀರಬೀರೇಶ್ವರ' ಈ ಅಂಕಿತ ನಾಮದಲ್ಲಿಯೇ ವಚನಗಳನ್ನು ರಚಿಸಿದ್ದಾನೆ. ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಅವರ ಅಭಿಪ್ರಾಯದಂತೆ "ಗೊಲ್ಲಾಳನ ವಚನಗಳ ಸಂಖ್ಯೆ ಸದ್ಯಕ್ಕೆ ೨೦ ಎಂದು ಗುರುತಿಸಿ, ಶಿವಾನುಭವ ಪತ್ರಿಕೆ ಸಂಪುಟ ೨೦, ಸಂಚಿಕೆ ೨, ನವೆಂಬರ್ ೧೯೪೫ರಲ್ಲಿ ಆರು (೬) ವಚನಗಳನ್ನು ಮಾತ್ರ ಪ್ರಕಟಿಸಿದ್ದಾರೆ. ಆದರೆ ಸಮಗ್ರ ವಚನ ಸಂಪುಟ ೯ ರಲ್ಲಿ ಗೊಲ್ಲಾಳನ ೧೦ ವಚನಗಳು ಸೇರ್ಪಡೆಯಾಗಿವೆ.

ಗೊಲ್ಲಾಳೇಶ್ವರನ ವಚನಗಳನ್ನು ಓದುಗನ ವಿಷಯಕ್ಕೆ ಅನುಗುಣವಾಗಿ ವಿಭಾಗಿಸಿ ನೋಡಬಹುದು. ಸ್ವವಿಮರ್ಶೆ, ವಿಡಂಬನೆ, ಟೀಕೆ, ನೀತಿ ಮತ್ತು ತತ್ವ, ಧಾರ್ಮಿಕತೆ, ಸಂದೇಶ, ಮನುಷ್ಯನ ಅಲ್ಪತನ, ಅರ್ಹತೆ ಹಾಗೂ ಆತ್ಮಾರ್ಪಣ, ಮನಸ್ಸಿನ ಅಶಾಂತ ಸ್ಥಿತಿ, ಅರಿಷಡ್ವರ್ಗಗಳ ದಮನ, ಕರ್ಮಜಾಲ, ಡಾಂಭಿಕ ವರ್ತನೆ, ಜಾತಿ ಕುಲಗಳು, ಕರ್ತವ್ಯ ಶ್ರದ್ಧೆ, ಏಕದೇವತೆಯ ಪೂಜೆ, ಕಾಯಕದ ಮಹತ್ವ, ಸ್ವಾತಂತ್ರ್ಯ ಹೀಗೆ ಹಲವು ವಿಭಾಗಗಳನ್ನು ಗುರುತಿಸಿ ಗೊಲ್ಲಾಳನ ವಚನಗಳನ್ನು ಅಧ್ಯಯನ ಮಾಡಲಾಗಿದೆ.

ಈಗ್ಗೆ ಗೊಲ್ಲಾಳನ ಹತ್ತು ವಚನಗಳು ಉಪಲಬ್ಧವಿರುತ್ತವೆ. ಕುರುಬ ಜನಾಂಗದವರು ತಮ್ಮ ಆರಾಧ್ಯ ದೈವ ಬೀರಪ್ಪನೆಂದು ಆರಾಧಿಸುತ್ತಾರೆ. ಗೊಲ್ಲಾಳನು ಕುರುಬ ಜನಾಂಗಕ್ಕೆ ಸೇರಿದವನಾಗಿದ್ದರಿಂದ ಈಗಾಗಲೇ ಗುರುತಿಸಿದ ಹಾಗೆಯೇ ತನ್ನ ವಚನಾಂಕಿತ 'ವೀರಬೀರೇಶ್ವರಲಿಂಗ'ವೆಂದು ತನ್ನ ವಚನಗಳ ಅಂಕಿತವನ್ನಿಟ್ಟುಕೊಂಡಿದ್ದಾನೆ. ಶಿವಶರಣರ ವಚನಗಳು ಸಾಮಾನ್ಯವಾಗಿ ಮೂರು ವಿಧವೆಂದು ಹೇಳಬಹುದು.

೧. ಸ್ವರ ವಚನಗಳು

೨. ಶಾಸ್ತ್ರ ವಚನಗಳು

೩. ಬೆಡಗಿನ ವಚನಗಳು

ಗೊಲ್ಲಾಳನ ವಚನಗಳನ್ನು "ಬೆಡಗಿನ" ವಚನ ಸಾಹಿತ್ಯ ಪ್ರಕಾರಕ್ಕೆ ಸೇರಿಸಿ ಈ ಕ್ರಮದಲ್ಲಿ ಗುರುತಿಸಬಹುದಾಗಿದೆ. "ಬೆಡಗಿನ ವಚನಗಳನ್ನು ಕುರಿತು ವಿಚಾರ ಮಾಡುವಾಗ ಬೆಡಗು ಶಬ್ದದ ಪ್ರಯೋಗ ಮತ್ತು ಅರ್ಥ ವ್ಯಾಪ್ತಿಯನ್ನು ಗಮನಿಸುವುದು ಅಗತ್ಯ. ಬೆಡಗು ಶಬ್ದ 'ಜನಪದ', 'ಕಾವ್ಯಭಾಷೆ' ಹಾಗೂ

'ವಚನಭಾಷೆ' ಎಂಬ ಮೂರು ಪರಿಧಿಗಳಲ್ಲಿ ಬಳಕೆಯಾಗಿದೆ. ಜನಸಾಮಾನ್ಯರು ಬೆಡಗು ಶಬ್ದವನ್ನು 'ರಹಸ್ಯ' 'ಜಾಣ್ಮೆ' ಇತ್ಯಾದಿ ಅರ್ಥಗಳಲ್ಲಿ ಬಳಸಿರುವುದುಂಟು, ಜನಪದ ಸಾಹಿತ್ಯದ ವಿಶಿಷ್ಟ ಪ್ರಕಾರವಾದ 'ಒಗಟು' ಸಾಹಿತ್ಯವನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತವೆ."

ಒಗಟುಗಳನ್ನು ಅನಕ್ಷರಸ್ಥರು ರಚಿಸುವಾಗ ತಮ್ಮಲ್ಲಿರುವ ಜಾಣ್ಮೆಯನ್ನು ಹೇಳಿಕೆಯ ಮುಖಾಂತರ ನೀಡುತ್ತಾರೆ. ಇದು ಸವಾಲ -ಜವಾಬವೂ ಹೌದು. ಇಲ್ಲಿ ಒಗಟಿನ ಅರ್ಥವನ್ನು ಹೇಳುವವನು ಜಾಣನಾಗಿರುತ್ತಾನೆ. ಅಂದರೆ ಜಾಣ-ಜಾಣರ ಮಧ್ಯೆ ನಡೆಯುವ ವಾಗ್ವಾದವಾಗಿದೆ.

"ಕಾವ್ಯಗಳಲ್ಲಿ ಬೆಡಗು ಶಬ್ದದ ಅರ್ಥವ್ಯಾಪ್ತಿ ದೊಡ್ಡದು. ಅಲ್ಲಿ ರಹಸ್ಯ, ಸೌಂದರ್ಯ, ಬಿನ್ನಾಣ, ಸೊಕ್ಕು, ವೈಯ್ಯಾರ ಇತ್ಯಾದಿ ಅರ್ಥಗಳಲ್ಲಿ ಪ್ರಯೋಗವಾಗಿದೆ. ಬೆಡಗು ಶಬ್ದದ ಮೂಲರೂಪ 'ಬೆಡಂಗು'. ಬೆಡಗು ಒಂದು ಕಾಲಕ್ಕೆ ಅನುಸ್ವಾರವನ್ನು ಕಳೆದುಕೊಂಡು ಬೆಡಗು ಆಗಿದೆ. ಬೆಡಂಗು ಶಬ್ದಕ್ಕೆ ಇದ್ದ ಅರ್ಥವೇ ಬೆಡಗು. ಶಬ್ದಕ್ಕೂ ಇದೆ. ಕವಿರಾಜಮಾರ್ಗದಲ್ಲಿ

'ಒಂದೊಂದೆಡೆಗೊಂದು ಜಾತಿ ಜಾಣೆಸೆಯೆ
ಬೆಡಂಗೊಂದಿದ ವರೊಳ್‌ಮೊರೆ
'ಮೊದಲೊಳ್ ಕಲ್ತಂಗಲ್ಲದೇ ಪದದೊಳ್ ಜಾಣಂ
ಬೆಡಂಗುಮಕ್ಕುಮೆ ಕೃತಿಯೊಳ್'

'ಮನೋಹರತೆ' ಎಂಬ ಅರ್ಥದಲ್ಲಿ ಇದು ಪ್ರಯೋಗವಾಗಿದೆ.

ಬೆಡಗು ಶಬ್ದಕ್ಕೆ ಆಶ್ಚರ್ಯ. ರೀವಿ, ಕುಲ ಇತ್ಯಾದಿ ಅರ್ಥಗಳನ್ನು ಕರ್ನಾಟಕ ಶಬ್ದಮಂಜರಿಯಲ್ಲಿ ಹೇಳಲಾಗಿದೆ. 'ಬೆಡಂಗೆಂದು ಮನೋಹರಂ' ಎಂಬುದಾಗಿ 'ಕರ್ಣಾಟಕ ಶಬ್ದಸಾರಂ" ಕೃತಿಯಲ್ಲಿ ಅರ್ಥೈಸಲಾಗಿದೆ. ಈ ಪದಪ್ರಯೋಗ ಶಾಸನಗಳಲ್ಲಿಯೂ ಆಗಿರುವುದುಂಟು.

ಒಂದು ಶಬ್ದಕ್ಕೆ ಪಲವರ್ಥಮಂ ಪಲವರ್ಥಕ್ಕೊಂದು ಶಬ್ದಮಂ ನುಡಿವ ಬೆಡಗುಮಂ ನಾನಾರ್ಥವೆಂದ ಪೇಟ್ಟೆಂ' ಜಾಣನಾದವನು ತಾನು ಆಡುವ, ಬಳಸುವ ಪದಗಳಿಗೆ ಅನೇಕ ಅರ್ಥಗಳನ್ನು ನೀಡುವ ಪದಗಳನ್ನು ಬಳಸುವುದು ಬೆಡಗು ಎಂದೂ ಹೇಳಬಹುದು.

"ಬೆಡಗಿನ ವಚನಗಳ ಬಗೆಗೆ ಶ್ರೀಯುತ ಚನ್ನಪ್ಪ ಉತ್ತಂಗಿಯವರು, ಅನುಭಾವಜನ್ಯ ಶಬ್ದಗಳು, ಶರಣರ ಹೃದಯದಿಂದ ಹೊರಬೀಳುವಾಗ ಅನೇಕ ಸಲ ಬೆಡಗಿನ ರೂಪ ತಾಳುತ್ತವೆ. ಹೃದಯಕ್ಕೆ ದೈವೀ ಶಕ್ತಿಯ ಶಾಖ ತಟ್ಟಿದಾಗ ಶರಣರಿಗೆ ಅಮಿತಾನಂದವಾಗುತ್ತದೆ. ಅದು ಅವರ್ಣನೀಯ, ಅನಿಸಿದಂತೆ ಹೇಳಬೇಕಾದರೆ ಶಬ್ದ ಸಾಲವು. ಭಾಷೆ ತತ್ತರಿಸುತ್ತದೆ. ಆಗ ಸೂಚ್ಯಾರ್ಥದಿಂದ ಕೂಡಿದ ಬೆಡಗಿನ ವಚನಗಳು ಹುಟ್ಟಿಕೊಳ್ಳುತ್ತವೆ."

ಚನ್ನಪ್ಪ ಉತ್ತಂಗಿಯವರು ಹೇಳುವಹಾಗೆ ಬೆಡಗಿನ ವಚನಗಳು ಅನುಭವಜನ್ಯವಾದ ಅಭಿವ್ಯಕ್ತಿಗಳಾಗಿವೆ.

"ಡಾ. ಎಲ್. ಬಸವರಾಜು ಅವರು 'ಬೆಡಗಿನ ವಚನಗಳಲ್ಲಿ ಹಲವಾರು ಪ್ರಬೇಧಗಳಿವೆ. ವಿರೋಧಾಭಾಸವೇ ಅವೆಲ್ಲಕ್ಕೂ ಜೀವಾಳ. ಪ್ರಕೃತಿಗೆ, ಸಮಾಜಕ್ಕೆ, ಸಂಪ್ರದಾಯಕ್ಕೆ ವಿರುದ್ಧವೆಂಬಂತಹ ಗೌಣವಾದ ಅರ್ಥಬರುವ ಮಾತುಗಳನ್ನಾಡಿ ಅದಕ್ಕೆ ಬಳಸಿರುವ ಪದಗಳಿಗೆ ಬೇರೊಂದು ಮುಖ್ಯವಾದ ಅಂತರಾರ್ಥವು ಬರುವಂತಾಗಿಸುವುದೇ ಇವುಗಳ ಮುಖ್ಯತಂತ್ರ."[೧೫]

ಬೆಡಗಿನ ವಚನಗಳು ನೆನಪಿನಂಗಳದಲ್ಲಿ ವಿಹರಿಸಿ ಮನದಾಳಕ್ಕೆ ಇಳಿಯಬೇಕಾದರೆ, ವಿರುದ್ಧಾರ್ಥಕ ಮಾತುಗಳಲ್ಲಿ ಹೇಳಬೇಕೆಂದು ವಚನಕಾರರು, ಈ ಬೆಡಗಿನ ರೀತಿಯನ್ನು ಬಳಸಿರಬಹುದು. ಬೆಡಗು ಅರ್ಥೈಸಿದಾಗ ವಿಶಿಷ್ಟವಾದ ಅರ್ಥವನ್ನು ನೀಡುತ್ತದೆ. ಹಾಗೆಯೇ ಪ್ರತಿ ಪದಕ್ಕೂ ಸಾಂಕೇತಿಕ ಅರ್ಥವಿರುತ್ತದೆ. ಶರಣರು ಸಾತ್ವಿಕ ಸಮಾಜವನ್ನು ಕಟ್ಟಬಯಸಿದವರು, ಅದಕ್ಕಾಗಿ ಅನೇಕ ತತ್ವ ಆದರ್ಶಗಳನ್ನು ನೀಡಬೇಕಾಗಿತ್ತು. ಆದರೆ ಇವರಿಗೆ ಸರಳತೆಯ ಮಾರ್ಗ ಇರಲಿಲ್ಲ. ಸಮಾಜ ಇವರಿಗೆ ಒಗಟಾಗಿಯೇ ಕಾಣುತ್ತಿತ್ತು. ಇದಕ್ಕಾಗಿ ತಮ್ಮ ಅನುಭಾವವನ್ನು ರಹಸ್ಯರೀತಿಯಲ್ಲಿ ನಿರೂಪಿಸಲು ಬೆಡಗಿನ ರೀತಿಯನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿಕೊಂಡಿರಬಹುದು.

ಮಾತು ಮನಗಳಿಗೆ ಮೀರಿದ ಸಾಹಿತ್ಯ ಅನುಭಾವ ಸಾಹಿತ್ಯ. ಅದನ್ನು ವರ್ಣಿಸಲು ಶಬ್ದ ಸಾಲದು. ಬುದ್ಧಿ ಓಡದು. ಸಾಮಾನ್ಯ ವಿಷಯವನ್ನು ಸಾಮಾನ್ಯವಾಗಿ ವಚನಗಳಲ್ಲಿ ಸರಸವಾಗಿ ಹೇಳಬಲ್ಲ ಅವರು ಅವರ್ಣನೀಯ, ಅನಿರ್ವಚನೀಯ ವಸ್ತುವನ್ನು ವರ್ಣಿಸುವ ಪ್ರಸಂಗಗಳಲ್ಲಿ ಅವರಿಗೆ ಬೆಡಗೊಂದೇ ಸಾಧನ. ಆದ್ದರಿಂದ ಅವರು ಬೆಡಗಿನ ವಚನಗಳನ್ನು ಹೆಣೆಯಬೇಕಾಯಿತು. ಬೆಡಗಿನ ವಚನಗಳ ಮರ್ಮ ಅರಿಯಬೇಕಾದರೆ ಸಾಧನೆ ಬೇಕು; ಅನುಭಾವಿಗಳ ಸತ್ಸಂಗವಾಗಬೇಕು. ಸಂಪ್ರದಾಯಬದ್ಧ ಮಾರ್ಗದರ್ಶನ ಬೇಕು. ಅಲ್ಲಿ ಬಳಸಲಾದ ಸಂಕೇತಗಳ ಅರ್ಥವಾಗಬೇಕು. ಪ್ರತಿಮೆಗಳ ಪ್ರಭೆ ಹೊಳೆಯಬೇಕು. ಇಲ್ಲದಿದ್ದರೆ ಬೆಡಗಿನ ವಚನಗಳು ಉಕ್ಕಿನ ಕಡಲೆಯಾಗಿ ಉಳಿಯುವುದೇ ನಿಶ್ಚಿತ "

ಬೆಡಗಿನ ವಚನಗಳು ಮೇಲುನೋಟಕ್ಕೆ ಬೇರೆಯದೇ ಅರ್ಥವನ್ನು ನೀಡುವಂತಿದ್ದರೂ. ಅದರೊಳಗಿರುವ ಸತ್ಯ ಇನ್ನೊಂದು ತೆರನಾಗಿರಬಹುದು. ಆದ್ದರಿಂದ ನಮ್ಮ ಭಾವನೆಗಳಿಗೆ, ಬುದ್ಧಿಗೆ ನಿಲುಕಿದಷ್ಟು ಬೆಡಗನ್ನು ತರುವುದಾಗಿದೆ ಎನ್ನುತ್ತಾರೆ. ಈ ಮಾನವತ್ವವೆಂಬ ದೊಡ್ಡ ಮೌಲ್ಯವನ್ನು ಮೀರಿ ಲೋಕಾದರ್ಶಕ್ಕೆ, ಆತ್ಮಕಲ್ಯಾಣಕ್ಕೆ, ಸಾಮಾಜಿಕ ಬಾಂಧವ್ಯಕ್ಕೆ ಕಾರಣವಾಗುವ ಶರಣತ್ವವನ್ನು ನಾಡಿನ ಜನರೆಲ್ಲ ಪಡೆಯುವಂತಾಗಲೆಂದು ನಡೆ ನುಡಿ ಸಮನ್ವಯ, ಅರಿವು -ಆಚಾರ, ತನು ಮನ ಧನ ಮುಂತಾದವುಗಳನ್ನು ನಿಕಷಕ್ಕೆ ಒಳಪಡಿಸುತ್ತಾರೆ. ಇದು ಒಂದು ರೀತಿಯ ಮೌಲ್ಯವೇ ಸರಿ. ಸೃಷ್ಟಿಯ ಹುಟ್ಟು-ಸ್ಥಿತಿ-ಲಯಕ್ಕೆ ಕಾರಣನಾದ ಜಗದೊಡೆಯನನ್ನು ಕಾಣಲು ಅವಶ್ಯವಾಗಿರುವ ಅರುಹನ್ನು ನೀಡುವ ತ್ರಿವಿಧ ಸ್ಥಲಗಳು.

**ವಚನಗಳ ವಿಶ್ಲೇಷಣೆ :**

ಈಗಾಗಲೇ ದೊರೆತಿರುವ ಗೊಲ್ಲಾಳನ ವಚನಗಳನ್ನು ಆಧರಿಸಿ, ಇವನೊಬ್ಬ ವಚನಕಾರನೆಂದು ನಿರ್ಧರಿಸಲಾಗಿದೆ. ಈತನ ವಚನಾಂಕಿತ ಬೀರೇಶ್ವರನೆಂದೂ ವೀರ ಬೀರೇಶ್ವರನೆಂದೂ ವೀರ ಬೀರೇಶ್ವರಲಿಂಗವೆಂದೂ ಪ್ರಚಲಿತವಿರುವದು.

ಹರಿಹರನು ತನ್ನ ಲಿಂಗಾರ್ಚನ ರಗಳೆಯಲ್ಲಿ ಈತನನ್ನು ಸ್ಮರಿಸಿದ್ದಾನೆ. ಪಾಲ್ಕುರಿಕೆಯ ಸೋಮನಾಥನಾದರೋ ತನ್ನ ಬಸವ ಪುರಾಣದಲ್ಲಿ (ಬಂಡಾರು ತಮ್ಮಯ್ಯನವರ ತೆಲುಗು ಬಸವಪುರಾಣ ಪು. ೯೬-೧೦೦) ಈತನ ಕಥೆಯನ್ನು ಬಸವಪೂರ್ವಿಕನೆಂಬಂಥ ಸನ್ನಿವೇಶದಲ್ಲಿ ಚಿತ್ರಿಸಿದ್ದಾನೆ.[೧೬] ಅಲ್ಲಮಪ್ರಭು, ಬಸವಣ್ಣನವರಿಗಿಂತ ಪೂರ್ವಕಾಲದಲ್ಲಿ ಅದೆಷ್ಟೋ ಜನ ಶರಣರು ಹಾಗೂ ವಚನಕಾರರಿದ್ದರು. ಈಗಾಗಲೇ ದೇವರದಾಸಿಮಯ್ಯ ಮತ್ತು ಅವನ ಸಮಕಾಲೀನನಾದ ಶಂಕರ ದಾಸಿಮಯ್ಯ ಎಂಬುವವರಿಬ್ಬರೂ ಬಸವಪೂರ್ವ ಕಾಲದ ವಚನಕಾರರೆಂಬುದು ಪ್ರಸಿದ್ಧವೇ ಆಗಿದೆ. ಪ್ರಮಥರ ಶ್ರದ್ಧೆ, ತ್ಯಾಗ, ನೀತಿನಿರೂಪಣೆಯನ್ನು ಬಸವಕಾಲದ ಶರಣರು ಅಧ್ಯಯನ ಮಾಡಿರಬಹುದು. "ಬಸವಪೂರ್ವ ವಚನಕಾರರೆಂದರೆ- ಅವರೆಲ್ಲಾ ಸಾಂಪ್ರದಾಯಿಕವಾಗಿ ಉತ್ತಮ ವರ್ಣದವರೇ ಆಗಿದ್ದರೆಂದು ತಿಳಿಯಬಾರದು. ಅವರಲ್ಲಿ ಮಾದಾರರು, ಡೋಹಾರರು, ಬೇಡರು, ಗೊಲ್ಲರು ಎಂದು ಮುಂತಾಗಿ ಪರಿಶಿಷ್ಟ ವರ್ಗದವರೂ ಬಹಳಷ್ಟು ಜನರಿದ್ದರು."[೧೭]

"ವೀರಗೊಲ್ಲಾಳನ ವಚನನಗಳು

(ಕರ್ನಾಟಕ ವಿಶ್ವವಿದ್ಯಾಲಯ, ಸಕಲ ಪುರಾತನರ ವಚನಗಳು, ಸಂಪುಟ ೩, ಪುಟ-೨೬೭-೨೭೧)

**ವಚನ -೧ :**

ಆಡು ಅಱುದಿಂಗಳು ಹುಟ್ಟಿ
ಮೂಱು ದಿನ ಬದುಕಿ ಒಂದು ದಿನ ಸತ್ತಿತ್ತು
ಕುಱಿ ಕುಱಿಹ ಮೇದು
ಮಱಿಗೆ ಮೊಲೆಗೊಟ್ಟಿತ್ತು !
ಆ ಮಱಿಯೋ ಮೊಲೆಯ ನುಂಗಿ
ಕುಱುಹಿನೊಳಡಗಿತ್ತು !
ಆಡು-ಕುಱಿ ಬಂದ ಬಟ್ಟೆಯ 'ಸೋಧಿಸಿ'ಕೊಂಡು
ತೋಳನ ತೊಡಕಿನಲ್ಲಿ ಸಾಯದೆ
ಅಱಿ ವೀರ ಬೀರೇಶ್ವರ ಲಿಂಗವ

**ಪಾಠಾಂತರ** : ೧. ಸಾಧಿಸಿ (ಕೋ. ೩೦೦) ಶೋಧಿಸಿ (ಸಕಲ ಪುರಾತನರ ಬೆಡಗಿನ ವಚನಗಳು -೪೧೧- ಕ.ವಿ.ವಿ.)"[೧೧೮]

ಸಿಂಗಳದ ಸಿದ್ಧಬಸವರಾಜನ ಟೀಕು : ಅಡೆಂದೊಡೆ ಜೀವಾತ್ಮನು. ಅಂತಪ್ಪ ಜೀವಾತ್ಮಂಗೆ ಸಮ್ಯಕ್ ಜ್ಞಾನೋದಯವಾಯಿತ್ತೆಂಬುದೀಗ -ಆಡು ಅಱಿದಿಂಗಳು ಹುಟ್ಟಿ ಎಂಬುದರ ಅರ್ಥ.

ತನು-ಮನ-ಧನವೆಂಬ ತ್ರಿವಿಧ ಪದಾರ್ಥವ ತ್ರಿವಿದ ಭಕ್ತಿಯಿಂದ ತ್ರಿವಿಧ ಮುಖದಲ್ಲಿ ಅರ್ಪಿಸಿ ತ್ರಿವಿಧ ಪ್ರಸಾದವ ಸ್ವೀಕರಿಸಿ ಅಸತ್ಯ ಭಾವವಳಿದು ನಿತ್ಯ ಸ್ವರೂಪವಾಗಿರ್ದನೆಂಬುದೀಗ =ಮೂಱು ದಿನ ಬದುಕಿ ಎಂಬುದರ ಅರ್ಥ.

ಒಂದು ದಿನ ಸತ್ತಿತ್ತು = ಅಂತಪ್ಪ ತ್ರಿವಿಧ ಭಕ್ತಿಯಿಂದಾಚರಿಸಿದ ಶರಣನು ತನ್ನ ಅಱಿವು ಚಿದ್‌ಘನಲಿಂಗದಲ್ಲಿ ನಿಷ್ಪತ್ತಿಯಾಗಲು ತಾನೆಂಬ ಭಾವವಡಗಿ ಮಹಾಲಿಂಗದಲ್ಲಿ ಏಕಾರ್ಥವಾಯಿತ್ತು.

ಕುಱಿ = ಅಂತು ಮಹಾಲಿಂಗದಲ್ಲಿ ಏಕಾರ್ಥವಾದ ಶರಣನ ಮಹಾಸಂಬಂಧವಾದ ದೇಹ ಭಾವ ಅಳಿದು ಭಕ್ತಿ ಸ್ವರೂಪವಾಯಿತ್ತು.

ಕುಱಿ ಕುಱಿಹ ಮೇದು =ತನ್ನ ಆಚಾರ ಲಿಂಗದಲ್ಲಿ ಇರ್ಪ ಇಷ್ಟ ಬ್ರಹ್ಮನ ಭಕ್ತಿ ಸ್ವರೂಪವಾದ ಮನಸ್ಸು ಇಷ್ಟಲಿಂಗದ ಚಿತ್ಕಲೆಯನು ಮನೋಮೂರ್ತಿ ಪ್ರಾಣಲಿಂಗವಾಗಿ ಅವಗ್ರಹಿಸಿತ್ತು.

ಮಱಿ ಮೊಲೆಯನುಂಗಿ ಕುಱುಹಿನೊಲು ಅಡಗಿತ್ತು = ಆ ಮನಸ್ಸು ಚೈತನ್ಯ ಸ್ವರೂಪವಾದ ಪ್ರಾಣಲಿಂಗವನ್ನು ಅವಗ್ರಹಿಸಿ ಇಷ್ಟಲಿಂಗದ ಲಕ್ಷ್ಯದೊಳಗೆ ನಿರ್ಲಕ್ಷವಾಯಿತ್ತು.

ಆಡು = ಜೀವಾತ್ಮ

ಕುಱಿ = ಮಾಯಶಕ್ತಿ

ತೋಳ = ಸಮಸ್ತವ್ಯಾಧಿ

ಆಡುಕುಱಿ ಬಂಡ ಬಟ್ಟೆ = ಬೀರೇಶ್ವರ ಲಿಂಗದ =ಅಂತು ಜೀವ ಭಾವವನು ಮಾಯಾಪ್ರಪಂಚವನು ಸಮಸ್ತ ವ್ಯಾಧಿಯನು ನಿವೃತ್ತಿ ಮಾಡಿ ಮಹಾಘನ ಲಿಂಗದಲ್ಲಿ ಏಕಾರ್ಥವಾದ"[೧೯]

"**ವ್ಯಾಖ್ಯಾನ :** ಆಡು ವರ್ಷಕ್ಕೆ ಎರಡು ಸಲ ಕುರಿ ಹಾಕುತ್ತದೆ. ಅಂದರೆ ಒಂದು ಮರಿ ಹುಟ್ಟಲು ಆರು ತಿಂಗಳು ಬೇಕು. ಆ ಮೇಲೆ ಅದು ಮೂರು ದಿನವೆಂದರೆ ಸ್ವಲ್ಪ ಕಾಲ ಮಾತ್ರವೇ ಮೇದು ಎಳಸಿನ ಪುಷ್ಟಿ ಪಡೆದಾಗ ಒಂದು ದಿನ ಮಾಂಸ ತಿನ್ನುವವನ ಕೈಯ ಕತ್ತಿಗೆ ಕುತ್ತಿಗೆ ಕೊಟ್ಟು ಸಾಯುತ್ತದೆ. ಇದೊಂದು ಬೆಡಗು. ಇದನ್ನು ಆಧ್ಯಾತ್ಮಿಕವಾಗಿ ಹೇಗೆ ವಿವರಿಸಬೇಕೆಂಬುದೊಂದು ಸವಾಲು.

ಇದೇ ವಚನದಲ್ಲಿರುವ ಮತ್ತೊಂದು ಬೆಡಗೆಂದರೆ ಒಂದು ಕುರಿ (ಕೊರಳಿಗೆ ಕಟ್ಟಿದ) ಕುರುಹನ್ನೇ ಮೇದು ಮರಿಗೆ ಮೊಲೆಗೊಟ್ಟರೆ ಆ ಮೊಲೆಯುಂಡ ಮರಿ ಆ ಕುರುಹಿನಲ್ಲೆ ಅಡಗಿತಂತೆ.

ಈ ಆಡು ಕುರಿಗಳ ರೀತಿ ನೀತಿಯನ್ನು ತಿಳಿದಾದರೂ ಬುದ್ಧಿ ಕಲಿತು ಮೃತ್ಯುವಿನಿಂದ ಪಾರಾಗಿ ಅಮೃತತ್ವವನ್ನು ಪಡೆಯಬೇಕೆಂಬುದು ಈ ವಚನದ ನಿರ್ದೇಶನ.

ಷಟ್‌ಸ್ಥಲ ಮಾರ್ಗವನ್ನು ಹಿಡಿದು, ಗುರುಲಿಂಗ ಜಂಗಮ ದಾಸೋಹ ಮಾಡಿ ಶಿವೈಕ್ಯವಾಗಬೇಕೆಂಬಂತೆ ಮೊದಲನೇ ಬೆಡಗನ್ನು ಬಿಡಿಸಬಹುದಾಗಿದೆ.

**ಎರಡನೇ ಬೆಡಗೆಂದರೆ :** ಅಂಗನು ಲಿಂಗೋಪಾಸನೆಯಿಂದ ಅಂತರಂಗವನ್ನು ಶುದ್ಧೀಕರಿಸಿಕೊಂಡರೆ ಆ ಅಂತರಂಗವು ಲಿಂಗಸ್ವರೂಪವೇ ತಾನಾಗುವುದೆಂಬುದೇ ಆಗಿದೆ.

ವಿ: ಒಂದು ಸಾವಿರ ವರ್ಷದಷ್ಟು ಹಳೆಯದಾದ ಕನ್ನಡ ಸಾಹಿತ್ಯದ ಗಣಿಯಲ್ಲಿ ಸಿಗುವ ವಚನಗಳು ನಾನಾ ಮುಖವಾಗಿ ಕಡೆದಿರುವ ಶುದ್ಧ ಸಿದ್ಧ ವಜ್ರಗಳಂತೆ ಹೊಳೆಯುತ್ತಿವೆಯೆಂಬುದೇ ಒಂದು ವಿಸ್ಮಯ! ವೀರಶೈವ ವಚನಕಾರರ ಈ ಒಗಟುಗಳು ಉಪಲಬ್ಧವಿರುವ ಕನ್ನಡ ಶಾಸ್ತ್ರೀಯ ಸಾಹಿತ್ಯ ಕೃತಿಗಳಿಗಿಂತಲೂ ಹೃದಯಂಗಮವೂ ವಿಶಿಷ್ಟ ರೀತಿಯ ಜನಪದ ಸಿದ್ಧಿಸ್ವರೂಪದವೂ ಆಗಿವೆಯೆಂಬುದು ಕನ್ನಡಿಗರ ಒಂದು ಹೆಮ್ಮೆಯ ಪಿತ್ರಾರ್ಜಿತ ಆಸ್ತಿಯೆನಿಸುವದು.'[೨೦]

ಗೊಲ್ಲಾಳನ ಈ ವಚನದಲ್ಲಿ ಆಡು, ಕುರಿ, ಕುರುಹ, ಮೊಲೆ, ಮರಿ, ತೋಳ ಈ ಪದಗಳು ಕುರಿಯ ಜೀವನ ಕ್ರಮವನ್ನು ಸಂಕೇತಿಸುತ್ತವೆ. ಆಡು ಮತ್ತು ಕುರಿಗಳ ಸಂಬಂಧವನ್ನು ಮತ್ತು ಅವಿನಾಭಾವತೆಯನ್ನು, ಕುರುಬ ಜನಾಂಗದ ಜೊತೆಗೆ ಕುರಿಗಳ ಅನನ್ಯತೆಯನ್ನು ವಚನದ ಮೂಲಕ ಅರುಹಿದ್ದಾನೆ. ಮಾನವನು ಒಂಬತ್ತು ತಿಂಗಳಿಗೆ ಹುಟ್ಟಿ ಬಾಲ್ಯ ಯೌವ್ವನ, ಮುಪ್ಪು, ಭೋಗದಾಸೆಯಲ್ಲಿ ಹೊರಳಾಡಿ ಸಂಸಾರದ ಗೂಡನ್ನು ಕಟ್ಟಿಕೊಳ್ಳುತ್ತದೆ. ಮಕ್ಕಳು, ಮೊಮ್ಮಕ್ಕಳನ್ನು ಸಾಕಿ ಸಲಹುತ್ತದೆ;ಹಸಿವನ್ನು ಹಿಂಗಿಸಲು ಪ್ರಯತ್ನಿಸುತ್ತದೆ. ಹಸಿವನ್ನು ತಡೆಯಲಾರದ ಮಾನವ ಸಮಾಜದಲ್ಲಿ ಸಂಕಷ್ಟದಲ್ಲಿರುವ ಜನಗಳನ್ನು ಕಂಡು ಅನುಭಾವದ ಹಿನ್ನೆಲೆಯಲ್ಲಿ ಗ್ರಹಿಸಿದ ಇನ್ನೊಂದು ಪರಿಯನ್ನು ಇಲ್ಲಿ ಕಾಣಬಹುದು. ಹುಟ್ಟು ಸಾವುಗಳ ಮುಂದೆ ಇರುವ ಜಂಜಡಗಳ ಕುರಿತು ಮಾತನಾಡುತ್ತಾ 'ತೋಳ' ಇಲ್ಲಿ ಕೇವಲ ಕುರಿ ಆಡುಗಳಿಗೆ ಸಂಬಂಧಿಸಿದಂತೆ ಮಾತ್ರವಲ್ಲದೆ ಸಮಾಜದಲ್ಲಿ ಹಿಂಸೆ ಕೊಡುವ ಕ್ರೂರಿ ಜನರನ್ನು ಕುರಿತೂ ಆಡಿದ ಮಾತುಗಳಾಗಿವೆ.

"ಈ ವಚನದಲ್ಲಿ ಆಡು ಮತ್ತು ಕುರಿಯ ಜೀವನ ಕ್ರಮವನ್ನು ಹಾಗೂ ಇರುವ ಜೀವನದಲ್ಲಿ ಗುರಿಯನ್ನೇ ಸಾಧಿಸುವ ಪರಿಯನ್ನು ಹೇಳಲಾಗಿದೆ. ಇಲ್ಲಿ ಆಡು ಶರೀರವಾಗಿದ್ದು, ಕುರಿಯು ಮನಸ್ಸನ್ನು ಸಂಕೇತಿಸುತ್ತದೆ. ವಾಸ್ತವವಾಗಿ ಆಡು ಹುಟ್ಟುವುದಕ್ಕೆ ಆರು ತಿಂಗಳ ಅವಧಿ ತೆಗೆದುಕೊಳ್ಳುತ್ತದೆ; ಎಂದು ಹೇಳಲಾಗುತ್ತದೆ. ಅದು ಹುಟ್ಟಿದ ಮೇಲೆ ಅದರ ಬದುಕಾದರೂ ಅಲ್ಪಕಾಲದ್ದು. ಗೊಲ್ಲಾಳನು ಅದನ್ನು ಮೂರು ದಿನವೆಂದು ಸಂಕೇತಿಸಿದ್ದಾನೆ. ಹುಟ್ಟಿದ ಎಲ್ಲರೂ ಕೊನೆಗೆ ಒಂದು ದಿನ ಸಾಯಲೇಬೇಕೆಂಬುದನ್ನು "ಒಂದು ದಿನ ಸತ್ತಿತ್ತು" ಎನ್ನುವುದರಲ್ಲಿ ಸೂಚಿಸಿದ್ದಾನೆ. ಇಲ್ಲಿ ಹುಟ್ಟು, ಬದುಕು, ಸಾವು ಇವು ಶರೀರದ ಸೃಷ್ಟಿಯ ನಿಯಮಗಳಾಗಿವೆ. ಇವುಗಳನ್ನು ಮೀರಿದ್ದು ಮತ್ತು ಆಧಾರವಾದದ್ದು ಮನಸ್ಸು. ಈ ಮನಸ್ಸು ಇಂದ್ರಿಯವಾಗಿ ವಿಷಯಗಳಿಗೆ ಮನಸೋಲದೆ ಅರುಹಿನ ಕುರುಹಿಗೆ ಮನಸ್ಸುಗೊಟ್ಟರೆ ಆ ಕುರುಹಿನ ಹಿಂದಿನ ಸುಖವನ್ನು ಉಂಡು, ಅನಾದಿ,

ಅನಂತದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಅರಿವಿನ ಸಾಕ್ಷಾತ್ಕಾರವಾದರೆ "ಮಾಯೆ" ಎಂಬ ತೋಳನ ಕೈಯಲ್ಲಿ ಸಾಯದೆ ಲಿಂಗವೇ ತಾನಾಗಿ ನಿಲ್ಲಲು ಸಾಧ್ಯವಾಗುತ್ತದೆ.

"ಆಡು ಕುರಿ ಬಂದ ಬಟ್ಟೆಯ ಸೋಧಿಸಿಕೊಂಡು" ಎಂದಿರುವಲ್ಲಿ ಈ ಶರೀರ ಹೇಗೆ ಬಂದಿತು? ಮನಸ್ಸು ಹೇಗೆ ಬಂದಿತು?ಎನ್ನುವ ಚಿಂತನೆಗೆ ತೊಡಗಿಸುತ್ತದೆ. ಆಗ ತಾನು ದೇಹವೂ ಅಲ್ಲ, ಮನಸ್ಸೂ ಅಲ್ಲ, ತಾನು ನಿರಂಜನ ತತ್ವವೇ ಎನ್ನುವುದನ್ನು ಶೋಧಿಸಿಕೊಳ್ಳುತ್ತಾನೆ."[೨೧]

ಗೊಲ್ಲಾಳ ತನ್ನ ತಾನರಿತು ಅಂತರಂಗ ಶುದ್ಧಿಯ ಕಡೆಗೆ ತನ್ನ ಗಮನವನ್ನು ಹರಿಸಿದ್ದಾನೆ. ವಿನಯಶಾಲಿಗಳೂ, ನೀತಿವಂತರೂ, ಶುದ್ಧಾತ್ಮರಾದ ಜನಗಳ ಮಧ್ಯದಲ್ಲಿ ನನ್ನನ್ನು ಇರಿಸು ಎಂದು ಬೇಡಿಕೊಳ್ಳುತ್ತಾನೆ. ಈ ಗುಣಗಳುಳ್ಳ ಸಮುದಾಯದಲ್ಲಿ ಸೇರಿಕೊಂಡವನು ಅರಿವು ಪಡೆಯುವುದರ ಜೊತೆಗೆ ಜನಸಮುದಾಯದಲ್ಲಿ ಬೆಳೆದುಬರುವುದಕ್ಕೂ ಅವಕಾಶ ಪ್ರಾಪ್ತವಾಗುತ್ತದೆ.

**ವಚನ -೨ :**

"ಮೂಱು ವರ್ಣದ ಬೊಟ್ಟುಗ
ಆಱು ವರ್ಣದ ಅಳಗ
ಐದು ವರ್ಣದ ಸಂಚಿಗ
ಇವಱೊಳಗಾದ ನಾನಾ ವರ್ಣದ ಅಜಕುಲ
ಕುಱಿ ವರ್ಗವು -
ಕೊಲುವ ತೋಳನ ಕುಲ
ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟದೆ
ಮೂಱ ಮುಟ್ಟದೆ, ಆಱ ತಟ್ಟದೆ
ಐದಱ ಬಟ್ಟೆಯ ಮೆಟ್ಟದೆ -
ಒಂದೇ ಹೊಲದಲ್ಲಿ ಮೇದು
ಮಂದೆಯಲ್ಲಿ ನಿಂದು
ಸಂದೇಹವ ಕಳೆದು
ಉಳಿಯದ ಸಂದೇಹವ ತಿಳಿದು
ವೀರ ಬೀರೇಶ್ವರ ಲಿಂಗದಲ್ಲಿಗೆ
ಹೋಗುತ್ತಿರಬೇಕು. "[೨೨]

**ಸಿಂಗಳದ ಸಿದ್ಧಬಸವನ ಟೀಕು :**

"ದೇಹಸಂಬಂಧಿಯಾಗಿರ್ದ ಜೀವನು ತ್ರಿವಿಧಾವಸ್ಥೆಯಲ್ಲಿ ಕೂಡಿ ವರ್ತಿಸುತ್ತಿಹನೆಂಬುದೀಗ, ಮೂಱು ಬೊಟ್ಟುಗ ಎಂಬ ಶಬ್ದಕ್ಕರ್ಥ.

ಷಡೀಂದ್ರಿಯಂಗಳ ಷಡ್‌ವಿಷಯದಲ್ಲಿ ಲಂಪಟನಾಗಿಹನು ತ್ಯಜಿಸನೆಂಬುದೀಗ, ಆರು ವರ್ಣದ ಅಳಗ ಎಂಬ ಶಬ್ದಕ್ಕರ್ಥ. ಪಂಚ ಕರಣಂಗಳ ವ್ಯವಹಾರದಲ್ಲಿ ವ್ಯವಹರಿಸುತ್ತಿಹನು ಪ್ರಾಜ್ಞನೆಂಬುದೀಗ, ಐದು ವರ್ಣದ ಸಂಚಿಗ ಎಂಬ ಶಬ್ದಕ್ಕರ್ಥ.

ಇಂತಪ್ಪ ಜೀವತ್ರಯಂಗಳು ಮುಖ್ಯವಾದ ಸಕಲ ಕರಣಂಗಳು ರಜೋಗುಣ ಸಂಬಂಧವಾದ ದೇಹದಲ್ಲಿರುತ್ತಿಹನೆಂಬುದೀಗ, ಇವರೊಳಗಾದ ನಾನಾ ವರ್ಣದ ಅಜಕುಲ ಎಂಬ ಶಬ್ದಕ್ಕರ್ಥ.

ಅಜ್ಞಾನಸ್ವರೂಪಿಣಿಯಾದ ಮಾಯಾಶಕ್ತಿಯೆಂಬುವದೀಗ, ಕುಱಿ ವರ್ಗ ಎಂಬ ಶಬ್ದಕ್ಕರ್ಥ.

ಕಾಲಸಂಬಂಧವಾದ ಉತ್ಪತ್ತಿ ಸ್ಥಿತಿ ಲಯವೆಂಬ ತ್ರಿವಿಧದ ಬಟ್ಟೆಯ ಮೆಟ್ಟದೆಯೆಂಬುದೀಗ, ಕೊಲುವ ತೋಳನ ಕುಲ ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟದೆ ಎಂಬ ಶಬ್ದಕ್ಕರ್ಥ.

ಇಂತಪ್ಪ ಜೀವಂಗೆ ಶಿವ ಸಂಸ್ಕಾರದಿಂ ಸುಜ್ಞಾನೋದಯವಾಗಲು ಶ್ರೀಗುರು ಕಾರುಣ್ಯದಿಂ. ತ್ರಿವಿಧಲಿಂಗ ಸಂಬಂಧಿಯಾದ ಶರಣನ ತ್ರಿವಿಧಾವಸ್ಥೆಯಳಿದು ಲಿಂಗಾವಸ್ಥೆಯಾದವೆಂಬುದೀಗ, ಮೂಱಿ ಮುಟ್ಟದೆ ಎಂಬ ಶಬ್ದಕ್ಕರ್ಥ.

ಅಂತಪ್ಪ ಶರಣ ಷಡೀಂದ್ರಿಯಂಗಳಲ್ಲಿ ಷಡ್ವಿಧ ಲಿಂಗಸಂಬಂಧವಾಗಿ ಆ ವಿಷಯ ಪದಾರ್ಥ ಲಿಂಗಾರ್ಪಿತವಾದಲ್ಲಿ ಆ ಷಡೀಂದ್ರಿಯಗಳ ವಿಷಯಕ್ಕೆ ಇಚ್ಛೈಸನೆಂಬುದೀಗ, ಎಂಬ ಶಬ್ದಕ್ಕರ್ಥ.

ಆ ಶರಣನ ಮನ ಬುದ್ಧಿ, ಚಿತ್ತ, ಅಹಂಕಾರ ಭಾವವೆಂಬ ಪಂಚಕರಣಂಗಳಲ್ಲಿ ಪಂಚಲಿಂಗ ಸಂಬಂಧವಾಗಲು ಆ ಪಂಚಕರಣಂಗಳ ವರ್ತನೆಯಲ್ಲಿ ನಡೆಯೆಂಬುದೀಗ, ಐದರ ಬಟ್ಟೆಯ ಮೆಟ್ಟದೆ ಎಂಬ ಶಬ್ದಕ್ಕರ್ಥ.

ಜೀವತ್ರಯಂಗಳು ಮುಖ್ಯವಾದ ಸಲಕರಣಂಗಳೆಲ್ಲಾ ಜ್ಞಾನಕರಣಂಗಳಾಗಿರ್ಪ ಶರಣನ ಲಿಂಗಕ್ಷೇತ್ರವೆಂಬ ಹೊಲದಲ್ಲಿ ಬೆಳೆದ ಭಕ್ತಿಯ ಅಮೃತವನ್ನೇ ಸ್ವೀಕರಿಸಿ ಎಂಬುದೀಗ, ಒಂದೇ ಹೊಲದಲ್ಲಿ ಮೇದು ಎಂಬ ಶಬ್ದಕ್ಕರ್ಥ, ಆ ಶರಣನ ಸರ್ವಾಚಾರ ಸಂಪತ್ತು ಹೆರಹಿಂಗದೆ ನಿಂದು ಎಂಬುದೀಗ ಮಂದೆಯಲ್ಲಿ ನಿಂದು ಶಬ್ದಕ್ಕರ್ಥ

ಆ ಶರಣನ ಸುಜ್ಞಾನ ಪ್ರಕಾಶದಿಂ ಜ್ಞಾನಜ್ಞಾನವ ನಿವೃತ್ತಿ ಮಾಡಿದನೆಂಬುದೀಗ, ಸಂದೆಯ ಕಳೆದು ಎಂಬ ಶಬ್ದಕ್ಕರ್ಥ.

ಆ ಪರಿಪೂರ್ಣ ಜ್ಞಾನಿಯಾದ ಶರಣ ಸಂಕಲ್ಪ ವಿಕಲ್ಪವ ನಿವೃತ್ತಿ ಮಾಡಿ ಮಹಾಘನಲಿಂಗದಲ್ಲಿ ಸಮರಸ ಐಕ್ಯನಾದನೆಂಬುದೀಗ, ಸಂದೇಹವಳಿದು ವೀರಬೀರೇಶ್ವರ ಲಿಂಗದಲ್ಲಿಗೆ ಹೋಗುತ್ತಿರಬೇಕು ಎಂಬ ಶಬ್ದ ಕ್ಕರ್ಥ."

"ಬೊಟ್ಟುಗ -ಅಳಗ-ಸಂಚಿಗ ಎಂಬವು ಮೇಕೆಯ ಮೂರು ಬಗೆಯ ತಳಿಗಳು (ಇರಬಹುದು)ಕ್ರಮವಾಗಿ ಮೂರು-ಆರು-ಐದು ಬಣ್ಣಗಳೇ ಆ ತಳಿಗಳ ಮೇಲ್ಮೈ ಲಕ್ಷಣವೂ ಆಗಿರಬಹುದು. ಈ ಮೂರರ ಮೈ ಬಣ್ಣಗಳನ್ನು ಏನನ್ನು ಪ್ರತಿನಿಧಿಸುತ್ತವೆ ಎನ್ನುವುದೇ ಈ ವಚನ ಒಡ್ಡಿರುವ ಒಗಟಿರಲೂಬಹುದು.

ಸ್ಥೂಲ-ಸೂಕ್ಷ್ಮ-ಕಾರಣ ದೇಹಸಂಬಂಧದಿಂದ ಆತ್ಮನು ಜೀವನೆನಿಸಿಕೊಳ್ಳುವನು. ಶುದ್ಧ ಸ್ಪಟಿಕದಲ್ಲಿ ಅದರ ಬಳಿಯೇ ಇರುವ ದಾಸವಾಳದ ಹೂವಿನ ಕೆಂಪು ಪ್ರತಿಬಿಂಬಿಸಿ ಆ ಕೆಂಪು ಆ ಸ್ಪಟಿಕದ ಗುಣವೆಂಬಂತೆ ತೋರುವ ಹಾಗೆ -ಆತ್ಮವು ದೇಹ ಭಾವದಿಂದ ಜೀವನೆನಿಸಿ -ಆ ಜೀವನ (ಒಬ್ಬನೇ ಆದರೂ) ಸಾತ್ವಿಕ-ರಾಜಸ-ತಾಮಸವೆಂಬ ಅಹಂಕಾರದ ನೆಲೆಗಳಲ್ಲಿ ಕ್ರಮವಾಗಿ ಪ್ರಾಜ್ಞ-ತೈಜಸ-ವಿಶ್ವನೆನಿಸುವನು. ಹೀಗೆ ಜೀವನು ತನುತ್ರಯ -ಮಲ (ಆಣವ-ಮಾಯಾ-ಕಾರ್ಮಿಕ)ಯ, ಅವಸ್ಥಾ (ಜಾಗೃತ್-ಸ್ವಪ್ನ-ಸುಷುಪ್ತಿ)ತ್ರಯ, ಈಷಣ (ವಿತ್ತ-ದಾರಾ-ಪುತ್ರ) ತ್ರಯವೆಂಬ ಮಾಯಾವರಣಗಳಿಂದ ಮುಸುಕಿ ತಾನು ಶಿವಾಂಶಿಕನೆಂಬುದನ್ನು ಮರೆತಿರುವನು. (ಆದುದರಿಂದಲೇ ಇಂತ ಜೀವನವನ್ನು ಮೇಕೆ ಕುರಿಯೆಂದು ಕರೆಯಲಾಗಿದೆ. ಕೂಡ) ಈ ಜೀವತ್ರಯರೇ ಅವರವರ ಅಂತಃಪರಿಪಾಕ ತಾರತಮ್ಯದಿಂದಾಗಿಯೇ ಜೀವಾತ್ಮ -ಪರಮಾತ್ಮ ಎಂದು ವ್ಯವಸಹರಿಸಲ್ಪಡುವರು. ಈ ಜೀವತ್ರಯವನ್ನೇ ಬೊಟ್ಟುಗ-ಅಳಗ-ಸಂಚಿಗನೆಂದು ಕುರಿ ಮೇಕೆಗೆ ಸಮಾನ ಮಾಡಲಾಗಿದೆ.

ಮತ್ತು ಮೂರು ವರ್ಣ (ಹೆಣ್ಣು-ಹೊನ್ನು-ಮಣ್ಣು ಅಲ್ಲ ಇಷ್ಟ, ಪ್ರಾಣ, ಭಾವಲಿಂಗ)ಗಳು ಆರು ವರ್ಣ (ಷಡೀಂದ್ರಿಯ ವಿಷಯ ಲಾಲಸೆಗಳಲ್ಲಿ ಷಡೀಂದ್ರಿಯ ಪ್ರಸಾದ)ಗಳು, ಐದು ವರ್ಣ (ಮನ, ಬುದ್ಧಿ, ಚಿತ್ತ, ಅಹಂಕಾರ, ಭಾವ, ಕರಣ ವೃತ್ತಿಗಳಲ್ಲಿ -ಅಲ್ಲಿರುವ ಪಂಚಲಿಂಗ ಪ್ರಸಾದ)ಗಳು. ಇವುಗಳಲ್ಲಿ ಮಾಯಾ ಸಂಬಂಧವಾದುದನ್ನು ಬಿಟ್ಟು ಲಿಂಗಸಂಬಂಧವಾದುದನ್ನು ತನ್ನ ಸಾಧನ ಸಂದರ್ಭದಲ್ಲಿ ಕೈಗೆತ್ತಿಕೊಂಡರೆ ಅವನು ಶಿವನಾಗುತ್ತಾನೆಂಬುದು ಈ ವಚನದ ತಾತ್ಪರ್ಯ.

ಅಂದರೆ ಈ ಜೀವತ್ರಯ ಅಜಕುಲವೆಲ್ಲವೂ ಅತಿರೇಕದಲ್ಲಿ ಪ್ರವೃತ್ತಿ ಮಾರ್ಗ ಹಿಡಿಯದೆ - ಮಾನವೀಯತೆಯ ವಿಕಾಸಕ್ಕೆ ಮತ್ತು ಅಂತರಂಗಗಳ ಏಕತೆಗೆ ಅನಿವಾರ್ಯವಾದ ನಿವೃತ್ತಿ ಕ್ಷೇತ್ರದಲ್ಲಿ ಅಂದರೆ ಲಿಂಗ ಕ್ಷೇತ್ರದಲ್ಲಿ ಹಸಿರು ಮೇದು ನಿರ್ಮಲವಾದ ನೀರು ಕುಡಿದರೆ ಈ ಭೂಗೋಳ ಕೈಲಾಸವಾಗುವುದು. - ಜೀವ- ಜೀವವೂ ಲಿಂಗದೇವರ ಶಿವನಾಗುವುದು

ವಿ: ೧. ಮೇಕೆಯ ಸಾಮಾನ್ಯ ಲೌಕಿಕ ಜೀವಕ್ಕೆ ಸಂಕೇತವಾದರೆ -ಶರಣನಿಗೆ ಸಂಕೇತ ಕುರಿ! ಹೇಳಿ ಯಾಕೆ? (ಎಲ್.ಬಸವರಾಜು)

ವಿ: ೨. ಒಂದು ಸಾವಿರ ವರ್ಷದಷ್ಟು ಹಿಂದೆಯೇ ಶಿವ ಶರಣರು "ವಚನ" ಒಂದು ವಿಶಿಷ್ಟ ಜನಪದ ಸಾಹಿತ್ಯಬಂಧವನ್ನು ಕಟ್ಟಿಕೊಟ್ಟರಲ್ಲದೆ- ಒಂದು ರೂಢಿಯ ಅರ್ಥದೊಳಗೇ ಅತೀತವಾದುದೊಂದು ರಸಭಾವ ಪುಟಿಯುವ ಬೆಡಗಿನ ವಿಧಾನವನ್ನು ಸಿದ್ಧಿಸಿಕೊಂಡರು ಮತ್ತು ಅದನ್ನೇ ಒಂದು ಅಭಿವ್ಯಕ್ತಿ ಪಂಥವಾಗುವಂಥ ಉದ್-ಯೋಗ ನೈಪುಣ್ಯವನ್ನು ಸಂಪಾದಿಸಿ ಕೊಂಡರು.[೨೨]

ಪ್ರಸ್ತುತ ಈ ವಚನದಲ್ಲಿ ದೇಹ ಸಂಬಂಧಿಯಾದ ಜೀವವನ್ನು ತ್ರಿವಿಧಾವಸ್ಥೆಯಲ್ಲಿ ಕೂಡಿಕೊಂಡು ವರ್ತಿಸುವ ಷಡೀಂದ್ರಿಯಂಗಳ ವಿಷಯದಲ್ಲಿ ಲಂಪಟನಾಗಿರುವ, ಪಂಚಕರಣಗಳಲ್ಲಿ ವ್ಯವಹರಿಸುವ ರಜೋಗುಣಗಳನ್ನು ದೇಹದಲ್ಲಿ ತುಂಬಿಕೊಂಡಿರುವ ವ್ಯಕ್ತಿಯ ಮನಸ್ಥಿತಿಯನ್ನು ತಿದ್ದುವ ಪ್ರಯತ್ನ ಇಲ್ಲಿದೆ.

ಕೊಲುವ ತೋಳನ ಕುಲ ಎನ್ನುವಲ್ಲಿ ಅಜ್ಞಾನ ಸ್ವರೂಪಿಯಾದ ಮಾಯಾಶಕ್ತಿ ಕಾಲಸಂಬಂಧವಾದ ಉತ್ಪತ್ತಿ, ಸ್ಥಿತಿ, ಲಯವೆಂಬ ತ್ರಿವಿಧ ಬಟ್ಟೆಯ ಮುಟ್ಟದೆ ಇರುವ ಜೀವಿಗೆ ಶವಸಂಸ್ಕಾರದಿಂದ ಸುಜ್ಞಾನಿಯನ್ನಾಗಿ ಮಾಡಲು ಶ್ರೀಗುರು ಕರುಣೆ ಅವಶ್ಯ. ತ್ರಿವಿದ ಲಿಂಗ ಸಂಬಂಧಿಯಾದ ಶರಣನ ತ್ರಿವಿಧಾವಸ್ಥೆ ಅಳಿದು ಲಿಂಗಾವಸ್ಥೆಯಾಗಬೇಕು ಎಂಬುದು ಶರಣರ ನಿಲುವಾಗಿದೆ.

ಷಡಿಂದ್ರಿಯಗಳಲ್ಲಿ ತೊಡಗಿರುವ ವ್ಯಕ್ತಿಗೆ ಶರಣನ ಮನ, ಬುದ್ಧಿ, ಚಿತ್ತ, ಅಹಂಕಾರ, ಭಾವವೆಂಬ ಪಂಚಕರಣಂಗಳಲ್ಲಿ ಪಂಚಲಿಂಗ ಸಂಬಂಧವಾಗುವುದರಿಂದ ಆ ವರ್ತನೆಯಲ್ಲಿ ನಡೆಯದೆ ಸನ್ಮಾರ್ಗದಲ್ಲಿ ಸಾಗುವನು. ಶರಣನ ಲಿಂಗಕ್ಷೇತ್ರವೆಂಬ ಹೊಲದಲ್ಲಿ ಬೆಳೆದು ಭಕ್ತಿಯ ಅಮೃತವನ್ನು ಸ್ವೀಕರಿಸಿ ಶರಣರ ಸರ್ವಾಚಾರ ಸಂಪತ್ತನ್ನು ಸಾರಬೇಕು ಎಂಬ ಚಿಂತನೆ ವ್ಯಕ್ತವಾಗಿದೆ.

"ಕುರುಬನು ಕಾಯುವ ಆಡು ಮತ್ತು ಕುರಿಗಳಲ್ಲಿ ಬೇರೆ ಬೇರೆ ವರ್ಣಗಳನ್ನು ನೋಡಬಹುದಾಗಿದೆ. ಈ ವರ್ಣವು ಆಡು, ಕುರಿಗಳ ಜಾತಿಯನ್ನು ಹೇಳುವ ಹಾಗೆ ಅವುಗಳು ಶರೀರ ರಚನೆಯಲ್ಲಿ ಹೊಂದಿರುವ ಬಣ್ಣವನ್ನು ಹೇಳುತ್ತಿರುವಂತಿದೆ. ಮೂರು ವರ್ಣದ ಬೊಟ್ಟುಗ ಎಂದು ಮೊದಲಾಗುವ ವಚನದಲ್ಲಿ ಬೊಟ್ಟುಗ, ಅಳಗ, ಸಂಚಿಗ ಇಲ್ಲಿ ಆಯಾ ಆಡು-ಕುರಿಗಳ ಜಾತಿ ಇಲ್ಲವೆ ಬಣ್ಣವನ್ನು ಕಾಣಬಹುದಾಗಿದೆ. ಒಟ್ಟಾರೆ ನಾನಾ ವರ್ಣದ ಈ ಕುಲವನ್ನು ಮೂರು ಕುಲಗಳನ್ನಾಗಿ ವಿಂಗಡಿಸಿದ್ದಾನೆ. ಅಜಕುಲ, ಕುರಿಕುಲ, ತೋಳ ಕುಲ ಇಲ್ಲಿ ಅಜವು ಆಡು ಆಗಿದ್ದು, ಇದು ಶರೀರವನ್ನು ಸಂಕೇತಿಸುತ್ತದೆ. ಈ ಮೂರನ್ನೂ ಮುಟ್ಟದೆ ಅಂದರೆ ತಿರಸ್ಕಸಿದರೆ, ಇಲ್ಲವೆ ಒಳಗಾಗದೆ ದಾಟುವುದನ್ನು ಹೇಳಲಾಗಿದೆ. ಹೀಗೆ ಮೂರರ ಹೊರಗೆ ನಿತಾಂತ ಅರಿಷಡ್ ವರ್ಗಗಳನ್ನು, ಪಂಚೇಂದ್ರಿಯಗಳನ್ನು ಸಹಜವಾಗಿಯೇ ಗೆಲ್ಲುತ್ತಾನೆ. ಅಂಥವನು ಈ ಒಂದೇ ಒಂದಾದ ಪರಮಾತ್ಮನೆಂಬ ಹೊಲದಲ್ಲಿ ಅರಿವನ್ನು ಮೇಯುವ ಅರಿವಿನ ಶರಣರ ಸಮೂಹದಲ್ಲಿ ನಿಲ್ಲುವ, ಕಳೆದು ನಿಲ್ಲುವ, ಕಳೆದು ಉಳಿದ ನಿಸ್ಪಂದೇಹದಲ್ಲಿ ನಿಲುಗಡೆ ಪಡೆಯುವಂತಹನಾಗುತ್ತಾನೆ.

ವಚನಗಳಲ್ಲಿ ಕಾಯಕ ಮೂಲದ ಪರಿಭಾಷೆ, ಧಾರ್ಮಿಕ, ಧಾರ್ಮಿಕ ಜಿಜ್ಞಾಸೆಯ ಸಲಕರಣೆಗಳು ಎಂಬಂತೆ ಬಳಕೆಯಾಗಿವೆ. ವೃತ್ತಿಯೆಂಬುದು ವಸ್ತುರೂಪಿ ಭಿತ್ತಿಯಾಗಿ ನಿರೂಪಿತವಾಗುತ್ತದೆ. ವೃತ್ತಿ ಮತ್ತು ಸಲಕರಣೆಗಳ

ಸಂಬಂಧ ಹೇಗೆ ಪರಸ್ಪರ ಅವಿನಾಭಾವದ ಅನುಕೂಲತ್ವದಲ್ಲಿ ಆಗುವ ಕ್ರಿಯೆಯೇ ಅದೇ ರೀತಿ ಇಲ್ಲಿನ ಚಿಂತನ ಮತ್ತು ವ್ಯಕ್ತಿ ಧರ್ಮದ ಅನುಭವ ಸಾಮಾನ್ಯತೆ ಧಾರ್ಮಿಕ ಜಿಜ್ಞಾಸೆಯ ಅನುಭವ ವಿಶೇಷತೆಯನ್ನು ವ್ಯಂಜಿಸುವುದಕ್ಕೆ ಕಾಯ-ಕಾಯಕದಂತೆ ಪದ -ಪದಾರ್ಥಗಳ ಎರಡೂ ರೀತಿಯ ರಚನೆಗಳನ್ನು ಕಾಣಬಹುದು. ಇದು ಗೊಲ್ಲಾಳನೊಬ್ಬನಿಗೆ ಅನ್ವಯಿಸುವ ಮಾತಲ್ಲ. ಬಹುತೇಕ ಕಾಯಕ ಜೀವಿ ವಚನಕಾರರಿಗೆ ಅನ್ವಯಿಸುವ ಸೂತ್ರ.[39]

ಶರಣರು ತಮ್ಮ ಆಧ್ಯಾತ್ಮಿಕ ಸಾಧನೆಯ ಅನುಭವವನ್ನು ತಮ್ಮ ಕಾಯಕ ವರ್ಣನೆಯ ರೂಪಕದಲ್ಲಿಯೇ ವಚನಗಳಲ್ಲಿ ವಿವರಿಸಿದ್ದಾರೆ. ಇದು ಕಾಯಕ ತತ್ವಕ್ಕೆ ತುಂಬ ಸಹಜವಾದುದು. ತಮ್ಮ ಆಧ್ಯಾತ್ಮಿಕ ವೃತ್ತಿಗಳೇ ತಮ್ಮ ಸೋಪಾನವೆಂದು ಹಲವಾರು ಜನರು ಭಾವಿಸಿದ್ದರೆಂದು ಇದರಿಂದ ವಿದಿತವಾಗುತ್ತದೆ. ಗೊಲ್ಲಾಳನು ತನ್ನ ವೃತ್ತಿ ಅನುಭವ ಮೂಲಕವಾಗಿಯೇ ತನ್ನ ಆಧ್ಯಾತ್ಮಿಕ ಅನುಭವಗಳನ್ನು ಹೇಳಿಕೊಳ್ಳುವ ವಿಶಿಷ್ಟವಾದ ವಿಧಾನವನ್ನು ಈತನ ವಚನಗಳಲ್ಲಿ ಕಾಣುತ್ತೇನೆ. ಆದ್ದರಿಂದಲೇ ಈತನ ವಚನಗಳು ಹೆಚ್ಚು ಬೆಡಗಿನಿಂದ ಕೂಡಿರುವುದು ನಿಜ. ತಮ್ಮ ಮನಸ್ಸನ್ನು ಪ್ರಚೋದಿಸುವ ಬುದ್ಧಿಯನ್ನು ಕೆರಳಿಸಿದ, ಆತ್ಮವನ್ನು ಅರಳಿಸಿದ ಒಂದೊಂದು ಭಾವನೆಯನ್ನು ಅವರವರ ಕಾಯಕದಿಂದ ಪಡೆಯುವ ಅನುಭವದ ಹಿನ್ನೆಲೆಯಲ್ಲಿ ವಚನಗಳನ್ನು ರಚಿಸಿದ್ದಾರೆ.

"ಪಶುಪಾಲನೆಯಂತೆಯೇ ಕುರಿ ಸಾಕಣೆಯೂ ವ್ಯವಸಾಯಕ್ಕೆ ಸಂಬಂಧಿಸಿದ ಒಂದು ವೃತ್ತಿ. ಪ್ರಾಚೀನ ಕರ್ನಾಟಕದಲ್ಲಿ ಇದೊಂದು ಪ್ರಮುಖ ವೃತ್ತಿಯಾಗಿದ್ದರೂ ವಚನಗಳಲ್ಲಿ ಇದರ ವಿಷಯವಾಗಿ ಸಿಗುವ ವಿವರಗಳು ಹೆಚ್ಚಾಗಿಲ್ಲ. ಕುರಿಗಳನ್ನು ಸಾಕಿ, ಅದರ ಉಣ್ಣೆಯನ್ನು ತೆಗೆದು ಕಂಬಳಿ ಮುಂತಾದವನ್ನು ತಯಾರಿಸುವರು. ಕುರುಬರು. (ಈಗಿನ ಕುರುಬ ಎಂಬ ಪದವು 'ಕುರುಂಬ' ಎಂಬುದರಿಂದ ರಚಿತವಾದುದು. ಆದರೆ ಕುರುಂಬ ಎಂದರೆ ಬೆಟ್ಟದಲ್ಲಿ ವಾಸಿಸುವವನು ಎಂಬ ಅರ್ಥವೇ ಮೂಲ. ಮುಂದೆ ಈಗಿರುವ ಅರ್ಥವು ಪ್ರಾಪ್ತವಾಯಿತು. ಇದಕ್ಕೆ ಕಾರಣ 'ಕುರಿ' ಮತ್ತು 'ಕುರುಬ'ಗಳಿಗಿರುವ ರೂಪ ಸಾಮ್ಯದಿಂದ (ತಪ್ಪು ಸಾಹಚರ್ಯ) ಕುರುಬನ ಉಲ್ಲೇಖ ವಚನಗಳಲ್ಲಿದೆ. ಗೊಲ್ಲಾಳ ಅಥವಾ ಗೊಲ್ಲನೇ ಕುರಿಗಳನ್ನು ಕಾಯುತ್ತಿದ್ದ; ಇವನು ಹೋತ, ಆಡು, ಕುರಿ, ಟಗರುಗಳಿಗೆ ಹುಲಿ, ತೋಳ ಮುಂತಾದ ಕಾಡುಪ್ರಾಣಿಗಳಿಂದಲೂ, ಚೋರರಿಂದಲೂ ಉಂಟಾಗಬಹುದಾದ ಆಪತ್ತನ್ನು ತಪ್ಪಿಸಿ ಕಾಯುತ್ತಿದ್ದ. ವೀರಗೊಲ್ಲಾಳನೆಂಬ ವಚನಕಾರನೊಬ್ಬನು ಬೊಟ್ಟುಗ, ಅಳಗ, ಸಂಚಿಗ ಎಂಬ 'ಅಜಕುಲ ಕುರಿವರ್ಣಗಳನ್ನು ಹೆಸರಿಸುತ್ತಾನೆ. ಅಳಗ ಎಂಬುದ ಹವಳದ ಬಣ್ಣಕ್ಕಿರುವ ಹೆಸರು ಆ ಬಣ್ಣದ ಪ್ರಾಣಿಗೂ ಇದು ಅನ್ವಯಿಸುತ್ತದೆ. ಪ್ರಾಯಶಃ ಇವು ಹವಳ ವರ್ಣದ ಬೊಟ್ಟುಗಳುಳ್ಳ ಪ್ರಾಣಿಗಳನ್ನು ಸೂಚಿಸುತ್ತದೆ. ಆದ್ದರಿಂದ ಸಂಚಿಗ ಎಂಬುದೂ ಯಾವುದೋ ಒಂದು ಬಣ್ಣದ ಪ್ರಾಣಿಯ ಹೆಸರೆಂದು ಹೇಳಬಹುದು. ಇಲ್ಲಿ ಅದು ಕುರಿ ಮೇಕೆಗೆ ಅನ್ವಯಿಸುತ್ತದೆ.[40]

ಗೊಲ್ಲಾಳನು ಕುರಿ ಸಾಕುವ ವೃತ್ತಿಯಲ್ಲಿದ್ದವನು ಹಾಗೂ ಕುರುಬ ಜನಾಂಗಕ್ಕೆ ಸೇರಿದವನು. ಈತನೂ ಒಬ್ಬ ವಚನಕಾರನಾಗಿದ್ದನು ಎಂಬುದನ್ನು ವಿದ್ವಾಂಸರ ಅಭಿಪ್ರಾಯದ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ.

**ವಚನ -೩ :**

"ಕಂಪೆಯ ಕಟ್ಟಿ, ತಿತ್ತಿಯ ಹೊತ್ತು
ಮಱಿಯ ನಡೆಸುತ್ತ, ದೊಡ್ಡೆಯ ಹೊಡೆವುತ್ತ,
ಅಡ್ಡಗೋಲಿನಲ್ಲಿ ಹೋಹ ಚುಕ್ಕಿ ಬೊಟ್ಟಿನವನ ತಿಟ್ಟುತ್ತ,
ಹಿಂಡನಗಲಿ ಹೋಹದಿಂಡೆಯ
ಮಣಿಘಟ್ಟಿನ ಅಭಿಸಂಧಿಯ ಕೋಲಿನಲ್ಲಿಡುತ್ತ
ಈ ಹಿಂಡಿನೊಳಗೇ ತಿರುಗಾಡುತ್ತಿದ್ದೇನೆ
ಈ ವಿಕಾರದ ಹಿಂಡ ಬಿಡಿಸಿ
ನಿಜನಿಳಯ ನಿಮ್ಮಂಗವ ತೋಱಿ
ಸುಸಂಗದಲ್ಲಿರಿಸು ಎನ್ನೊಡೆಯ
ವೀರ ಬೀರೇಶ್ವರ ಲಿಂಗವೇ"[೨೭]

ಕುರಿಗಾಹಿಯೂ ಕುರಿಗಳನ್ನು ಕಾಯುವಾಗ, ಅವುಗಳನ್ನು ಹೊಡೆದುಕೊಂಡು ಹೋಗುವಾಗ ಮತ್ತು ತನಗೆ ಬೇಕಾದ ಸಾಮಾನುಗಳನ್ನು ಇರಿಸಿಕೊಂಡು ಸಾಗುವ ಪರಿಯನ್ನು ವಿವರಿಸಲಾಗಿದೆ. 'ಕಂಥೆಯ ಕಟ್ಟಿ' ಕುರಿಕಾಯುವವರು. ಕಂಬಳಿ(ಕುರಿಯ ಕೂದಲಿನಿಂದ ಮಾಡುವರು)ಯನ್ನು ಜೋಳಿಗೆಯ ಆಕಾರದಲ್ಲಿ ಕಟ್ಟಿಕೊಳ್ಳುವರು. ಈ ಜೋಳಿಗೆಯಲ್ಲಿ ತಮಗೆ ಬೇಕಾದ ಆಹಾರ ಸಾಮಗ್ರಿಗಳು, ಮಡಿಕೆ, ಇತರೇ ಜೀವನಾವಶ್ಯಕ ವಸ್ತುಗಳನ್ನು ಇರಿಸಿಕೊಂಡಿರುತ್ತಾರೆ. 'ಲೆತ್ತಿಯ ಹೊತ್ತು' ಕುರುಗಾಹಿಗಳು ಅಡವಿಯಲ್ಲಿ ಎಲ್ಲೆಂದರಲ್ಲಿ ತಿರುಗುವರು. ಆಗ್ಗೆ ನೀರಿನ ಅವಶ್ಯಕತೆ ಬಹಳೇ ಆಗಿರುವುದರಿಂದ ತತ್ರಾಣಿ (ಇದನ್ನು ಮಣ್ಣಿನ ಮಡಿಕೆಯಿಂದ ಹೂಜಿ ಆಕಾರದಲ್ಲಿ ತಯಾರಿಸುತ್ತಿದ್ದರು.)ಯಲ್ಲಿ ಹೊಟ್ಟೆಚೀಲ, ಹೊಟ್ಟೆಚೀಲವೆಂದರೆ ಆಹಾರ, ನೀರು ಎರಡರಲ್ಲಿ ಒಂದನ್ನು ಹಾಕಬಹುದಾಗಿದೆ. ಅದ್ದರಿಂದ 'ಲೆತ್ತಿ' ಪದದ ಅರ್ಥ ತತ್ರಾಣಿಯೆಂದು ಅರ್ಥೈಸಿದರೆ ಸರಿಯಾದ ಅರ್ಥ ಹೊರಹೊಮ್ಮುತ್ತದೆ.

"ಗೊಲ್ಲನೊಬ್ಬನು ಕಂಬಳಿಯನ್ನು ಹೆಗಲ ಮೇಲೆಸೆದುಕೊಂಡು ನೀರುನಿಡಿಯ ಲೆತ್ತಿಯನ್ನು ಬಗಲಲ್ಲಿ ನೇತು ಬಿಟ್ಟುಕೊಂಡು, ಕೈಯಲ್ಲಿ ದೊಣ್ಣೆಯನ್ನು ಹಿಡಿದು -ಮೇಕೆಗಳನ್ನು ಮೇಯಿಸಲು ಮೇಡಿಗೆ ಹೊಡೆದುಕೊಂಡು ಹೋಗುವ ಒಂದು ಚಿತ್ರವಿದೆ.

ಮಂದೆಯನ್ನು ಬಿಟ್ಟು ಅಡ್ಡಾದಿಡ್ಡಿ ಹೋಗುವ ಮರಿಗಳಲ್ಲಿ ಕೆಲವನ್ನು ಸರಿದಾರಿಯಲ್ಲಿ ನಡೆಸುವ, ಕೆಲವನ್ನು ಗದರಿಸಿ ಒಟ್ಟುಗೂಡಿಸಿ ಮೇಯಿಸುವ ಜವಾಬ್ದಾರಿ ಆ ಗೊಲ್ಲನದು.

ಬುದ್ಧಿಯಿಲ್ಲದೆ ಚಲ್ಲಾಪಿಲ್ಲಿಯಾಗುವ ಮುದ್ದು ಜೀವಗಳನ್ನು ತೋಳಕ್ಕೆ ತುತ್ತಾಗದಂತೆ - ಹೊಡೆದಾದರೂ ಹುಲ್ಲಿರುವೆಡೆಗೆ ಕೊಂಡೊಯ್ದು ಮೇಯಿಸುವುದು ಸುಲಭದ ಕೆಲಸವೇನು ಅಲ್ಲ!

ಹಾಗೆಯೇ ಜೀವನೂ ಚಂಚಲವಾದ ತನ್ನ ಇಂದ್ರಿಯಗಳನ್ನು ಸನ್ಮಾರ್ಗದಲ್ಲಿ ತೊಡಗಿಸಿ ಶಿವತ್ವದ ಮೇವನ್ನು ದಣಿಯೆ ಮೇಯಿಸಿ ಸಲಹಬೇಕೆಂಬುದು ಈ ವಚನದ ತಾತ್ಪರ್ಯ .

ಜೀವನಿಗೆ- ತಾನು ಮಾಡುವ ಈ ಇಂದ್ರಿಯ ಶಿಕ್ಷಣದ ಕೆಲಸ -ಎಷ್ಟೋ ಸಲ ಬಹಳ ತ್ರಾಸದಾಯಕವೆನಿಸಿ ಬೇಸರವನ್ನು ಹುಟ್ಟಿಸಬಹುದು! ಅಂಥ ಸಂಕಟ ಸಂದರ್ಭಗಳಲ್ಲಿಯೂ ಸಾಧಕ ಜೀವನು ದೇವರಿಗೆ ಮೊರೆಯಿಟ್ಟು ತನ್ನ ಮನೋವಿಕಾರವನ್ನು ನಿಗ್ರಹಿಸಿ ತನ್ನ ಸಾಧನೆಯನ್ನು ಶಿವಕ್ಷೇತ್ರಕ್ಕೆ ಮರಳಿಸಿದಾಗ ಆಗುವ ಸಾರ್ಥಕತೆಯ ಭಾವವನ್ನು ತನ್ನದಾಗಿಸಿಕೊಳ್ಳಬೇಕು.

ಕಣ್ಣು ನಾಲಗೆ ಮುಂತಾದ ಇಂದ್ರಿಯಗಳ, ಮನ ಬುದ್ಧಿ ಮುಂತಾದ ಅಂತಃಕರಣಗಳ ಮೇಲೆ ತನ್ನ ಅಧಿಪತ್ಯವನ್ನು ಸ್ಥಾಪಿಸಿ ಆ ಮೂಲಕ ತನ್ನ ಉದ್ಧಾರವನ್ನು ಸುಗಮ ಮಾಡಿಕೊಳ್ಳದೆ ಬೇರೆ ಗತಿಯಿಲ್ಲ- ಸದ್ಗತಿಯಿಲ್ಲ. ಈ ಜೀವ ಗೊಲ್ಲನಿಗೆ " ಎಂದು ಎಲ್. ಬಸವರಾಜು ಅವರು ವ್ಯಾಖ್ಯಾನಿಸಿದ್ದಾರೆ.

**ಟೀಕು :** "ದೇಹಸಂಬಂಧಿಯಾದಾತ್ಮಂಗೆ ಪ್ರಾರಬ್ಧ ಭೋಗವ ಸಂಬಂಧವ ಮಾಡಿದನು

ಪರಶಿವನೆಂಬುದೀಗ, ಕಂಡೆಯ ಕಟ್ಟ ಲೆತ್ತಿಯ ಹೊತ್ತು ಎಂಬ ಶಬ್ದಕ್ಕರ್ಥ

ಇಂತಪ್ಪಾತ್ಮರಿಗೆ ಸುಜ್ಞಾನೋದಯವಾಗಲು ಸಕಲ ಕರಣಂಗಳ ವರ್ತನೆಯ ನಿವೃತ್ತಿ ಮಾಡಿ ಸತ್ಪಥ ಮಾರ್ಗವಿಡಿದು ಚರಿಸುತ್ತಿಹನೆಂಬುದೀಗ, ಮಱಿಯ ನಡಸುತ್ತ ಎಂಬ ಶಬ್ದಕ್ಕರ್ಥ.

ಆ ಶರಣ ಮಾಯಾಪ್ರಪಂಚ ನಿವೃತ್ತಿ ಮಾಡಿ ನಿರ್ಮಾಯ ಸ್ವರೂಪ ಮಾಡಿದನೆಂಬುದೀಗ, ದೊಡ್ಡೆಯ ಹೊಡೆವುತ್ತ ಎಂಬ ಶಬ್ದಕ್ಕರ್ಥ.

ಆ ಚಿತ್ಸ್ವರೂಪನಾದ ಶರಣ ಇಂದ್ರಿಯಂಗಳ ವಿಷಯ ಪ್ರಪಂಚದತ್ತ ಹರಿವುತ್ತಿಹ ಸಂಕಲ್ಪರೂಪವಾದ ಮನೋಪ್ರಕೃತಿಯ ಶಿವಭಾವದಿಂ ಭೇದಿಸಿದನೆಂಬುದೀಗ, ಅಡ್ಡಗೋಲಿನಲ್ಲಿ ಹೋಹ ಚುಕ್ಕಿ ಬೊಟ್ಟನವನ ತಿಟ್ಟುತ್ತ ಎಂಬ ಶಬ್ದಕ್ಕರ್ಥ.

ಆ ಚಿದ್ರೂಪನಾದ ಶರಣ ಸಕಲ ಕರಣಂಗಳನಗಲಿ ಹೋಹ ಅಹಂಕಾರಯುಕ್ತವಾದ ಭಾವವ ಅಂತರಂಗ ಬಹಿರಂಗವನೊಳಕೊಂಡಿರ್ಪ ಅಭಿನ್ನಜ್ಞಾನದಿಂ ನಿವೃತ್ತಿಯ ಮಾಡಿದನೆಂಬುದೀಗ, ಹಿಂಡನಗಲಿ ಹೋಹ ದಿಂಡೆಯ ಮಣೆ ಘಟ್ಟಿನ ಅಭಿಸಂದಿಯ ಕೋಲಿನಲ್ಲಿ ಇಡುತ್ತ ಎಂಬ ಶಬ್ದಕ್ಕರ್ಥ.

ಇಂತು ಸಕಲ ಕರಣಂಗಳಲ್ಲಿ ಕೂಡಿರ್ದಾತ್ಮನು ಈ ಕರಣಂಗಳ ವರ್ತನೆಯ ನಿವೃತ್ತಿಯಮಾಡಿ ನಿತ್ಯವಾದ ಪರಬ್ರಹ್ಮಕ್ಕೆ ಅಂಗವಾದ ಅಖಂಡ ಜ್ಞಾನ ಚಿತ್ತನಱುಹಿಸಿಕೊಟ್ಟು ಐಕ್ಯೈಸುತ್ತಿರ್ದ ಶಿಷ್ಯನೆಂಬುದೀಗ, ಈ

ಹಿಂಡಿನೊಳಗೆ ತಿರುಗಾಡುತ್ತಿದ್ದೇನೆ. ಈ ವಿಕಾರದ ಹಿಂಡ ಬಿಡಿಸಿ ನಿಜನಿಳಯ ನಿಮ್ಮಂಗವ ತೋಱಿ ಸುಸಂಗದಲ್ಲಿರಿಸು ಎನ್ನೊಡೆಯ ವೀರಬೀರೇಶ್ವರಾ ಎಂಬ ಶಬ್ದಕ್ಕರ್ಥ.[೨೯]

"ಪ್ರಸ್ತುತ ವಚನದಲ್ಲಿ ಕುರಿಕಾಯುವ ಕುರುಬವೇಷ ಕುರಿಯ ಹಿಂಡನ್ನು ಹೊಡೆದುಕೊಂಡು ಹೋಗುವ ರೀತಿಯನ್ನು, ಅದಕ್ಕೆ ಬಳಸುವ ಸಾಧನ ಗಳನ್ನು, ಆತನು ವಹಿಸುವ ಎಚ್ಚರವನ್ನು ಇಲ್ಲಿ ಹೇಳಲಾಗಿದೆ. ಇಲ್ಲಿ ಕಂಥೆಯು ಜೋಳಿಗೆಯಾಗಿದೆ. ಲೆತ್ತಿಯು ಕುಡಿಯುವ ನೀರನ್ನು ತುಂಬಿದ ಚರ್ಮದ ಚೀಲವಾಗಿದೆ. ಮರಿಯು ತಂತಾನೆ ನಡೆಯಲಾಗದ ಪ್ರಾಣಿಯಾಗಿದೆ. ದೊಡ್ಡೆಯು ಹಿಂಡಾಗಿದೆ. ಇವುಗಳಲ್ಲಿ ಚುಕ್ಕಿ ಬೊಟ್ಟಿನ ಆಡು ಇಲ್ಲವೆ ಕುರಿಗಳು ಇಲ್ಲಿವೆ. ಇಂತಹ ಹಿಂಡನ್ನು ಅಗಲಿ ಒಂಟಿಯಾಗಿ ಮೇಯಲು ಹೋಗುವ ಆಡು ಇಲ್ಲವೆ ಕುರಿ ಅಲ್ಲಿವೆ. ಇವುಗಳನ್ನು ಸರಿಹಾದಿಯಲ್ಲಿ ಸಾಗಿಸಲು ಅಡ್ಡಗೋಲು ಅಭಿಸಂಧಿಯ (ಮೇಳ) ಕೋಲುಗಳು ಇವೆ. ಇವುಗಳನ್ನು ಆಧ್ಯಾತ್ಮಿಕ ಸಂಕೇತವಾಗಿಯೂ ವಚನಕಾರ ಬಳಸಿದ್ದಾನೆ. ಈ ಹಿಂಡನ್ನು "ವಿಕಾರದ ಹಿಂಡು" ಎಂದು ಕರೆಯುವಲ್ಲಿ ಸಾಂಕೇತಿಕತೆಯು ಸ್ಪಷ್ಟವಾಗಿದೆ. ವಿಕಾರವು ಮನಸ್ಸಿನಲ್ಲಿ ಹುಟ್ಟಿ ಇಂದ್ರಿಯಗಳಲ್ಲಿ ಹರಿಯುವಂತಹದ್ದು. ಮಾಯೆಯ ಪರಿಣಾಮವಾಗಿ ಪ್ರಪಂಚವೆಲ್ಲ ಆಕರ್ಷಣೆಯ ವಿಕಾರಕ್ಕೆ ಒಳಗಾಗಿದೆ. ಮೋಹ ಮಮಕಾರಗಳ ಸಂಸಾರದ ಈ ಹಿಂಡಿನಿಂದ ತನ್ನನ್ನು ಬಿಡಿಸಲು "ನಿಜನಿಳಯ"ದಲ್ಲಿ ಪರಮಾತ್ಮನ ಸಾಕ್ಷಾತ್ಕಾರವನ್ನು ತೋರಲು ತನ್ನಿಷ್ಟ ದೈವವಾದ ವೀರಬೀರೇಶ್ವಲಿಂಗದಲ್ಲಿ ಬೇಡಿಕೊಳ್ಳುತ್ತಾನೆ.[೩೦]

ದೇಹದ ತಮೋಗುಣಗಳನ್ನು ಕಳೆದುಕೊಂಡು ಸಾತ್ವಿಕ ಸುಷುಪ್ತಿಯ ಆನಂದದಲ್ಲಿ ಲೀನವಾಗುವ ಭಾವವನ್ನು ಇಲ್ಲಿ ಕಾಣಬಹುದಾಗಿದೆ. ಈ ಮನಸ್ಸನ್ನು ಕೃತಕ ಬಲತ್ಕಾರದಿಂದ ಗೆಲ್ಲುವುದು ಸಾಧ್ಯವಾಗಲಿಕ್ಕಿಲ್ಲ. ಆದ್ದರಿಂದ ಸಹಜ ಸ್ವರೂಪದ ಅರಿವಿನಿಂದ ಮಾತ್ರ ಸಾಧ್ಯವಾಗಬಹುದು. ಇಲ್ಲಿ ಬಳಸಿದ ಸಂಕೇತಗಳು ಪೂರ್ಣ ಪ್ರಮಾಣದಲ್ಲಿ ಸತ್ಯವಾಗಿರುವುದಿಲ್ಲ. ಅವು ಕೇವಲ ವಸ್ತುವಿನ ರೂಪವನ್ನು ಸ್ಥೂಲವಾಗಿ ಭೌತಿಕವಾಗಿ ಪರಿಚಯಿಸಬಲ್ಲವು. ಅವು ಅನುಭೂತಿಯನ್ನುಂಟು ಮಾಡಲಾರವು. ಸಂಕೇತಗಳ ಮೂಲಕ ಅಭಿವ್ಯಕ್ತಗೊಳಿಸುವ ಮುನ್ನ ವಕ್ತೃವಿನ ಮನದಲ್ಲಿ ಒಂದು ವಿಧವಾದ ಮಾನಸಿಕ ಪ್ರಕ್ರಿಯೆ ನಡೆದಿರುತ್ತದೆ. ಇಲ್ಲಿ ಕಂಥೆ(ಡೆ) ..... ಮರಿ. ದೊಡ್ಡ, ಅಡ್ಡಗೋಲು, ಚುಕ್ಕಿ ಬೊಟ್ಟಿನವ ಇವೆಲ್ಲ ಅಮೂರ್ತಭಾವವನ್ನು ಸಾಕಾರಗೊಳಿಸಲು ಅನುಭಾವಿಯ ಕೈಗೆ ಎಟಕುತ್ತವೆ. ಈ ಮನಸ್ಥಿತಿಯಲ್ಲಿ ಅನುಭಾವಿಯ ಅನುಭವದ ಅಭಿವ್ಯಕ್ತಿ ಉತ್ಕೃಷ್ಟವಾದರೂ, ಅಪ್ರಸ್ತುತವಾದ ಪ್ರತೀಕಕ್ಕೆ ಶರಣು ಹೋಗುತ್ತಾನೆ. ಸ್ವಾನುಭಾವವು ತೀವ್ರವಾದಾಗ ಅದಕ್ಕನುಸಾರವಾಗಿ ಪ್ರತಿಭೆಗನುಗುಣವಾಗಿ, ಶಬ್ದದ ಉಡಿಗೆ ತೊಡಿಗೆಗಳನ್ನು ತೊಡಿಸುವ ಪ್ರಯತ್ನ ಮಾಡುತ್ತಾನೆ. ಆಗ ಅದು ಬೆಡಗಿನ ನುಡಿಯಾಗುತ್ತದೆ. ಮೇಲು ನೋಟಕ್ಕೆ ವಿರೋಧದ ಉಕ್ತಿಯಾಗಿ ಕಂಡರೂ ಅದರ ಆಳದಲ್ಲಿ ಸುಸಂಗತತೆ, ಸೌಂದರ್ಯ ಅಡಗಿರುತ್ತದೆ. ಒಳಹೊಕ್ಕು ನೋಡುವ ಕಣ್ಣುಗಳಿಗೆ ಮಾತ್ರ ಅದು ತೋರುತ್ತದೆ.

**ವಚನ :೪ :**

"ಹೋತನ ಕೊಯ್ದು, ಕುಱಿಯ ಸುಲಿದು
ಮಱಿಯ ಕೊರಳನೊತ್ತಿ, ಕಾವಲಕುನ್ನಿಯ ಕೆಡಹಿ,
ತೋಳನ ಕುಲವ ಗೆದ್ದು, ಕುರುಬನ ಕಱುಹಿನ ಕುಲವಡಗಿ
ನೆಱೆ ಅಱಿವಿನ ಕುಲದಲ್ಲಿ ಅಡಗಬೇಕು
ವೀರಬೀರೇಶ್ವರ ಲಿಂಗವನಱಿತ ಶರಣ.

**ಟೀಕು :**

ಸುಜ್ಞಾನೋದಯವಾದ ಶರಣನು ಅಹಂಕಾರಯುಕ್ತವಾದ ಜೀವ-ಭಾವವ ಶಿವಜ್ಞಾನದಿಂದ ಭೇದಿಸಿದನೆಂಬುದೀಗ, ಹೋತನ ಕೊಯ್ದು ಎಂಬ ಶಬ್ದಕ್ಕರ್ಥ.

ಆ ಚಿದ್ರೂಪನಾದ ಶರಣ ಅಜ್ಞಾನ ಸಂಬಂಧವಾದ ಮಾಯೆಯನು ಸುಜ್ಞಾನ ಪ್ರಕಾಶದಿಂ ನಿವೃತ್ತಿಯ ಮಾಡಿದನೆಂಬುದೀಗ, ಕುಱಿಯ ಸುಲಿದು ಎಂಬ ಶಬ್ದಕ್ಕರ್ಥ.

ಆ ಸುಜ್ಞಾನ ಸ್ವರೂಪವಾ(ನಾ)ದ ಶರಣನ ಮನಸ್ಸಿನ ಆ ದೃಢ ಕಂಠವನು ಶಿವಭಾವದಿಂ ನಿವೃತ್ತಿಯ ಮಾಡಿ ಉನ್ಮನೀ ತತ್ವದ ಸ್ವರೂಪವನೆಯ್ದಿಸಿದನೆಂಬುದೀಗ, ಮಱಿಯ ಕೊರಳನೊತ್ತಿ ಎಂಬ ಶಬ್ದಕ್ಕರ್ಥ.

ಆ ಚಿತ್ಸ್ವರೂಪವಾದ ಶರಣನು ಪಂಚೇಂದ್ರಿಯಂಗಳ ವರ್ತನೆಯ ಭೇದಿಸಿದನೆಂಬುದೀಗ ಕಾವಲ ಕುನ್ನಿಯ ಕಡಹಿ ಎಂಬ ಶಬ್ದಕ್ಕರ್ಥ.

ಆ ಸುಜ್ಞಾನ ಸ್ವರೂಪವಾದ ಶರಣನು ಕಾಲಸಂಬಂಧವಾದ ಉತ್ಪತ್ತಿ ಸ್ಥಿತಿಲಯಂಗಳ ಜೈಸಿದನೆಂಬುದೀಗ, ತೋಳನ ಕುಲವ ಗೆದ್ದು ಎಂಬ ಶಬ್ದಕ್ಕರ್ಥ.

ಆ ಶಿವಜ್ಞಾನಿಯಾದ ಶರಣನು ಜೀವನು ದೇಹಭಾವದ ಕುಲಾಶ್ರಮಗಳನಳಿದು ಗುರುಕರಜಾತನಾಗಿ ಲಿಂಗಾಂಗ ಸಂಬಂಧವಳವಡಲು ಶಿವಸತ್ಕುಲಜನಾದನೆಂಬುದೀಗ, ಕುಱುಬನ ಕುಱುಹಿನ ಕುಲವಡಗಿ ನೆಱೆ ಅಱಿವಿನ ಕುಲದಲ್ಲಡಗಬೇಕು. ವೀರಬೀರೇಶ್ವರ ಲಿಂಗವನಱಿತ ಶರಣ ಎಂಬ ಶಬ್ದಕ್ಕರ್ಥ"[೩೦]

"ಹೋತ -ಕುರಿ-ಮರಿ-ಕಾವಲು ನಾಯಿಗಳ ಸಹವಾಸದಲ್ಲೆ ನವೆದು, ತೋಳಗಳ ಕಾಟದಲ್ಲಿ ನಷ್ಟಗೊಂಡು ರೋಸಿ ಹೋದ ಕುರುಬ (ಗೊಲ್ಲ)ನೊಬ್ಬನ ಆ ಹೋತಗಳನ್ನು ಕೊಯ್ದು ಹಾಕಿ, ಕುರಿಗಳ ಚರ್ಮವನ್ನು ಸುಲಿದು ಹಾಕಿ, ಮರಿಗಳ ಕತ್ತನ್ನು ಹಿಸುಕಿ, ಕಾವಲು ನಾಯಿಗಳನ್ನು ಹೊಡೆದು ಕೆಡವಿ- ಇವನ್ನೆಲ್ಲ ದಿನದಿನವೂ ಕಂತಿನ ಮೇಲೆಂಬಂತೆ ಕೊಲ್ಲುತ್ತಿದ್ದ ತೋಳಗಳ ಹಿಂಡನ್ನೆಲ್ಲ ಬೇಟೆಯಾಡಿ ನಾಮಾವಶೇಷ ಮಾಡಿ -ಕೊನೆಗೆ ಈ ಕುರಿತ ಮೇಕೆಯ ಸಾಕಣೆಯ ಈ ಹೊಲ್ಲತನವನ್ನೇ ಬಿಟ್ಟು ಅದೇ ಅಡವಿಯಲ್ಲಿರುವ ಜ್ಞಾನಿಗಳ ಸಹವಾಸದಲ್ಲಿರಬೇಕೆಂಬುದು ಒಬ್ಬ ಗೊಲ್ಲನ ನಿರ್ಣಯವಾದರೆ ಅದು ವಿವೇಕದ ನಿರ್ಣಯವೇ ಆಗುವುದೆಂಬ ಒಂದು ವೈರಾಗ್ಯದ ಸೆಲೆಯಿದೆ. ಈ ಅಸಾಮಾನ್ಯ ದನಿ ಮಾರ್ದನಿಯ ವಚನಶೈಲದಲ್ಲಿ!

ಈ ಮಾರ್ದನಿಯ ಬೆಡಗಿನಿಂದಾಗಿಯೇ - ಈ ವಚನದಲ್ಲಿ ಮೇಲ್ನೋಟಕ್ಕೆ ತೋರುವ ಹಿಂಸೆ, ಕ್ರೌರ್ಯ, ಸೇಡು- ಆತ್ಮಾವಮಾನ ಈ ಯಾವುದೊಂದು ಸ್ಥಾಯಿಯಾಗದೆ ಅಲ್ಲಿಯ ಪದಗಳ ಬಳಕೆಯ ವಾಚ್ಯಾರ್ಥವನ್ನು ಸುಲಿದು ನೋಡಿದಾಗ ಆಧ್ಯಾತ್ಮಿಕವಾದೊಂದು ಹುರುಳು ಗ್ರಾಹ್ಯವಾಗುವುದು.

ಇಂದ್ರಿಯ ವ್ಯಾಪಾರಗಳ ಚರ್ವಿತ ಚರ್ವಣಗಳನ್ನು ಅವುಗಳಿಂದ ಉಂಟಾಗುವ ಕಾಲಾಪಮೃತ್ಯುವಿನ ಘಾತಾಪಘಾತಗಳನ್ನು ಧಿಕ್ಕರಿಸಿ ಸುಜ್ಞಾನಮರ ಸಾಮ್ರಾಜ್ಯದ ಕಡೆ ದೌಡಾಯಿಸಿ ಅಲ್ಲಿ ಖಾಯಂ ಪ್ರಜೆಯಾಗುವ ಮಾನವ ಸಾಹಸ ಸುಖ ಸಿದ್ಧಿಯ ಚಿತ್ರವನ್ನೇ ಈ ವಚನ ಭಿತ್ತಿಯ ಮೇಲೆ ಸವಿಸ್ತಾರವಾಗಿ ಬಿಡಿಸಿದೆ.

ಈ ವಚನದಲ್ಲಾಗಲಿ -ಅದರ ಹಿಂದಿನ ವಚನದಲ್ಲಾಗಲಿ ಅವಜ್ಞೆಯ ಧ್ವನಿಯೊಂದಿದ್ದರೆ ಈ ಲೋಕವನ್ನು ಕುರಿತಲ್ಲ - ಈ ಲೋಕದ ಬಂಜೆ ಲೌಕಿಕತೆಯನ್ನು ಕುರಿತು. ಈ ಲೋಕದ ಇರವನ್ನು ಕುರಿತಲ್ಲ, ಆ ಇರವಿನ ಪರಿಯನ್ನು ಕುರಿತು.[೩೨]

"ಇಲ್ಲಿ ಅರಿವಿನ ಶರಣನು ಮರವೆಯ ಕುಲವನ್ನು ಗೆದ್ದವನಾಗಿದ್ದಾನೆ. ಮರವೆಯ ಕುಲವು ಬಹುರೂಪಿಯಾಗಿದೆ. ಕುರುಬನು ಕಾಯುವ ಆಡು ಕುರಿಗಳಲ್ಲಿ ಹೋತ, ಕುರಿ, ಮರಿ, ಕಾವಲು ಕಾಯುವ ಕುನ್ನಿ ಇರುವ ಹಾಗೆ ಕಾಯುವ ಕುರುಬನನ್ನು ಕಾಡುವ ತೋಳನ ಕುಲವೂ ಅಲ್ಲಿಯೇ ಇದೆ. ತೋಳವೆಂಬ ಮಾಯೆಯ ಆಕ್ರಮಣವನ್ನು ತಡೆಯುವುದರ ಜೊತೆಗೆ ತಾನು ಕಾಯುತ್ತಿರುವ ಇಂದ್ರಿಯ -ಮನಸ್ಸು- ಬುದ್ಧಿ - ಚಿತ್ತ -ಮೊದಲಾದ ಹೋತ-ಕುರಿ-ಮರಿ ಮೊದಲಾದವುಗಳ ಮೋಹವನ್ನು ಕತ್ತರಿಸಿ ಒಗೆಯಬೇಕು. ಅಂದಾಗಲೇ ಅತ್ತತ್ತ ಮೀರಿದ ನಿಜದ ನಿರ್ಮಲ ಬೆಳಕಿನ ಬದುಕು ಕಾಣುವುದು ಅವನಿಗೆ ಸಾಧ್ಯವಾಗುತ್ತದೆ.[೩೩]

ಶರಣರು ಇಂದ್ರಿಯಗಳನ್ನು ತಮ್ಮ ಲಗಾಮಿನಲ್ಲಿಯೇ ಮುನ್ನಡೆಸಲು ಪರಿಪರಿಯಾಗಿ ಹೇಳಿದ್ದನ್ನು ಇಲ್ಲಿಯೂ ಗುರುತಿಸಬಹುದು. ಸಾಧಕನ ಸಾಧನೆಗೆ ಮೊದಲು ಅಡ್ಡಿಪಡಿಸತಕ್ಕಂತಹವು. ಈ ಇಂದ್ರಿಯಗಳು, ಪಂಚೇಂದ್ರಿಯಗಳ ನಾಶಕ್ಕೆ ಸಾಧಕನು ಬಳಸಿಕೊಳ್ಳುವ ಮಾರ್ಗ 'ಕುರುಹು' ಎಂದು ಅರ್ಥೈಸಲಾಗಿದೆ.

"ನಮ್ಮ ಇಂದ್ರಿಯಗಳ ಅಳವಿಗೆ ದಕ್ಕುವ ಯಾವುದೇ ವಸ್ತು, ಕ್ರಿಯೆ ಅಥವಾ ಘಟನೆ 'ಕುರುಹ' ಎನಿಸಿಕೊಳ್ಳುತ್ತದೆ. ಯಾವುದೇ ಕುರುಹು ಮತ್ತೊಂದೇ ವಸ್ತು ಕ್ರಿಯೆ ಅಥವಾ ಘಟನೆಯನ್ನು ಸೂಚಿಸುತ್ತದೆ. ವ್ಯಕ್ತಿಯಲ್ಲಿ ಗ್ರಹಿಕೆಗಳು ರೂಪುಗೊಳ್ಳುವಲ್ಲಿ ಕುರುಹುಗಳ ಪಾತ್ರ ಮಹತ್ವದ್ದು. ತತ್ವಶಾಸ್ತ್ರ, ತರ್ಕ, ಭಾಷಾಶಾಸ್ತ್ರ ಮೊದಲಾದ ಮಾನವಿಕ ಅಧ್ಯಯನಗಳಲ್ಲಿ ಕುರುಹಿನ ವಿಶ್ಲೇಷಣೆಗೆ ಪ್ರಾಮುಖ್ಯ ಸಂದಿದೆ. ತೀರ ಪ್ರಾಚೀನ ಕಾಲದಿಂದ ಹಿಡಿದು ಇವತ್ತಿನವರೆಗೆ ಕುರುಹಿನ ಸ್ವರೂಪ ಕಾರ್ಯ ಇತ್ಯಾದಿಗಳನ್ನು ಕುರಿತು ಚರ್ಚೆ ನಡೆದಿದೆ. ಈ ಶತಮಾನದಲ್ಲಿ ಕುರುಹುಗಳನ್ನು ಕುರಿತು ಪ್ರತ್ಯೇಕ ಅಧ್ಯಯನ ಶಿಸ್ತು "ಸಿಮಿಯಾಟಿಕ್ಸ್" ಎಂಬ ಹೆಸರನ್ನು ಹೊತ್ತು ಬೆಳೆದಿದೆ.[೩೪]

ಕುರುಹಿನ ಮಹತ್ವವನ್ನು ಅರಿಯುವ ಸಂದರ್ಭದಲ್ಲಿ ಅದು ಯಾವ ಜನಸಮುದಾಯದಲ್ಲಿ ಬಳಕೆಯಾಗುತ್ತಿದೆಯೋ ಆ ಸಮುದಾಯವನ್ನು ಅರಿಯುವುದು ಅವಶ್ಯಕವಾಗಿದೆ. ಈ ವಚನದಲ್ಲಿ ಅಭಿವ್ಯಕ್ತವಾದಂತೆ "ತೋಳನ ಕುಲವ ಗೆದ್ದು ಕುರುಬನ ಕುರುಹಿನ ಕುಲವಡಗಿ ನೆರವಿನ ಕುಲದಲ್ಲಿ ಅಡಗಬೇಕು. ಅಂದರೆ ಹಳೆಯ ಕುರುಹುಗಳನ್ನು ಅಳಿಸಿ ಹಾಕುವ ಆಕಾಂಕ್ಷೆಯನ್ನು ಇರಿಸಿಕೊಂಡಿದೆ ಎಂದು ಹೇಳಬಹುದು. ವಚನವು ಹೊಸ ಕುರುಹುಗಳನ್ನು ನಿರ್ಮಿಸುವ ಮಹತ್ವಾಕಾಂಕ್ಷೆ ಮತ್ತು ತಾನೇ ನಿರ್ಮಿಸಿಕೊಂಡ ಕುರುಹುಗಳ ಬಗ್ಗೆ ತಾತ್ವಿಕ ಅಪನಂಬಿಕೆಯೂ ಇದೆ. ಅದು ಯಜ್ಞವಿರಬಹುದು. ಬಲಿಕೊಡುವ ಪದ್ಧತಿ ಇರಬಹುದು. ಇಂಥಹ ಹಳೆಯ ಕುರುಹುಗಳನ್ನು ವಚನ ಲೇವಡಿ ಮಾಡುತ್ತದೆ. ವಿಮರ್ಶಿಸುತ್ತದೆ, ಖಂಡಿಸುತ್ತದೆ. ಇಷ್ಟ'ಲಿಂಗ' ಧರಿಸಿದ ಶಿವಶರಣರು ಹಳೆಯ ಕುರುಹುಗಳನ್ನು ತಿರಸ್ಕರಿಸಿ ಹೊಸ ಕುರುಹುಗಳನ್ನು ಸೃಷ್ಟಿ ಮಾಡಿದ್ದನ್ನು ನಾವು ಕಾಣಬಹುದಾಗಿದೆ. ಅಂದರೆ ರುದ್ರಾಕ್ಷಿ, ವಿಭೂತಿಯಂಥ ಲಾಂಛನಗಳಿರಬಹುದು. ಲಿಂಗ, ಪ್ರಸಾದ, ಪಾದೋದಕದಂಥ ವಸ್ತುಗಳಿರಬಹುದು. ಗುರು-ಜಂಗಮದಂತಹ ಪರಿಕಲ್ಪನೆ ನಿಹಿತ ವ್ಯಕ್ತಿಗಳಿರಬಹುದು. ಸಂಪೂರ್ಣ ಸ್ವಾತಂತ್ರ್ಯ ಸಾಧನೆಯ ಗುರಿಯುಳ್ಳ ವ್ಯಕ್ತಿತ್ವ ವಿಕಾಸದ ಪರಿಕಲ್ಪನೆ ಇರಬಹುದು. ಇದೆಲ್ಲವೂ ವಚನಯುಗದ ಹೊಸ ಕುರುಹುಗಳಾಗಿ ಬೆಳೆದವು. 'ಕುರುಹು' ಒಂದು ಜನಸಮುದಾಯವು ಒಪ್ಪಿದ ಕಲ್ಪನೆಗಳ ವಸ್ತುರೂಪವಾಗಿದ್ದಾಗ ಅದರ ನೆನಪನ್ನು ಉಳಿಸುವ, ಮುಂದೆ ಸಾಗಿಸುವ, ವಸ್ತುವಾಗುತ್ತದೆ. ಅರಿವಿಗೆ ಆಹಾರವಾಗಬಲ್ಲ ವಸ್ತುವಾಗಿ ಕುರುಹು ಇರುತ್ತದೆ.

**ವಚನ -೫ :**

"ಕಲ್ಲು ಲಿಂಗವಲ್ಲ-
ಉಳಿಯ ಮೊನೆಯಲ್ಲಿ ಒಡೆಯಿತ್ತು !
ಮರ ದೇವರಲ್ಲ -
ಉರಿಯಲ್ಲಿ ಬೆಂದಿತ್ತು !
ಮಣ್ಣು ದೇವರಲ್ಲ -
ನೀರಿನ ಕೊನೆಯಲ್ಲಿ ಕದಡಿತ್ತು !
'ಇಂತಿವನೆಲ್ಲವನಱಿವ' ಚಿತ್ತ ದೇವರಲ್ಲ-
ಕರಣಂಗಳ ಮೊತ್ತದೊಳಗೆ ಸತ್ತ್ವಗೆಟ್ಟಿತ್ತು !
ಇಂತಿವ ಕಳೆದುಳಿದ ವಸ್ತು
ಇಪ್ಪೆಡೆ ಯಾವುದೆಂದೊಡೆ -
ಕಂಡವರೊಳಗೆ ಕೈಕೊಂಡಾಡದೆ
ಕೊಂಡ ವ್ರತದಲ್ಲಿ ಮತ್ತೊಂದನೊಡಗೂಡಿ ಬೆರೆಯದೆ
ವಿಶ್ವಾಸ ಗ್ರಹಿಸಿ ನಿಂದಲ್ಲಿ

ಆ ನಿಜಲಿಂಗವ[ನ]ಲ್ಲದೆ

ಮತ್ತೊಂದು ಪೆಚೆತನಱಿಯದೆ ನಿಂದಾತನೇ

ಸರ್ವಾಂಗಲಿಂಗಿ

ವೀರಬೀರೇಶ್ವರ ಲಿಂಗದೊಳಗಾದ ಶರಣ ![೩೫]

**ಪಾಠಾಂತರ :** ೧. ಇಂತಿವನೆಲ್ಲವನಱಿವ (ಗದುಗಿನ ಹಳಕಟ್ಟಿ ವಚನಶಾಸ್ತ್ರ ಸಾರ ಭಾಗ-೧, ವಚನ - ೧೪೨೩.

ದೇವರ ಸಾಕ್ಷಾತ್ಕಾರವೆನ್ನುವುದು ಅವರವರ ಭಕ್ತಿಗೆ, ಹಾಗೂ ಭಾವಕ್ಕೆ ಅನುಗುಣವಾಗಿ ಕಂಡರೂ, ನಮ್ಮ ಅನುಭೂತಿಯಾಧರಿಸಿಯೇ ದೇವರನ್ನು ಕಾಣುವುದು ಈ ವಚನದ ಮೂಲ ಆಶಯವಾಗಿದೆ. ಗೊಲ್ಲಾಳನು ಒಬ್ಬ ಅನುಭಾವಿ ಶರಣನಾಗಿ ತನ್ನ ಆರಾಧ್ಯ ದೈವವನ್ನು ಚಲನಶೀಲವೂ, ಸಂವೇದನಾಶೀಲವೂ ಆದುದರಲ್ಲಿ ಕಾಣಬಯಸುತ್ತಾನೆ. ಇದಕ್ಕೆ ಹೊರತಾದ, ನಿಶ್ಚಲವೂ ಸಂವೇದನಾ ರಹಿತವೂ ಆದ ಕಲ್ಲು-ಮಣ್ಣು-ಮರ ಇವುಗಳ ರೂಪದಲ್ಲಿಲ್ಲ.

"ಮರದಲ್ಲಿ ಮತ್ತು ಮಣ್ಣಲ್ಲಿ ಮಾಡಿದ ಕಾಳಿ-ಬೊಮ್ಮ -ಬೀರ-ಮೈಲಾರ ಇತ್ಯಾದಿ ಪ್ರತಿಮೆಗಳನ್ನೇ ಅಲ್ಲ - ಕಲ್ಲಿನಲ್ಲಿ ಕಡೆದಾದ ಲಿಂಗವನ್ನು ದೇವರಲ್ಲವೆಂದು ವೀರಗೊಲ್ಲಾಳನು ಖಂಡಿಸುತ್ತಿರುವನು.

ಉಳಿಯಿಂದ ಒಡೆಯಲಾಗದ, ಉರಿಯಿಂದ ಬೇಯಲಾಗದ, ನೀರಿಂದ ಕದಡಲಾಗದ ಅತೀತ (ದೈವ)ದ ಕಲ್ಪನೆ ಈ ಗೊಲ್ಲಾಳನದು.

ಇಂದ್ರಿಯ ಗೋಚರವಾದ ಧಾತು ರೂಪ ರೇಖಾ ವರ್ಣಗಳಿರುವವರೆಗೆ ಅಂಥ ದೈವ ಕಲ್ಪನೆಯಲ್ಲಿ ಭಿನ್ನತೆ ಏರ್ಪಟ್ಟು ಮತ ಪಂಥಗಳ ಹೆಸರಿನಲ್ಲಿ ಮಾನವನು ನಡೆಸುವ ಘರ್ಷಣೆಯಲ್ಲಿ ಅವನು ದೈವ ಕಲ್ಪನೆಯ ತನ್ನೆಲ್ಲ ಘನತೆಯನ್ನೂ ಹೋಗಲಾಡಿಸಿಕೊಳ್ಳುವನೆಂಬುದು ವಚನಕಾರ ವೀರ ಗೊಲ್ಲಾಳನ ಇಂಗಿತವಿರುವಂತಿದೆ.

ಹಾಗಾದರೆ ದೈವವೆಂದು ಯಾವುದನ್ನು ಉಪಾಸಿಸಬೇಕೆಂಬ ಪ್ರಶ್ನೆಗೆ ಆ ಗೊಲ್ಲಾಳನ ಉತ್ತರ, ಯಾವ ಪ್ರತಿಮಾಕಾರವೂ ದೇವತಾಕಾರವಲ್ಲವೆಂಬುದಷ್ಟೇ ಅಲ್ಲ, ಅಂಥದಕ್ಕೆಲ್ಲಾ ಮೂಲವಾದ ಮಾನವಾಕಾರವೂ ಮತ್ತೊಂದು ವಿಕಾರವೇ ಆಗಿದೆ. ಏಕೆಂದರೆ - ಆ ಮಾನಸ ಕಲ್ಪನೆಗಳೂ ಇಂದ್ರಿಯಗಳ ಕದಡಿಗೆ ಸದಾ ಒಳಗಾಗಿರುವ ಅಂತಃಕರಣವೆಂಬುದರ ಒಂದು ಪ್ರಕಟ ರೂಪವೇ ಆಗಿದೆ.

ಆದ್ದರಿಂದ ಭೌತವೂ ಅಲ್ಲದ, ಮಾನಸವೂ ಅಲ್ಲದ, ಅತಿಮಾನಸ ಸಿದ್ಧಾಸನದಲ್ಲಿ ವಿರಾಜಿಸುವ, ತತ್ತ್ವಾತೀತ ಪರಶಿವನೇ ಉಪಾಸ್ಯನೆಂದೂ, ಅದರ ಉಪಾಸನೆಯ ಶ್ರಮವಾದರೂ -ಅದಕ್ಕಾಗಿ ಬಳಸುವ ನೀರೂ ಹೂವೂ, ಗಂಧವಲ್ಲ, ಸಜ್ಜನರ ಸಹಚರ್ಯೆ ಮತ್ತು ಬದುಕಿನಲ್ಲಿ ಹಿಡಿದ ಮೌಲ್ಯದ ನಿಷ್ಠೆ ಮತ್ತು ಶಿವೇತರವಾದುದಾವುದರ ಬೆರಕೆ ಪಡೆಯದೆ ಕೇವಲವಾಗಿ ನಡೆಯುವ ಶೀಲವೇ - ಆ ದೇವರ ಉಪಾಸನೆಯ ಕ್ರಮವಾಗಿದೆ. ಅದಕ್ಕೆ ನೇರವಾದುದೇ ಧರ್ಮವೆಂಬಲ್ಲಿ ಗೊಲ್ಲಾಳನು ಸಾಮಾಜಿಕ ರೂಢಿಯ ಸ್ತರದಲ್ಲಿ

ಪತ್ತರದವನಲ್ಲದಿದ್ದರೂ ಲೋಕಕ್ಕೆ ಘನತೆಯನ್ನು ತಂದುಕೊಡುವ ಚಿಂತನ ರೀತಿಯಲ್ಲಿ ಮಿಗಿಲಾದವನಾಗಿದ್ದಾನೆ.

ಅವನ ಸಿದ್ಧಾಂತವೆಂದರೆ ಪೂಜೆ, ಧ್ಯಾನ ಮುಂತಾದ ಕರ್ಮಗಳು ಜೀವನ ಮೌಲ್ಯವನ್ನು ನಿರ್ಣಯಿಸುವುದಿಲ್ಲ. ನಿಷ್ಠೆಯ ನಿಜವನ್ನು ಅರಿತಾತನೇ, ಅದಕ್ಕನುಸಾರವಾಗಿ ಬಾಳಿದಾತನೇ, ತನ್ನಂತೆಯೇ ಇತರರನ್ನು ಬಾಳಲನುಗೊಳಿಸಿದಾತನೇ ಶರಣ. ಶಿವಶರಣ-ಸರ್ವಾಂಗ ಸಾಕ್ಷಾತ್ ಲಿಂಗಸ್ವರೂಪಿ.[೩೬]

"ಅನಾದಿ ಕಾಲದಿಂದಲೂ ದೇವರು ತಾತ್ವಿಕ ಚಿಂತನೆ, ಕಲೆ ಮತ್ತು ಸಾಹಿತ್ಯದ ವಸ್ತುವಾಗಿದ್ದಾನೆ. ದೇವರನ್ನು ಕುರಿತ ಕಲ್ಪನೆಗಳು ಕಾಲ, ದೇಶ ಸನ್ನಿವೇಶಗಳಿಗೆ ಅನುಗುಣವಾಗಿ ಬದಲಾಗುತ್ತಾ ಬಂದಿವೆ. ನಿಸರ್ಗದ ಮಡಿಲಲ್ಲಿ ಜೀವಿಸುತ್ತಿದ್ದ ಆದಿ ಮಾನವನಿಗೆ ಪ್ರಕೃತಿಯ ಶಕ್ತಿಗಳಾದ ಗಾಳಿ, ಮಳೆ, ಬೆಂಕಿ, ಮುಂತಾದವು ದೇವತೆಗಳಾದವು. ಈ ದೇವತೆಗಳ ಸ್ಥಾನಮಾನಗಳು ಸಮಾಜದಲ್ಲಾದ ಬದಲಾವಣೆಗಳಿಂದ ಏರುಪೇರೂ ಆಗಿವೆ. ಸೂರ್ಯನು ಸೂರ್ಯ ನಾರಾಯಣನಾದ ಭಯೋತ್ಪಾದಕನಾದ. ಅಭಯ ಪ್ರದಾಯಕನಾದ ಶಂಕರನೂ ಆದ.[೩೭]

ದೇವರ ಕುರಿತು ವ್ಯಕ್ತಿಯ ಅಂತರಂಗದ ವೈಯಕ್ತಿಕ ನಿವೇದನೆಯಾಗಿರುವುದರಿಂದ, ಲೋಕಜನರು ದೇವರುಗಳ ಉಪಾಸನೆಗಾಗಿ ಎಲ್ಲೆಂದರಲ್ಲಿ ಗುಡಿ, ಮಸೀದಿ, ಚರ್ಚುಗಳು ಇತ್ಯಾದಿ ಕಟ್ಟಡ ನಿರ್ಮಿಸಿ ಬೆಟ್ಟ, ಗುಡ್ಡಗಳಲ್ಲಿ ಉಪಾಸನೆಗೈದರು. ಶರಣರು ಈ ನಡೆಯನ್ನು ತಿರಸ್ಕರಿಸಿದರು. ಇವುಗಳಿಂದ ಸಮಾಜ, ಸಮಾಜದ ಮಧ್ಯದಲ್ಲಿ, ಯಾವ ಬಿರುಕನ್ನಾದರೂ ಉಂಟುಮಾಡಬಹುದೇನೋ ಎಂಬುದನ್ನು ಶರಣರು ಅರಿತಿದ್ದರು ಎನ್ನುವುದನ್ನೂ ಗಮನಿಸಬೇಕು. ಇಂದಿನ ಧಾರ್ಮಿಕ ಘರ್ಷಣೆಗಳೇ ಇದಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ದೇವರುಗಳ ಗುಡಿಯ ನಿರ್ಮಾಣದಿಂದ ಅದೆಷ್ಟೋ ಮಾನವನ ಮಾನಸಿಕ, ಸಾಂಸ್ಕೃತಿಕ ಅಭಿವೃದ್ಧಿಯೂ ಕುಂಠಿತವಾಗಿದೆ. ಒಂದೂರಿಗೆ ಹತ್ತಾರು ಗುಡಿಗಳು, ಮಸೀದಿಗಳು, ಚರ್ಚುಗಳನ್ನು ನಿರ್ಮಾಣ ಮಾಡಲು ಸರಕಾರ ಕೋಟಿ-ಕೋಟಿ ವ್ಯಯ ಮಾಡುವದು. ಹಾಗೂ ದೇವರ ಹೆಸರಿನಲ್ಲಿ ಮಂದಿರ-ಮಸೀದಿ-ಚರ್ಚುಗಳನ್ನು ಮುಂದಿಟ್ಟುಕೊಂಡು ಭಾರತೀಯ ಪ್ರಜಾಪ್ರಭುತ್ವದ ರಾಜಕಾರಣ ನಡೆಯುವುದನ್ನು ಗಮನಿಸಿದರೆ, ಇದರಿಂದ ಮನುಷ್ಯ -ಮನುಷ್ಯ, ಸಮಾಜ-ಸಮಾಜದ ಮಧ್ಯದಲ್ಲಿ ಅಪನಂಬಿಕೆ ಹೆಚ್ಚಾಗುತ್ತಿದೆ. ಈ ವಚನದ ಸಾರವನ್ನು ನಮ್ಮ ಪ್ರಜಾಪ್ರಭುತ್ವಕ್ಕೆ ಮಾರ್ಗಸೂಚಿಯಾಗಿ ಬಳಸಿಕೊಂಡರೆ ಸಮಾಜದ ಸ್ವಾಸ್ಥ್ಯ ಮಾರ್ಗವನ್ನು ಕಂಡುಕೊಳ್ಳುವುದು ಸಾಧ್ಯ.

ದೈವಸಾಕ್ಷಾತ್ಕಾರಕ್ಕೆ ಭಕ್ತಿ, ಜ್ಞಾನ ಎಷ್ಟು ಅವಶ್ಯಕವೋ ಆತ್ಮ ಸಮರ್ಪಣೆಯೂ ಅಷ್ಟೇ ಅವಶ್ಯಕ. ಈ ಅವಶ್ಯಕ ಗುಣಗಳಲ್ಲಿ ಬೆಳೆಯಬೇಕಾದ ಮಾನವ ಅಂಧಶ್ರದ್ಧೆಯಲ್ಲಿಯೇ ಬೆಳೆದದ್ದು ದುರಾದೃಷ್ಟ. "ಅಂಧಶ್ರದ್ಧೆಯು ಬೆಳೆದು ಬಹುಸಂಖ್ಯಾತ ದೇವತೆಗಳ ಪೂಜೆಯು ಸಾಮಾನ್ಯಜನರ ನಿತ್ಯ ಕಟ್ಟಳೆಯಾಗುತ್ತಿರುವಲ್ಲಿ ಇಂತಹ ದೇವತೆಗಳಿಗೆ ಶಕ್ತಿಯನ್ನು ಕೊಡುವ ಮೂಲಶಕ್ತಿಯ ಆರಾಧನೆಯ ಕಲ್ಪನೆ

ವಿಚಾರಪರರಾದವರಿಗೆ ತೋಚದೆ ಹೋಗಲಿಲ್ಲ. ಅಂತಹ ಮೂಲಶಕ್ತಿಯೊಂದರ ಮುಂದೆ ಹುಲ್ಲುಕಡ್ಡಿಯನ್ನು ಸುಡಲಾಗದ ಅಗ್ನಿಯ ಮತ್ತು ಅದನ್ನು ಸ್ವಲ್ಪವೂ ಚಲಿಸಲಾಗದ ವಾಯುವಿನ ಸ್ಥಿತಿಯ ಕಲ್ಪನೆಯು ಕೇವಲೋಪನಿಷತ್ತಿನಲ್ಲಿ ಕಂಡುಬರುವದು. ಮೂವತ್ತುಮೂರು ಕೋಟಿ ದೇವತೆಗಳನ್ನು ಪೂಜಿಸುವದು. ವಿಚಾರಪರರಿಗೆ ಸರಿದೋರಲಿಲ್ಲ. ಮುಂದೆ ಹತ್ತು-ಹನ್ನೆರಡನೆಯ ಶತಮಾನಗಳಲ್ಲಿ ಇದನ್ನು ಮೀರಿಸುವ ಅಜ್ಞಾನವು ಸಮಾಜದಲ್ಲಿ ತುಂಬಿ ತುಳುವಕುವಂತಾಗಿ ಹಾಳು ಮೊರಡಿಗಳಲ್ಲಿ ಊರ ದಾರಿಗಳಲ್ಲಿ ಕೆರೆ-ಬಾವಿ-ಹೂಗಿಡ ಮರಗಳಲ್ಲಿ ಗ್ರಾಮ ಮಧ್ಯದಲ್ಲಿ ಚೌಪಥ ಪಟ್ಟಣ ಪ್ರದೇಶದಲ್ಲಿ, ಹಿರಿಯಾಲದ, ಬಾಣಂತಿ, ಕುಮಾರಿ, ಕೊಡಗೂಸು ಎಂಬವರ ಹಿಡಿದು ತಿಂಬ, ತಿರಿದುಂಬ ಮಾರಯ್ಯ, ಬೀರಯ್ಯ, ಖೇಚರ, ಗಾವಿಲ, ಅಂತರ ಬೆಂತರ ಕಾಳಯ್ಯ, ಮಾರಯ್ಯ, ದೂಳಯ್ಯ, ಕೇತಯ್ಯಗಳೆಂಬ ಅನಂತ ದೈವಗಳನ್ನು ಪೂಜಿಸುವದನ್ನೇ ನೋಡಿ ಬೇಸತ್ತು "ದೇವನೊಬ್ಬ ನಾಮ ಹಲವು" ಎಂದು ಬಸವೇಶ್ವರನು ಉಪದೇಶಿಸುವುದು, ತುಳಿವ ನೆಲ ದೈವ, ಕುಡಿವ ಜಲ ದೈವ, ಸುಡುವ ಬೆಂಕಿ ದೈವ, ಸುಳಿಗಾಳಿ ದೈವವೆಂದು ಹಲವು ದೈವಗಳಿಗೆ ಮುಗ್ಧಜನ ಮೊರೆಹೋಗುತ್ತಿರುವುದನ್ನು ನೋಡಿ ಕನಿಕರದಿಂದ ವೇದಕಾಲದ ಋಷಿಗಳು "ಏಕಂ ಸತ್ ವಿಪ್ರಾ ಬಹುದಾ ವದಂತಿ" ಎಂದು ಉಪದೇಶಿಸಿದುದು ಜ್ವಲಂತ ನಿತ್ಯ ವಾಸ್ತವವಾಗದೆ ಹೋಯಿತು."[೩೮]

"ಗೊಲ್ಲಾಳನು ಕುರಿ ಪಿಚಿಕೆಯನ್ನು ಲಿಂಗವೆಂದು ಪರಿಭಾವಿಸಿದವನು. ಭಕ್ತಿಯಿಂದ ಪೂಜಿಸಿದವನು. ಕುರಿ ಪಿಚಿಕೆ (ಹಿಕ್ಕಿ) ಅವನಿಗೆ ಲಿಂಗರೂಪಿಯಾಗಿ ಕಂಡಿದ್ದು ಆ ಕೃತಿ ಸತ್ತೆಯಾಗಿ ಅಲ್ಲ; ಪ್ರಕೃತಿ ಧರ್ಮದ ನಿತ್ಯ - ಸತ್ಯವಾಗಿ, ಇಲ್ಲಿಯ ಪ್ರಕೃತಿ (ಅವನ ಪರಿಭಾವನೆಯ ಮನೋಸ್ಥಿತಿ, ಇಲ್ಲಿಯ ಧರ್ಮ ಆ ಮನೋಸ್ಥಿತಿ ನಂಬಿಕ ಕಾಯಕ ವಿಧಿ, ಹೀಗಾಗಿ ಕುರಿಪಿಚಿಕೆ ಅವನಿಗೆ ಅರಿವಿನ ಗುರುವಾಗ ಕುರುಹು) ಧರ್ಮವು ನಿತ್ಯ ಸತ್ಯವಾಗಿ, ಇವನ ಪರಿಭಾವೆಯ ಮನೋಸ್ಥಿತಿಯನ್ನು ಗುರುತಿಸುತ್ತದೆ. ಕಾಯಕ, ನಂಬಿಕೆ, ಕುರಿಯ ಪಿಚಿಕೆ, ಅರಿವಿನ ಗುರುವಾದ ಕುರುಹು. ಈ ಕುರುಹು ಕೂಡ, ಪದರೂಪಿಯೇ ಹೊರತು ಪದಾರ್ಥ ರೂಪಿಯಲ್ಲ. ಆದ್ದರಿಂದಲೇ ಪದಾರ್ಥ ರೂಪಿಯಾಗಿ ಒದಗಿ ಬರುವ ಆಕೃತಿ ಮಾತ್ರವಾಗಿ ಅರಿವಾಗದೆ ಹೋಗುವ ಕುರುಹನ್ನು ಗೊಲ್ಲಾಳ ಇಲ್ಲಿ ನಿರಾಕರಿಸುತ್ತಿದ್ದಾನೆ. ಅದನ್ನು ಜಡವೆಂದು ತಿರಸ್ಕರಿಸಿದ್ದಾನೆ. ಹೀಗೆ ಕಾಯಕ ಜೀವಿಯೊಬ್ಬನ ಬದುಕಿನ ಬಿಂಬ ರೂಪಿಗಳಾಗಿ ಒದಗಿಬರುವ ಕಾಯಕ ಪರಿಭಾಷೆಗಳು ವ್ಯಂಜಿಸುವ ಒಳಸತ್ಯ ವಿಸ್ಮಯ ಹುಟ್ಟಿಸುತ್ತದೆ."[೩೯]

ಲಿಂಗದ ನಿಜ ನಿಲುವಿನ ಬಗೆಗೆ ವೀರಗೊಲ್ಲಾಳನ ಆಲೋಚನೆಗಳು ಉನ್ನತವಾಗಿವೆ. ಈತನ ವಿಚಾರಗಳು ವೈಚಾರಿಕತೆಯ ತುತ್ತತುದಿಯ, ಅನುಭಾವಿಕ ಪಥದ 'ಸರ್ವಾಂಗಲಿಂಗ' ಅವಸ್ಥೆಯ, ಹೊಳಹುಗಳು ಇಲ್ಲಿ ಸಾಕಾರಗೊಂಡಿದೆ. ಸಾಧಕನ ಪ್ರಗತಿಶೀಲ ಸಾಧನೆಯ ಫಲವನ್ನು ಇಂಥ ವಚನಗಳ ಅಂತರಾಳದಿಂದ ಗುರುತಿಸುವುದಾಗಿದೆ. 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ಬಸವಣ್ಣನವರ ವಿಚಾರದ ಮಿಂಚುನೋಟ ಇಲ್ಲಿದೆ. ಸ್ಥಾವರಲಿಂಗಕ್ಕೆ ಪೂಜಿಸುವುದನ್ನು ಎರಗುವುದನ್ನು ಕುರಿತಂತೆ ಶರಣರ ವಿರೋಧವಿರುವುದನ್ನು ಕಾಣುತ್ತೇವೆ. 'ಅರಗು ತಿಂದು ಕರಗುವ ದೈವ' ಉರಿಯ ಕಂಡು ಮುರಟುವ ದೈವ, ಇಂಥಹ ಹಾದಿಗೊಂದು,

ಬೇದಿಗೊಂದು ದೈವಗಳು ಉಪಾಸನೆಗೊಳ್ಳುವುದನ್ನು ಸಹಿಸಲಾರರು ಶರಣರು. ಈ ಪ್ರಗತಿಪರ ವಿಚಾರವನ್ನೇ ಇಲ್ಲಿ ಪ್ರತಿಪಾದಿಸಲಾಗಿದೆ.

ಕಲ್ಲು-ಮರ-ಮಣ್ಣು ಬಳಸಿ ಮೂರ್ತಿಗಳನ್ನು ಮಾಡಿ ಪೂಜಿಸುವದನ್ನು ಗೊಲ್ಲಾಳನು ತಿರಸ್ಕರಿಸಿದ್ದಾನೆ. ಸ್ಥಾವರ ರೂಪಗಳುಳ್ಳ ದೈವವನ್ನು ಆತ ಒಪ್ಪುವುದಿಲ್ಲ ಮತ್ತು ಈ ತೆರನಾದ ದೈವಗಳನ್ನು ಗ್ರಹಿಸುವ ಚಿತ್ತವೂ ದೇವರಲ್ಲವೆಂದು ನಿರಾಕರಿಸುತ್ತಾನೆ. ಕಾರಣವೆಂದರೆ ಇವೆಲ್ಲ ಒಂದರಿಂದ ಹುಟ್ಟಿಕೊಂಡು ಇನ್ನೊಂದು ವಸ್ತುಗಳಾಗಿದ್ದು ಈ ರೂಪಾಂತರಗಳೆಲ್ಲ ನಾಶಕ್ಕೆ ಕಾರಣವಾಗುವುದರಿಂದ ಮೇಲಿನ ಪರಿಯಿಂದ ರೂಪುಗೊಳ್ಳುವ ದೇವರು ದೇವರಲ್ಲ. ಇಂತಹುಗಳನ್ನು ದೇವರೆಂದು ಭಾವಿಸಿಕೊಳ್ಳುವ ಚಿತ್ತವಾದರೂ (ಇಂದ್ರಿಯ ಸಂಬಂಧದ ಅನುಭವಕ್ಕೆ ಒಗೊಡುವ ವಸ್ತುವಾದ್ದರಿಂದ ಆ ಚಿತ್ತವಾದರೂ) ದೇವರಾಗಲಾರದು. ಆದರೆ ಇವೆಲ್ಲವುಗಳನ್ನು ಮೀರಿದ್ದು ಭಾವ. ಭಾವವು ವಿಶ್ವಾಸವನ್ನು ಆಧರಿಸುವುದರಿಂದ ವಿಶ್ವಾಸಕ್ಕೆ ಕಾರಣವಾಗುವ "ನಿಜಲಿಂಗ" ಆ ಪರಾತ್ಪರ ಸತ್ಯವನ್ನೇ ಹೇಳುತ್ತದೆ. ಆ ವಸ್ತುವನ್ನು ಸರ್ವಾಂಗದಲ್ಲಿ ಅಳವಡಿಸುವವ, ಆಚರಿಸುವವ, ಅನುಭವಿಸುವವನೇ ಲಿಂಗಾಂಗಿಯಾಗಿದ್ದಾನೆ, ಸರ್ವಾಂಗಲಿಂಗಿಯಾಗಿದ್ದಾನೆ.

ಮನೋಮೂರ್ತಿಯಾದ ಲಿಂಗವು ಸರ್ವಾಂಗದಲ್ಲೂ ವ್ಯಾಪಿಸಿರುವುದೆಂಬುದನ್ನು ತಿಳಿಯದೆ - ಉಪಾಧಿಯಿಂದ ಇಷ್ಟಲಿಂಗವನ್ನು ಪೂಜಿಸುವವರಿಗೆ ಪ್ರಾಣಲಿಂಗದ ಸಂಬಂಧವಿಲ್ಲ. ಹದವಾದ ಕಲ್ಲು ವಡ್ಡನ (ಕಲ್ಲುಕುಟಿಗ) ಕೈಯಿಂದ ಇಲ್ಲವೇ ಸುತ್ತಿಗೆ, ಉಳಿ ಇತ್ಯಾದಿ ಮೂಲಗಳ ಸಹಾಯದಿಂದ ಮನೋಭಿಲಾಷೆಗೆ ತಕ್ಕಂತೆ ರೂಪಪಡೆಯುತ್ತದೆ.

"ಕಲ್ಲನ್ನು ದೇವರಾಗಿಸಿ ಅಷ್ಟೋಪಚಾರಗಳಿಂದ ಬಹುಜನರು ಪೂಜಿಸುತ್ತಾರೆ. ಅವರಿಗೆ ಪೂಜೋಪಚಾರಗಳೇ ಮಹತ್ವದವು ವಿನಾ ಲಿಂಗಸಾಧನೆ ಅಲ್ಲ. ಆದ್ದರಿಂದ ಅವರು ಸಾಧನೆಯ ಉತ್ತರೋತ್ತರ ಸೋಪಾನಗಳನ್ನು ಏರರು. ಪ್ರಾಣಲಿಂಗಾದಿಗಳ ದರ್ಶನ ಮತ್ತು ಸಾಮರಸ್ಯ ಸಿದ್ಧಿಯನ್ನು ಪಡೆಯರು."[೧೦]

ಗೊಲ್ಲಾಳನ ಈ ವಚನವು ಜಡ-ಚೇತನಗಳ ನಡುವಣ ವ್ಯತ್ಯಾಸವನ್ನು ವಿವರಿಸುತ್ತದೆ. ಬದುಕು ಚಲನಶೀಲವಾದದ್ದು. ಈ ಚಲನಶೀಲ ಬದುಕಿನಲ್ಲಿ ಶಿವನನ್ನು ಕಾಣುವುದೇ ಶ್ರೇಷ್ಠತನವಾಗಿದೆ. ಮಾನವನ ಮನಸ್ಸು ಇಂದ್ರಿಯಗಳಿಗೆ ಒಳಗಾದರೆ ನಿಂದಲ್ಲಿ ನಿಲ್ಲುವುದಿಲ್ಲ. ಹೊಂದಿದ್ದಕ್ಕೆ ಹೊಂದಲು ಬಿಡುವುದಿಲ್ಲ. ಓಗೆ ಹಲವು ಹತ್ತು ಕಡೆ ಹರಿದಾಡುತ್ತಿರುವ ಮನಸ್ಸಿಗೆ ಒಂದು ಗುರಿಯನ್ನು ತೋರಿಸಿ ಅದು ಒಂದು ಕಡೆ ನಿಲ್ಲುವಂತೆ ಮಾಡಬೇಕು.

'ಇಂತಿವನೆಲ್ಲವರನರಿವ ಚಿತ್ತ ದೇವರಲ್ಲ, ಈ ಚಂಚಲ ಮನಸ್ಸನ್ನು ನಂಬುವುದು ಹೇಗೆ?ನಂಬು ಎಂದರೆ ನಂಬಿಕೆ ಮತ್ತು ಅದರಿಂದ ಬಂದ ವಿಶ್ವಾಸ. ಆ ವಿಶ್ವಾಸದಿಂದ ಬರುವ ಆಶ್ರಯ ಭಾವನೆಯನ್ನೇ ನೆಚ್ಚುವುದು. ಈ ಚಂಚಲ ಮನಸ್ಸನ್ನು ನಂಬಿ ಅದರ ಮೇಲೆ ವಿಶ್ವಾಸವಿಡುವುದಕ್ಕೂ ಆಗುವುದಿಲ್ಲ. ಮತ್ತು ಅದನ್ನು ಆಶ್ರಯಿಸಿ ಸಾಧನೆಯನ್ನು ಕೈಗೊಳ್ಳುವುದಕ್ಕೂ ಆಗುವುದಿಲ್ಲ. ನಂಬಿ, ನಚ್ಚದೆ ಬರಿದೆ ಕರೆಯುತ್ತಾರೆ.

ಅಚಲವಾದ ಶ್ರದ್ಧೆ ಪ್ರೀತಿಗಳಿಲ್ಲದೆ ಸುಮ್ಮನೆ ಕರೆಯುವುದು ವ್ಯರ್ಥ. ತನು, ಮನ, ಧನಗಳನ್ನು ಅರ್ಪಿಸಿ ಏಕೈಕ ನಿಷ್ಠೆಯಿಂದ ಶರಣಾಗಿ ಕರೆಯುವದನ್ನು ಈ ಲೋಕದ ಮನುಜರು ಸಾಧಿಸಲಾರರು, ದೇವನ ಅನುಗ್ರಹ ಭಕ್ತನಿಗೆ ಆಗಬೇಕಾದರೆ ಅಂತರಂಗ -ಬಹಿರಂಗ ಎರಡೂ ಒಂದಾಗಬೇಕು. ಭಕ್ತ ಕೈಗೊಳ್ಳುವ ವ್ರತ ಅನ್ಯ ದೈವಂಗಳಲ್ಲಿ ಸೇರಕೂಡದು.

ಈ ವಚನ ಆತ್ಮನಿವೇದನೆಯಾಗಿ ಗೋಚರಿಸುತ್ತದೆ. "ವಿಶ್ವಾಸ ಗ್ರಹಿಸಿ ನಿಂದಲ್ಲಿ" ಭಾವಶುದ್ಧಿ, ಪ್ರಾಮಾಣಿಕತೆ, ಆತ್ಮಸಾಕ್ಷಿಯಾಗಿ ನುಡಿದ ನುಡಿಯಾಗಿದೆ. ಬುದ್ಧಿವಲಯಕ್ಕೆ ಸಂಬಂಧಪಟ್ಟ ರಚನೆಯಾಗಿದೆ.

**ವಚನ -೬ :**

"ಕ್ರಿಯೆ ಹಿಡಿದಲ್ಲಿ ಸಂದೇಹಕ್ಕೊಳಗಾಗಿ
[2]ನಿಃಕ್ರೀಯೆಂದಲ್ಲಿ[2] ಆತ್ಮಂಗೆ ಗೊತ್ತ ಕಾಣದೆ,
ಫಲವಿಲ್ಲದ ವೃಕ್ಷದ ಹೂವ ಕಂಡು
[A]ವಿಹಂಗ ಕುಲ ಚರಿಸದೆ ಮೆಚ್ಚಿದಂತೆ
ಕಡೆಯಲ್ಲಿ ಹೊಲಬುಗೆಡದೆ
ಅಱಿ ನಿಜವಸ್ತು ಒಂದೆಂದು !
[1]ಕುಱುಹಿನಲ್ಲಿ[1] ಕುಲಕೆಡದೆ -
ಕೂಡು ವೀರ ಬೀರೇಶ್ವರ ಲಿಂಗವ![A]

**ಪಾಠಾಂತರ:** ೧ ಕುರಿತ ಕುಱುಹಿನಲ್ಲಿ (ಗದುಗಿನ ಹಳಕಟ್ಟಿ ವಚನ ಶಾಸ್ತ್ರಸಾರ ಭಾಗ-೧ ವಚನ -೯೦೬) ನಿಃಕ್ರೀಯ ಹಿಡಿದಲ್ಲಿ (ಷಟ್‌ಪ್ರಕಾರ ಸಂಗ್ರಹ - ವಚನ 421) A, ವಿಹಂಗ ಕುಲವ ಚಲಿಸುವದಕ್ಕೆ .ಡನಿಲ್ಲ. ಅಱಿ ನಿಜವಸ್ತು ಒಂದೇ ಎಂದು. ಅಱಿತ ಅಱಿವಿನಲ್ಲಿ ಕುಲಗೆಡದೆ ಕೂಡು ವೀರ ಬೀರೇಶ್ವರ (ಷಟ್ ಪ್ರಕಾರ ಸಂಗ್ರಹ, ವಚನ -೪೨೧)

ಸಾಕಾರ ಮೂರ್ತಿಯಾದ ಇಷ್ಟಲಿಂಗದ ಕ್ರಿಯೆಯನು ದೃಢವಿಡಿದಲ್ಲಿ, ಅಂಗವು ಬೇರೆ ಲಿಂಗವು ಬೇರೆ ಎಂಬ ಸಂಕಲ್ಪಕ್ಕೊಳಗಾಗಿ ಅಜ್ಞಾನದಿಂದ ಅಹಂಬ್ರಹ್ಮವೆಂದು ನುಡಿದಲ್ಲಿ ಆತ್ಮನಿಗೆ ಗೊತ್ತಾದ ಇಷ್ಟಲಿಂಗದ ಕ್ರಿಯೆಯಿಲ್ಲದೆ ಪ್ರಾಣಲಿಂಗದಲ್ಲಿ ಕೂಡುವ ಕೂಟವರಿಯಬಾರದು. ಪ್ರಯೋಜನವಿಲ್ಲದ ಬೂರಲ ಮರದ ಹೂವ ನೋಡಿ ಗಿಡಗಳ ಸಮೂಹ ಮುಂದಕ್ಕೆಯ್ದಡೆ ಮಮಕರಿಸಿ ಕೊಂಡಿರ್ದ ಹಾಗೆ ದ್ವೈತಾದ್ವೈತಿಗಳ ಆಚರಣೆ ವ್ಯರ್ಥವಾಯಿತು.

ಆಚರಣೆಯ ಅಂತರಂಗದಲ್ಲಿ ಶಿವತತ್ವಕ್ಕೆ ಭಿನ್ನವಾಗದೆ, ಒಂದೇ ಪರಬ್ರಹ್ಮ, ಅಂತರಂಗ, ಬಹಿರಂಗದ, ಇಷ್ಟಲಿಂಗ ಪ್ರಾಣಲಿಂಗವಾಗಿರುವುದನ್ನು ತಿಳಿಯಬೇಕು"[೪೧] ಸಾರ್ಥಕಗೊಳಿಸಿಕೊಳ್ಳಬೇಕು. 'ತನ್ನಲ್ಲಿಯ ಪ್ರಕೃತಿಯ ತಾನ ಹಿಂಗಿಸುವ' ಕ್ರಿಯೆಯು ಈ ಮಾರ್ಗದ ಪ್ರಧಾನ ಕ್ರಿಯೆಯಾಗಿದೆ. ಆದ್ದರಿಂದ ಮನದಿಂದ ಮಾಯಾ

ಮೈಲಿನವನ್ನು ಹಾಗೂ ಕಳೆಯಿಂದ ಕಾಯದ ದಂದುಗವನ್ನು ಅಗಲಿಸುವ ಈ ಪ್ರಯಾಸದಲ್ಲಿ ಕಾಯ ಹಾಗೂ ಅದರ ಕ್ರಿಯೆಗಳ ರಹಸ್ಯವನ್ನು ಅರಿತುಕೊಳ್ಳಬೇಕು.

"ಸಾಧಕನಿಗಿರಬೇಕಾದ ಕ್ರಿಯಾಜ್ಞಾನದ ಅತ್ಯಗತ್ಯತೆಯನ್ನು ಕುರಿತು ಇಲ್ಲಿ ಹೇಳಲಾಗಿದೆ. ಜ್ಞಾನಹೀನ ಕ್ರಿಯೆ (ಆಚರಣೆ) ಜಡವಾದರೆ, ಕ್ರಿಯಾಹೀನ ಜ್ಞಾನ, ಅಜ್ಞಾನ, ಅಹಂಕಾರವಾಗುತ್ತದೆ. ಹೀಗಾಗಿ ಅರುಹು ಇಲ್ಲದವನು ಕುರುಹು ಹಿಡಿದು ಮಾಡಿದ ಪೂಜೆ ಡಂಭಾಚಾರದ ಪೂಜೆಯಾಗುತ್ತದೆ. ಗೊಲ್ಲಾಳೇಶ್ವರನು ಜ್ಞಾನಾತ್ಮಕವಲ್ಲದ ಕ್ರಿಯೆಯಿಲ್ಲದ ಸಾಧನೆಯ ಪರಿಯನ್ನು 'ಫಲವಿಲ್ಲದ ವೃಕ್ಷದ ಹೂವ ಕಂಡು ವಿಹಂಗಕುಲ ಮುಟ್ಟಿದಂತೆ' ಎಂದು ಕರೆದಿದ್ದಾನೆ. ಫಲವಿಲ್ಲದ ವೃಕ್ಷವು ಪರಮಾತ್ಮ ವಸ್ತುವಾಗಿದ್ದು ಅದಕ್ಕೆ ಬಿಟ್ಟ ಹೂವು ನಿರಾಕಾರ ಲಿಂಗದ ಸಾಕಾರ ಲಿಂಗವೇ ಆಗಿದೆ. ಇಂತಹ ಲಿಂಗವನ್ನು ಸಾಧಿಸಬೇಕಾದ ಜೀವಾತ್ಮನನ್ನು 'ವಿಹಂಗಕುಲ'ವೆಂದು ಗೊಲ್ಲಾಳೇಶ್ವರ ಕರೆದಿದ್ದಾನೆ. ಈ ವಿಹಂಗವು ಹೂವನ್ನು ಮೆಚ್ಚಿ ಕೂಡಬೇಕಾದರೆ ಕುರುಹಿನಲ್ಲಿ ನಿಂತು ಕುಲಗೆಡದೆ ಅರಿವಿನ ಆಚೆ ನಿಂತು ಹೊಲಬುಗೆಡದೆ, ಅರುಹು ಕುರುಹು ಸಮನಿಸುವ ಜ್ಞಾನ ಕ್ರಿಯಾ ಸಮರತಿಯನ್ನು ಹಿಡಿಯಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕೇವಲ ಕ್ರಿಯೆ ಸಂದೇಹದ ಮಾತು, ಕೇವಲ ನಿಃಕ್ರಿಯೆ, ಅಗೋಚರವನ್ನು ಅರಿವಿಗೆ ತರುವಲ್ಲಿ ಸೋಲುವ ಮಾತು ಎಂಬುದನ್ನು ಆತನು ಸ್ಪಷ್ಟಪಡಿಸಿದ್ದಾನೆ.

"ಭಕ್ತನು ಸಾಧನೆಗೆ ತೊಡಗುವ ಪೂರ್ವದಲ್ಲಿ "ನಿಜವಸ್ತು" ಒಂದು : ಅದು ಶಾಶ್ವತವಾದುದು, ಸತ್ಯವಾದುದು ಎಂಬುದನ್ನು ಅರಿತಿರಬೇಕು. ಅದು ನಿರಾಕಾರವಾದುದು ; ಬಯಲು ನಿರಾಕಾರದ ಸಾಕಾರವೇ ಪರವಸ್ತು ಲಿಂಗ; ಲಿಂಗದ ಸೃಷ್ಟಿ ಲಿಂಗ- ಜೀವಾತ್ಮ ಆತ್ಮನ ಮರೆಯಲ್ಲಿ ಅಡಗಿರುವ ಚೈತನ್ಯವೇ ಇಷ್ಟಲಿಂಗವೆಂಬ ಕುರುಹು. ಆತ್ಮನಲ್ಲಿದ್ದು ಅಗೋಚರವಾಗಿರುವ, ಅಭೇದನಾಗಿರುವ ಪರಮಾತ್ಮನ ಇರುವಿಕೆಯನ್ನು ಶರಣರು ಹಲವಾರು ವಚನಗಳಲ್ಲಿ ಅರ್ಥಗರ್ಭಿತವಾಗಿ ಹೀಗೆ ಹೇಳಿದ್ದಾರೆ: "ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿದ ಮಿಂಚಿನಂತೆ" ಕ್ಷೀರದೊಳಡಗಿದ ತುಪ್ಪದಂತಿದ್ದಿತು. ಚಿತ್ರಕನೊಳಡಗಿದ ಚಿತ್ತದಂತಿದ್ದಿತು. ಇತ್ಯಾದಿ ಇಲ್ಲಿ ಅರಿವು ತಾನಾಗಿದ್ದರೂ ಅರಿವಿನ ಅನುಭವಕ್ಕೆ ಕುರುಹು (ಲಿಂಗ) ಬೇಕು. ಅಂಗಬಿಟ್ಟು ಲಿಂಗವಿಲ್ಲ; ಲಿಂಗವಿಲ್ಲದ ಅಂಗವಿಲ್ಲ. ಉಭಯ ಬೇದ ಒಳಹೊಕ್ಕು ನೋಡಿದರೆ ಇಲ್ಲವೇ ಇಲ್ಲ. ಅಂಗ ಕ್ರಿಯೆಗಳಲ್ಲಿ ಲಿಂಗ ಕ್ರಿಯೆಗಳಾದರೆ ನರನೂ ಹರನಾಗುತ್ತಾನೆ. ಐಹಿಕಸುಖ-ದುಃಖ, ಸಾವು-ನೋವು, ಪಾಪ-ಪುಣ್ಯ ಮೊದಲಾದ ಲೌಕಿಕಕ ದ್ವಂದ್ವದಿಂದ ಬಿಡುಗಡೆಯಾಗುತ್ತಾನೆ. ಪರಮ ಸುಖದ ನೆಲೆಯಲ್ಲಿ ನಿಲ್ಲುತ್ತಾನೆ."[೨]

**ವಚನ -೭ :**

"ಕೊರಡು ಕೊನರುವಲ್ಲಿ

ಬರಡು ಕರೆವಲ್ಲಿ

ಕಲ್ಲಿನ ಶಿಲೆಯೊಡೆದು ರೂಪುದೋಱುವಲ್ಲಿ

ಬಳ್ಳವಲ್ಲಾಡದೆ ಲಿಂಗವಾಹಲ್ಲಿ-

ಇಂತವರಲ್ಲಿಯ ಗುಣವೋ

ಇಂತಿವೆಲ್ಲವನಜೀವ ಕಲ್ಲೆದೆಯವನ ಗುಣವೋ ?

ಇಂತಿದ ಬಲ್ಲಡೆ -

ವಿಶ್ವಾಸದಲ್ಲಿಯೆ

ವೀರ ಬೀರೇಶ್ವರ ಲಿಂಗವು ತಾನಾಗಿಪ್ಪ !

**ಪಾಠ ವಿಶ್ಲೇಷಣೆ :** ಬಳ್ಳವು ಲಿಂಗವಾದ ಪವಾಡವನ್ನು ಮೆರೆದನು ಬಳ್ಳೇಶ ಮಲ್ಲಯ್ಯನು ಎಂಬುದರ ಪ್ರಸ್ತಾಪ ಗೊಲ್ಲಾಳನ ಈ ವಚನದಲ್ಲಿರುವುದು ಗಮನಾರ್ಹವಾಗಿದೆ.

ಇವನ ಮುಂದಿನ ಇನ್ನೊಂದು ವಚನದಲ್ಲಿ ಈ ವೀರ ಗೊಲ್ಲಾಳನೇ ಹಿಕ್ಕೆ ಲಿಂಗವಾದುದನ್ನು ಪ್ರಸ್ತಾಪಿಸಿರುವುದನ್ನು ಕಾಣಬಹುದು. ಅಂದರೆ ಆ ಕುರಿ ಹಿಕ್ಕೆ ತನ್ನ ನಿಜಸ್ವರೂಪದಲ್ಲೇ ವೀರಗೊಲ್ಲಾಳನ ಭಕ್ತಿಯನ್ನು ಸೂರೆಗೊಂಡಿತೆಂಬಲ್ಲಿ ಸೋಜಿಗವೆನಿಸಿದೆ.

**ವ್ಯಾಖ್ಯಾನ :** ಕೊರಡು ಚಿಗಿಯಿತೆಂದರೆ -ಆ ಚಿಗಿಯುವ ಗುಣ ಆ ಕೊರಡಿನಲ್ಲಿದೆಯೋ ಅಥವಾ ಆ ಭಕ್ತನ ವಿಶ್ವಾಸದಲ್ಲಿದೆಯೋ? ಎಂದು ಪ್ರಶ್ನಿಸುವ ವೀರ ಗೊಲ್ಲಾಳನ ಪ್ರಕಾರ - ಅಂಥ ಎಲ್ಲ ಮಹಿಮೆಗಳೂ ಅಡಗಿರುವುದು ಮಾನವನ ವಿಶ್ವಾಸದಲ್ಲಿ - ಜೀವದ ಈ ವಿಶ್ವಾಸ ಶಕ್ತಿಯು ಪ್ರಕೃತಿಯನ್ನೂ ಪರಿವರ್ತಿಸಬಲ್ಲುದೆಂಬುದು ಇಂದಿನ ವಿಜ್ಞಾನ ವಲಯದಲ್ಲಿ ಒಂದು ಸೋಜಿಗವೂ ಆಗಿ ಉಳಿದಿಲ್ಲ.

ಮತ್ತು ಈ ವಚನದಲ್ಲಿ ಕೋಳೂರು ಕೊಡಗೂಸಿನ ಮತ್ತು ಬಳ್ಳೇಶ ಮಲ್ಲಯ್ಯನ ಪ್ರಸ್ತಾಪವನ್ನು ವೀರ ಗೊಲ್ಲಾಳನು ಪ್ರಸ್ತಾಪಿಸಿರುವದಂತೂ ಈತನು ಅವರೆಲ್ಲರಿಗೂ ಪ್ರಾಚೀನನೆಂಬುದು ಸ್ವಯಂ ಘೋಷಿತವಾಗುತ್ತದೆ. ಆದರೆ ಕೊರಡನ್ನು, ಬರಡನ್ನು ಹಯನು ಮಾಡಿದ ಶರಣರು ಯಾರೋ ತಿಳಿಯದು - ಈ ಪವಾಡಗಳನ್ನು ಬಸವಣ್ಣನವರೂ ಹಿಂದಿನ ಶರಣರು ಮೆರೆದರೆಂಬಂತೆ ಪ್ರಸ್ತಾಪಿಸಿರುವುದುಂಟು.[೪೩]

ಎಲ್ಲ ಜೀವರಾಶಿಗಳಲ್ಲಿ ಮಾನವ ಶ್ರೇಷ್ಠನಾಗಿದ್ದಾನೆ. ಈತ ತನ್ನ ಬುದ್ಧಿಯ ಬಲದಿಂದ ಯಾವುದೇ ಕೆಲಸ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಆಗಲಿ, ಇಲ್ಲವೇ ಇನ್ನಾವುದರ ಕುರಿತಾಗಲೀ, ದೃಢ ವಿಶ್ವಾಸ, ನಂಬಿಕೆ ಇದ್ದರೆ ಏನನ್ನೂ ಸಾಧಿಸಲು ಸಾಧ್ಯ. ಇಲ್ಲಿ ನಂಬಿಕೆ, ನಿಷ್ಠೆ ಶ್ರೇಷ್ಠವಾದವುಗಳಾಗಿವೆ. ಭಕ್ತ ಗೊಲ್ಲಾಳನಿಗೆ ಲಿಂಗಯ್ಯನಲ್ಲಿ ನಿಷ್ಠೆಯುಳ್ಳವನಾದರೆ ಏನನ್ನಾದರೂ ಸಾಧಿಸುವೆ ಎನ್ನುವ ದೃಢವಿಶ್ವಾಸವಿದೆ.

ಕೊರಡು -ಕೊನರು, ಬರಡು - ಕರೆವಲ್ಲಿ ಕಲ್ಲು - ರೂಪಪಡೆವಲ್ಲಿ ಬಳ್ಳ-ಲಿಂಗ, ಗುಣ -ಸಂಸ್ಕಾರ, ವಿಶ್ವಾಸ-ನಿಷ್ಠೆ ಈ ಶಬ್ದಗಳು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ.

ಒಣಗಿದ ಮರ ಚಿಗುರೊಡೆಯುವುದು ಅಂದರೆ ಬರಡಾದ ಜೀವನದಲ್ಲಿ ಹೊಸ ಆಸೆಗಳನ್ನು, ಉಲ್ಲಾಸವನ್ನು, ನವಚೈತನ್ಯವನ್ನೂ ಜೀವದಲ್ಲಿ ತುಂಬಬಹುದು ಎಂದರ್ಥ. ಸಂಸ್ಕಾರ ಸಿಗದ ಬದುಕಿಗೆ ಸಂಸ್ಕಾರ

ನೀಡಿದರೆ ಹೊಸ ಚಿಗುರು ಮೂಡುವದು. ಸಂಸ್ಕಾರವೆನ್ನುವುದು ದೊಡ್ಡದು. ಅದು ವ್ಯಕ್ತಿಯಾಗಲೀ, ಅವನ ಮನಸ್ಸಾಗಲೀ, ಇಲ್ಲವೇ ವಸ್ತುವಾಗಲೀ, ಅದರ ರೂಪವಾಗಲೀ ಸಂಸ್ಕಾರದ ಬಲದಿಂದ ಅದನ್ನು ಪರುಷಮಣಿ ಮಾಡಬಹುದು. ಶಿಲೆ ಭವ್ಯ ಮೂರ್ತಿಯಾಗಿ ಕಂಗೊಳಿಸಬಹುದು. ವ್ಯಕ್ತಿಗೂ ಸಹ ಸಂಸ್ಕಾರ ದೀಕ್ಷೆಯನ್ನು ಕೊಟ್ಟರೆ ಮಹಾತ್ಮನಾಗಬಹುದು. ಅದಕ್ಕೆ ಮುಖ್ಯವಾಗಿ ವಿಶ್ವಾಸ ತುಂಬಿದ ಮನಃಸ್ಥಿತಿಯಲ್ಲಿರುವುದು ಮುಖ್ಯವಾಗುತ್ತದೆ. ಇಲ್ಲಿ ಕಲ್ಲು ಹೃದಯದಿಂದ ತುಂಬಿದ ನನ್ನ ಬದುಕನ್ನು ಉದ್ಧಾರಗೊಳಿಸು ಎಂದು ಪ್ರಾರ್ಥನೆ ಮಾಡುವ ರೀತಿ ಬದುಕು ಆಶಾದಾಯಕವಾಗಿರಬೇಕೆಂಬ ಆಶಯವನ್ನು ಮೂಡಿಸುವಂತಿದೆ.

"ಒಣಗಿದ ಮರ ಚಿಗುರುವುದು, ಬರಡು (ಗೊಡ್ಡಾದ) ಹಸು ಹಯನವಾಗುವುದು, ಕಲ್ಲು ಸೀಳಿ-ಸಿಡಿದು ಅದರಲ್ಲಿಯೇ ರೂಪತೋರುವುದು. ಅಂದರೆ ಅದು ಸಾಕಾರವಾಗುವುದು. ಬಳ್ಳವು (ದಾನ್ಯವನ್ನು ಅಳೆಯುವ ಸೇರು) ಲಿಂಗವಾಗಿ ಪರಿಣಮಿಸುವುದು. ಇದೆಲ್ಲವೂ ಪ್ರಕೃತಿ ನಿಯಮಕ್ಕೆ ಮೀರಿದುದು. ಅಸಹಜವಾದುದೆಂಬುದು ಸರ್ವರಿಗೂ ಗೊತ್ತಿದ್ದ ಸಂಗತಿ. ಆದಾಗ್ಯೂ ಪ್ರಪಂಚದಲ್ಲಿ ಒಮ್ಮೊಮ್ಮೆ ಅಪರೂಪಕ್ಕೆ ಇಂತಹ ಅನೂಹ್ಯ, ಅಘಟಿತ ಘಟನೆಗಳು ಘಟಿಸುತ್ತವೆ. ಅದಕ್ಕೆ ಶಿವಾನುಗ್ರಹ, ಶಿವನೊಲುಮೆಯೊಂದಿದ್ದರೆ ಅಸಂಭವನೀಯವಾದುದೂ ಸಂಭವನೀಯವಾಗುತ್ತದೆ. ನರನೂ ಹರನಾಗುತ್ತಾನೆಂದು ಶಿವಶರಣರ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ. ಇಂತಹ ಅಸಂಭವನೀಯ ಕಾರ್ಯಗಳು ಜರುಗುತ್ತಿರುವುದಕ್ಕೆ ಕಾರಣರಾರು ಎಂಬುದು ಗೊಲ್ಲಾಳನು ಎತ್ತಿದ ಪ್ರಶ್ನೆ. ಆದರೆ ಅದಕ್ಕೆ ಉತ್ತರವೂ ಅವನಲ್ಲಿಯೇ ಇದೆ. 'ಇಂತಿವ ಬಲ್ಲಡೆ ವಿಶ್ವಾಸದಲ್ಲಿಯೆ ವೀರಬೀರೇಶ್ವರ ಲಿಂಗವು ತಾನಾಗಿಪ್ಪ' ಇಲ್ಲಿ ಪೂಜಕ -ಪೂಜ್ಯನ ಗುಣ ಸ್ವಭಾವಗಳ ಹೊಂದಾಣಿಕೆ ಅನ್ಯೋನ್ಯತೆಯ ಅಗತ್ಯವನ್ನು ಬಿಂಬಿಸಲಾಗಿದೆ. ತನ್ನ ಇಷ್ಟದೇವರಲ್ಲಿ ವಿಶ್ವಾಸವಿಟ್ಟು ಹಾಲಲ್ಲಾದರೂ ಹಾಕಲಿ, ನೀರಲ್ಲಾದರೂ ಅದ್ದಲಿ-ಎನ್ನುವ ಸಾಧಕನ ಶರಣಾಗತಿಯ ನಿಶ್ಚಲಭಾವವನ್ನು ಗುರುತಿಸಿ, ಮನಕರಗಿ ಭಕ್ತನು ತನ್ನಲ್ಲಿಟ್ಟ ನಂಬುಗೆಗೆ ಓಗೊಟ್ಟು ಬರುವ ಶಿವಲಿಂಗನೆಂಬ ಮನೋಧರ್ಮ - ಇವು ಅವರೀರ್ವರಲ್ಲಿರುವ ಗುಣ ಸ್ವಭಾವಗಳ ಅನ್ಯೋನ್ಯತೆಗೆ ಸಾಕ್ಷಿ. ಭಕ್ತ-ಪರಮಾತ್ಮ ಪರಸ್ಪರರು ಅರಿಯುವ, ಅರ್ಥೈಯಿಸಿಕೊಳ್ಳುವ ಈ ಮಹಾನ್ ಅದ್ವೈತ ಗುಣದಿಂದಾಗಿಯೇ ಲೋಕದಲ್ಲಿ ಇಂತಹ ಅದ್ಭುತ ಅಪರೂಪದ ಅಸಂಭವನೀಯ ಘಟನೆಗಳು ಘಟಿಸುತ್ತವೆ."[೨]

**ವಚನ -೮ :**

"ಹೋತನ ಹೊಡೆದು, ಆಡ ಕೂಡಿ
ಕುಚಿಯ ನಿಲಿಸಿ, ತಗರ ತಡೆದು
ಹಿಂಡನೊಬ್ಬುಳಿತೆ ಮಾಡಿ
ಹುಲಿ ತೋಳ ಚೋರ ಭಯಮಂ ಕಳೆದು
ಹಿಂಡಿಗೊಡೆಯನಾಗಿ ಕಾವ
ಗೊಲ್ಲಾಳ ನೀನೆ ವೀರ ಬೀರೇಶ್ವರ!"

ವ್ಯಾಖ್ಯಾನ : ಹೋತು ಅಹಂಕಾರ, ಆಡು ಅಲೆಮಾರಿತನ, ಕುರಿ: ಮೌಢ್ಯಾನುಕರಣೆ, ಯುದ್ಧ ಕಾಮ ಇತ್ಯಾದಿ ಹಲವು ತೆವಲುಗಳ ಸಂಯುಕ್ತ ರೂಪ ಈ ಮಾನವ (ದೈನಂದಿನ) ಜೀವನ. ಇಷ್ಟೇ ಸಾಲದೆಂಬಂತೆ ಈ ನಿಕೃಷ್ಟ ಜೀವನಕ್ಕೂ ಎಲ್ಲಾ ವೇಳೆ ಅವೇಳೆಯಲ್ಲೂ ಸವಾಲೆಸೆಯುತ್ತ ಉಪಟಳ ಕೊಟ್ಟ ಮೇಲೆ ಬೀಳುವ ಹುಲಿ (ಮೃತ್ಯು) ತೋಳ (ರೋದನ ಆಕ್ರಂದನ), ಚೋರ (ಧನ ಧಾನ್ಯ ನಷ್ಟ) - ಈ ನಿತ್ಯ ರೌರವದಲ್ಲಿ ತನ್ನನ್ನು ಹೆಣಗಿಸದೆ - ತಾನೇ ತನ್ನ ಒಡೆಯನಾಗಿ ಎಲ್ಲವನ್ನೂ ಕ್ಷೇಮವಾಗಿ ನಿರ್ವಹಿಸಬೇಕೆಂಬುದು ಭಕ್ತಜೀವದ ಅಹರ್ನಿಶಿ ಪ್ರಾರ್ಥನೆ ಶಿವನಲ್ಲಿ"[೪೫]

**ಸಿಂಗಳದ ಸಿದ್ಧಬಸವನ ಟೀಕು :**

**ಟೀಕು :** ಮೂಲ ಜ್ಞಾನೋದಯವಾದ ಶರಣನು ಅಹಂಕಾರವ ನಿವೃತ್ತಿ ಮಾಡಿದನೆಂಬುದೀಗ ಹೋತನ ಹೊಡದು ಎಂಬ ಶಬ್ದಕ್ಕರ್ಥ.

ಅಂತು ಅಹಂಕಾರವಳಿದು ಚಿದಹಂಕಾರ ಸ್ವರೂಪನಾದ ಶರಣನು ಶ್ರೀಗುರು ಕಾರುಣ್ಯದಿಂದ ರಜೋಗುಣ ಸಂಬಂಧವಾದ ಜೀವನ ಜೀವಭಾವವನು ಕ್ರಿಯಾದೀಕ್ಷೆಯಿಂದ ನಿವೃತ್ತಿಮಾಡಿ ಇಷ್ಟಲಿಂಗದಲ್ಲೇಕಾರ್ಥವ ಮಾಡಿದನೆಂಬುದೀಗ, ಆಡ ಕೂಡಿ ಎಂಬ ಶಬ್ದಕ್ಕರ್ಥ.

ಆ ಚಿದ್ರೂಪನಾದ ಶರಣ ಷಡುವರ್ಣಸ್ವರೂಪವಾದ ಮಾಯಾಪ್ರಪಂಚ ನಿವೃತ್ತಿಯ ಮಾಡಿ ಚಿಚ್ಛಕ್ತಿ ಸ್ವರೂಪವ ಮಾಡಿದನೆಂಬುದೀಗ, ಕುರಿನಿರಿಸಿ ಎಂಬ ಶಬ್ದಕ್ಕರ್ಥ.

ಆ ಚಿತ್ಸ್ವರೂಪನಾದ ಶರಣ ಗೆಲ್ಲು ಸೋಲಕ್ಕೆ ಹೋರುವದ ಬೀಡಬೇಕೆಂಬುದೀಗ, ಟಗರ ತಡೆದು ಎಂಬ ಶಬ್ದಕ್ಕರ್ಥ.

ಆ ಶರಣ ತನ್ನ ಸಕಲ ಕರಣಂಗಳನ್ನೆಲ್ಲ ಜ್ಞಾನಕರಣಂಗಳ ಮಾಡಿ ಚಿದ್ಘನ ಲಿಂಗದಲ್ಲೇಕಾರ್ಥವ ಮಾಡಿದನೆಂಬುದೀಗ, ಹಿಂಡದೊಬ್ಬುಳಿತೆಯ ಮಾಡಿ ಎಂಬ ಶಬ್ದಕ್ಕರ್ಥ.

ಆ ಚಿತ್ಸ್ವರೂಪವಾದ ಶರಣ ಕಾಲವ್ಯಾಘ್ರನ ಮರಣವನು ಸಮಸ್ತ ವ್ಯಾಧಿಗಳಿಂ ಪೀಡಿಸುವ ತೋಳವನು ಅಜ್ಞಿಷಡ್ವರ್ಗಂಗಳ ಹಗೆತನವ ನಿವೃತ್ತಿ ಮಾಡಿ ಸುಜ್ಞಾನ ಸ್ವರೂಪನಾಗಿಹನೆಂಬುದೀಗ, ಹುಲಿ, ತೋಳ ಚೋರರ ಭಯಮಂ ಕಳೆದು ಎಂಬ ಶಬ್ದಕ್ಕರ್ಥ.

ಆ ಸುಜ್ಞಾನಿ ಶರಣನ ಸಕಲ ಜ್ಞಾನಕರಣಂಗಳೆಲ್ಲದಕ್ಕೂ ಲಿಂಗವೇ ಕರ್ತೃವಾಗಿ ರಕ್ಷಿಸುತ್ತಿಹನೆಂಬುದೀಗ, ಹಿಂಡಿಗೊಡೆಯನಾಗಿ ಕಾವ ಗೊಲ್ಲಾಳ ನೀನೆ ವೀರ ಬೀರೇಶ್ವರಾ ಎಂಬ ಶಬ್ದಕ್ಕರ್ಥ."[೪೬]

ವಚನಸಾಹಿತ್ಯವು ಬೋಧಿಸಿದ ಕಾಯಕತತ್ತ್ವವು ಸುಭದ್ರವಾದುದನ್ನು ಕಟ್ಟುವಲ್ಲಿ ಬಲು ಮಹತ್ವದ್ದಾಗಿದೆ. ಶರಣರು ವಚನಸಾಹಿತ್ಯದ ಮೂಲಕ ಬೋಧಿಸಿದ ತತ್ತ್ವ ಸಿದ್ಧಾಂತಗಳನ್ನು ನಮ್ಮ

ಪ್ರಜಾಪ್ರಭುತ್ವದ ಆಡಳಿತದಲ್ಲಿ ಅಳವಡಿಸಿಕೊಂಡಲ್ಲಿ ದೇಶದ ಸಾಮಾಜಿಕ ಸ್ವಾಸ್ಥ್ಯ, ಆರ್ಥಿಕ ಭದ್ರತೆಯನ್ನು ಇನ್ನಷ್ಟು ಬಲಪಡಿಸಿಕೊಳ್ಳಬಹುದು. ಕಾಯಕದಲ್ಲಿ ಮೇಲು-ಕೀಳು ಎನ್ನದೆ ನ್ಯಾಯ-ನಿಷ್ಠೆಯಿಂದ ನಮ್ಮ ನಮ್ಮ ಕ್ರಿಯೆಗಳನ್ನು ಸ್ವಚ್ಛ ಕೈಗಳಿಂದ ಮಾಡಿದಲ್ಲಿ ಸಮುದ್ಧರಣ ಆಗುವುದರಲ್ಲಿ ಸಂದೇಹವಿರಲಾರದು. ಲಾಭದಾಸೆಯಿಲ್ಲದ ದುರಾಸೆ- ಅತ್ಯಾಸೆಗಳೆರಡೂ ಸೇರ್ಪಡೆಯಾಗದ ಶರಣರ ಕಾಯಕತತ್ತ್ವವು ಶ್ರೇಷ್ಠವಾಗಿದೆ. ತನು-ಮನ ಬಳಲಿಸಿ ನಿಯಮದ ಕೂಲಿಯನ್ನು ಪಡೆಯಬೇಕು. ಹೊರತಾಗಿ ಹೇಮದಾಸೆಯಿಂದ ಬಹಳ ದ್ರವ್ಯಕ್ಕೆ ಕಾಮಿಸಬಾರದೆಂಬುದು ವಚನ ಸಾಹಿತ್ಯವು ನೀಡಿದ ಕಾಯಕತತ್ತ್ವವಾಗಿದೆ. ಶರಣರು ಬೋಧಿಸಿದ ಕಾಯಕದಡಿಯಲ್ಲಿ ಪಡೆದ ಹಣವನ್ನು ಸಮಾಜಕ್ಕೆ ಸವೆಯಿಸಬೇಕು. ನಾನು ನನ್ನ ಹೆಂಡತಿ, ಮಕ್ಕಳು, ಬಂಧುಗಳೆಂದು ಅನೀತಿ ಹಣದಿಂದ ಐಷಾರಾಮಿ ಜೀವನ ಕಳೆಯುವುದು ಜೀವನವಲ್ಲ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತ: ಜಂಗಮಾರ್ಪಿತ, ಆಚಾರ್ಯರು, ಮಠಾಧೀಶರು, ರಾಜಕಾರಣಿಗಳೂ ಸಹ ಕಾಯಕ ಮಾಡಬೇಕು. ಕಾಯಕದಿಂದಲೇ ಜೀವನ್ಮುಕ್ತಿ ಎಂದು ಅರಿತಿರಬೇಕು. ಈ ತೆರನಾಗಿ ಬದುಕುವ ಸದ್ಭಕ್ತರ ಮನೆಯೇ ಕೈಲಾಸವೆಂದು ಶರಣರು ಅರಿತಿದ್ದರು.

ಈ ವಚನದ ಅರ್ಥವನ್ನು ಮೇಲಿನ ಅರ್ಥವ್ಯಾಪ್ತಿಗೆ ಅನುಗುಣವಾಗಿ ಹೇಳುವುದಾದರೆ, "ಕಾಯಕವೊಂದರ ಕ್ರಿಯಾವಿಧಿಯನ್ನು ಈ ವಚನ ಹೇಳುತ್ತದೆ. ಆದರೆ ಬರೀ ಕಾಯಕದ ವರ್ಣನೆಯಲ್ಲಿ ಪರ್ಯಾವಸಾನಗೊಳ್ಳುತ್ತಿಲ್ಲ. ಕಾಯಕದ ವರ್ಣನೆಯನ್ನು ಕಾಣಿಸುತ್ತದೆ. ಇದು ವಚನಗಳ ವಿಶಿಷ್ಟತೆ. ಶರಣರು ಕಾಯಕವೇ ಕೈಲಾಸವೆಂದು ಬರಿದೆ ನುಡಿಯಲಿಲ್ಲ. ನುಡಿಯೊಳಗಾಗಿ ನಡೆದರು. ನಡೆಯೊಳಗಾಗಿ ನುಡಿದರು. ಮೂಲದಲ್ಲಿ ಕಾಯಕ ಜೀವಿಗಳು ಸಂಘಟಿತರಾಗಿ ನಡೆಸಿದ ಚಳುವಳಿ ವಚನ ಚಳುವಳಿ. ಬಸವಣ್ಣನವರ ನೇತೃತ್ವದಲ್ಲಿ ಈ ಸಂಘಟನೆ ಬಲಗೊಂಡು ಹೋರಾಟದ ಒಂದು ದಿಕ್ಕನ್ನು ಕಂಡುಕೊಂಡರು. ಇದು ಕಾಯಕ ಜೀವಿಗಳ ವಲಯದಲ್ಲಿ ಮೊದಲು ಸಂಚಲನೆ ಪಡೆದುಕೊಂಡಿತ್ತೆಂಬುದಕ್ಕೆ ಕಾಯಕಜೀವಿ ವಚನಕಾರರ ವಚನಗಳೇ ಪ್ರಭಲ ಆಧಾರ; ಅವೇ ಪ್ರಮಾಣು. ಈ ಕಾರಣಗಳಿಂದಲೇ ವಚನಗಳು ಬರೆಯಬೇಕೆಂಬ ಸಾಹಿತ್ಯಿಕ ಉಮೇದಿನಲ್ಲಿ ಬರೆದವುಗಳಲ್ಲ. ಬರೆಯಲೇಬೇಕಾದ ಚಳುವಳಿಯ ಅನಿವಾರ್ಯತೆಯಲ್ಲಿ ರೂಪು ತಳೆದವು. ಹೀಗಾಗಿ ಅವು ವಿಶೇಷವಾಗಿ ಮತ್ತೊಬ್ಬರ ಕೂಡೆ ಸಂಭಾಷಿಸಿದ ಶೈಲಿಯಲ್ಲಿ ಇರುತ್ತವೆ. ಆ ಸಂಭಾಷಣೆಯಲ್ಲಿ ಬದುಕಿಗೆ ಸಂಬಂಧಿಸಿದ ವಿಚಾರ ಚರ್ಚಿತವಾಗಿ ವಚನಕಾರನ ಭಾವನೆ ಆಲೋಚನೆಗಳ ಮೂಲದ ಅನುಭವ ದ್ರವ್ಯ ಆಕೃತಿಗೊಂಡಿರುತ್ತದೆ. ಇದು ಎಲ್ಲ ಮೂಲದ ವಚನಕಾರರ ವಿಶೇಷತೆ ಹಾಗೂ ಅಸ್ಮಿತೆ.

ಗೊಲ್ಲಾಳನು ಕುರಿಕಾಯುವ ಕಾಯಕದಲ್ಲಿ ತೊಡಗಿದ್ದು, ಹನ್ನೆರಡನೇ ಶತಮಾನದ ಸಾಮಾಜಿಕ ಚಳುವಳಿಯಲ್ಲಿ ಪಾಲ್ಗೊಂಡಿದ್ದವನು. ಈ ಶ್ರಮಜೀವಿ ಹಾಗೂ ಇನ್ನಿತರ ಶ್ರಮಜೀವಿಗಳೂ (ಶರಣರು) ಬರೆದದ್ದಕ್ಕಿಂತ ಒರೆದಿರುವುದೇ ಹೆಚ್ಚು, ಅಂದರೆ ಇವು ವಾಚಿಸಿದ ವಚನಗಳು. ಹೀಗೆ ಶರಣನೊಬ್ಬ ತಾನು

ಸಾಂದರ್ಭಿಕವಾಗಿ ವಾಚಿಸಿದ ವಚನ ಅವನದೆನ್ನುವುದಕ್ಕೆ ಅವನ ಇಷ್ಟದೈವದ ಪ್ರಮಾಣು ಅಂಕಿತರೂಪಿಯಾಗಿ ಛಾಪುಗೊಳ್ಳುತ್ತಿತ್ತು. ವಚನಕಾರನ ಇಷ್ಟದೈವ ಪ್ರಮಾಣುವಿನಲ್ಲಿ ಬರೆಯಲ್ಪಟ್ಟ ವಚನಗಳು ಜನರ ಬಾಯಲ್ಲಿ ನೆನಪಿನ ವಾಹಕತ್ವದಲ್ಲಿ, ಬದುಕಿನ ಆಚಾರ-ವಿಚಾರಗಳಾಗಿ ಪ್ರವಹಿಸುತ್ತಿದ್ದವು. ಹೀಗಾಗಿ ವಚನಸಾಹಿತ್ಯ ಬರಹದ ರೂಪದಲ್ಲಿ ಬಂದದ್ದಕ್ಕಿಂತ ಬಾಯಿ ಮಾತಿನಲ್ಲಿ ಸಂಚಲಿಸಿದ್ದೇ ಹೆಚ್ಚು. ಅದರಲ್ಲೂ ವಿಶೇಷವಾಗಿ ಕಾಯಕಜೀವಿ ವಚನಕಾರರ ವಚನಗಳ ಸ್ಥಿತಿ ಇದಾಗಿತ್ತು. ಶ್ರಮಜೀವಿ ವಚನಕಾರರ ವಚನಗಳು ಈಗ ಸಿಕ್ಕಿರುವ ವಚನಗಳ ಸಂಖ್ಯಾ ಪ್ರಮಾಣವನ್ನು ಗಮನಿಸಿದರೆ ಈ ಮಾತಿನ ಸತ್ಯ ಅರಿವಾಗುತ್ತದೆ."[೪೭]

ನಿತ್ಯ ತೃಪ್ತರಾದ ವಚನಕಾರರ ಸಮಾಜ ರಚನೆಯ ಸ್ವರೂಪ ಅತ್ಯದ್ಭುತವಾದುದು. "ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ" ಯಾವಾಗಲೂ ಈಶನ ಚಿಂತನೆಯಲ್ಲಿದ್ದುಕೊಂಡು ಶರಣರು ಕಾಯಕ ಮಾಡುತ್ತಿದ್ದರು. ಸಿರಿಸೌಕರ್ಯವೆಂಬುದು ಆಕಾಶದ ರಚನೆ; ಕಾಡ ಬೆಳದಿಂಗಳ ಸಿರಿ ಎಂದು ಭಾವಿಸಿದ್ದರು. ಕುರುಬ ಗೊಲ್ಲಾಳನಿಗೆ ಕುರಿ ಕಾಯುವ ಸಮಯದಲ್ಲಿ ಹೋತ, ಆಡು, ಕುರಿ, ಟಗರುಗಳನ್ನು ನಿಲ್ಲಿಸುವ ಅನುಭಾವ ವಿಶೇಷತೆಯನ್ನು ಪ್ರಸ್ತಾಪಿಸುತ್ತದೆ. ಈ ಅನುಭವ ಜ್ಞಾನಿಗೆ ವೇದ್ಯವಾಗುವ ಪರಿಜ್ಞಾನವಾಗಿದೆ.

"ಇಲ್ಲಿ ಹೋತ, ಟಗರುಗಳ ಆಟಾಟೋಪವನ್ನು ನಿಯಂತ್ರಿಸುವಲ್ಲಿ ಬಳಸಿರುವ; ಹೊಡೆದು, ತಡೆದು ಎಂಬ ಪದಗಳು ಹಾಗೂ ಆಡು, ಕುರಿಗಳನ್ನು ಸಂಭಾಳಿಸುವಲ್ಲಿ ಬಳಸಿರುವ ಕೂಡಿ, ನಿಲಿಸಿ, ಎಂಬ ಪದಗಳು ಅನುಭವಜನ್ಯ ವರ್ತನಾ ವ್ಯಾಪಾರವನ್ನು ವ್ಯಂಜಿಸುವ ಪದ ಪ್ರಯೋಗಗಳು. ಈ ಪದಗಳು ಕಾಯಕದ ಸ್ವರೂಪವನ್ನು ಹೇಳುತ್ತಿವೆ. ಹೋತ, ಟಗರು, ಕುರಿ, ಆಡು ಎಲ್ಲ ಒಂದೇ ಅಲ್ಲ. ಅವುಗಳ ಸ್ವಭಾವ ಅವುಗಳನ್ನು ಕಾಯುವ ಹೊತ್ತಿನಲ್ಲಿ ಕುರುಬನೊಬ್ಬನು ಅನುಸರಿಸಬೇಕಾದ ಕ್ರಿಯಾ ವಿಧಿವಿಧಾನಗಳು ಈ ಎಲ್ಲವನ್ನೂ ಇಲ್ಲಿ ಬಳಕೆಯಾಗಿರುವ ಪದಗಳು ಸುಸಾಂಗತ್ಯಪೂರ್ಣವಾಗಿ ವ್ಯಂಜಿಸುತ್ತವೆ. ಹೋತನ ಹೊಡೆದು ಎನ್ನುವ ಕಡೆ ಕುರಿಯ ಹೊಡೆದು ಎಂದು ಬಳಸಿದರೆ ಅದು ಅನನುಭವಿಯ ಮಾತಾಗುತ್ತದೆ. ಅಜ್ಞಾನಿಯ ಆಲೋಚನೆಯಾಗುತ್ತದೆ. ಆದ್ದರಿಂದ ಇಲ್ಲಿ ಪದ ಪದಾರ್ಥಗಳ ಸಂಬಂಧ ಕಾಯಾತ್ಮ ಸಂಬಂಧದ ಅನುಭವ ಬಂಧದಿಂದ ಕೂಡಿದೆ. ಈ ಅನುಭವದ ದ್ರವ್ಯಮೂಲದಲ್ಲಿ ಜಿಜ್ಞಾಸೆಗೆ ಒಳಗಾದ ಧಾರ್ಮಿಕ ಚಿಂತನೆ ಅನುಭಾವಿಕ ವಿಸ್ತರಣೆಯಲ್ಲಿ ಪ್ರಸಾದ ಭಾವ ಪಡೆಯುವದು ಸಹಜವಿದೆ. ಕಾಯಕ ಮೂಲದ ಈ ಪರಿಭಾಷೆಗಳ ಸೂಕ್ಷ್ಮತೆಯ ಅರಿವಿಲ್ಲದವನಿಗೆ ಇಲ್ಲಿ ವ್ಯಂಜಿತವಾಗುವ ಅನುಭಾವಿಕ ವಿಸ್ತರಣೆಯ ಸೂಕ್ಷ್ಮತೆ ಅರಿವಿಗೆ ಬರುವುದು ಸಾಧ್ಯವಿಲ್ಲ."[೪೮]

ಈ ವಚನದಲ್ಲಿ ಹೋತ, ಟಗರು, ಕುರಿ, ಆಡುಗಳನ್ನು ಕೂಡಿಕೊಂಡ ಹಿಂಡನ್ನು ಒಬ್ಬುಳಿತೆ ಮಾಡುವ ಪಶುಪಾಲನಾ ಧರ್ಮ ಅನುಭವಿಪ್ರೇಣಿತ ವಚನ ಧರ್ಮವಾಗಿದೆ. ಕುರಿಗಾಹಿಯ ಕಾಯಕ ಧರ್ಮವನ್ನು ಹೇಳುತ್ತದೆ. ಕುರುಬನು ಕಾಯಕದಲ್ಲಿ ನಿರತನಾದಾಗ ಅನುಸರಿಸಬೇಕಾದ ಕ್ರಿಯಾ -ವಿಧಿವಿಧಾನಗಳನ್ನು ಪ್ರಸ್ತಾಪಿಸುತ್ತದೆ. ಕುರಿ ಕಾಯುವ ಅನುಭವ ಜ್ಞಾನ ಕುರಿಯ ಹಿಂಡನ್ನು ಒಬ್ಬುಳಿತ ಮಾಡುವಲ್ಲಿ ಹಿಂಡಿನೊಳಗಿನ

ಕಾಮಪೀಡಿತ ಆಕ್ರಮಣ ಶಕ್ತಿಗಳನ್ನು ಹೊಡೆದು, ತಡೆದು ನಿಯಂತ್ರಿಸುವ ಕಡೆ ಗಮನ ಹರಿಸಬೇಕಿರುವುದನ್ನು ಹೇಳುತ್ತಿದೆ. ಕುರಿಗಾಹಿಯ ಆಸ್ತಿ (ಸಂಪತ್ತು) ಆಡು, ಹೋತ, ಟಗರು, ಕುರಿಗಳು. ಈ ಪ್ರಾಣಿಗಳು ವಾಸಿಸುವುದು ಒಂದೇ ದೊಡ್ಡಿಯಲ್ಲಿ. ಆದರೆ ಅವುಗಳ ಗುಣ ಸ್ವಭಾವಗಳು ಒಂದೇ ತೆರನಾಗಿರುವುದಿಲ್ಲ. ಈ ಕುರಿಗಳು (ಪ್ರಾಣಿಗಳು) ದೊಡ್ಡಿಯಲ್ಲಿರುವಾಗ, ದೊಡ್ಡಿಯಿಂದ ಹೊರ ಹೋಗುವಾಗ ಅವೆಲ್ಲವುಗಳನ್ನು ಹೊಂದಿಸಿಕೊಂಡು ಸಂಭಾಳಿಸಿಕೊಂಡು ಹೋಗುವ ಕುರಿಗಾಹಿಯ ಅನುಭವ ವಿಶೇಷವನ್ನು ಈ ವಚನವು ಮನಗಾಣಿಸುತ್ತದೆ. ಮಾನವ ಗುರಿಯತ್ತ ಸಾಗುವಾಗ ಅವನಲ್ಲಿರುವ ಇಂದ್ರಿಯಗಳು-ಮನಸ್ಸು-ಬುದ್ಧಿ ಇವನಿಗೆ ತಡೆಯೊಡ್ಡುತ್ತವೆ. ಇವುಗಳಿಗೆ ಸೋತರೆ ಗುರಿ ಮುಟ್ಟಲಿಕ್ಕಾಗುವುದಿಲ್ಲ. ಪಾರಮಾರ್ಥದ ನಿರ್ಭೀತ ನಿಲುವನ್ನು ಕಾಣದೆ ಹೋಗುತ್ತಾನೆ. ಇಂದ್ರಿಯಗಳ ಕಪಿಮುಷ್ಠಿಯಿಂದ ಕೊಸರಿಕೊಳ್ಳುವ ಆತ್ಮಸ್ಥೈರ್ಯ ಮತ್ತು ಸ್ವಾತಂತ್ರ್ಯ, ಮರವೆಯನ್ನು ನೀಗುವುದು ಮಾನವನ ಅರಿವಿನಲ್ಲಿರಬೇಕು.

**ವಚನ -೯ :**

"ಸ್ಥಲಂಗಳನಱಿದಿಹೆನೆಂದಡೆ-
ತ್ರಿವಿಧ ಸ್ಥಲವೆನಗಿಲ್ಲ
ಷಡುಸ್ಥಲವ ಮುನ್ನವೆ ಅಱಿಯೆ !
ತತ್ತ್ವವನಱಿದಿ (=ದ?)ಹೆನೆಂದಡೆ-
ಇಪ್ಪತ್ತೈದಱ ಗೊತ್ತಿನವ [1]ನಲ್ಲ[1] !
[2]ಮಿಕ್ಕಾದ ಸತ್ಕೀರ್ತಿಯಲ್ಲಿ ನಡೆದಿಹೆನೆಂದಡೆ[2]
ಭಕ್ತಿ-ಜ್ಞಾನ -ವೈರಾಗ್ಯ ತ್ರಿವಿಧ ಲಕ್ಷ್ಯವಿದ ನಾನಲ್ಲ!
ನಿಷ್ಠೆಯಲ್ಲಿ ದೃಷ್ಟವ ಕಂಡಿಹೆನೆಂದಡೆ -
ವಿಶ್ವಾಸ ಎನಗಿಲ್ಲ!
ವಿರಕ್ತಿಯಲ್ಲಿ [3]ವ[3]ದಿಸಿಹೆನೆಂದಡೆ -
ತ್ರಿವಿಧ ಮಲದ ಮೊತ್ತದೊಳಗೆ ಮತ್ತನಾಗಿದ್ದೇನೆ
ಮತ್ತೆ ನಿಶ್ಚಯವನಱಿದಿಹೆನೆಂದಡೆ-
ಆತ್ಮಂಗೆ [4]ಲಕ್ಷವಿಡುವುದೊಂದು[4] ಗೊತ್ತ ಕಾಣೆ !
ಇಂತೀ ಕಷ್ಟ ತನುವಿನಲ್ಲಿ ಬಂದು
ಧೂರ್ತನಾಗಿ ಕೆಟ್ಟು, ಹೋಗುತ್ತಿದ್ದೇನೆ !
ಗುಡುಸಿದ ಹಿಕ್ಕೆಯಲ್ಲಿ
ಬಂದು ತನ್ನ ನಿಷ್ಠೆಯ ತೋಱೆ
ಎನಗೆ ಸದ್ಭಕ್ತಿಯ ಬೀರು

[5]ವಿಶ್ವಾಸಿಗಳೆಲ್ಲಕ್ಕೆ[5] ಕೃತ್ಯದೊಳಗಾಗಿ

ನಿತ್ಯನೇಮಂಗಳಲ್ಲಿ ಅಚ್ಚೊತ್ತಿ[6]ದಂತಿರು[6]

ನೀನೆ ನಿರ್ಮುಕ್ತನಹೆ

ನಿಜ ನಿತ್ಯವಹೆ

ಎನ್ನ ಹಕ್ಕೆಗೆ ಬಂದು ಸಿಕ್ಕಿದೆಯಲ್ಲಿ

ಮಹಾ ಮಹಿಮ [7]ವೀರ ಬೀರೇಶ್ವರ![7]

**ಪಾಠಾಂತರ :** ೧. ನಾನಲ್ಲ (ಗದುಗಿನ ಹಳಕಟ್ಟಿ ವಚನಶಾಸ್ತ್ರ ಸಾರ ಭಾಗ -೧, ವಚನ -೧೨೦೦) ೨. ಮಿಕ್ಕಾದ ಸತ್ಕ್ರಿಯೆಯನರಿದಿಹೆನೆಂದಡೆ (ಅದೇ) ೩. ಥೇ (ಅದೇ) ೪. ಲಕ್ಷವಿಪ್ಪುದೊಂದು (ಅದೇ) ೫. ವಿಶ್ವಾಸಿಗಳ (ಅದೇ) ೬. ದಂತಿರು (ಅದೇ) ೭. ವೀರ ಬೀರೇಶ್ವರ ಲಿಂಗ (ಅದೇ)

ವ್ಯಾಖ್ಯಾನ : ಪರಶಿವಸ್ಥಳ - ಲಿಂಗಸ್ಥಳ-ಅಂಗಸ್ಥಳ ಇವು ತ್ರಿವಿಧಸ್ಥಳ. ಇವುಗಳಿಂದ ನಿಷ್ಪನ್ನವಾಗುವ ಯೋಗಾಂಗ -ಭಾವಲಿಂಗ-ಭೋಗಾಂಗ -ಪ್ರಾಣಲಿಂಗ-ತ್ಯಾಗಾಂಗ-ಇಷ್ಟಲಿಂಗ ಇವು ಷಟ್‌ಸ್ಥಳ. ಈ ಯಾವುದೂ ನನಗೆ ತಿಳಿಯದು. ನಾನು ಪಂಚವಿಂಶತಿ ತತ್ತ್ವಸಂಚಿತವಾದ ಈ ದೇಹದಲ್ಲಿ ಕಟ್ಟುಬಿದ್ದಿರುವವ ಅಲ್ಲಿಂದ ಮುಕ್ತನಾಗಲು ಬೇಕಾದ ಶಿವತತ್ತ್ವ ವಿವರವೂ ನನಗೆ ಗೊತ್ತಿಲ್ಲ. ಈ ಯಾವ ತತ್ತ್ವ ಜ್ಞಾನವೇನೂ ಇಲ್ಲದಿದ್ದರೇನು -ಸದಾಚಾರವಾದರೂ ನನ್ನಲ್ಲಿದೆಯೇ ಎಂದರೆ ಅದಕ್ಕೆಲ್ಲ ತಳಪಾಯವಾದ ಭಕ್ತಿಜ್ಞಾನ ವೈರಾಗ್ಯದ ಗೊತ್ತು ಗುರಿಯೇ ನನಗಿಲ್ಲ, ಈ ಆಚಾರ ವಿಚಾರವಿಲ್ಲದಿದ್ದರಿರಲಿ - ಯಾವುದಾದರೊಂದರಲ್ಲಿ ವಿಶ್ವಾಸವಾದರೂ ನನಗಿದ್ದಿದ್ದರೆ -ನಾನು ಉದ್ಧಾರವಾಗಬಹುದಾಗಿತ್ತು. ಅಂಥ ನಿಷ್ಠೆಯೂ ನನ್ನಲ್ಲಿಲ್ಲ. ಇಂಥ ನಿತಾಂತ ನಾಸ್ತಿಕನಾದ ನಾನು ವೈರಾಗ್ಯಕ್ಕೆ ಬದಲಾಗಿ ಆಣವ -ಮಾಯಾ -ಕಾರ್ಮಿಕವೆಂಬ ಮೂರು ಮಲಗಳ ಮೊತ್ತವನ್ನು ತಲೆಯಲ್ಲಿ ಹೊತ್ತು ಮತ್ತನಾಗಿದ್ದೇನೆ. ನನಗೆ ಆತ್ಮವೆಂದರೇನೋ ತಿಳಿಯದು. ಅತ್ತ ನಡೆಯಲಿರಬೇಕಾದ ಗೊತ್ತು ಗುರಿಯೂ ತಿಳಿಯದು. ಇಂತ ನಿರ್ಭಾಗ್ಯ ಸ್ಥಿತಿಯಲ್ಲಿ ನಾನು ಒಬ್ಬ ಧೂರ್ತನಂತೆ ಮುಂಚೆ ಹಾಳಾಗುತ್ತಿದ್ದಾಗ - ಎಲೇ ದೇವರೇ, ನೀನು ನನ್ನ ಹಕ್ಕೆಯಲ್ಲಿ ಹಿಕ್ಕೆಯಾಗಿ ಮೈದೋರಿದೆ. ನನ್ನಲ್ಲಿ ನಿಷ್ಠೆಯನ್ನು ಹುರಿಗೊಳಿಸಿದೆ- ಇನ್ನಾದರೂ ನನಗೆ ಉತ್ತರೋತ್ತರ ಬಡವರ ಭಕ್ತಿಯನ್ನು ಅನುಗ್ರಹಿಸಿ ನನ್ನ ಎಲ್ಲ ಕಾಯಕ ಕಲಾಪಗಳಲ್ಲಿ ನಿನ್ನ ಛಾಪು ಅಚ್ಚೊತ್ತಿರುವಂತೆ ಅನುಗ್ರಹಿಸು. ನೀನೇ ಅಲ್ಲವೆ ನನಗೆ ಸರ್ವಸ್ವ - ನಿಷ್ಕಾರಣ ಬಂಧುವಾದ ನನ್ನ ಮನೋಮಂದಿರದಲ್ಲಿ ನಿತ್ಯ ಪೂಜೆ ಕೈಗೊಳ್ಳುತ್ತಿರು."[೨೯]

ಪ್ರಸ್ತುತ ಈ ವಚನದಲ್ಲಿ ಗೊಲ್ಲಾಳನು ತನ್ನನ್ನೆ ತಾನು ಸ್ವವಿಮರ್ಶೆಗೆ ಒಳಪಡಿಸಿಕೊಂಡಿದ್ದಾನೆ. ತನ್ನ ತಾನರಿಯುವದು ಬದುಕಿನ ಮೊದಲ ಪಾಠ. ಇದನ್ನು ಶರಣರು ಚನ್ನಾಗಿ ಅರಿತಿದ್ದರು. 'ಅರಿದಡೆ ಶರಣ ಮರೆದಡೆ ದಾನವ' ಎನ್ನುವ ಅರಿವಿನಲ್ಲಿದ್ದವರು. ಮಾನವನಿಗೆ ಬದುಕಿನ ತತ್ತ್ವ ಸಿದ್ಧಾಂತ ಪಾಠವನ್ನು ಬೋಧಿಸಿದವರು. ಲೋಕದ ಜೀವನವು ಆದರ್ಶವಾಗಿರಲು, ಸಮಾಜ -ಸಮಾಜ ಮಧ್ಯದಲ್ಲಿ ಸ್ನೇಹ

ಬಾಂಧವ್ಯವನ್ನು ಬೆಸೆಯಲು ಶರಣ ಸಮಾಜವನ್ನೇ ನಿರ್ಮಿಸಲು ಪ್ರಯತ್ನಿಸಿದವರು. ಈ ತತ್ತ್ವ ಬೋಧನೆಯ ಸಂದರ್ಭದಲ್ಲಿ ಮಾನವನ ನಡೆ-ನುಡಿ-ಅರಿವು ಆಚಾರ ವಿಚಾರ, ತನು, ಮನ, ಧನ ಮುಂತಾದವುಗಳನ್ನು ನಿಕಷಕ್ಕೆ ಒಳಪಡಿಸುತ್ತಾರೆ. ತತ್ಸಂಬಂಧದಲ್ಲಿ ಈತನು ತನ್ನ ಜ್ಞಾನ ಚಲನ-ವಲನಗಳು ಕುರಿತು ವಿಶ್ಲೇಷಿಸಿದ್ದುಂಟು.

"ಶರಣನೊಂದಿಗೆ ಸೇರಿಕೊಂಡು ಅನುಭಾವದ ಸುಖವನ್ನು ಅನುಭವಿಸಿದವನು ಇದ್ದರೂ ಇರದಂತೆ, ಸಾಯುವ ಮೊದಲೇ ಸತ್ತಂತೆ ಇದ್ದವನೆಂದು ವಚನಗಳೂ ಹೇಳುತ್ತವೆ. ಬಸವಣ್ಣನವರ ಈ ಕೆಳಗಿನ ವಚನದ ಅರ್ಥದಲ್ಲಿ ಅನುಭಾವದ (siva experiecne) ಮಹತ್ವವನ್ನು ಕುರಿತು ಹೇಳಿದ ಮಾತು ಹೀಗಿದೆ.

ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು
ಅನುಭಾವವಿಲ್ಲದ ಸಂಗ ಸಮರಸಕ್ಕೆ ನಿಲುಕದು
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು
ಅನುಭಾವವಿಲ್ಲದ ಏನನ್ನೂ ಅರಿಯಬಾರದು
ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನಲುಂಟೆ ?
......ನಿಮ್ಮ ಅನುಭಾವ ಮಾತಿನ ಮಥನವೆಂದು ನುಡಿಯಬಹುದೆ ?

ಶಿವನಲ್ಲಿ ನಿಷ್ಠೆ, ಶಿವಜ್ಞಾನವು ಅನುಭಾವದಿಂದ ಉಂಟಾಗುವದೆಂಬ ಪ್ರಮೇಯವು ಮೇಲಿನ ಮಾತಿನಲ್ಲಿ ವ್ಯಕ್ತವಾಗಿದೆ. ಜೀವನು ಪಡೆಯುವ ತೃಪ್ತಿ ಸುಖಗಳಿಗೆ ಅನುಭಾವವು ಆಶ್ರಯವನ್ನೊದಗಿಸುತ್ತದೆ. ಇನ್ನಷ್ಟು ಸ್ಪಷ್ಟವಾಗಿ ಹೇಳುವುದಾದರೆ, ಜೀವನದಲ್ಲಿ ನೆಲೆಸಿರುವ ಆತ್ಮನ ಅರಿವನ್ನುಂಟುಮಾಡಿಕೊಡುವುದೇ ಅನುಭಾವದ ಗಮ್ಯವಾಗಿದೆ. ಪೂಜೆ, ಪ್ರಕ್ರಿಯೆಗಳಿಗೂ, ಜಪ ತಪಗಳಿಗೂ ನಿಲುಕದ ಪ್ರತ್ಯಕ್ಷ ಜ್ಞಾನವನ್ನು ಜಂಗಮರ ಒಡನಾಟವು ಅಥವಾ ಸತ್‌ಸಂಗವು ಒದಗಿಸಿಕೊಡುತ್ತದೆಯೆಂದು ಅವರು ಸ್ಪಷ್ಟವಾಗಿ ಹೇಳಿರುವರು. ಅದರ ಮೇಲಿಂದ ಲಿಂಗಾಯತನ ತತ್ವಜ್ಞಾನವನ್ನು ಅರಸಿಕೊಂಡು ಹೋದವನಿಗೆ ಅದು ಜಂಗಮರ ಸಂಗದಲ್ಲಿ, ಅವರೊಂದಿಗೆ ನಡೆಸುವ ಚರ್ಚೆ ಮತ್ತು ಅದಕ್ಕೆ ಸಂಬಂಧಿಸಿದ ಆಚಾರವನ್ನು ದೈನಂದಿನ ಜೀವನದಲ್ಲಿ ಕಾರ್ಯರೂಪಕ್ಕಿಳಿಸುವ ಮೂಲಕ ಪಡೆಯಬಹುದಾಗಿದೆ."[೩೦]

**ತ್ರಿವಿಧ ಸ್ಥಲ :**

"ಕಿಂಕರ ಭಾವದಿಂದ ಮಾಡುವ ಗುರು, ಲಿಂಗ, ಜಂಗಮ ಸೇವೆ,
ಗುರುದಾಸೋಹ : ತನುಮನವನ್ನು ಗುರುವಿಗೆ ಅರ್ಪಿಸುವುದು
ಲಿಂಗದಾಸೋಹ : ಮನವನ್ನು ಲಿಂಗಕ್ಕೆ ಅರ್ಪಿಸುವುದು.
ಜಂಗಮದಾಸೋಹ : ಧನವನ್ನು ಜಂಗಮಕ್ಕೆ ಅರ್ಪಿಸುವುದು."[೩೧]

**ಷಡುಸ್ಥಲ :**

"ಸ್ಥಲ (ಸ್ಥ+ಲ) ತನಗೆ ಇಡೀ ಬ್ರಹ್ಮಾಂಡವನ್ನೆಲ್ಲ ಹೊರಹೊಮ್ಮಿಸಿ, ಅದಕ್ಕೆ ತಾನೇ ಆಧಾರವಾಗಿದ್ದು ಮುನ್ನಡೆಸಿ, ತನಗೆ ಸಾಕೆನಿಸಿದಾಗ ಅದನ್ನೆಲ್ಲಾ ತನ್ನಲ್ಲಿಯೇ ಲೀನವಾಗಿಸಿಕೊಳ್ಳುವ ಪರಾತ್ಪರ ವಸ್ತು.

ಷಟಸ್ಥಲಗಳು : ಮಾನವನ ದೈವತ್ವಸಾಧನೆಯ ಆರೋಹಣ ಮಾರ್ಗದ ಆರು ಮಜಲುಗಳು, ಭಕ್ತಿಯ ವಿಕಾಸದೊಂದಿಗೆ ಮೇಲೆರುತ್ತ ಭಗವಂತನಲ್ಲಿ ಬೆರೆದು ಒಂದಾಗುವ ಲಿಂಗಾನುಭವದ ವಿವಿಧ ನಿಲುವುಗಳು.

**ಭಕ್ತಸ್ಥಲ :**

ಗುರುಕಾರುಣ್ಯ ಪಡೆದು ಭಕ್ತಿ ಸಾಧನೆಯಲ್ಲಿ ತೊಡಗುವ ಸಾಧಕನಿಗೆ ದೇವನಲ್ಲಿ ಅಗಾಧವಾದ ಶ್ರದ್ಧೆ-ದೈವವನ್ನು ಕಾಣಬೇಕೆಂದು ಸದಾ ಹಂಬಲಿಸುವ ಅತ್ಯುತ್ಕಟ ಸ್ಥಿತಿ.

**ಮಹೇಶಸ್ಥಲ :**

ನಿಷ್ಠೆ ತೋರುವ ಭಕ್ತ ನಿಷ್ಠೆಯನ್ನು ಪರೀಕ್ಷಿಸುವ ದೇವಸಾಧಕನಲ್ಲಿ ವೀರನಿಷ್ಠೆ, ದೃಢನಂಬಿಕೆಗಳು, ಮೈದುಂಬಿ ಮುಂಬರುವ ಮಜಲು.

**ಪ್ರಸಾದಿಸ್ಥಲ :**

ಎಲ್ಲವನ್ನು ದೇವನಿಗೆ ಅರ್ಪಿಸಿ, ಅವನು ಕರುಣಿಸಿದುದನ್ನು ಪ್ರಸಾದವನ್ನಾಗಿ ಅನುಭವಿಸಿ ಆನಂದಿಸುವ ಸುಯಿಧಾನದ ನಿಲುವು. ಸಾಧಕನ ತನುಮನ ಭಾವಗಳೆಲ್ಲ ಪ್ರಸಾದವಾದ ಪ್ರಸನ್ನತೆಯ ಗೆಲುವು.

**ಪ್ರಾಣಲಿಂಗಿ ಸ್ಥಲ :**

ಸಾಧಕನು ತನ್ನ ಪ್ರಾಣವೇಲಿಂಗ, ಲಿಂಗವೇ ಪ್ರಾಣ ಎಂದು ತನ್ನ ಒಳಗೂ ಹೊರಗೂ ಲಿಂಗಾನಂದವನ್ನು ಅನುಭವಿಸುತ್ತಿದ್ದು. ಆ ದೇವರಿಂದ ಭಿನ್ನವಾಗಿರುವುದನ್ನು ಸಹಿಸಲಾರದ ಮಹೋನ್ನತ ಸ್ಥಿತಿ.

**ಶರಣಸ್ಥಲ :**

ಸಂಪೂರ್ಣ ಶರಣರಾಗಿ ದೇವನೊಡನೆ ಅಭಿನ್ನತೆಯನ್ನು ಅನುಭವಿಸುವುದು. ಶರಣಸತಿ - ಲಿಂಗಪತಿಯಾಗಿ ಪಾರಮಾರ್ಥಿಕ ದಾಂಪತ್ಯ ಸುಖದಲ್ಲಿ ಮೈಮರೆಯುವ ಆನಂದದ ಸ್ಥಿತಿ.

**ಐಕ್ಯ ಸ್ಥಲ :**

ಅಂಗ - ಲಿಂಗಗಳ ಐಕ್ಯಭಾವದ ಪರಮಾನುಭವ. ಬಯಲು ಬಯಲಿಗೆ ಬೆರಸಿದ ಸಮರಸದ ಮಹಾಸಂಗಮ ಶಬ್ದಮುಗ್ಧಸ್ಥಿತಿ "[೫೨]

ತತ್ತ್ವನರಿದಿನೆಂದಡೆ ಇಪ್ಪತ್ತೈದರ ಗೊತ್ತಿನವನಲ್ಲ-

"ವ್ಯಕ್ತಿ ತನ್ನನ್ನು ತಾನು ತಿಳಿದು ತಾನೇನಾಗಬೇಕೆಂದು ಅರಿತುಕೊಳ್ಳಲು ಸಹಾಯಕವಾಗುವ ಆತ್ಮ ತತ್ವಗಳಾದ ಪಂಚವಿಂಶತಿ ತತ್ವಗಳಂತೂ ತನ್ನಿಂದ ಬಲು ದೂರವಿದ್ದವು. ಅವು ತನ್ನ ಅಳವಿಗೆ ಬಂದಿಲ್ಲ. ಇನ್ನು ಸದಾಚಾರಿಯಾಗಿ, ಋಜುಮಾರ್ಗದಲ್ಲಿ ನಡೆದು ಭಕ್ತಿಯನ್ನು ಅಳವಡಿಸಿಕೊಳ್ಳಬೇಕು, ಕ್ರಿಯಾಜ್ಞಾನವನ್ನು ಸಂಪಾದಿಸಿಕೊಳ್ಳಬೇಕು, ಈ ಸಂಸಾರದ ಮಾಯಾ ಮೋಹದ ತೊಡಕಿನಿಂದ ಬಿಡಿಸಿಕೊಳ್ಳಬೇಕು, ಮುಕ್ತಿ ಮಾರ್ಗದಲ್ಲಿ ನಡೆಯಬೇಕೆಂದರೆ ಭಕ್ತಿ -ಜ್ಞಾನ-ವೈರಾಗ್ಯ ಇವುಗಳ ಸಾಧನೆ ಕ್ರಮವು ಗೊತ್ತಿಲ್ಲ. ಕೇವಲ ನಿಷ್ಠೆಯಲ್ಲಿ "ದೃಷ್ಟವ" ಕಾಣುವೆನೆಂಬ ನಂಬಿಕೆಯೂ ಇಲ್ಲ. ವಿರಕ್ತನಾಗಬೇಕೆಂದರೆ ಆಣವ -ಮಾಯಾ -ಕಾರ್ಮಿಕ ಮಲಗಳ ಮೊತ್ತದಲ್ಲಿ ಮುಳುಗಿದ್ದೇನೆ. ಹೀಗಿರುವಾಗ ನಿಶ್ಚಿಂತನಾಗಿ ನಿಜವ ನಂಬಿ, ಚಿತ್ತಯಿಸುವನಾಗದೆ ಪರಮ ಸುಖಿಯಾಗಲು ಅದು ಹೇಗೆ ಸಾಧ್ಯವಿದೆ ಎಂದು ತೊಳಲಾಡುತ್ತಿರುವ, ಶಿವಸಾನಿಧ್ಯಕ್ಕಾಗಿ ಹಂಬಲಿಸುತ್ತಿರುವ ಭಕ್ತನ ಪ್ರಾಮಾಣಿಕ ಹಂಬಲದ ಚಿತ್ರಣವಿದೆ ಇಲ್ಲಿ.

ಆದರೆ ದೇವರ ಸಾಕ್ಷಾತ್ಕಾರಕ್ಕಾಗಿ ಮೇಲೆ ಹೇಳಿದ ವೀರಶೈವ ಪರಿಭಾಷೆಯ ತತ್ತ್ವಜ್ಞಾನವನ್ನು ಭಕ್ತನೊಬ್ಬನು ತಿಳಿದಿರದಿದ್ದರೂ ಭಕ್ತನಿಗೆ ಜ್ಞಾನ ಮತ್ತು ವೈರಾಗ್ಯಗಳಿಗಿಂತ ಮುಖ್ಯವಾದುದು ಭಕ್ತಿ. ಈ ಸದ್‌ಭಕ್ತಿಯ ಹಾದಿಯಲ್ಲಿ ಶ್ರದ್ಧೆ-ವಿಶ್ವಾಸ-ನಿಷ್ಠೆಗಳಿಂದ ಯಾರು ನಿತ್ಯನೇಮಗಳಲ್ಲಿ ಅಚಲವಾಗಿ ತೊಡಗಿರುವರೋ ಅವರು ನಿತ್ಯರು, ಮುಕ್ತರು, ಜಗಕೆ ಕರ್ತರೆಂದು ಗೊಲ್ಲಾಳನು ಕೊಂಡಾಡುತ್ತಾನೆ. ಗೊಲ್ಲಾಳನು ಈ ಭಕ್ತಿ ಸಾಧನೆಯ ಮೆಟ್ಟಿಲೇರಿ ಶಿವನೇ ತನ್ನಲ್ಲಿ ಅಡಗಿರುವನೆಂದು ಅಭಿಮಾನದಿಂದ, ಆನಂದದಿಂದ ಆತನನ್ನು ಕೊಂಡಾಡಿದ್ದಾನೆ.[೫೩]

ನಿಷ್ಕಲ-ಸಕಲ ನಿಷ್ಕಲ -ಶಿವಶಕ್ತಿ ಸಂಪುಟವಾಗಿ ಹೊರಹೊಮ್ಮುವ ಮೂವತ್ತಾರು ತತ್ವಗಳಲ್ಲಿ ಮೊದಲನೆಯದು. ಇದು ಅತ್ಯಂತ ಸೂಕ್ಷ್ಮವಾದ ಶಿವತತ್ವ. ಸಕಲ-ನಿಷ್ಕಲ- ಇದು ಸೂಕ್ಷ್ಮ ತತ್ತ್ವ. ಪಂಚಸಾದಾಖ್ಯ ಮತ್ತು ಪಂಚಕಲಾಯುಕ್ತವಾಗಿದೆ. ಸಕಲ ಇದು ಸ್ಥೂಲತತ್ತ್ವ. ಇಪ್ಪತ್ತೈದು ತತ್ತ್ವಗಳಿಂದ ಕೂಡಿದೆ. ಭೂತಗಳು -೫, ಇಂದ್ರಿಯಗಳು-೧೦, ಪ್ರಾಣ ವಾಯುಗಳು-೫, ಅಂತಃಕರಣ-೫ ಈ ಪಂಚವಿಂಶತಿ ತತ್ತ್ವರಾಶಿಯೇ ಈ ದೇಹ. ಹೀಗೆ ಪಂಚವಿಂಶತಿ ತತ್ತ್ವಗಳಿಂದ ಘಟಿತವಾದ ಈ ದೇಹ ತನ್ನದು - ಅಷ್ಟೇ ಅಲ್ಲ ಈ ದೇಹವೇ ತಾನೆಂಬ ಎರಡು ವಿಧವಾದ ಅಹಂಭಾವವುಳ್ಳವನೇ ಕಲ್ಪಿತ ಪುರುಷನು - ಇವನು ಹೀಗಾಗಿರುವುದು ತನ್ನ ಅಜ್ಞಭ್ರಮೆಯಿಂದಲೇ ಆಗಿದೆ.

ಮಾಯಾಭ್ರಾಂತಿ ಕವಿದಿದ್ದಾಗ ಶಿವಾಂಶಿಕವಾದ ಜೀವನಿಗೆ ತಾನು ಶಿವಕಿರಣವೆಂಬುದನ್ನು ಮರೆತು ಈ ದೇಹಮಾತ್ರವೇ 'ನಾನು' ಎಂಬ ದರಿದ್ರ ಸ್ವಪ್ನವನ್ನು ಕಾಣುತ್ತಾನೆ. ಈ ಸ್ವಪ್ನವೇ ದೇಹಬಂಧಕ್ಕೆ ಬೀಜಪ್ರಾಯವಾಗುವದು. ಶಿವಜ್ಞಾನದಲ್ಲಿ ಜಾಗೃತವಾಗಿರುವವನಿಗಾದರೋ ಈ ಬಗೆಯ ವಿಕಲ್ಪಗಳಿಲ್ಲ. ಅವನಿಗೆ ಈ ದೇಹವಿರುವುದೆಂಬ ವಾಸ್ತವದರಿವಿನ ಜೊತೆಗೆ ಆ ದೇಹದೊಳಗಿರುವ ಚಿತ್ಪ್ರಕಾಶ ತಾನು ಎಂಬ ಎಚ್ಚರವೂ ಇರುತ್ತದೆ. ಈ ಎಚ್ಚರದ ಅಭಾವವೇ ಈ ದೇಹ ಭಾವಕ್ಕೆ ಬೀಜವಾಗಿದೆಯೆಂದು ಹೇಳಬಹುದು.

ಗುರು, ಲಿಂಗ ಮತ್ತು ಜಂಗಮ ಇವು ಮೂರು ನಿತ್ಯ. ತನು, ಮನ ಮತ್ತು ಧನ ಇವು ಮೂರು ಅನಿತ್ಯ. ಆ ಮೂರಕ್ಕೆ ಈ ಮೂರನು ಸಮರ್ಪಿಸಿ ಮೂರು ಬಗೆಯ ಪ್ರಸಾದವನು ಸ್ವೀಕರಿಸಬೇಕು. ಗುರುವಿಗೆ ತನು ಅರ್ಪಿತವಾದರೆ ಆ ಧನ ಪವಿತ್ರ. ಅದು ಪ್ರಸಿದ್ಧಪ್ರಸಾದ. ಜಂಗಮನಿಗೆ ಧನ ಅರ್ಪಿತವಾದರೆ ಆ ಧನ ಪವಿತ್ರ ಅದು ಪ್ರಸಿದ್ಧ ಪ್ರಸಾದ. ಹೀಗೆ ಗುರುಸೇವೆ, ಲಿಂಗಸ್ಮರಣೆ ಹಾಗೂ ಜಂಗಮ ದಾಸೋಹಗಳಿಂದ ಪರಿಶುದ್ಧಗೊಂಡು ಪ್ರಸಾದವಾದ ತನು ಮನ ಧನ ಉಳ್ಳವನೆ -ಭಕ್ತ. ಆತನೆ ಪ್ರಸಾದಿ, ಆತನೆ ವೀರ ಧೀರ, ಅವನೇ ಅಚ್ಚ ಪ್ರಸಾದಿ.

ನಿಷ್ಠೆಯಲ್ಲಿ ದೃಷ್ಟವ ಕಂಡಿಹೆನೆಂದಡೆ ವಿಶ್ವಾಸ ಎನಗಿಲ್ಲ-

ಸಾಧಕ ತನ್ನ ಸಾಧನೆಯ ಮಾರ್ಗವನ್ನು ಹಿಡಿದು ನಡೆಯುವಾಗ ಪ್ರಾಪಂಚಿಕ ಜೀವನದ ಘಟನೆಗಳು ಬಾಧಕವಾಗಿ ಮನಸ್ಸಿನ ಏರು - ಪೇರುಗಳು ಸುರುವಾಗುತ್ತವೆ. ಇದು ವ್ಯಕ್ತಿಗತ ತಳಮಳವೂ ಹೌದು. ಸಂಸಾರದಲ್ಲಿ ಬಿದ್ದು ಒದ್ದಾಡುವ ಮನಃಸ್ಥಿತಿಯೂ ಹೌದು. ದೇವರ ನಿಷ್ಠೆಯ ಕುರಿತು ಮಾತನಾಡುವಾಗ ಅವರು ತಮ್ಮ ಅಂತರಂಗ, ಬಹಿರಂಗ ಎರಡನ್ನೂ ತಡಕಿ ನೋಡಿಕೊಳ್ಳಬೇಕು. ನನ್ನ ಅಂತರಂಗ ಹಾಗೂ ಬಹಿರಂಗ ಶುದ್ಧವಾಗಿದೆಯೇ? ಎಂದು ಪರಿಶೀಲಿಸಿಕೊಳ್ಳಬೇಕು. 'ನಿನ್ನನ್ನು ನೀನು ಪರಿಶೀಲಿಸಿಕೋ, ಪರಿಶುದ್ಧಿಸಿಕೋ' ಎಂದರ್ಥ.

"ಭಕ್ತನಾದವನು ಭಗವಂತನನ್ನು ಆರಾಧಿಸುವುದಕ್ಕೆ ಒಂದೇ ದಾರಿ ಎಂದು ಯಾರೂ ಹೇಳಲಾರರು. ಬೆಟ್ಟದ ತುದಿಯನ್ನು ಮುಟ್ಟಬೇಕಾದರೆ ಅದನ್ನು ಯಾವ ಕಡೆಯಿಂದಲಾದರೂ, ಯಾವ ದಾರಿಯಿಂದಲಾದರೂ ತಲುಪಬಹುದು. ಹಾಗೆಯೇ ಭಕ್ತಿಯೂ ನಾನಾ ರೂಪಗಳನ್ನು ತಾಳಬಹುದು. ಹಿಂದುಗಳ ವೇದಮತ, ಕ್ರಿಶ್ಚಿಯನ್ನರ ಬೈಬಲ್ ಮತ್ತು ಮುಸಲ್ಮಾನರ  ಖುರಾನ್ ಮತ್ತು ಯಹೂದ್ಯಮತ, ಪಾರಸಿಕರ ಜರೋಆಸ್ಟ್ರಿಯನ್ ಮತ -ಈ ವಿವಿಧ ಮತಗಳು "ಏಕೋದೇವಃ" ಎಂದು ಯಾವ ದೇವರನ್ನು ಕುರಿತು ಉಪನಿಷತ್ತುಗಳು ಹೇಳಿವೆಯೋ ಅದೇ ದೇವರ ಇರುವಿಕೆಯನ್ನೇ ಸಾರುವವು. ಆದ್ದರಿಂದ ಮತಭೇದವು ಮತವೈಷಮ್ಯವಾಗಿರಬಾರದು. ಒಂದು ಔಷಧದಲ್ಲಿ ನಾನಾ ಧಾತುಗಳಿಗೆ ಪ್ರಯೋಗವಿರುವಂತೆ, ನಾನಾ ಮತಗಳಿಗೆ ಮನುಷ್ಯ ಜೀವನದಲ್ಲಿ ಒಂದೊಂದು ಓಘವಿರುತ್ತದೆ."[೫೪]

ಭಕ್ತಿ ವ್ಯಕ್ತಿನಿಷ್ಠವಾದುದು. ಅವರವರ ಭಕ್ತಿ, ಭಾವಗಳಿಗೆ ಅನುಗುಣವಾಗಿ ದೇವರನ್ನು ಉಪಾಸನೆಗೆಯ್ಯುತ್ತಾರೆ. ಭಕ್ತನು ಶ್ರದ್ಧೆ-ವಿಶ್ವಾಸ-ನಿಷ್ಠೆಗಳಿಂದ ದೇವರ ಸ್ಮರಣೆ ಮಾಡುವುದಾಗಿದೆ. ಯಾರು ಈ ಕ್ರಿಯೆಗಳಲ್ಲಿ, ನಿತ್ಯನೇಮಗಳಲ್ಲಿ ಅಚಲವಾಗಿ ತೊಡಗಿರುವರೋ ಅವರು ನಿತ್ಯರು, ಮುಕ್ತರು ಜಗಕೆ. ಕರ್ತರೆಂದು ಗೊಲ್ಲಾಳನು ಕೊಂಡಾಡಿದ್ದಾನೆ. ಗೊಲ್ಲಾಳನ ಈ ಭಕ್ತಿ ಸಾಧನೆಯನ್ನು ತನಗೆ ತಿಳಿಸಿಕೊಟ್ಟವನು ಶಿವನೇ ಆಗಿರುವನೆಂದು ಅಭಿಮಾನದಿಂದ, ಭಕ್ತಿಭಾವದಿಂದ, ಆನಂದದಿಂದ ಆತನನ್ನು ಕೊಂಡಾಡಿದ್ದಾನೆ.

**ವಚನ -೧೦ :**

"ಹೋತು ಹುಸಿ

ಆಡು ಬಹುಮಾತಿನ [1]ನೀತಿ[1]

ಕಚೆ ಸಕಲೇಂದ್ರಿಯದ [2]ನೆಲ[2] ಹೊಲ

ತಗರು ತಥ್ಯ [3]ಮಿಥದ[3] ಹೊರಟೆ

ಹುಲಿ ದ್ವೇಷದಾಗರ

ತೋಳ ಕೊಂದು ತಿಂಬ ಕಾಟ

ಚೋರ ಮೃತ್ಯು-

ಇಂತಿವು ಮೊದಲಾದ [4]ಪ್ರಕೃತಿಗಳಲ್ಲಾ[4]

ಕಾಯದ [5]ನೆಲಹೊಲನಲ್ಲಾ[5]

ಸಕಲೇಂದ್ರಿಯವೆಂಬ ಹಿಂಡು

[6]ಮಂದೆಯಾಗಿವೆಕೋ[6]

ಇದಱ ಸಂಗವ ಬಿಡಿಸು

ನಿಮ್ಮ ನಿಜದಂಗವ ತೋಱಿ

ಭವ ಪಾಶದಂಗವ ಹಱಿದು

ನಿಮ್ಮ ಘನ [7]ಲಿಂಗ[7]ದಲ್ಲಿರಿಸು

ನೆಱೆ ವೀರ ಬೀರೇಶ್ವರ !

**ಪಾಠಾಂತರ :** ೧. ನೆಲೆ (ಗದುಗಿನ ಹಳಕಟ್ಟಿ ವಚನಶಾಸ್ತ್ರ ಸಾರ ಭಾಗ -೧, ವಚನ -೧೧೯೬) ೨. ನೆಲ (ಅದೇ) (ಷಟ್ಸ್ಥಲ ಸಂಗ್ರಹ ವಚನ -೪೨೨), ೩. ಮಿಥ್ಯೆಯ (ಅದೇ) ೪. ಬಹುವಿಧದ ಪ್ರಕೃತಿಗಳಲ್ಲಿ (ಅದೇ) ಷಟ್ಸ್ಥಲ ಸಂಗ್ರಹ ವಚನ -೪೨೨) ೫. ನೆಲ ಹೊಲದಲ್ಲಿ (ಅದೇ) ಷಟ್ಸ್ಥಲ ಸಂಗ್ರಹ ವಚನ -೪೨೨) ೬. ಮಂದೆಯಾಗಿವೆಯೇಕೋ (ಅದೇ), ೭. ಸಂಗ (ಷಟ್ಸ್ಥಲ ಸಂಗ್ರಹ ವಚನ -೪೨೨)"[೫೫]

ಪ್ರಸ್ತುತ ಈ ವಚನವು ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸುವಂತಹದಾಗಿದೆ. ಅಂತರಾಳದಲ್ಲಿ ವಿಷಯ ಸುಖಗಳನ್ನು ಅದುಮಿಟ್ಟುಕೊಂಡು ಹೊರಗೆ ಇಂದ್ರಿಯಗಳನ್ನು ನಿಗ್ರಹಿಸುವುದು ಅಪಾಯಕಾರಿಯಾಗಿದೆ. ಮನಸ್ಸಿನ ನಿಗ್ರಹ ಕೃತಕವಾದದ್ದು. ಅದು ಸಿಡಿದೇಳುವ ಪ್ರಕ್ರಿಯೆ, ಇನ್ನೂ ಪ್ರಬಲವಾಗುತ್ತದೆ. ನಾವು ಜಾಗೃತ ಸ್ಥಿತಿಯಲ್ಲಿಯೇ ಇರಲಿ ಅಥವಾ ಸ್ವಪ್ನ ಸ್ಥಿತಿಯಲ್ಲಿಯೇ ಇರಲಿ, ನಮ್ಮ ಪವಿತ್ರ ಆತ್ಮ ಮಾತ್ರ ಪ್ರತಿಯೊಂದು ಸ್ಥಿತಿಯಲ್ಲಿಯೂ ಸಾಕ್ಷೀರೂಪದಲ್ಲಿ ಭಾಗವಹಿಸಲೇಬೇಕಾಗುತ್ತದೆ. ಜಾಗೃತ, ಸ್ವಪ್ನ, ಸುಷುಪ್ತಿ ಹಾಗೂ

ಭ್ರಮೆಗಳಲ್ಲಿ ಅದು ನಮ್ಮ ದೇಹ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಮೂಲಕ ಬಾಹ್ಯವಸ್ತುಗಳೊಡನೆ ಪರೋಕ್ಷವಾಗಿಯಾದರೂ ಸಂಪರ್ಕ ಪಡೆದಿದೆ. ತುರೀಯಸ್ಥಿತಿಯಲ್ಲಿ ಮಾತ್ರ ಯಾವುದರ ಸಂಬಂಧವೂ ಇಲ್ಲದೆ ಒಂದೇ ಇರುತ್ತದೆ. ಈ ಸ್ಥಿತಿಯೇ ನೈಜವಾದ ಹಾಗೂ ಅತ್ಯುತ್ತಮವಾದ ಸ್ಥಿತಿ. ಈ ಸ್ಥಿತಿಗಳಲ್ಲಿ ಆತ್ಮವು ಬ್ರಹ್ಮವಾದಂತೆ ಅನುಭವವಾಗುವುದರಿಂದ ಹಾಗೂ ಅದು ನಿಜವಾದ ಸ್ಥಿತಿಯಾದುದರಿಂದ ಜಾಗೃತ, ಸ್ವಪ್ನ, ಭ್ರಮೆ, ಸುಷುಪ್ತಿಗಳೆಲ್ಲವೂ ಮಿಥ್ಯೆ, ಆತ್ಮವು ಬ್ರಹ್ಮವಾಗುವುದೇ ನಿಜವಾದರೆ ಅಥವಾ ಅಖಂಡಿತ ಬ್ರಹ್ಮ (ಚಿತ್) ಮಾತ್ರ ಸತ್ಯವಾದರೆ ಅಚಿತ್ ಪ್ರಪಂಚವೂ ಆತ್ಮ ಹಾಗೂ ಭೌತವಸ್ತುಗಳ ಅನೇಕಥೇಯ ಮಿಥ್ಯೆ.

ಹೋತು ಹುಸಿ ಆಡು ಬಹು ಮಾತಿನ ನೀತಿ

ಕುರಿ ಸಕಲೇಂದ್ರಿಯದ ನೆಲ ಹೊಲ ಟಗರು ತಥ್ಯ ಮಿಥ್ಯದ ಹೊರಟೆ

.................... ನಿಮ್ಮ ಘನಸಂಗದಲ್ಲಿರಿಸು.

ಭೌತಿಕತೆಯನ್ನಾಗಲಿ, ಅನೇಕತೆಯನ್ನಾಗಲಿ ಮಿಥ್ಯೆಯೆನ್ನುವದಿಲ್ಲ. ಅವರು ಭೌತಿಕ ಪ್ರಪಂಚವನ್ನು ಪರಶಿವನ ಶಕ್ತಿ (ಅಥವಾ ಶರೀರ) ಎಂದು ಪರಿಗಣಿಸುವುದರಿಂದ ಪರಶಿವನು (ಚಿತ್) ಎಷ್ಟು ಸತ್ಯವೋ ಅವನ ಶಕ್ತಿಯೂ ಅಷ್ಟೇ ಸತ್ಯ. ಅದೇ ರೀತಿ ಅವರು ಅನೇಕತೆಯನ್ನು ಮಿಥ್ಯ ಎನ್ನದೇ ಏಕತೆಯ (ಪರಶಿವನ ಅಥವಾ ಇಡಿಯಾದ ಸತ್ಯದ) ಅನೇಕ ಅಂಶಗಳೆಂದು ಪರಿಗಣಿಸುತ್ತಾರೆ. ಆದರೆ ಈ ವಿವಿಧ ಅಂಶಗಳನ್ನು ನಾವು ಏಕ (ಪರಶಿವದಿಂದ ಪ್ರತ್ಯೇಕಿಸಿದರೆ ಆಗ ಅನೇಕತೆಯಷ್ಟೇ ಇದ್ದು ಏಕತೆ ಇಲ್ಲವಾಗುತ್ತದೆ; ಆಗ ನಾವು ಭ್ರಮಾಧೀನರಾಗಿದ್ದೇವೆ ಎಂದರ್ಥ.

"ಹೋತು-ಹುಸಿ ಆಡು -ಬಹುಮಾತಿನ ನೀತಿ, ಕುರಿ ಸಕಲೇಂದ್ರಿಯದ ನೆಲ ಹೊಲ, ಹುಲಿ-ದ್ವೇಷ, ಚೋರ-ಮೃತ್ಯು ಇತ್ಯಾದಿ. ಪದಾರ್ಥ ರೂಪದಲ್ಲಿ ಹೇಳುತ್ತವೆ. ಮೇಲುನೋಟದಲ್ಲಿ ಇಡೀ ವಚನವು ಕಾಯಕವನ್ನೇ ಮುಖ್ಯವಾಗಿ ಪರಿಗಣಿಸಿದಂತೆ ತೋರುತ್ತಿದ್ದರೂ ಚಿಂತನೆಗೆ ಒಳಪಡಿಸಿದಾಗ ಸಾಧಕನ ಸಾಧನೆಯ ಒಳಹರವು ತೆರೆದುಕೊಳ್ಳುತ್ತ ಹೋಗುತ್ತದೆ. ಗೊಲ್ಲಾಳನು ಇಲ್ಲಿ ತನ್ನ ಪರಿಸರವನ್ನು, ಪರಿಕರಗಳನ್ನು ಜೀವನದ ಸಹಜ ನೆಲೆಯಲ್ಲಿ ವಿವರಿಸುವ ಹಾಗೆ ಆಧ್ಯಾತ್ಮ ಜೀವನದ ಹಿನ್ನೆಲೆಯಲ್ಲಿಯೂ ಅವುಗಳನ್ನು ವರ್ಣಿಸುತ್ತಾನೆ. ಪ್ರಸ್ತುತ ವಚನದಲ್ಲಿ ಶರೀರದ ಹುಸಿತವನ್ನು ಹೋತಿಗೂ ಬಹುಮಾತಿನ ನೀತಿಯನ್ನು (ವಾಚಾಳಿತನ) ಆಡಿಗೂ ಸಕಲೇಂದ್ರಿಯದ ನೆಲ ಹೊಲವನ್ನು ಕುರಿಗೂ ಮುಂತಾಗಿ ಪ್ರತೀಕಗೊಳಿಸಿದ್ದಾನೆ. ಕುರುಬನಿಗೆ ಕುರಿಯನ್ನು ಮೇಯಿಸುವದು ಎಷ್ಟು ಮುಖ್ಯವೋ ಅವುಗಳ ಜೀವರಕ್ಷಣೆಯೂ ಅಷ್ಟೇ ಮುಖ್ಯ. ಆದ್ದರಿಂದ ಟಗರು, ಕುರಿ, ತೋಳ ಮತ್ತು ಚೋರರ ಭಯದಿಂದ ಮೈಯೆಲ್ಲಾ ಕಣ್ಣಾಗಿ ಅವುಗಳನ್ನು ರಕ್ಷಿಸುತ್ತಾ ಇಂದ್ರಿಯಗಳು ಶರೀರದ ನೆಲ ಹೊಲದಲ್ಲಿ ಅವು ಕೊಬ್ಬದಂತೆ ಇಲ್ಲವೆ ಜೀವಕಳೆದುಕೊಳ್ಳದಂತೆ ಕಾಯಬೇಕಾಗಿದೆ. ಹೀಗೆ ಕಾಯುವಾಗ ಕುರುಬನಾದ ತಾನು ಶರೀರ ಹಿಂಡಿನ ಸಂಗದಲ್ಲಿದ್ದರೂ ಇಲ್ಲದಂತೆ ನಡೆದುಕೊಳ್ಳಬೇಕಾಗಿದೆ.

ಇಂದ್ರಿಯ ಸಂಗವನ್ನು ಬಿಟ್ಟು ಸತ್ಯದ ಸಂಗವನ್ನು ಹಿಡಿಯಬೇಕಾಗಿದೆ. ಆಗಲೇ ಭವದ ಬಂಧನವು ಕೆಟ್ಟು ಭಗವಂತನ ಸನ್ನಿಧಾನವು ದೊರೆಯಲು ಸಾಧ್ಯವಾಗುತ್ತದೆ."[೫೬]

ಗೊಲ್ಲಾಳೇಶ್ವರನ ಈ ಹತ್ತು ವಚನಗಳನ್ನು ವಿಶ್ಲೇಷಿಸಿದಾಗ ಈತನ ವಚನಗಳಲ್ಲಿ ಉಲ್ಲೇಖಿತವಾದಂತೆ ಶರಣ ತತ್ವವಿದೆ. ಈತನು ಬಸವಪೂರ್ವ ವಚನಕಾರರ ಗುಂಪಿನಲ್ಲಿ ಬರುತ್ತಾನೆ, ಹಾಗೂ ಬಸವಣ್ಣನವರಿಗಿಂತ ಪೂರ್ವದಲ್ಲಿ ಅದೆಷ್ಟೋ ವಚನಕಾರರು, ಶರಣರಿದ್ದರು, ವಚನ ಸಾಹಿತ್ಯ ಬಸವಣ್ಣನವರ ಕಾಲಕ್ಕೆ ಅಷ್ಟು ಹುಲುಸಾಗಿ ಬೆಳೆಯಲು ಆ ಮೊದಲು ಅನೇಕರು ಈ ಕಾರ್ಯದಲ್ಲಿ ತೊಡಗಿದ್ದರು. ಈಗ ಸಾಧಿಸಿ ತೋರಿಸಬೇಕಾದ ಪ್ರಮೇಯವಾಗಿಯೇನೂ ಉಳಿದಿರಲಿಲ್ಲ. ದೇವರ ದಾಸಿಮಯ್ಯ,ಕೊಂಡಗುಳಿ ಕೇಶಿರಾಜ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಬಳ್ಳೇಶ , ಮಲ್ಲಯ್ಯ, ವೀರಗೊಲ್ಲಾಳ ಇನ್ನೂ ಅನೇಕ ವಚನಕಾರರಿದ್ದರು.

ಮಾದಾರ ಚೆನ್ನಯ್ಯ ಮತ್ತಷ್ಟು ಪುರಾತನರಾದ ಶರಣರ ವಚನಗಳು ಪ್ರಾಚೀನ ಸಂಕಲನಗಳಲ್ಲಿ ದೊರೆಯುತ್ತಿರುವುದಷ್ಟೇ ಅಲ್ಲದೆ ಶರಣರನ್ನು ಕುರಿತಂತೆ ರಗಳೆ ಮತ್ತಿತರ ವೀರಶೈವ ಪುರಾಣಗಳಲ್ಲಿ ಶರಣರ ಕತೆ ಹೇಳುವಾಗ, ಉದಾಹರಣೆಗೆ ಪಾಲ್ಕುರಿಕೆ ಸೋಮನಾಥನ ಬಸವಪುರಾಣ, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ ಮುಂತಾದೆಡೆ, ಅಲ್ಲಲ್ಲಿಯ ಛಂದಸ್ಸಿಗೆ ಮೈಯಳವಡಿಸಿಕೊಂಡಿರುವ ಹಲವಾರು ವಚನಗಳನ್ನು ಸೂಕ್ಷ್ಮವಾಗಿ ವಿದ್ವಾಂಸರು ಗುರುತಿಸಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ಲೇಖಕರು - ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಅಲ್ಲಮಪ್ರಭುದೇವರ ವಚನ-ನಿರ್ವಚನ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು - ೨೦೦೧, ಪುಟ -XIII
೨. ಅದೇ, ಪುಟ - XIV
೩. ಸಂ. ಡಾ. ವೆಂಕಾರಡ್ಡಿ ಮಧು ಎಲ್ಲ ಪುರಾತನರ ವಚನಗಳು ಆರಂಭವಾಗುವ ಸಂಪುಟ -ಭಾಗ- ೩ - ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರು- ೨೦೦೬, ಪುಟ- VII
೪. ಅದೇ ಪುಟ VII
೫. ಅದೇ, ಪುಟ VII ಮತ್ತು VIII
೬. ಲೇಖಕರು : ಡಾ. ಹಲಗೇರಿ ಪ್ರಕಾಶ್ ಬಿ. ಬಸವಣ್ಣನವರ ವಚನಗಳಲ್ಲಿ ಶಿಲ್ಪ ಮತ್ತು ಸೌಂದರ್ಯ - ಸಾಹಿತ್ಯಸಿರಿ, ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ -೨೦೦೬, ಪುಟ - ೧೩ & ೧೪
೭. ಅದೇ, ಪುಟ 122 ಮತ್ತು 123
೮. ಕನ್ನಡ-ಕನ್ನಡ ಸಂಕ್ಷಿಪ್ತ ನಿಘಂಟು, ಪ್ರಕಾಶಕರು ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಪುಟ-೨೩
೯. ಸಂ - ದಳವಾಯಿ ರಾಜಪ್ಪ ಕನ್ನಡ ಸಾಹಿತ್ಯಕೋಶ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ - ಬೆಂಗಳೂರು ೧೯೯೬ ಪು-೧೨
೧೦. ಲೇಖಕರು - ಶಿವರುದ್ರಪ್ಪ ಜಿ.ಎಸ್. ಸಂ - ಜಿ.ಎಸ್. ಶಿವರುದ್ರಪ್ಪ ಕನ್ನಡ ಸಾಹಿತ್ಯ ಚರಿತ್ರೆ ಪ್ರಕಾಶನ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೪ ಪುಟ -೫೩,
೧೧. ಡಾ. ನಾಯಕ ಸದಾನಂದ, ಕನ್ನಡ ಸಾಹಿತ್ಯದಲ್ಲಿ ಕಾವ್ಯ ಪ್ರಬೇಧಗಳು : ಪ್ರಕಾಶನ ಪ್ರತಿಭಾ ಪಬ್ಲಿಕೇಶನ್ ಧಾರವಾಡ. ೧೯೭೪ ಪುಟ -೧೬

೧೨. ಲೇ - ಪ್ರೊ. ಆರ್. ರಾಚಪ್ಪ, ಪ್ರೊ. ಎಸ್.ಎಸ್. ಭೂಸನೂರಮಠ ಅಭಿನಂದನ ಗ್ರಂಥ, ಸಂ. - ಡಾ. ಶಿರೂರ ಜಿ.ಷ್ಪಿ. ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ - ೧೯೮೬, ಪುಟ -೩೩೭

೧೩. ಅದೇ ಪುಟ - ೩೩೮ & ೩೩೯

೧೪. ಅದೇ, ಪುಟ - ೩೩೯

೧೫. ಲೇ - ಎಲ್. ಬಸವರಾಜು, ಅಲ್ಲಮನ ವಚನ ಚಂದ್ರಿಕೆ - ನಳಿನಿಶಂಕರ ಪ್ರಕಾಶನ, ಮೈಸೂರು- ೧೯೬೦. ಪುಟ: ಪೀಠಿಕೆ, ೧೬

೧೬. ಲೇಖಕರು - ಎಲ್. ಬಸವರಾಜು, ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೫೩

೧೭. ಅದೇ, ಬೆನ್ನುಡಿ ಪುಟ -

೧೮. ಅದೇ, ಪುಟ - ೧೫೩

೧೯. ಸಂ. - ಡಾ. ಸುಂಕಾಪುರ ಎಂ.ಎಸ್. ಸಕಲ ಪುರಾತನರ ಬೆಡಗಿನ ವಚನಗಳು, ಪ್ರಕಾಶಕರು ಕೆ.ಎಸ್. ಕಣವಿ, ನಿರ್ದೇಶಕರು ವ್ಯಾಸಂಗ ವಿಸ್ತರಣಾ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪುಟ ೫೫೦, ೫೫೧

೨೦. ಲೇ - ಡಾ. ಎಲ್. ಬಸವರಾಜ, ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೫೫

೨೧. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ, ಬೆಂಗಳೂರು, ೨೦೦೯, ಪುಟ: ೬೮

೨೨. ಸಂ - ಡಾ. ಸುಂಕಾಪುರ ಎಂ.ಎಸ್. ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನಿಸಿದ ಸಕಲ ಪುರಾತನರ ಬೆಡಗಿನ ವಚನಗಳು, ಪ್ರಕಾಶಕರು, ನಿರ್ದೇಶಕರು ವ್ಯಾಸಂಗ ವಿಸ್ತರಣಾ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪುಟ ೫೫೨

೨೩. ಅದೇ, ಪುಟ - ೫೫೩

೨೪. ಲೇ - ಡಾ. ಎಲ್. ಬಸವರಾಜ, ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೫೬, ೧೫೭, ೧೫೮

೨೫. ಲೇ - ಪ್ರೊ. ಸಿದ್ಧರಾಮಯ್ಯ ಎಸ್.ಜಿ. ಸಂ. ಭಾಲಚಂದ್ರ ಜಯಶೆಟ್ಟಿ ಬೆಳ್ಳಿಬೆಟ್ಟದ ಮೆಟ್ಟಿಲು - ೨ ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರ ಪಟ್ಟಾಧಿಕಾರದ ಬೆಳ್ಳಿ ಹಬ್ಬದ ಪ್ರಕಟಣೆ, ಬಸವ ಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ ೨೦೧೦. ಪುಟ:

೨೬. ಲೇ - ಡಾ. ನಾರಾಯಣ ಪಿ.ವ್ಹಿ.ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಕಾಶಕರು ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ - ಗದಗ, ೧೯೮೩. ಪುಟ: ೧೫೫

೨೭. ಲೇ - ಡಾ. ಎಲ್. ಬಸವರಾಜ, ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೫೮

೨೮. ಅದೇ - ಪುಟ ೧೫೮, ೧೫೯

೨೯. ಸಂ - ಡಾ. ಸುಂಕಾಪುರ ಎಂ.ಎಸ್.ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನಿಸಿದ ಸಕಲ ಪುರಾತನರ ಬೆಡಗಿನ ವಚನಗಳು, ಪ್ರಕಾಶಕರು,ನಿರ್ದೇಶಕರು ವ್ಯಾಸಂಗ ವಿಸ್ತರಣಾ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪುಟ ೫೫೪, ೫೫೫

೩೦. ಲೇಖಕರು - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ,ಬೆಂಗಳೂರು, ೨೦೦೯, ಪುಟ: ೬೦, ೭೦

೩೧. ಸಂ - ಡಾ. ಸುಂಕಾಪುರ ಎಂ.ಎಸ್. ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನಿಸಿದ ಸಕಲ ಪುರಾತನರ ಬೆಡಗಿನ ವಚನಗಳು,ಪ್ರಕಾಶಕರು,ನಿರ್ದೇಶಕರು ವ್ಯಾಸಂಗ ವಿಸ್ತರಣಾ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪುಟ ೫೫೫

೩೨. ಲೇ - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೫೯,೧೬೦

೩೩. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ, ಬೆಂಗಳೂರು, ೨೦೦೯, ಪುಟ: ೭೪

೩೪. ಲೇ - ನಾಗಭೂಷಣಸ್ವಾಮಿ ಓ. ಎಲ್. ಸಂ. ಎಸ್.ಕೆ. ಕೊಪ್ಪ ಅಲ್ಲಮಪ್ರಭು ಚಿಂತನ - (ವಿಮರ್ಶಾ ಲೇಖನ ಸಂಕಲನ) ಪ್ರಕಾಶಕರು ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು, ಪುಟ: ೨೦೩

೩೫. ಲೇ - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೬೦

೩೬. ಅದೇ, ಪುಟ: ೧೬೦, ೧೬೧
೩೭. ಲೇ - ವೀರಭದ್ರಪ್ಪ ಬಿ.ವ್ಹಿ. ಸಂ. ಪ್ರೊ.ಬಿ.ವ್ಹಿ. ವೀರಭದ್ರಪ್ಪ ದೇವರನ್ನು ಕುರಿತು ಒಂದು ಬಹುಮುಖಿ ನೋಟ, ಪ್ರಕಾಶಕರು ಡಾ. ಹಿ.ಚಿ.ಬೋರಲಿಂಗಯ್ಯ, ನಿರ್ದೇಶಕರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫. ಪುಟ: ೧
೩೮. ಲೇ - ನ್ಯಾಯಮೂರ್ತಿ ಮಲ್ಲಪ್ಪ ಟಿ.ಎನ್. ಸಂ. ಪ್ರೊ. ಸಂಗಮನಾಥ ಜಿ. ಹಂಡಿ. ವಚನ ಪಿತಾಮಹಪ್ರಕಾಶಕರು ಶ್ರೀ ಬಿ.ಎಸ್. ಗಣಾಚಾರಿ, ಪ್ರಿನ್ಸಿಪಾಲ ಎಸ್.ಬಿ. ಆರ್ಟ್ಸ್ ಕಾಲೇಜ, ವಿಜಾಪೂರ, ೧೯೬೮, ಪುಟ ೧೭೫
೩೯. ಸಿದ್ಧರಾಮಯ್ಯ ಎಸ್.ಜಿ. ಬಿಲ್ವ ಬೆಳವಲ ಪ್ರ.ಬಸವ ಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ ಭಾಲಕಿ, ೨೦೧೦, ಪು. ೫೪
೪೦. ಶ್ರೀ ಸಿದ್ಧೇಶ್ವರ ಸ್ವಾಮಿಗಳು ಅಲ್ಲಮಪ್ರಭುದೇವರ ವಚನ - ನಿರ್ವಚನ ಪ್ರಕಾಶಕರು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥ ಮಾಲೆ ಮೈಸೂರು, ೨೦೦೧, ಪು. ೩೧೧
೪೧. ಲೇಖಕರು - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೬೧, ೧೬೨
೪೨. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ, ಬೆಂಗಳೂರು, ೨೦೦೯, ಪುಟ: ೭೧, ೭೨
೪೩. ಲೇ - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೬೨, ೧೬೩
೪೪. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ,ಬೆಂಗಳೂರು, ೨೦೦೯, ಪುಟ: ೭೦, ೭೧
೪೫. ಲೇ - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ: ೧೬೩
೪೬. ಸಂ - ಡಾ. ಸುಂಕಾಪುರ ಎಂ.ಎಸ್. ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನಿಸಿದ ಸಕಲ ಪುರಾತನರ ಬೆಡಗಿನ ವಚನಗಳು, ಪ್ರಕಾಶಕರು,ನಿರ್ದೇಶಕರು ವ್ಯಾಸಂಗ ವಿಸ್ತರಣಾ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮, ಪುಟ ೫೫೬
೪೭. ಲೇ - ಪ್ರೊ. ಎಸ್.ಜಿ. ಸಿದ್ಧರಾಮಯ್ಯ ಸಂ. ಭಾಲಚಂದ್ರ ಜಯಶೆಟ್ಟಿ ಬೆಳ್ಳಿಬೆಟ್ಟದ ಮೆಟ್ಟಿಲು - ೨ ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರ ಪಟ್ಟಾಧಿಕಾರದ ಬೆಳ್ಳಿ ಹಬ್ಬದ ಪ್ರಕಟಣೆ, ಬಸವ ಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ ೨೦೧೦. ಪುಟ: ೪೮
೪೮. ಅದೇ, ಪುಟ ೫೨
೪೯. ಲೇ - ಡಾ. ಎಲ್. ಬಸವರಾಜ, ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು,೨೦೦೯. ಪುಟ: ೧೬೪, ೧೬೫
೫೦. ಲೇ - ಹಿರೇಮಲ್ಲೂರ ಈಶ್ವರನ್ ಲಿಂಗಾಯತ ಮಠಗಳ ಒಂದು ತೌಲನಿಕ ಅಧ್ಯಯನ, ಲಿಂಗಾಯತ ಧರ್ಮ ಜೈನ ಮತ್ತು ಬ್ರಾಹ್ಮಣ ಧರ್ಮಗಳು ಸಂಸ್ಕೃತಿ ಮತ್ತು ಸಮಾಜ ಭಾಗ ಮೂರು, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ, ಬೆಂಗಳೂರು ದ್ವಿ.ಪ. ಮುದ್ರಣ, ೨೦೦೮, ಪುಟ: ೩೫೩, ೩೫೪
೫೧. ಲೇ - ಡಾ. ತಿಪ್ಪೇರುದ್ರಸ್ವಾಮಿ ಎಚ್.ಬಸವೇಶ್ವರರ ವಚನ ದೀಪಿಕೆ, ಪ್ರ. ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥ ಮಾಲೆ, ಮೈಸೂರು, ೧೯೯೫ ಪುಟ: ೫೬೯
೫೨. ಅದೇ, ಪುಟ ೫೭೨
೫೩. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು ಜಯನಗರ, ಬೆಂಗಳೂರು, ೨೦೦೯, ಪುಟ: ೭೩, ೭೪
೫೪. ಲೇ - ಡಿ.ವಿ.ಜಿ., ಸಂ. ಪ್ರೊ. ವೀರಭದ್ರಪ್ಪ ಬಿ. ವ್ಹಿ. ದೇವರನ್ನು ಕುರಿತು ಒಂದು ಬಹುಮುಖಿ ನೋಟ, ಪ್ರ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ೨೦೦೫, ಪುಟ: ೭೩, ೭೪
೫೫. ಲೇ - ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು, ಡಾ ಎಂ.ಭೈರೇಗೌಡ ಮುದ್ದು ಶ್ರೀ ಗ್ರಂಥಮಾಲೆ, ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ, ಕೃಷ್ಣಾಪುರ ದೊಡ್ಡಿ ಹಂಪಿ ನಗರ, ಬೆಂಗಳೂರು, ೨೦೦೯. ಪುಟ:೧೬೫
೫೬. ಲೇ - ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತು ಮೈಸೂರು ಜಯನಗರ, ಬೆಂಗಳೂರು, ೨೦೦೯, ಪುಟ: ೭೬

# ಅಧ್ಯಾಯ - ೫
# ಗೊಲ್ಲಾಳೇಶ್ವರ ಕುರಿತ : ಸಾಹಿತ್ಯ
## ೧. ಶಿಷ್ಟ ಸಾಹಿತ್ಯ
## ೨. ಜನಪದ ಸಾಹಿತ್ಯ

ಬಸವಪೂರ್ವ ಮತ್ತು ಬಸವಸಮಕಾಲೀನ ಹಾಗೂ ಬಸವ ನಂತರದ ಕಾಲದಲ್ಲಿ ಸಾಮಾಜಿಕ ಐಕ್ಯತಾ ಬದುಕಿಗಾಗಿ, ಮೇಲು-ಕೀಳು, ಬಡವ ಬಲ್ಲಿದ, ಸ್ಥಾವರ-ಜಂಗಮ ಈ ಮೊದಲಾದ ಬೇಧಗಳನ್ನು ಅಳಿಸಲು ಅಸಂಖ್ಯಾತ ಮಹಾನ್ ವ್ಯಕ್ತಿಗಳು ಚಳುವಳಿ ನಡೆಸಿದರು. ಇವರನ್ನೇ ಶರಣರು -ಶರಣೆಯರು ಎಂದು ಕರೆದರೆ, ಇನ್ನೂ ಕೆಲವರು ಇವರನ್ನು ದೇವರೆಂದು, ಪೂಜಿಸಿ, ಜಾತ್ರೆ-ಉತ್ಸವಗಳನ್ನು ಆಚರಿಸುತ್ತಿದ್ದಾರೆ. ಇವರು ಬದುಕಿದ ರೀತಿ ಲೋಕಕ್ಕೆ ಮಾರ್ಗಸೂಚಿಯಾಗಿದೆ. ಇವರಲ್ಲಿ ಕೆಲವರು ಆ ಕಾಲದ ಪರಿಸರಕ್ಕೆ ಅನುಗುಣವಾಗಿ ಮಠಗಳಲ್ಲಿ ಮತ್ತು ಗುರುಕುಲಗಳಲ್ಲಿ ವಿದ್ಯೆಯನ್ನು ಪಡೆದರೆ, ಇನ್ನು ಕೆಲವರು ಸ್ವಯಂ ಆಧ್ಯಾತ್ಮಿಕ ಸಾಧನೆಯಲ್ಲಿ ಔನ್ನತ್ಯಕ್ಕೇರಿದ ಅನುಭಾವಿಗಳು. "ಅವರಲ್ಲಿಯೇ ಮತ್ತೆ ಕೆಲವರು ಅರಸರು, ಮಂತ್ರಿಗಳು, ದಂಡನಾಯಕರು, ಕೋಶಾಧಿಕಾರಿಗಳು, ಕರಣಿಕರು ಹೀಗೆ ಹಲವಾರು ಕೆಲಸಗಳಲ್ಲಿ ತೊಡಗಿಸಿಕೊಂಡು ಕಾಯಕ ಯೋಗಿಗಳಾದ್ದಾರೆ. ಉದಾಹರಣೆಗೆ, ಸಕಲೇಶ ಮಾದರಸ, ಮೋಳಿಗೆಯ ಮಾರಯ್ಯ, ಬಸವಣ್ಣ, ಚೆನ್ನಬಸವಣ್ಣ, ಸೊಡ್ಡಳ

ಬಾಚರಸ, ಹಡಪದ ಅಪ್ಪಣ್ಣ, ಸಿದ್ಧರಸ, ಮಧುವರಸ, ಇವರು ಧಾರ್ಮಿಕ, ರಾಜಕೀಯ, ಆರ್ಥಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಗಮನಾರ್ಹ ಕ್ರಾಂತಿಯನ್ನುಂಟು ಮಾಡಿದವರು. ಮುಖ್ಯವಾಗಿ ಲಿಂಗಾಯತ ಧರ್ಮದ ದೃಷ್ಟಾರ ಮತ್ತು ಸಂಸ್ಥಾಪಕರಾಗಿರುವ ಬಸವಣ್ಣನವರು, ಮಹಾಜ್ಞಾನಿ ಷಟ್‌ಸ್ಥಲ ಬ್ರಹ್ಮಿ ಚನ್ನಬಸವಣ್ಣ, ಜಂಗಮ, ದ್ವಿತೀಯ ಶಂಭು ಅಲ್ಲಮಪ್ರಭು ಇವರೇ ಮೊದಲಾದವರು ಕ್ರಾಂತಿಯ ನೇತಾರರು. ಅದಕ್ಕಿಂತಲೂ ಮಿಗಿಲಾಗಿ ಈ ಮುಖ್ಯವಾಹಿನಿಗೆ ಸಾಮೂಹಿಕ ಶಕ್ತಿ ನೀಡಿದವರು ಅಶಿಕ್ಷಿತರಾದರೂ ಆಧ್ಯಾತ್ಮಿಕ ಸಾಧಕರು ಆಗಿರುವ ವ್ಯಕ್ತಿಗಳು ಎಂಬುದು ನಿರ್ವಿವಾದ."[೧] ಮಾನವನು ನೆಮ್ಮದಿಯ ಬದುಕಿಗೆ ಅವನು ಅನುಸರಿಸಬೇಕಾದ ಮಾರ್ಗಗಳಾವುವು ಎಂಬುದನ್ನು ಕಂಡುಕೊಂಡ ಶಿವಶರಣರೆಲ್ಲರೂ ಉಚ್ಚವರ್ಣೀಯರೇ ಆಗಿರಲಿಲ್ಲ. ಅವರಲ್ಲಿ ಹಲವಾರು ಜನ ಅಶಿಕ್ಷಿತರು, ಕೆಳವರ್ಗದವರೂ ಆಗಿದ್ದರು.

ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೋಷಣೆಗೆ ಒಳಗಾದ ವಿವಿಧ ವರ್ಗದ ಭಕ್ತರನ್ನು ಜಾಗೃತಗೊಳಿಸಲು ಎಲ್ಲರೂ ಒಟ್ಟಾಗಿ ಧರ್ಮದ ಮೂಲಕ್ಕೆ ಕೈ ಹಾಕಿದರು. ತೀವ್ರವಾಗಿ ಶೋಷಣೆಗೆ ತುತ್ತಾದವರಿಗೆ, ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಯಾವ ಸ್ತರದಲ್ಲಿಯೂ ಇವರಿಗೆ ನೆಲೆಯಂಬುದಿರಲಿಲ್ಲ. ಹಾಗಾಗಿ ಮೇಲ್ಜಾತಿಯ ವಚನಕಾರರಲ್ಲಿ ಇರುವ ರೋಷಕ್ಕಿಂತ ಇವರಲ್ಲಿ ಆಕ್ರೋಶವಿದೆ. ದೇವರು-ಧರ್ಮಗಳ ಹೆಸರಿನಲ್ಲಿ ಸ್ಥಾಪಿತ ಪುರೋಹಿತಶಾಹಿಯನ್ನು ಧಿಕ್ಕರಿಸಿರುವರು. 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬುದನ್ನು ಸಾರುತ್ತ ಸ್ಥಾಪನೆಗೊಂಡು ಸ್ಥಾಯಿಯಾದ ದೇವರುಗಳನ್ನು, ಸ್ಥಾಪಿತ ವ್ಯವಸ್ಥೆಯನ್ನು ಉಚ್ಚಾಟಿಸಿದರು. ದೇವಾಲಯಗಳು ಸ್ಥಾವರ, ಇದಕ್ಕೆ ಅಳಿವುಂಟು, ಇದು ಜಂಗಮವಾಗಬೇಕು, ಗುಡಿ ಸಂಸ್ಕೃತಿ ನಾಶವಾಗಿ, ಜಂಗಮ ಸಂಸ್ಕೃತಿ ನಿರ್ಮಾಣವಾಗಬೇಕೆಂಬುದನ್ನು ಪ್ರತಿಪಾದಿಸಿದರು. "ಈ ಪ್ರಯತ್ನದಲ್ಲಿ ನಾಡಿನ ಮೂಲೆ ಮೂಲೆಯಿಂದ ಹಾಗೂ ಹೊರನಾಡಿನಿಂದ ಅಸಂಖ್ಯಾತ ಶಿವಶರಣರು ಬಂದು ಭಾಗಿಯಾಗಿದ್ದುದು ಇತಿಹಾಸ. ಹೀಗಾಗಿ ಕಲ್ಯಾಣದಲ್ಲಿ ನಡೆದ ಈ ಘಟನೆಗೆ ವಿಶ್ವವ್ಯಾಪಿ ಮಹತ್ವ ಪ್ರಾಪ್ತವಾಯಿತು. ಸಕಲೇಶ ಮಾದರಸ ಹೇಳುವಂತೆ 'ಆಸೆಯನ್ನು ಬಿಟ್ಟು ಕಿರಿಯರಿಲ್ಲ. ನಿರಾಶೆಯನ್ನು ಬಿಟ್ಟು ಹಿರಿಯರಿಲ್ಲ, ದಯವನ್ನು ಬಿಟ್ಟು ಧರ್ಮವಿಲ್ಲ, ವಿಚಾರವನ್ನು ಬಿಟ್ಟು ಸಹಾಯಗಳಿಲ್ಲ" ಎನ್ನುವ ಧೋರಣೆಯನ್ನಿಟ್ಟುಕೊಂಡು ಶಿವಶರಣ ಸಮೂಹಕ್ಕೆ ಮುಕ್ತ ಸಮಾಜದ ನಿರ್ಮಾಣ, ಜನಪರವಾದ ಸಾಹಿತ್ಯ ಸೃಷ್ಟಿ ಮುಖ್ಯ ಉದ್ದೇಶವಾಯಿತು. ಈ ಉದ್ದೇಶಕ್ಕಾಗಿ ಕೈ ಜೋಡಿಸಿದ ಶರಣರಲ್ಲಿ ವೀರಗೊಲ್ಲಾಳನೂ ಒಬ್ಬ."[೨]

ಹರಿಹರನ ಲಿಂಗಾರ್ಚನೆ ರಗಳೆ, ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣ, ಲಕ್ಕಣ ದಂಡೇಶನ "ಶಿವತತ್ವ ಚಿಂತಾಮಣಿ", ಶಾಂತಲಿಂಗದೇಶಿಕನ "ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ", ವಿರೂಪಾಕ್ಷ ಪಂಡಿತನ "ಚನ್ನಬಸವ ಪುರಾಣ" ಷಡಕ್ಷರದೇವ ವಿರಚಿತ ಬಸವರಾಜ ವಿಜಯಂ " "ಮುಪ್ಪಿನ ಷಡಕ್ಷರಿಯ ಸ್ವರವಚನ", ಭೀಮಕವಿಯ "ಬಸವಪುರಾಣ" ಹಾಗೂ ಇನ್ನೂ ಕೆಲವು ಹಸ್ತಪ್ರತಿಯಲ್ಲಿರುವ ರಚನೆಗಳಲ್ಲಿ ಗೊಲ್ಲಾಳನ ವಿಷಯಕ್ಕೆ ಸಂಬಂಧಪಟ್ಟ ಸಂಗತಿಗಳು ಉಲ್ಲೇಖಗೊಂಡಿವೆ. "ಗಾಜಿನ ಬೊಂಮಿ ತಂದಿಯ ಪುರಾಣ",

'ದೀಪದ ಕಲಿಯರ ಕಾವ್ಯ', ಇವುಗಳಲ್ಲಿ ಗೊಲ್ಲಾಳನ ಜೀವನ ಚರಿತ್ರೆ ಸ್ಥೂಲವಾಗಿ ನಿರೂಪಣೆಗೊಂಡಿದೆ. ಈ ಎಲ್ಲ ಕಾವ್ಯ ಪುರಾಣ ಹಸ್ತಪ್ರತಿಗಳಲ್ಲಿ, ಉಲ್ಲೇಖಗೊಂಡ ಈತನ ಜೀವನ ವಾಹಿನಿಯನ್ನು ಹೀಗೆ ಬಿಡಿ ಬಿಡಿಯಾಗಿ ಗಮನಿಸಬಹುದು.

**೧. ಶಿಷ್ಟ ಸಾಹಿತ್ಯ :**

**೧. ಹರಿಹರ ಕವಿಯ ಲಿಂಗಾರ್ಚನೆ ರಗಳೆ :**

"ಚೋಳ ಚಾಮರನ ಗೊಲ್ಲಾಳನುದ್ಭುಟಯ್ಯನಂ
ಕೋಳೂರ ಕೊಡಗೂಸು ಸಿದ್ಧರಾಮಯ್ಯನಂ" [೩]

ಕನ್ನಡ ನಾಡಿನಲ್ಲಿ ಆಗಿ ಹೋಗಿರತಕ್ಕಂಥ ಅಸಂಖ್ಯಾತ ಶರಣ-ಶರಣೆಯರನ್ನು ಹರಿಹರ ಹಾಡಿ ಹೊಗಳಿದ್ದಾನೆ. ಅದರಲ್ಲಿ ಗೋಲಗೇರಿ ಗೊಲ್ಲಾಳನನ್ನು ಸ್ಮರಿಸುವುದನ್ನು ಗಮನಿಸಬಹುದು.

**೨. ಪಾಲ್ಕುರಿಕೆ ಸೋಮನಾಥನ ಬಸವಪುರಾಣ - ಕಾಟಕೋಟನ ಕಥೆ :**

"ಕಾಟಕೋಟನೆನುವ ಗೊಲ್ಲನು ಒಬ್ಬ
ಆಡಿನ ಹಿಕ್ಕೆಯನೀಶ್ವರನೆನುತ
ಹಾಲೆಲ್ಲವನು ಹಿಕ್ಕೆಗೆರೆಯಲು ತಂದೆ
ಗೇಲಿ ಮಾಡುತ ಬಂದು ಕಾಲಿಂದಲೊದೆಯೆ
ಖ್ಯಾತಸದ್ಭಕ್ತಿಯಿಂದಲಿ ಕಾಟಕೋಟ
ನಾತಗೆ ಮುಳಿಯುತ ಕೈಗೊಡಲಿಯಲಿ
ಭೂತಲದಲಿ ಬಿದ್ದು ಅತ್ತಿತ್ತ ಹೊರಳೆ
ದುಷ್ಟನ ಹಿಂದು ಮುಂದೆನಿತಿಲ್ಲದಂತೆ
ತಲೆ ತೆಗೆದೆಸೆದನು ತಾ ಶಿವನಂದು
ಹುಲಿದಲೆ ತೆಗೆದೆಸೆದುದು ಹೋಲುತಿರಲು
ಈ ಕಡೆಯಿವನು ತಾನಿಂತು ಹಾಕುತ್ತ
ಲಿರಲತ್ತ ಕೈಲಾಸ ಹರ್ಮ್ಯಕವಾಟ
ಜಾಲಗಳೊಡನೆ ಜರ್ಜರಿತದಿ ಬೀಳೆ
ಕೀಲಲ್ಲವೇ ಕೊಡಲಿಯು ಕೈಲಾಸಕ್ಕೆ
ಕಡು ಚೋದ್ಯವೆಂದೆಲ್ಲ ಸಡಗರಗೊಳಲು
ಆಗ ಹಿಕ್ಕೆಯು ಲಿಂಗವಾಯ್ತುನಿರತಲಿ .....
........................................................"[೪]

### ೩. ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ :

"ಗೊಲ್ಲ ಕಾಟಕೂಟನೆನಿಪ್ಪೋರ್ವ ಭಕ್ತನತಿ ।
ಬಲ್ಲಿದನು ಪೂಜೆ ಆಡಿನ ಹಿಕ್ಕೆ ಲಿಂಗಮಂ ।
ಖುಲ್ಲನವರಯ್ಯಾ ಹಲದಿವಸದಿ ಕಾಣುತಂ ಕೋಪದಿಂ ಕಾಲಲೊದೆಯೆ ॥
ಮಲ್ಲಿಕಾರ್ಜುನನನೀ ಕರಿಸಿದವ ತಂದೆಯೇ ।
ಕೊಲ್ಲಬೇಕೆನುತಲಾತನ ವಧಿಸಲುಂ ಲೋಕ ।
ವಲ್ಲಭಂ ಬಂದು ನಿಜರೂಪದೋರಿದವನಮಂ ಚರಣಾಂಬುಜಕ್ಕೆ ಶರಣು ॥
ಹರನ ಕಾಣುತ ಕಾಟಕೋಟ ಮೈಯಿಕ್ಕಲಾ ।
ಪುರಹರ ಭಾಪುರೇ ಭಕ್ತಗುಣನಿಧಿಯೆನಲು ।
ಸುರರು ಪೂಮಳೆಗರೆದು ದುಂದುಭಿಗಳೊಸಗೆಯಂ ದಿವ್ಯಪುಷ್ಪಕದೊಳಿರಿಸಿ ॥
ಮೆರೆಸಿ ಶಿವಲೋಕದೊಳು ಪಿತಹಿತಲಿಬ್ಬರಿಗೆ ।
ಪರಮ ಸಾಯುಜ್ಯಮುಮಂ ಕೊಟ್ಟನಾ ಭಕ್ತರಿಗೆ ।
ಗುರುಕರುಣವುಳ್ಳರಿದನರಿದು ಪೇಳ್ವರು ವಿಮಲಚರಣಾಂಬುಜಕ್ಕೆ ಶರಣು ॥"[೫]

### ೪. ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ :

"ಕಾಳಮ್ಮನೆಂಬಾಕೆ ಕಗ್ಗಲ್ಲಿನಿಂ ಕರೆದ ।
ಹಾಲನೀಶಂಗುಣಿಸಿದಳ್ ಬಳಿಕ್ಕಿರದೆಯಾ ।
ಕೋಳೂರ ಕೊಡಗೂಸು ಹಾಲನೀಶಂಗೆರೆದಳೊಲವಿನಿಂ ಬಲುಹೀನನು ॥
ಗೂಳಿಯೆಂದರಿದಾತನೊಡಲ ನಿಬ್ಬಣಿ ಮಾಡಿ
ಸೀಳಿದಂ ರಾಮನಾಥಂ ಗೊಲ್ಲಳಂ ತಂದೆ,
ಕಾಲಿಂದೆ ಲಿಂಗಮಂ ನೂಂಕೆ ಸಿರವರಿದನೆಲೆ ರಾಮೇಶ ಕೇಳೆಂದನು ॥"[೬]

### ೫. ಭೈರವೇಶ್ವರ ಕಾವ್ಯ ಕಥಾಮಣಿಸೂತ್ರ ರತ್ನಾಕರ :

"ಕಾಟಕೂಟನೆಂಬ ಗೊಲ್ಲನ ಮಗ ಗೊಲ್ಲಾಳನು ಕುರಿಯ ಕಾವಲ್ಲಿ ಪರ್ವತದ ಪರಿಸೆಯವರಂ ಕಂಡು "ನೀವೆಲ್ಲಿಗೆ ಪೋಗಿ ಬಂದಿರಿ" ಎನಲು ಮಲ್ಲೇಶ ಲಿಂಗವ ನೋಡಿ ಬಂದೆವೆ"ನಲು "ಲಿಂಗವ ನನಗೆ ತೋರಿ" ಎನಲು ಗುಡಿಯ ಲಿಂಗದಂತೆ ಎನಲೊಬ್ಬನು ಹಾಸ್ಯದಿಂದ ಹೀಗೆಂದು ಕುರಿಯ ಹಿಕ್ಕೆಯಂ ತೋರಲು ಏನ ಮಾಡಲಿ ಎನಲು ಪೂಜೆಯ ಮಾಡುವಂದವಂ ಪೇಳಲು, ಕೇಳಿ ಕುರಿಯ ಕರೆದು ಹಾಲು ನೆರೆದು ಎಕ್ಕೆ-ಕಕ್ಕೆಯ ಹೂವನೇರಿಸಿ ಪೂಜಿಸುತ್ತಿರಲು, ತಂದೆ ಕಂಡು ಕಾಲಲೊದೆಯಲು ಶಿರವಂ ಕಡಿದು ಶಿವನ ಪ್ರಸನ್ನವಂ

ತಂದೆಗೆಯೂ ಮೋಕ್ಷವನಿತ್ತು "ವೀರಬೀರೇಶ್ವರ'ನೆಂಬ ತಮ್ಮಿಷ್ಟಲಿಂಗದಲ್ಲಿ ಗೊಲ್ಲಾಳಯ್ಯನು ನಿಜಮುಕ್ತರಾದರು."[೭]

## ೬. ಷಡಕ್ಷರಿದೇವ ವಿರಚಿತ ಬಸವರಾಜ ವಿಜಯಂ :

"ಧರಣೀಭಾಗದೆ ಕಾಟಕೋಟನೆನಿಪೋರ್ವಂ ಗೊಲ್ಲನೇಳ್ತಂದು ಸಾ
ದರವೊಂದಾಡಿನ ಪಿಳ್ಳೆಯಂ ಮಿಸುಪಲಿಂಗಂ ತಾನಿದಿಂತೆಂದು ಸೈ
ತರಿಸುತ್ತ ದೃಢಭಾವದಿಂ ಕರೆದು ಪಾಲಂ ಮೇಲೆ ಕುಂಭಗಳಿಂ
ಸುರಿವುತ್ತಂ ನಡೆನೋಡುತ್ತಂ ಕುಣಿವುತಂ ಕೂರ್ತೊಪ್ಪುತಿರ್ಪನ್ನೆಗಂ ॥ ಮ ॥
ಪಿತನಾಗಳ್ಬಂದು ಪಾಲಂ ಬರಿದೆ ಸುರಿದು ಪಾಳ್ಮಾಡುತಿರ್ದಪ್ಪನೀ ದು
ರ್ಮತಿ ಪುತ್ರಂ ಪಿಳ್ಳೆಗೆಂದಾರ್ದೊದೆದು ಜರಿಯೆ ತಲ್ಲಿಂಗಮಂ ಕಂಡು ಕೋಪಾ
ವೃಕಚಿತ್ತ ಬೇಗದಿಂ ಕೈಗೊಡಲಿಯನಧಟಿಂದೆತ್ತಿ ಪೊಯ್ದಿಕ್ಕಿದಂ ತ
ಲ್ಪಿತನಂ ಧೊಪ್ಪೆಂದು ಮುಂಡಂ ಕೆಡೆಯೆ ತಲೆ ಕರಂ ಬೀಳ್ದಿನಂ ಕಾಟಕೋಟಂ ॥ ಮ. ಸಂ. ॥

ಪಿತನಂ ಕೋಪಕೃತಾಪರಾಧಯುತನಂ ಕೊಂದಿಕ್ಕಲೆಂದಾ ಮಹಾ
ಮತಿ ಕೈಕೊಂಡು ಕುಠಾರಮಂ ಜಡಿಯ ಕೈಲಾಸಸ್ಫುರದ್ವಾರ ಕ
ಲ್ಪಿತ ಸಾರಾರ್ಗಳಮರ್ಗಳಂ ಶಿಥಿಲಮಾಯ್ತಾರ್ದೆತ್ತ ಪಿಂದಣ್ಣೆ ಪೋ
ಯ್ತುತುಳಾಟೋಪದೆ ಪೊಯ್ಯೆ ಕಳ್ಳನೆ ಕವಾಟಂ ಬಿರ್ತಿತೇರಿ ಚಿತ್ರವೋ ॥ ಮ. ವಿ. ॥
ಹರಭಕ್ತ ಕಾಟಕೋಟ
ಸ್ಫುರಿತ ಕರಸ್ಪರ್ಶಪೂತ ಪರಶಿ ಪ್ರಹತಂ
ಪರಿದೋಡೆ ಪಾಪತತಿ ನಿ
ರ್ಜರಪುರಮಂ ಪೊಕ್ಕು ಮಿಕ್ಕು ಸುಖದಿಂದಿರ್ದಂ ॥ ಕಂ ॥
ಕುರಿಯ ಪಿಳ್ಳೆಯನಿಂತು ಭಾವಿಸಿ ಲಿಂಗಮಂ ಮಿಗೆ ಮಾಡಿದಂ
ಮೆರೆಯೆ ತನ್ನನುಮಾಧವಂ ಕಲಿ ಕಾಟಕೋಟನಿಳಾಗ್ರದೊಳ್,"[೮]
.................................................:

ಗೊಲ್ಲಾಳನನ್ನು ಕುರಿತು ಮತ್ತೊಂದೆಡೆ ಷಡಕ್ಷರಿದೇವನು ಹೀಗೆ ನೆನೆದಿದ್ದಾನೆ.

ಅತಿಭಕ್ತ ಗೊಲ್ಲಾಳನು
ನ್ನತ ಕನ್ನಡ ಬೊಮ್ಮ ಜೊಮ್ಮರಾ ನಿಂಬಿ ಜಗ
ನ್ನುತ ಮೂರ್ಖನಾಥರವರ
ನ್ವಿತ ಶಿವನಿರ್ಲೇಪ ಭಕ್ತರೆಮ್ಮಯ ವಿಭುಗಳ್ ॥

೭. **ಮುಪ್ಪಿನ ಷಡಕ್ಷರಿಯ ಸ್ವರವಚನದಲ್ಲಿ :**

ಕುರಿಯ ಹಿಕ್ಕೆಯು ತಂದು । ಹರನೆಂದು ಭಾವಿಸುತ ।
ಕುರಿಯ ಹಾಲನು ಕರೆದು ತಂದೆರೆಯುತ ॥
ಇರುತಿರಲು ತಂದೆ ತಾ । ಪರಿತಂದು ಕೆಡಿಸಲು
ಶಿರವರಿದ ವಿಶ್ವಾಸವನು ನೋಡಿರೆ.

೮. **ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ : ಗೊಲ್ಲತಿಯ ಪವಾಡ**

"ಮತ್ತೆಯು ನಿರ್ಮಲಾಖಂಡಿತ ಕೀರ್ತಿ
ದಂಡನಾಥಾಗ್ರಗಣ್ಯಗಳು ಪುಣ್ಯವಂತ
ಸಜ್ಜನನುತನು ಬಸವನೊಂದು ದಿವಸ
ಬಿಜ್ಜಳನೋಲಗದಲ್ಲಿ ಪ್ರೀತಿಯಲ್ಲಿ
ಓಡದಿರೆನುತೊಂದು ಹರವಿಯನೆತ್ತು
ವಂದದಿ ಬಾಹುಯುಗ್ಮವ ಚಾಚಿದಾಗ
"ಮರಳಷ್ಟು ಬೂದಿಯ ನೊಸಲಲಿ ಪೂಸಿ
ದವನೀತ ಬೆಟ್ಟದಂತಹ ಮರುಳನಿದು
ಸ್ಪಷ್ಟ "ವೆನ್ನುತ ರಾಜ ಮೆಲ್ಲನೆ ನಗುತ
"ಅಕ್ಕಟಾ ಬಸವಯ್ಯಾ ಶಿವನ ಮರುಳನೆ
ಭ್ರಮಿಸಿದೆಯಾ ಭಕ್ತಿರಸ ತಲೆಗೇರಿ
ಕುಮತಿಯಾಗುತ ತುಂಬಿದದೋಲಗದಲ್ಲಿ
'ಓಹೋ'ಯೆನುತ 'ಓಡದಿರು ನೀನು" ಎನುತ
ಬಾಹುಯುಗ್ಮವ ಬಾಚಿ ಹಿಡಿದುದೇ"ನೆನಲು
"ಸ್ವಗುಣ ಸಂಕೀರ್ತಿಗೈವುದು ಸಲ್ಲ,
ಸಲ್ಲದೆಂದಿರೆ ಸಭೆ ನಗುವುದು" ಮೂಡಣದಿಕ್ಕಿನಲ್ಲಿ
ಕಪಿಲೇಶ್ವರನು ಎಂಬ ತಾಪಸಿಯೊಬ್ಬ
ನಿತ್ಯವಾಲಿಂಗಕ್ಕೆ ಖಂಡುಗವಾರು
ಹಾಲ ಮಜ್ಜನಗೈಯೆ ಕಾಲುವೆ ತೋಡಿ
ಬೀದಿ ಬೀದಿಗಳ ಮೇಲ್ವರಿಯಲಾನೆಗಳ
ಪಾದ ಘಟ್ಟನೆಯಿಂದಲಾದ ಕೆಸರಲಿ
ಆ ಬೀದಿಯಲಿ ಮಾರಲೆಂದು ಮಜ್ಜಿಗೆಯ

ಹೋಗುತ್ತ ಕಾಳವ್ವ ಕಷ್ಟಪಡುತ್ತ

ಕಗ್ಗೆಸರಲಿ ಜಾರೆ ಮಜ್ಜಿಗೆಗಡಿಗೆ

ಬೀಳಲು ಗೊಲ್ಲತಿ "ಬಸವ ಓ" ಯೆನಲು

ಹಿಡಿದೆ ನಾನಲ್ಲಿ ಬೀಳದ ರೀತಿ ಗಡಿಗೆ

ಯನು ಚಟ್ಟನೇ ಕೈಗಳನು ಚಾಚಿ" ಯೆನುತ

ಗೊಲ್ಲತಿಯಾ ರೂಪ ಗೊಲ್ಲತಿಯ ಮನೆ

ಗೊಲ್ಲತಿಯಿದ್ದ ಜಾಗವ ಹೇಳಿದಾಗ

ಕರೆಸಿ ಗೊಲ್ಲತಿಯನು ರಾಜ ತಾ ಕೇಳೆ

ತಪ್ಪದೇ ಬಸವಯ್ಯನೆಂದ ರೀತಿಯಲಿ

ಹೇಳಿ ತಾನೂರಿದ್ದ ಕೈಯಿನ ಕೆಸರ

ನಾನಲ್ಲಿ ಜಾರಲು ಅಂತಿದ್ದ ಕಾಲ

ಕೆಸರ ತೋರಿಸಿಯರಿಯರೆ ನೀವು ಇವನ

ಪೆಂಪಿಗಿದಾವುದು ಹಿರಿದೆಂದು."[೯]

## ೯. ಭೀಮಕವಿಯ ಬಸವ ಪುರಾಣ :

"ಇದೇ ವಿಚಾರವು ಬಂದಿದ್ದು, ಗೊಲ್ಲತಿಯ ಹೆಸರು - ಹೀಗಿದೆ:

ಹೊತ್ತು ಅಳೆಯಾ ಬೀದಿಯಲಿ ಮಾ

ರುತ್ತ 'ಕಾಟಕಿ'ನೆಂಬುವಳು ನಡೆ

ವುತ್ತ ಕೊಗ್ಗೆಸರಲ್ಲಿ ಕಾಲ್ಗಳು ಜಾರೆ ನಡುನಡುಗಿ

ಇತ್ತಲೀಕ್ಷಿಸಿ ಕೆಡುವ ಮಡಕೆಯ

ನೆತ್ತು ಬಸವಾ ಎನಲು ಹರವಿಯ

ನತ್ತ ಕಯ್ಯಂ ನೀಡಿ ಬೀಳದ ಮುನ್ನ ನೆಗಹಿದೆನು."[೧೦]

## ೧೦. ಬೈ.ಕಾ.ಕ. ಸೂತ್ರ ರತ್ನಾಕರ :

ಗೊಲ್ಲತಿ ಜಾರಿ ಬೀಳ್ವಲ್ಲಿ ಕೊಡನ ಪಿಡಿದು ಎಲ್ಲರಿರುವಂತೆ ಪಿಡಿದನೆಂಬುದಕ್ಕೆ ಕಥೆ :"ಕಾಟಕೂಟನೆಂಬ ಗೊಲ್ಲನ ಸತಿ ಗುಡುಜಿ ಕಾಳಬ್ಬೆಯೆಂಬುವಳು ಕಲ್ಯಾಣದಲ್ಲಿ ಮಜ್ಜಿಗೆಯ ಕೊಡನ ಹೊತ್ತು ಮಾರುತ್ತ ಬರುವಾಗ ಕಾಲು ಜಾರಿ ಬೀಳುತ್ತ ಬಸವ ಪಿಡಿಯೆನಲು, ಇತ ಬಿಜ್ಜಳನ ಸಭೆಯೊಳಗಿರ್ದ ಬಸವಣ್ಣನು ಹೋ ಹೋ ಅಂಜದಿರು ಪಿಡಿದೆನೆಂದು ಹಸ್ತವನೆತ್ತಲು ಭೂಪನೋಡಿ ಅಕಟಕಟಾ ಬಸವಯ್ಯ ಮರುಳು ಹಿಡಿಯಿತೆ ನಿನಗೆ?

ಅಂಜದಿರೆಂದು ಕೈನೀಡಿ ಪಿಡಿದು ಇದೇನೆನ್ನಲು ತನ್ನ ಮಹಿಮೆಯ ತಾ ಹೇಳಲಾಗದು, ಹೇಳದಿದ್ದರೆ ಸಭೆ ನಗುವುದೆಂದು ಪೇಳಿದನು. ಪೂರ್ವದಿಕ್ಕಿನೊಳು ಅರೆಗಾವುದದಲ್ಲಿ ಕಪಿಲೇಶ್ವರ ಲಿಂಗಕ್ಕೆ ಒಬ್ಬ ತಾಪಸನು ಸಾವಿರದ ನೂರು ಖಂಡುಗ ಕ್ಷೀರಾಭಿಷೇಕವ ಮಾಡಲು ಕಾಲುವೆಗಟ್ಟಿ ಪರಿಯಲು ಚತುರಂಗಬಲದ ದಟ್ಟಣೆಯಲ್ಲಿ ಕೆಸರಾಗಿರಲು ಅಲ್ಲೊಬ್ಬ ಗೊಲ್ಲತಿಯು ಮಜ್ಜಿಗೆಯ ಕೊಡನ ಹೊತ್ತು ಮಾರುತ್ತ ಬಂದು ಕಾಲು ಜಾರಿ ಬೀಳುವಲ್ಲಿ, ಇತ್ತ ನೋಡಿ ಬಸವಾ ಪಿಡಿಯೆನಲು ಪಿಡಿದೆನೆಂದು ಆಕೆಯಿದ್ದ ಠಾವಿನ ಮನೆಯ ಆಕೆ ಉಟ್ಟ ಉಡಿಗೆಯ ಪೇಳಲು, ಅರಸು ಕರೆಸಿ ಕೇಳುವಲ್ಲಿ ಬಸವಣ್ಣ ಪೇಳಿದಂತೆ ಆ ಸತಿ ಪೇಳುತ್ತ ಕಾಲ ಕೆಸರು ಕೈರೊಪ್ಪಿಯಂ ತೋರಿ ಮತ್ತೆಯು...."೧೦

## ಪ್ರೌಢರಾಯನ ಕಾವ್ಯ ಕಥಾಸಾರ :

"ಕಾಟಕೋಟನೆಂಬ ಕುರುಬನ ಮಗನಾದ ಗೊಲ್ಲಾಳನು ಹುಡುಗನಿದ್ದಾಗ ಕುರಿಹಿಕ್ಕೆಯಿಂದ ಲಿಂಗವನ್ನು ಮಾಡಿ ಹಾಲೆರೆದು ಪೂಜಿಸುತ್ತಿದ್ದನು. ಒಂದು ದಿನ ಕಾಟಕೋಟನು ಕಂಡು ಸಿಟ್ಟಿನಿಂದ ಹಿಕ್ಕಿಯನ್ನೊದೆಯಬಹುದೆ? ಎಂದು ಗೊಲ್ಲಾಳನು ತಂದೆಯ ಕಾಲನ್ನು ಕಡಿದೊಗೆಯಲು ಶಿವನು ಮೆಚ್ಚಿ ಹಾಲೆರೆದ ಫಲದಿಂದ ಗೊಲ್ಲಾಳನಿಗೆ ಕೈಲಾಸದಲ್ಲಿ ಗಣಪದವಿಯನಿತ್ತನು."೧೨

೧೧. ಗೊಲ್ಲಾಳನಿಗೆ ಸಂಬಂಧಿಸಿದಂತೆ, ಹಂಪೆಯ ಶ್ರೀ ಹರೀಶ್ವರ ಕವಿ ರಚಿಸಿದ "ಶ್ರೀ ಗೋಲಗೇರಿ ಗೊಲ್ಲಾಳೇಶ್ವರ ಪುರಾಣ ಪ್ರಕಟವಾಗಿದೆ. (೧೯೭೧ ಹಾಗೂ ೧೯೭೨) ಇಲ್ಲಿ ತಂದೆಯ ಹೆಸರು ಇರುವುದಿಲ್ಲ. ಆದರೆ ತಾಯಿ ದುಗ್ಗಳೆ ಎಂದು ಹೇಳಲಾಗಿದೆ. ಗೊಲ್ಲಾಳೇಶ್ವರನ ಕೌಟುಂಬಿಕ ಜೀವನ ಕುರಿತು ಯಾವುದೇ ಮಾಹಿತಿಯನ್ನು ನೀಡಿರುವುದಿಲ್ಲ. (ಪುರಾಣ ಕೃತಿಯನ್ನು ವಿಸ್ತೃತವಾಗಿ ಮುಂದಿನ ಅಧ್ಯಾಯದಲ್ಲಿ ವಿವರಿಸಿದೆ.

ಗೊಲ್ಲಾಳೇಶ್ವರ ಕುರಿತು ಹಸ್ತಪ್ರತಿಯಲ್ಲಿಯ ವಿಷಯಕ್ಕೆ ಸಂಬಂಧಪಟ್ಟ ಅಂಶಗಳನ್ನು ಗಮನಿಸಲಾಗಿದೆ.

೧.ಅ.) ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದವರು ೧೯೯೮-೯೯ರಲ್ಲಿ ಹಸ್ತಪ್ರತಿಗಳ ಸರ್ವೇಕ್ಷಣೆ ಹಾಗೂ ಸಂಗ್ರಹಕ್ಕಾಗಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ 'ಗೊಲ್ಲಾಳ'ನಿಗೆ ಸಂಬಂಧಿಸಿದಂತೆ ಒಂದು ತಾಳೆಪ್ರತಿ ಕಟ್ಟು ಸಿಕ್ಕಿರುವುದು. "ಅದು ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗದ್ದಿನಕೇರಿ ಗ್ರಾಮದ ಗೌಡ್ರ ಸಿದ್ದಲಿಂಗಪ್ಪ ಅವರ ಮನೆಯಲ್ಲಿತ್ತು. ಗರಿಗಳು ತುಂಬಾ ತೃಟಿತಗೊಂಡಿದ್ದರಿಂದಾಗಿ ಪಾಠಗಳು ಅಲ್ಲಲ್ಲಿ ಲುಪ್ತವಾಗಿವೆ. ಈ ಕಟ್ಟಿನಲ್ಲಿ 'ವೀರಗೊಲ್ಲಾಳ ಚಾರಿತ್ರ'ವಲ್ಲದೆ ಸಿಂಧು ಬಲ್ಲಾಳನ ಚಾರಿತ್ರ (ಇಷ್ಟಲಿಂಗ ಚಾರಿತ್ರ) ಹಾಗೂ ಕಲಿರಾಮಯ್ಯನವರ ಚಾರಿತ್ರ ಎಂಬ ಕೃತಿಗಳೂ ಸೇರ್ಪಡೆಯಾಗಿವೆ. ಮೂರು ಸಂಧಿಯಲ್ಲಿ ಮೂರು ಕೃತಿಗಳನ್ನು ರಚಿಸಿದ್ದು ಈ ಕಟ್ಟಿನ ವಿಶೇಷತೆಯಾಗಿದೆ. ಇವುಗಳ ಕರ್ತೃ ಯಾರೆಂಬುದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಅಲ್ಲಲ್ಲಿ ಕರಸ್ಥಲದಯ್ಯ ಶಾಂತೇಶ ಎಂಬ ಗುರುವನ್ನು ಸ್ತುತಿಸಲಾಗಿದೆ. ಬಹುಶಃ ಕರಸ್ಥಲ

ಪರಂಪರೆಗೆ ಸೇರಿದ ಕರಸ್ಥನಾಗಿದೇವ, ಕರಸ್ಥಲ ವೀರಣ್ಣೊಡೆಯ, ಕರಸ್ಥಲ ಮಲ್ಲಿಕಾರ್ಜುನೊಡೆಯರ ಶಿಷ್ಯನೊಬ್ಬನು ಇವುಗಳನ್ನು ರಚಿಸಿರಬಹುದೆಂದು ಊಹಿಸಿದ್ದಾರೆ."[೧೩]

ತಾಳೆಪ್ರತಿಯಲ್ಲಿ ಗೊಲ್ಲಾಳನ ಚರಿತ್ರೆಗೆ ಸಂಬಂಧಿಸಿದಂತೆ ಐವತ್ತರೊಂಬತ್ತು (೫೯) ಸಾಂಗತ್ಯ ಪದ್ಯವನ್ನೊಳಗೊಂಡ ಚಿಕ್ಕ ಕೃತಿ ಇದು. ಪ್ರಾರಂಭದಲ್ಲಿ "ಶ್ರೀ ಗುರುರಾಯನ ಕರ್ಣಕುಂಡಲ ಶ್ರೀ ಪರಂಜ್ಯೋತಿ ರಕ್ಷಿಪುದು" ಎಂದು ಕವಿ ಗುರುವನ್ನು ಪ್ರಾರ್ಥಿಸಿದ್ದಾನೆ. ಅನಂತರ ನೇರವಾಗಿ ವೀರಗೊಲ್ಲಾಳನ ಉತ್ತರಾರ್ಧ ಜೀವನ ಪ್ರಾರಂಭವಾಗುತ್ತದೆ. ಗೊಲ್ಲಾಳನು ಕುರಿಕಾಯುವವನು. ಹೀಗೊಂದು ದಿನ ಲಿಂಗದ ಆಕಾರದಲ್ಲಿರುವ ಕುರಿಯ ಹಿಕ್ಕೆಯನ್ನು ಕಂಡು ಹರುಷದಿಂದ 'ಎನ್ನ ಕರಣಾದಿ ಗುಣಗಳು ನಿನ್ನ ಚರಣದೊಳೊಂದಾಗಿ ನೆರೆ ನಂಬಿದೆನು' ಎಂದು ಆಶ್ರಮದ ಹತ್ತಿರ ಹೋಗಿ ಲಿಂಗವೆಂಬ ಭಾವತಳೆದು, ಮಳಲಿನಲ್ಲಿಟ್ಟು ಸುಂದರವಾದ ನಾಡಪುಷ್ಪಗಳನ್ನು ಹುಡುಕಿ ಲಿಂಗಕ್ಕರ್ಪಿಸಿ ಪೂಜಿಸುತ್ತಿದ್ದನು. ಮುಗ್ಧ ಭಕ್ತನಂತೆ ಲಿಂಗವು ಹಸಿಯಿತೆಂದು ಕುರಿಯ ಹಾಲನ್ನು ಕರೆದು ಕೊಡದಲ್ಲಿ ತುಂಬಿಕೊಂಡು ಹಾಲನ್ನು ಲಿಂಗದ ಮೇಲೆ ಸುರಿಯುತ್ತಿದ್ದನು.

'ಹಸಿದ ಲಿಂಗವೆ ಹಾಲ ಚನ್ನಾಗಿ ತಕ್ಕೊಳ್ಳಿ
ಹಸಿವು ತೃಷೆಯಡಗಿಸಿಕೊಳ್ಳೆ
ಶಿಶುವಿನ ಭಕ್ತಿಯ ಭಾವವ ನೋಡೆಂದು
ಬಸವೇಶ್ವರ ಬಲ್ಲನೆನುತಾ '॥

ಹೀಗೆ ನಿತ್ಯವೂ ಎಲ್ಲ ಹಾಲನ್ನು ಲಿಂಗಕ್ಕರ್ಪಿಸುತ್ತಾ, ಸಂತೋಷದಿಂದ ಕುಣಿದಾಡುತ ದಿಂಧಿಮಿ ದಿಮಿದಿಮಿಕೆಂದು ಪರಿಪರಿಯಲ್ಲಿ ಆಲಾಪವನ್ನು ಮಾಡುತ್ತ ಗೊಲ್ಲಾಳನು ಲಿಂಗದೊಳೋಲಾಡುತ್ತಿದ್ದನು. ತನು-ಮನವನು ಲಿಂಗದೊಳಗಿರಿಸಿ ಒಂದಾಗಿರ್ದನು.

ಗೊಲ್ಲಾಳನ ಈ ವರ್ತನೆಯನ್ನು ಕಂಡು ಬೆರಗಾದ ಆಳುಗಳು ಕುರಿಯ ಹಿಕ್ಕೆಯನ್ನೇ ಲಿಂಗವನ್ನಾಗಿ ಪರಿವರ್ತಿಸಿ ಮಳಲೊಳಗಿರಿಸಿ ಅದನ್ನು ಭಕ್ತಿಯಿಂದ ಪೂಜಿಸುವ ಪರಿಯನ್ನು ಗೊಲ್ಲಾಳನ ತಂದೆಗೆ ಹೇಳಿದರು. ಮಗನ ಭಾವವನ್ನರಿಯದ ತಂದೆ ಕೋಪಗೊಂಡು 'ಆ ದುರುಳನಿಗೆ ನೀವು ಬುದ್ಧಿ ಹೇಳಬಾರದೇ' ಎಂದು ಆಳುಗಳನ್ನು ಪ್ರಶ್ನಿಸಿದನು. 'ಭಾಳನೇತ್ರಗೆ ಹಾಲ ಕೊಡದಿರೆ ನಿಮ್ಮನು ಸೀಳಿ ಬಿಡುವೆನು' ಎಂದಿದ್ದರಿಂದ ನಾವೂ ಭಯಗೊಂಡು ಅಂಜುತ್ತಾ 'ಕೊಂದರೆ ಕೊಲ್ಲು ಕಾಯ್ದರೆ ಕಾಯು' ಎಂದು ಈ ತಪ್ಪನ್ನು ಮನ್ನಿಸಬೇಕೆಂದರು. ಇದನ್ನು ತಿಳಿದ ತಂದೆ ಇದು ಹುಚ್ಚಾಟವೆಂದು ಗೊಲ್ಲಾಳನಿದ್ದೆಡೆಗೆ ನೇರವಾಗಿ ಬರುವನು.

ಹಾಲನೆಲ್ಲವ ಹಾಳು ಮಾಡಿದೇಕೋ ಪೋರಾ
ಶಿಲೆಯ ಕಲಸಿದರಾರೋ

ಬಾಲಲೀಲೆಯ ಬುದ್ಧಿ ಸಲ್ಲದೆನುತ ಬಂದು
ಕಾಲಿಲೊದ್ದನು ಪೂಜೆಯನು ||

ಶಿವಲಿಂಗಕ್ಕೆ ಆದ ಈ ಅಗೌರವತೆ, ಅಪಮಾನವನ್ನು ಗೊಲ್ಲಾಳನಿಗೆ ಸಹಿಸಲಾಗಲಿಲ್ಲ. 'ಜಂಗುಳಿಯ ದೈವವ ಪೂಜಿಸೆಂಜಲತಿಂಬ ಅಂಗಹೀನಗೆ ಲಿಂಗವುಂಟೇ? ಎನ್ನುತ್ತಾ ನೀನು ತಂದೆಯಲ್ಲ, ನೀನೆನಗೆ ವೈರಿ ಎಂದು ತಂದೆಯ ಶಿರವನ್ನು ಕಡಿದನು. ಮಗನು ತನ್ನ ಗಂಡನ ಶಿರವ ಕಡಿದುದನ್ನು ನೋಡಿದ ತಾಯಿಯು ಮುಂಡೆಯಾದೆನು ಎನುತ ದುಃಖಿಸತೊಡಗಿದಳು. ಕಡಿದ ತಂದೆಯ ಶಿರವನ್ನು ಶಿವನ ಮುಂದಿಟ್ಟು ಗೊಲ್ಲಾಳನು 'ಪರೀಕ್ಷಿಸಿ ನೋಡೆನ್ನ ತಂದೆ ಎನುತ ಕರವ ಮುಗಿದು ಭಯ ಭಕ್ತಿಯಿಂದ ಎರಗಿದನು. ಆಗ ಪರಮೇಶ್ವರನು ತನ್ನ ನಿಜರೂಪವನ್ನು ತೋರಿಸಿ ಹೀಗೆಂದನು.

ಐದು ಮುಖವು ಈರೈದು ಭುಜವು ಹದಿ
ನೈದು ನಯನ ತೋರಿ ಮುಂದೆ
ಸ್ವಯವಾದ ಗೊಲ್ಲಾಳಗೊಲಿದು ಹಿಕ್ಕೆಯೊಳ್ದೂಡಿ
ದಯವಾಗಿ ಬೇಡು ಬೇಡೆಂದ ||

ಆಗ ಗೊಲ್ಲಾಳನು ಶಿವನ ಪಾದಗಳನ್ನು ಗಟ್ಟಿಯಾಗಿ ಹಿಡಿದು ನಮಸ್ಕರಿಸುತ್ತಾ ತಂದೆಯ ಪ್ರಾಣವನ್ನು ಮರಳಿ ನೀಡಿ ನನಗೆ ಮುಕ್ತಿಯನ್ನಿತ್ತು ಸಲಹು ಎಂದು ಪ್ರಾರ್ಥಿಸಿಕೊಂಡನು. ಭಕ್ತನ ಈ ಪ್ರಾರ್ಥನೆಯನ್ನು ಕರುಣಾಮಯಿ ಶಿವನು ಮನ್ನಿಸಿದ 'ಗೊಲ್ಲಾಳನಾಡಿದ ವಾಕ್ಯಕ್ಕೆ ಮಿಗೆ ಮೆಚ್ಚಿ ನಿಲ್ಲದೆ ಅವನ ಪ್ರಾಣವನ್ನು ಮೆಲ್ಲನೆ ಶಿರವ ಮುಂಡದೊಳಿಟ್ಟು ನೋಡಲು' ತಂದೆ (ಬಲ್ಲುಗ)ನು ಕಣ್ದೆರೆದು ಎದ್ದು ನಿಂತನು. ಪತಿಯ ಪ್ರಾಣ ಮರಳಿ ಬಂದದ್ದಕ್ಕಾಗಿ ಸಂತೋಷಗೊಂಡ ತಾಯಿ (ದುಗ್ಗಳದೇವಿ) ಶಿವನ ಪಾದಗಳಿಗೆ ನಮಸ್ಕರಿಸಿದಳು.

ನಿಮ್ಮಿಂದ ದೈವಗಳಿನ್ನುಂಟೆ ಎಲೆದೇವಾ
ನಿಮ್ಮಿಂದ ಕೆಟ್ಟವರಿಲ್ಲ
ನಿಮ್ಮನರಿಯದೆ ಅನ್ಯದೈವವ ಪೂಜಿಸಿ ಕೆಡದವರುಂಟೆ

ಎಂದರುಹಿದಳು. (ಇಲ್ಲಿ ಸತಿ-ಪತಿಯ ಭಕ್ತಿ ಒಂದಾಯ್ತು) ಆಗ್ಗೆ ಶಿವನು ಶರಣಗೊಲ್ಲಾಳನಿಗೆ ಹರ ನಿಜ ಮುಕ್ತಿಯು ವರವಾತೆ ಪಿತರ್ಗೊಲಿದಿತ್ತು ಕರಸಿ ಸತಿಸುತ ಪುತ್ರರಾದಿಯಾಗಿ ಮೂವರನ್ನೂ ಪುಷ್ಪಕದೊಳಗಿರಿಸಿಕೊಂಡು ಹರಪುರಕ್ಕೆ ಕೊಂಡೊಯ್ದು ಮಾನವ ಜನ್ಮಕ್ಕೆ ಮುಕ್ತಿಯನ್ನೀಡಿದನು.

ಲಿಂಗವ ಕಟ್ಟಿದಡೆ ಫಲವೇನೋ ಕೇಳಿರೊ
ಜಂಗದಿಂಗಿತವರಿದು
ಅಂಗ ಮನವು ಒಪ್ಪಿ ತೀರ್ಥ ಪ್ರಸಾದವ
ಹಿಂಗದಿರ್ದಡೆ ಮುಕ್ತಿಯುಂಟೆ ||

ಕಥಾಸಾರದ ಕೊನೆಯಲ್ಲಿ ಲಿಂಗದ ಮಹತ್ವವನ್ನು ವಿವರಿಸಿದ್ದಾನೆ ಹಾಗೂ ಜಂಗಮದ ಇಂಗಿತವನು ಅರಿದು ಮುಕ್ತಿಯನ್ನು ಪಡೆಯಿರಿ ಎಂದಿರುವನು.

ಇನ್ನು ಈ ಕೃತಿಯ ವಿಶೇಷತೆಯನ್ನು ವಿದ್ವಾಂಸರು ಸಂಕ್ಷಿಪ್ತವಾಗಿ ಹೀಗೆ ಹೇಳಿದ್ದಾರೆ. (ಡಾ. ಎಫ್.ಟಿ. ಹಳ್ಳಿಕೇರಿ, ಕನ್ನಡ ವಿ.ವಿ. ಹಂಪಿ)

೧. "ವೀರಗೊಲ್ಲಾಳನ ಜೀವನ ಸಂಗತಿಗಳನ್ನು ತಿಳಿಸುವ ಸ್ವತಂತ್ರ ಕೃತಿ ಇದಾಗಿದೆ."

೨. "ಕೃತಿ ಕಿರಿದಾದರೂ ಗೊಲ್ಲಾಳನ ಉತ್ತರಾರ್ಧ ಜೀವನದ ಘಟನೆಗಳನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ."

೩. "ಗೊಲ್ಲಾಳನು ಕುರಿ ಕಾಯುವ ಕಾಯಕ ವಿವರ, ಶ್ರೀಶೈಲಕ್ಕೆ ಹೋಗುವ ಭಕ್ತಾದಿಗಳನ್ನು ತಡೆದು ಲಿಂಗವನ್ನು ತೆಗೆದುಕೊಂಡು ಬನ್ನಿರಿ ಎಂದು ಪ್ರಾರ್ಥಿಸುವ ಪರಿ ಇತ್ಯಾದಿ ಪೂರ್ವಾರ್ಧದ ಸಂಗತಿಗಳು ಇಲ್ಲಿ ಬಂದಿಲ್ಲ."

೪. "ನೇರವಾಗಿ ಲಿಂಗಾದಾಕಾರದ ಹಿಕ್ಕೆಗಳನ್ನು ಪೂಜೆ ಮಾಡುವ ಘಟನೆಯಿಂದ ಕಥೆ ಪ್ರಾರಂಭವಾಗುತ್ತದೆ"

೫. "ಕಥೆಯ ಮಧ್ಯಭಾಗ (೧೮-೨೨ರ ವರೆಗಿನ ಪದ್ಯ)ದಲ್ಲಿ ಲಿಂಗದ ಮಹತ್ವವನ್ನು ತಿಳಿಸುತ್ತಾ ಕವಿಯು ಶಾಂತೇಶನೆಂಬ ಗುರುವನ್ನು ಸ್ತುತಿಸಿದ್ದಾನೆ."

೬. 'ಗೊಲ್ಲಾಳನ ತಂದೆ -ತಾಯಿಯ ಹೆಸರನ್ನು ಮಾತ್ರ ದಾಖಲಿಸಿಲ್ಲ. ಹಾಗೆಯೇ ಗುರು ನಂದಯ್ಯಸ್ವಾಮಿಯ ಉಲ್ಲೇಖವೂ ಇಲ್ಲಿಲ್ಲ."[೧೪]

ಗೊಲ್ಲಾಳನು ಸ್ವಯಂ ಅನುಭಾವಿಯಾಗಿ ಲಿಂಗವನು ಅರಿತನು ಎಂಬುದು ವಿಶೇಷ. ಉಪಾಸನೆ ಲಿಂಗಕ್ಕೆ ಮಾತ್ರ ಎಂಬುದು ಕಥಾಸಾರದ ವೈಶಿಷ್ಟ್ಯ ಎಂದು ಗುರುತಿಸಬಹುದು.

**೧. ಬ) "ಗಾಜಿನ ಬೊಂಮಿ ತಂದಿಯ ಪುರಾಣ :**

(ಮರಗುತ್ತಿ ಪ್ಯಾಟಿಮಠ ಗುರುಪಾದಯ್ಯನ ಕಂದ ಗುರುಸಿದ್ಧ ಪೇಳ್ದನಿದನ) ಕವಿ ಗುರುಸಿದ್ಧ :ಶಾಲಿವಾಹನ ಶಕೆ ೧೯೫೩ ಖರನಾಮ ಸಂವತ್ಸರ ಫಾಲ್ಗುಣ ಬಹುಳ ೨ (ಸುಮಾರು ೧೮೩೧) ಕಾಲ ಇದಾಗಿದೆ.

ಸಂಧಿ ೧೪, ಪದ್ಯ ೧೨೦ -ಮೋಳಿಗೈಯಂ ಕ್ಷತ್ರಿ ಭೋಗೇಶ ಬ್ರಾಹ್ಮಣಂ
ಕೇಳು ಭಿಲ್ಲಮ ವೈಶ್ಯ ಚೀಲಾಳ ವಾಣಿಜಂ ।
ಹೇಳಿಯೊಳು ಮುದ್ದಯ್ಯ ಶೂದ್ರ ಗೊಲ್ಲನು ಚಂಡಿದೇವ ಗೊಲ್ಲಾಳ ಕುರುಬ "[೧೫]

**ಗೊಲ್ಲಾಳನು ಯಾವ ಜನಾಂಗಕ್ಕೆ ಸೇರಿದವನು ಎಂಬುದಕ್ಕೆ ಸ್ಪಷ್ಟವಾದ ಆಕರ ಇದಾಗಿದೆ.** ಈತ ಕುರುಬ ಜನಾಂಗಕ್ಕೆ ಸೇರಿದವನಾಗಿದ್ದಾನೆ ಎಂಬುದು ನಿಶ್ಚಿತ.

## ೧. ಕ)ದೀಪದ ಕಲಿಯರ ಕಾವ್ಯ :

"(ತಾಡೋಲೆ ಪ್ರತಿ ) ಕವಿ : ಚೆನ್ನಮಲ್ಲೇಶ, ಚೆನ್ನಮಲ್ಲ ಎಂದು ಎರಡೂ ಪ್ರಯೋಗವಾಗಿದೆ. ಪ್ರತಿ ಮಾಡಿದ ಕಾಲ ಶಾಲಿವಾಹನ ಶಕೆ ೧೭೫೯ನೆಯ ಹೇವಳಂಬಿನಾಮ ಸಂವತ್ಸರ (ಸಂಧಿ -೯, ಪದ್ಯ ೩೧ರಿಂದ ೮೮)"

ಈ ಕಾವ್ಯದಲ್ಲಿ ಶ್ರೀಶೈಲಕ್ಕೆ ಹೊರಟಿದ್ದ ಪರಿಶೆಯೊಂದು ಹೋಗುತ್ತಿರಲು, ದಾರಿಯ ಮಧ್ಯದಲ್ಲಿ ಉದ್ದನೆಯ ಕೋಲನ್ನು ಹಿಡಿದುಕೊಂಡು ಕುರಿಗಳನ್ನು ಕಾಯುತ್ತಿದ್ದ (ಮೇಯಿಸುತ್ತಿದ್ದ) ಆವಾಗ ಪರಿಶೆಯು ಬರಲು ಕಾವಡಿಯನ್ನು ಹೊತ್ತವನನ್ನು ಇದೇನೆಂದು ಕೇಳಿದೆನು. ಕಾವಡಿ ಹೊತ್ತವನು ಶ್ರೀಶೈಲ ಮುದಿಮಲ್ಲೇಶ್ವರಗೆ ಹೋಗುತ್ತಿದ್ದೇವೆ ಎಂದು ಹೇಳಿದನು. ಗೊಲ್ಲಾಳನು ಶಿವಲಿಂಗ ತರುವಂತೆ ವಿನಂತಿ ಮಾಡಿಕೊಂಡ. ಅದಕ್ಕೆ ಕಾವಡಿ (ಕಂಬಿ) ಹೊತ್ತವನು ಹೀಗೆಂದನು.

ಪರುಷ ಪೋಗುತಲೈತೆ ಕುರುಬ ಹೆಡ್ಡನೆ ಕೇಳು ।
ಬರಿಗಾಲಲಿ ನಡಿಲಾರೆ ಬ್ಯಾಗ
ಚರಣ ರಕ್ಷೆಯ ಕೊಡು
ತರುವೆನು ಶ್ರೀಶೈಲ
ಗಿರಿಲಿಂದೆ ನಿನಗೆ ಲಿಂಗವನು

ಈ ಪದ್ಯದ ಉಲ್ಲೇಖದನ್ವಯ ಗೊಲ್ಲಾಳನು 'ಕುರುಬನು' ಎಂಬುದು ಸ್ಪಷ್ಟ, ಗೊಲ್ಲಾಳನು ಕಾಲ ಚಪ್ಪಲಿಯನ್ನು ನೀಡಿ, ಹೊನ್ನಿನ ಚರಿಗೆಯನ್ನೂ ನೀಡಿದ. ಶ್ರೀಶೈಲ ಗಿರಿಯಿಂದ ಲಿಂಗವನ್ನು ತರಲು ಹೇಳಿದ. ಇದು ಗೊಲ್ಲಾಳನ ಜೀವನದ ಪೂರ್ವಾರ್ಧ.

ನಂದಯ್ಯನು, ಶ್ರೀಗಿರಿ ಮಲ್ಲಯ್ಯನ ದರ್ಶನ ಮಾಡಿಕೊಂಡು ಮರಳಿ ಬರುವಾಗ ಶಿವಲಿಂಗ ತರುವುದನ್ನು ಮರೆತಿರುತ್ತಾನೆ. ಆದರೆ ದಾರಿಯಲ್ಲಿ ಗೊಲ್ಲಾಳನು ಮುದಿಅಯ್ಯನನ್ನು ಕಾಯುತ್ತಿರುತ್ತಾನೆ. ಇದನ್ನು ಕಂಡ ಈತನಿಗೆ ತನ್ನ ತಪ್ಪಿನ ಅರಿವಾಯಿತು. ಕೂಡಲೇ ಅಲ್ಲಿಯೇ ಬಿದ್ದಿದ್ದ ಕುರಿ ಹಿಕ್ಕೆಯನ್ನು ಗೊಲ್ಲಾಳನಿಗೆ ಕೊಟ್ಟು ಅದರಲ್ಲಿಯೇ ಶಿವನನ್ನು ಕಾಣಲು ಹೇಳುತ್ತಾನೆ.

ಯೆದೆವಡದ್ಯೆರಡಾಗಿ ಬಲಿದಿರ್ದ ಕುರಿಹಿಕ್ಕಿ ।
ಹದುಳದಿ ಪಿಡಿದು ಹಸ್ತದಲಿ ।
ವದಗಿ ಗೊಲ್ಲನು ಪಾದಪದುಮಕ್ಕೆಯೆರಗಲು
ಮದನಾರಿಯನಗೆ ತಾರೆಂದಾ

ಗೊಲ್ಲಾಳನು ಆತನ ಮಾತಿನಂತೆ ಕುರಿಯ ಹಿಕ್ಕೆಯನ್ನೇ ಲಿಂಗವೆಂದು ಪೂಜಿಸುತ್ತ ಪ್ರತಿನಿತ್ಯ ಲಿಂಗಕ್ಕೆ ಹಾಲಿನಿಂದ ಅಭಿಷೇಕ ಮಾಡುವನು. ಲಿಂಗವು ಹಸಿದಿದೆಯೆಂದು ಕೊಡಗಟ್ಟಲೆ ಹಾಲನು ನೀಡಿ (ಸುರಿದು)

ಉಪಚರಿಸಿದನು. ಈ ಮುಗ್ಧ ಆಟವನ್ನು ಕಂಡ ತಂದೆ ಮಗನಿಗೆ ಬಯ್ದು ಕುರಿ ಹಿಕ್ಕೆಗಳ ಲಿಂಗವನ್ನು ಕಾಲಿನಿಂದ ಒದೆದು ಹಾಳು ಮಾಡಿದನು. ಶಿವಲಿಂಗದಲ್ಲಿ ಅಪಾರ ಭಕ್ತಿಯನ್ನು ಹೊಂದಿದ್ದ ಗೊಲ್ಲಾಳನು ತಂದೆಯ ಈ ಕೃತ್ಯವನ್ನು ಸಹಿಸದಾದ.ಕೊನೆಗೆ ತಂದೆಯ ಶಿರವನ್ನೇ ಕತ್ತರಿಸಿ ಶಿವನಿಗೆ ಅರ್ಪಿಸುತ್ತಾನೆ.

ಕುರಿಯ ಹಿಕ್ಕೆಗೆ ಪಾಲುಯರದಾದು ಕಾಸುತ ।
ಕೆರವುಗಾಲಲಿ ಬಂದು ತುಳಿದಾ ।
ಬಿರಿಗೋಪ ಮಸಗಿ ಶಂಕರನೊದ್ದ ಪಿತನಿಗೆ ।
ಹರಿದೊಯಿದು ಹಾಕಿದ ತಲೆಯಾ

ಅವನ ಲಿಂಗಪೂಜೆಗೆ ಮೆಚ್ಚಿದ ಶಿವನು ತನ್ನ ನಿಜಸ್ವರೂವನ್ನು ತೋರಿದನು. ಆಗ ಗೊಲ್ಲಾಳನು "ಧರಣಿಯೊಳಗೆ ಬಿದ್ದು ಹೊರಳಲಾರೆನು" ಎಂದೆನುತ ನಾನು ನಿಮ್ಮ ಕೂಡೆ ಬರುವೆನೆಂದೆನುವನು. ಶಿವನು ನಿನಗೆ ಏನು ಬೇಕೆಂದು ಕೇಳಲು ಮುಕ್ತಿಯನು ಬಯಸುವನು. ಶಿವನು ತಂದೆ, ಮಗ. ತಾಯಿ ಮೂವರನ್ನೂ ಕೈಲಾಸಕ್ಕೆ ಕರೆದೊಯ್ದು ಶಿವ ಪದವಿಯನ್ನು ನೀಡುವನು.

ವ್ಯಾಳಕಂಕಣಕರಪಾಲ ಖಡ್ಗಂಕುಶ
ಗೋಲಗೇರಿಗೆ ಶಿವಬಂದಾ ।
ಪಾಲಿಸು ಪುಷ್ಪಕದೊಳೋಲೈಸಿ ಕೊಂಡೊಯಿದ
ಬಾಲೆ ಕೇಳಲೆ ಶಿವ ಕಥೆಯಾ

ಹೀಗೆ ಗೊಲ್ಲಾಳನು **'ಗೋಲಗೇರಿ'**ಯಲ್ಲಿ ವಾಸವಾಗಿದ್ದ. ಅಲ್ಲಿಂದ ಮುಕ್ತಿಯನ್ನು ಹೊಂದಿ ಶಿವಪದವಿಯನ್ನು ಪಡೆದ ಕತೆ ಇದಾಗಿದೆ. ಗೊಲ್ಲಾಳನ ಹೆಸರಿನ ದೇವಾಲಯವು ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಗೋಲಗೇರಿ ಗ್ರಾಮದಲ್ಲಿದೆ. ಇಂದಿಗೂ ಈ ದೇವಾಲಯಕ್ಕೆ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಿಂದ ಭಕ್ತರು ನಡೆದುಕೊಳ್ಳುತ್ತಾರೆ. ಈ ಕಾರಣಕ್ಕಾಗಿ ಗೋಲಗೇರಿಯು ತನ್ನ ಸಾಂಸ್ಕೃತಿಕ ಮಹತ್ವವನ್ನು ಉಳಿಸಿಕೊಂಡು ಬಂದಿದೆ. ಗೋಲಗೇರಿ ಗ್ರಾಮದಲ್ಲಿ ಶಾಸನಗಳಿಂದ ದೊರೆತ ಮಾಹಿತಿಯನ್ನು ಡಾ. ಶಕುಂತಲಾ ದುರಗಿಯವರು ನೀಡಿದ್ದಾರೆ.

"ಶಾಸನ -I ೧೦೨೭ ಬಸವಕಾಲಕ್ಕಿಂತ ಮೊದಲು ಬರೆದದ್ದು ಜಗದೇಕಮಲ್ಲ IIನೇ ಜಯಸಿಂಹ-II ಇವನ ಕಾಲದಲ್ಲಿ ಹುಟ್ಟಿದ್ದು. ಇದರಲ್ಲಿ ಗೋಲಗೇರಿಯ ಬಾಚಗಾವುಂಡನ ದೇಗುಲಕ್ಕೆ **'ರೆಬ್ಬರಸ'** ಹೆಸರಿನ ವ್ಯಕ್ತಿ ಭೂದಾನಕೊಟ್ಟ ವಿಷಯವಿದೆ. ಈ ಶಾಸನದಲ್ಲಿ ಊರಿನ ಹೆಸರು ಗೊಲ್ಲಗೇರಿ ಎಂದಿದೆ. ಈ ಶಾಸನಗಲ್ಲು ಚಾವುಡಿ ಮುಂದೆ ಬಿದ್ದಿದೆ. ಇದರಲ್ಲಿ ೧೮ ಸಾಲುಗಳಿವೆ. S.I.I. XX,ಶಾಸನ ನಂ. ೭೭ ಪ್ರಕಟವಾಗಿದೆ.

ಶಾಸನ -II. ೧೭ನೆಯ ಶತಮಾನದ್ದು. ಅಪ್ರಕಟಿತವಿದೆ. ಶಾಸನ ತುಂಬಾ ಪ್ರಟಿತವಿದೆ. ಮುಸಲ್ಮಾನರ ಆಳ್ವಿಕೆಯಲ್ಲಿ ಹುಟ್ಟಿರಬಹುದು. ವಿಷಯ ಸ್ಪಷ್ಟವಾಗುವುದಿಲ್ಲ. "ಅಲಿ ಅಲಿ" ಎಂದು ಒಂದೆರಡು ಕಡೆಗೆ ಬರುತ್ತದೆ. 'ಕೊಂಡಗುಳಿ' ಎಂದು ಒಂದೆಡೆಗೆ ಬರುತ್ತದೆ. ಇದರಲ್ಲಿ ಮತ್ತೇನೂ ವಿವರಗಳು ಗೊತ್ತಾಗುವುದಿಲ್ಲ."[೧೭]

ಮೇಲಿನ ಎರಡೂ ಶಾಸನಗಳಲ್ಲಿ ಗೊಲ್ಲಾಳನ ಕುರಿತು ಯಾವುದೇ ಪ್ರಸ್ತಾಪ ಇರುವುದಿಲ್ಲ. ಗೋಲಗೇರಿ ಊರ ಹೆಸರಿನ ಕುರಿತು ಮಾಹಿತಿ ಶಾಸನ -Iರಲ್ಲಿ ಇರುವುದು. ಜಯಸಿಂಹನ ಕಾಲದಲ್ಲಿ ಬಾಚಗಾವುಂಡನ ದೇಗುಲಕ್ಕೆ 'ರೆಬ್ಬರಸ ೧೦೨೭ರಲ್ಲಿ ಹೊಲವನ್ನು ದಾನಕೊಟ್ಟ ಎಂದಿದೆ. ಈ ಗ್ರಾಮದಲ್ಲಿ ಬಾಚಗಾವುಂಡನ ಹೆಸರಿನ ದೇವಸ್ಥಾನ ಇರುವುದಿಲ್ಲ. ಆದರೆ ಗೊಲ್ಲಾಳೇಶ್ವರ ದೇವಾಲಯಕ್ಕೆ ಅಪಾರವಾದ ಹೊಲಗಳು ಇದ್ದವು. ಈಗಲೂ ಈ ದೇವಾಲಯದ ಒಡೆತನ ಹೊಂದಿರುವವರು ಎಣ್ಣೆ ಹೊಲ, ಹೂವಿನ ಹೊಲ, ಪತ್ರಿ ಹೊಲ, ಕಂಬಿ ಹೊಲ ಎಂಬ ಇತ್ಯಾದಿ ಹೆಸರಿನ ಹೊಲಗಳನ್ನು ಹೊಂದಿರುವರು. ಜನಪದರು ಹೇಳುವಂತೆ ಇಲ್ಲಿ ಗೋಲಗೇರಿ ಎಂಬ ಗ್ರಾಮವಿರಲಿಲ್ಲ, ಇದೊಂದು ಕುರಿಹಟ್ಟಿಯಾಗಿತ್ತು ಎಂದು ಹೇಳುವರು. ಗೊಲ್ಲಾಳನು ಹಾಕಿದ ಕುರಿಹಟ್ಟಿಯೇ ಗೋಲಗೇರಿ ಎಂಬ ಹೆಸರನ್ನು ಪಡೆಯಿತೆನ್ನುವರು. ಈತ ಕುರಿಹಿಕ್ಕೆಯಲ್ಲಿ ಲಿಂಗೇಶನನ್ನು ಕಂಡವನು. ಅಂದರೆ ಶಾಸನದಲ್ಲಿ ಗೋಲಗೇರಿ ಎಂಬ ಗ್ರಾಮ ಹೆಸರಿನ ಉಲ್ಲೇಖವಾಗಿದೆ. ಇದನ್ನು ತಾಳೆ ಮಾಡಲಾಗಿ 'ಗೊಲ್ಲಾಳನು' ಬಸವಪೂರ್ವ ಯುಗದವನು ಎನ್ನಬಹುದು ಹಾಗೂ 'ರೆಬ್ಬರಸ' ಎಂಬುವವನು ಶೈವಧರ್ಮೀಯ ಎಂಬುದನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. (ಈತನ ಕುರಿತು ಶಾನಸಗಳಲ್ಲಿ ಉಲ್ಲೇಖವಿದೆ.) ಇದರಿಂದ ಗೋಲಗೇರಿಯಲ್ಲಿ ೧೦೨೭ರಲ್ಲಿಯೇ ಶೈವಧರ್ಮ ಇತ್ತೆಂದು ತಿಳಿದು ಬರುವುದು,

ಗೊಲ್ಲಾಳನು ಬಸವಪೂರ್ವದವನು ಎಂಬುದಕ್ಕೆ ಡಾ. ಎಲ್ ಬಸವರಾಜ ಅವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ.

೧. "ಹರಿಹರನು ತನ್ನ ಲಿಂಗಾರ್ಚನ ರಗಳೆಯಲ್ಲಿ ಈತನನ್ನು ಸ್ಮರಿಸಿದ್ದಾನೆ. ಪಾಲ್ಕುರಿಕೆಯ ಸೋಮನಾಥನಾದರೋ ತನ್ನ ಬಸವ ಪುರಾಣದಲ್ಲಿ (ಬಂಡಾರು ತಮ್ಮಯ್ಯನವರ ತೆ. ಬಸವಪುರಾಣ ಪುಟ ೯೬-೧೦೦) ಈತನ ಕತೆಯನ್ನು ಬಸವಪೂರ್ವಿಕನೆಂಬಂಥ ಸನ್ನಿವೇಶದಲ್ಲಿ ಚಿತ್ರಿಸಿದ್ದಾನೆ.

ಬಸವಣ್ಣನವರು ಬದನೇಕಾಯಿಗಳು ಲಿಂಗಗಳಾದ ಪವಾಡ ಮೆರೆದರೆಂಬಾಗ ಪೂರ್ವ ಕಥೆಯಾಗಿ ಈ ಕಾಟಕೋಟ ವೀರಗೊಲ್ಲಾಳನ ಕಥೆಯು ಬಸವಪುರಾಣದಲ್ಲಿ ಬಂದಿರುವದು."[೧೮]

೨. ಕೊರಡು ಕೊನರುವಲ್ಲಿ
ಬರಡು ಕರೆವಲ್ಲಿ
ಕಲ್ಲಿನ ಶಿಲೆಯೊಡೆದು ರೂಪುದೋಱುವಲ್ಲಿ
ಬಳ್ಳವಲ್ಲಾಡದೆ ಲಿಂಗವಾಹಲ್ಲಿ

ಇಂತವರಲ್ಲಿಯ ಗುಣವೋ
ಇಂತಿವೆಲ್ಲವನಱಿವ ಕಲ್ಲೆದೆಯವನ ಗುಣವೋ ?
ಇಂತಿವ ಬಲ್ಲಡೆ
ವಿಶ್ವಾಸದಲ್ಲಿಯೆ
ವೀರ ಬೀರೇಶ್ವರ ಲಿಂಗವು ತಾನಾಗಿಪ್ಪ !

"ಈ ವಚನದಲ್ಲಿ ಕೋಳೂರು ಕೊಡಗೂಸಿನ ಮತ್ತು ಬಳ್ಳೇಶ ಮಲ್ಲಯ್ಯನ ಬಗೆಗೆ ವೀರಗೊಲ್ಲಾಳನ ಸಂದರ್ಭದಲ್ಲಿ ಪ್ರಸ್ತಾಪ ಮಾಡಿರುವುದು ಈತನು ಅವರೆಲ್ಲರಿಗೂ ಪ್ರಾಚೀನನೆಂಬುದು ಸ್ವಯಂ ಘೋಷಿತವಾಗುತ್ತಿದೆ. ಆದರೆ ಕೊರಡನ್ನು ಕೊನರಿಸಿದ ಬರಡನ್ನು ಹಯನು ಮಾಡಿದ ಶರಣರು ಯಾರೋ ತಿಳಿಯದು. ಈ ಪವಾಡಗಳನ್ನು ಬಸವಣ್ಣನವರೂ ಹಿಂದಿನ ಶರಣರು ಮೆರೆದರೆಂಬಂತೆ ಪ್ರಸ್ತಾಪಿಸಿರುವುದುಂಟು. (ನೋಡಿ ಬ.ಷ.ವ-೬೬)"[೧೯]

ಗೊಲ್ಲಾಳ ಒಬ್ಬ ಶ್ರೇಷ್ಠ ಚಾರಿತ್ರಿಕ ವ್ಯಕ್ತಿಯಾಗಿದ್ದರೂ ವ್ಯವಸ್ಥಿತವಾದ ಅಧ್ಯಯನಗಳು ನಡೆಯದ ಸಂದರ್ಭದಲ್ಲಿ "ಇತಿಹಾಸದ ಪುಟಗಳಿಂದ ಮುಚ್ಚಿ ಹೋದ ಐತಿಹಾಸಿಕ ವ್ಯಕ್ತಿ ಗೊಲ್ಲಾಳನ ಚರಿತ್ರೆ ಇಂದು ಅಸ್ಪಷ್ಟವಾಗಿ ಅವನೊಬ್ಬ ಪೌರಾಣಿಕ ವ್ಯಕ್ತಿಯಾಗಿ ಮಾತ್ರ ಜನಸಾಮಾನ್ಯರಲ್ಲಿ ನೆಲೆ ನಿಂತಿದ್ದಾನೆ."[೨೦] ಆತನ ನಿಜವಾದ ಚರಿತೆಯನ್ನು ಕಟ್ಟಿಕೊಡಲು ಮುಖ್ಯವಾದ ಆಕರ ಸಾಮಗ್ರಿಗಳು ಕನ್ನಡ ಕಾವ್ಯಗಳಲ್ಲಿ ದೊರೆಯುತ್ತವೆ. ಅವುಗಳನ್ನು ಇಡಿಯಾಗಿ ಈ ರೀತಿ ಹೆಸರಿಸಬಹುದು.

"ಪಾಲ್ಕುರಿಕೆ ಸೋಮನಾಥನ ಗಣಸಹಸ್ರ, ಹರಿಹರನ ಲಿಂಗಾರ್ಚನೆ ರಗಳೆ, ರಾಘವಾಂಕನ ಸಿದ್ಧರಾಮ ಚಾರಿತ್ರ, ಭೀಮಕವಿಯ ಬಸವಪುರಾಣ, ಹರೀಶ್ವರನ ಗೊಲ್ಲಾಳಯ್ಯನ ಪುರಾಣ, ಶ್ರೀ ವಿರೂಪಾಕ್ಷ ಪಂಡಿತನ ಚನ್ನಬಸವನ ಪುರಾಣ, ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಪುರಾಣ, ಲಕ್ಕಣ ದಂಡೇಶನ ಶಿವತತ್ವಚಿಂತಾಮಣಿ, ಸಿದ್ಧನಂಜೇಶನ ಶ್ರೀ ಗುರುರಾಜಚಾರಿತ್ರ, ಷಡಕ್ಷರಿಯ ಬಸವರಾಜ ವಿಜಯ, ಶಾಂತಲಿಂಗದೇಶಿಕನ ಭೈರವೇಶ್ವರ ಕಥಾಮಣಿಸೂತ್ರ ರತ್ನಾಕರ ಭಾಗ-೧ ಮತ್ತು ಭಾಗ -೨, ನೀಲಕಂಠಾಚಾರ್ಯರ ಆರಾಧ್ಯ ಚರಿತ್ರೆ, ನಂಜುಂಡ ಕವಿಯ ಭೈರವೇಶ್ವರ ಕಾವ್ಯ, ಕಿತ್ತನಕೆರೆ ವೀರನ ಎಲ್ಲಾ ಪುರಾತನರ ಪುರಾಣ, ಅದೃಷ್ಟ ಕವಿಯ ಪ್ರೌಢರಾಯ ಕಾವ್ಯ, ಚನ್ನಣ್ಣನ ದೀಪದಕಲಿಯಾರ ಕಾವ್ಯ, ಚನ್ನಪ್ಪ ಕೃತ ಶರಣಲೀಲಾಮೃತ, ಫ.ಗು. ಹಳಕಟ್ಟಿಯವರ ಶಿವ ಶರಣ ಚರಿತ್ರೆಗಳು, ೨೦೦ ಅಮರಗಣಾಧೀಶ್ವರರ ಚರಿತ್ರೆಗಳು, ಗದ್ದಿಗಿಮಠರು ಸಂಪಾದಿಸಿದ ಕಂಬಿ ಹಾಡುಗಳು ಹಾಗೂ ನಾಲ್ಕು ನಾಡಪದಗಳು, ಫ.ಗು. ಹಳಕಟ್ಟಿಯವರು ಸಂಪಾದಿಸಿದ ಬಸವೇಶ್ವರ ಷಟ್‌ಸ್ಥಲ ವಚನಕಥಾಸಾರ, ತ.ಸು. ಶಾಮರಾಯರ ಶಿವಶರಣ ಕಥಾರತ್ನಕೋಶ, 'ಜಯದೇವಿ ತಾಯಿ ಲಿಗಾಡೆಯವರ' ಸಿದ್ಧರಾಮೇಶ್ವರ ಪುರಾಣ, ಡಾ. ಎಂ.ಎಸ್. ಸುಂಕಾಪುರ (ಸಂ) ಸಕಲ ಪುರಾತನರ

ಬೆಡಗಿನ ವಚನಗಳು, ಶಿವಾನಂದ ಗುಬ್ಬಣ್ಣವರ ಅವರ (ಸಂ) ದೇವರ ಬಂದಾವ್ ಬನ್ನಿರೇ, ಬಸನಗೌಡ ಪಾಟೀಲರ 'ತೂಕಮಾಡಿ ಹೇಳತೀನಿ ನ್ಯಾಯ,' ಡಾ. ಎಲ್. ಬಸವರಾಜು ಅವರ 'ಶಿವದಾಸ ಗೀತಾಂಜಲಿ' ಹಾಗೂ 'ಬಸವಪೂರ್ವ ವಚನಕಾರರು', 'ಕನ್ನಡ ವಿಷಯ ವಿಶ್ವಕೋಶ', 'ಕಂಬಾಳ ಶಾಂತಮಲ್ಲೇಶನ ಗುಣವಚನ 'ರತ್ನಾವಳಿ, ಆರ್. ನರಸಿಂಹಾಚಾರ ಅವರ ಕರ್ನಾಟಕ ಕವಿಚರಿತೆ ಸಂ. ೧, ಡಾ. ವೀರಣ್ಣ ರಾಜೂರ (ಸಂ) ಭಕ್ತಾನಂದ ಸುಧಾರ್ಣವ, ಡಾ. ಎಸ್.ಸಿ. ಪಾಟೀಲರು ಸಂಪಾದಿಸಿದ ಶ್ರೀ ಗೊಲ್ಲಾಳೇಶ್ವರ ಬಹುಪರಾಕ್‌ಗಳು, ಡಾ. ಎಫ್.ಟಿ. ಹಳ್ಳಿಕೇರಿ ಅವರ ಶೋಧಿತ ವೀರಗೊಲ್ಲಾಳನ ಕೃತಿ, ಜೋಗುಳ ಹಾಡಿನಲ್ಲಿ ಗೋಲಗೇರಿಯ, ಗೊಲ್ಲಾಳೇಶ್ವರ, ಡಾ. ಶಕುಂತಲಾ ದುರ್ಗಿಯವರ ಶರಣ ಗೊಲ್ಲಾಳ, ಬಿ. ಷಣ್ಮುಖಪ್ಪ ಅವರ ಶರಣ ಕುರುಬಗೊಲ್ಲಾಳ, ಶ್ರೀ ನಜೀರ ಅಹ್ಮದ ಕೋರಬು ಅವರ (ಸಂ) ಶ್ರೀ ಗೊಲ್ಲಾಳೇಶ್ವರ ವಚನಾಮೃತ, ಶ್ರೀ ಶರಣಪ್ಪ ಜಂಬಗಿ ಅವರ ಶ್ರೀ ಗೊಲ್ಲಾಳೇಶ್ವರ ಚರಿತ್ರೆ, ಲೇಖನಗಳು (ಬಸವಪಥ ಸಂ. ೮ ಸಂಚಿಕೆ -೮ ಹಾಗೂ ಸಂ. ೯ ಸಂಚಿಕೆ ೪ ಮತ್ತು ೫) ಡಾ. ಬಿ. ಆರ್. ಹಿರೇಮಠ ಅವರು ಸಂಪಾದಿಸಿದ ಸಂಕೀರ್ಣ ವಚನ ಸಂಪುಟ ೪.

ಜನಪದ ಸಾಹಿತ್ಯದಲ್ಲಿ ಹಂತಿ ಹಾಡು, ಬೀಸುವ ಕಲ್ಲಿನ ಹಾಡು, ಡೊಳ್ಳಿನ ಹಾಡು, ಕಂಬಿಯ ಹಾಡು, ಜೋಗುಳ ಹಾಡು ಹಾಗೂ ಆರತಿ ಭಜನೆಯ ಹಾಡುಗಳಲ್ಲಿ ಬರುವ ಸ್ಥಳ ಪುರಾಣ, ಗೋಲಗೇರಿ ಗ್ರಾಮದಲ್ಲಿ ವಾಸವಾಗಿ, ಶ್ರೀ ಗೊಲ್ಲಾಳೇಶ್ವರ ದೇವಸ್ಥಾನದ ಉಸ್ತುವಾರಿ ನೋಡಿಕೊಳ್ಳುವ 'ದೇವರಮನೆ' ಈ ಮನೆತನದ ವಂಶಾವಳಿ ಹೀಗೆ ಹಲವಾರು ರೀತಿಯ ಅಧ್ಯಯನದ ಮೂಲಕ ಪ್ರಸ್ತುತ ಅಧ್ಯಯನವನ್ನು ವಿಸ್ತರಿಸಿಕೊಳ್ಳಲಾಗಿದೆ.

ಫ.ಗು. ಹಳಕಟ್ಟಿಯವರು "ಪಾಲ್ಕುರಿಕೆ ಸೋಮಾರಾಧ್ಯನು 'ಗಣಸಹಸ್ರ'ದಲ್ಲಿ ಸೂಚಿಸಿದ ಶಿವಶರಣರನ್ನು "೨೨೦ ಅಮರಗಣಾಧೀಶ್ವರರ ಚರಿತ್ರೆಗಳು" ಎಂದು ಪ್ರಕಟಿಸಿದ್ದಾರೆ. ಅದರಲ್ಲಿ ೧೨೭ನೆಯವನೇ ಗೊಲ್ಲಾಳನೆಂಬ ಶರಣ ಅವನ ಚರಿತ್ರೆಯನ್ನು ಹೀಗೆ ಸ್ಪಷ್ಟಪಡಿಸುತ್ತಾರೆ."[೨೦] **ಆದರೆ ಜನಸಾಮಾನ್ಯರು ಗುರುತಿಸುವ ಇಂದಿನ ಚರಿತ್ರೆ ಪೌರಾಣಿಕ ವ್ಯಕ್ತಿಯನ್ನಾಗಿ** ; ಆ ಹಿನ್ನೆಲೆಯಲ್ಲಿ ಬಸವಣ್ಣನವರ ವಚನವೊಂದು ಹೀಗೆ ವಿವರಿಸುತ್ತದೆ.

"ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ,
ಆತನ ವಿದ್ಯಾ ಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ
ಅವನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು
ಈ ಮೂರು ಪೀಠದಂತಿರಲಿ ಆ ಶರಣನನರಿದು
ಶರಣೆನುತಿರ್ದೆನು ಕೂಡಲಸಂಗಮದೇವಾ "[೨೧]

ಈ ವಚನದಲ್ಲಿ ತ್ರಿಮೂರ್ತಿಗಳ ಕಲ್ಪನೆ ಇದ್ದರೂ ಸಹಿತ ಮೂಲವಾಗಿ ಬಯಲೇ ಮೂರ್ತಿಗೊಂಡ ಸಾಕಾರ ದೈವತ್ವದ ಶಕ್ತಿಯುತ ಸಂಕೇತವನ್ನು ಕೊಡುತ್ತಾರೆ. ದೈವಶಕ್ತಿ, ಸರ್ವವ್ಯಾಪಿ, ಸರ್ವಶಕ್ತ; ಸೃಷ್ಟಿ ಸ್ಥಿತಿ

ಲಯಗಳಿಗೆ ಕಾರಣ ಸ್ವರೂಪವಾದದ್ದು. ಅದು ಪ್ರಸ್ತುತ ಗೊಲ್ಲಾಳೇಶ್ವರನಿಗೂ ಅನ್ವಯವಾಗುತ್ತದೆ. ಏಕೆಂದರೆ ಕುರಿಯ ಹಿಕ್ಕಿಯಲ್ಲಿ ಲಿಂಗವನ್ನು ಕಾಣುವ ಭಕ್ತಿ ಭಾವ ಮತ್ತು ಪ್ರಸನ್ನತೆ ಅಗಾಧತೆಯನ್ನುಂಟುಮಾಡುತ್ತದೆ.

ಫ.ಗು. ಹಳಕಟ್ಟಿಯವರು ಅಭಿಪ್ರಾಯ ಪಡುವಂತೆ ಬಸವಣ್ಣನ ಸಮಕಾಲೀನನಾದ ಈತ ಒಬ್ಬ ಅಪ್ರತಿಮ ಶಿವಭಕ್ತ. ವಚನಕಾರನಾಗಿ ಮೆರೆದವ. ಈತನ ವಚನಗಳು ಸದ್ಯಕ್ಕೆ ೨೦ ಮಾತ್ರ ನಮಗೆ ಉಪಲಬ್ಧವಾಗಿವೆ. ಇದನ್ನು ಹಳಕಟ್ಟಿಯವರು ಶಿವಾನುಭವ ಪತ್ರಿಕೆಯಲ್ಲಿ ೧೯೪೫ರಲ್ಲಿ ವೀರಗೊಲ್ಲಾಳನ ವಚನ ೨೦ ಸಿಕ್ಕಿದ್ದು ೬ ವಚನಗಳನ್ನು ಮಾತ್ರ ಈ ಪತ್ರಿಕೆಯಲ್ಲಿ ಪ್ರಕಟಿಸಲು ಸಾಧ್ಯವಾಗಿದೆ ಎಂದು ಹೇಳಿ ಆರನ್ನು ಮಾತ್ರ ಪ್ರಕಟಿಸಿದ್ದಾರೆ. ಆದರೆ ಇನ್ನೂ ಆ ಹದಿನಾಲ್ಕು ವಚನಗಳು ಪ್ರಕಟವಾಗದೆ ಉಳಿದು ಹೋಗಿವೆ. ಡಾ. ಎಂ.ಎಸ್. ಸುಂಕಾಪುರ ಅವರು ಸಂಪಾದಿಸಿದ (ಸಕಲ ಪುರಾತನರ ಬೆಡಗಿನ ವಚನಗಳು ಎಂಬ ಸಂಕಲನದಲ್ಲಿ ಗೊಲ್ಲಾಳನ ಐದು ಬೆಡಗಿನ ವಚನಗಳಿಗೆ ಟೀಕೆಯನ್ನು ಬರೆಯಲಾಗಿದೆ. ಇವೆಲ್ಲಕ್ಕೂ ಪೂರ್ವದಲ್ಲಿ ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆಯಲ್ಲಿ ಮೂರು ವಚನಗಳು ಸಂಕಲನಗೊಂಡಿವೆ. ಡಾ. ಬಿ. ಆರ್. ಹಿರೇಮಠ ಅವರು ಸಂಕೀರ್ಣ ವಚನ ಸಂಪುಟ -೪ರಲ್ಲಿ ಹತ್ತು ವಚನಗಳನ್ನು ಸಂಕಲನ ಮಾಡಿದ್ದಾರೆ. ಡಾ. ಎಲ್, ಬಸವರಾಜ ಅವರು ಮೈಸೂರು ಪ್ರಾಚ್ಯ ಸಂಶೋಧನಾಲಯದಲ್ಲಿ ೮೧ ವಚನಕಾರರ ಅನೇಕ ವಚನಗಳನ್ನೊಳಗೊಂಡ ಓಲೆಯ ಗ್ರಂಥವಿದ್ದು ಅಲ್ಲಿ ಬೀರೇಶ್ವರ ಅಂಕಿತದ ಗೊಲ್ಲಾಳನ ವಚನಗಳು ಇರುವುದು ತಿಳಿಸುತ್ತಾರೆ. ಆದರೆ ಗೊಲ್ಲಾಳನ ವಚನಗಳ ಸಂಖ್ಯೆ ಎಷ್ಟು ಎಂದು ಖಚಿತವಾಗಿ ನಿರ್ಧರಿಸಲು ವಚನಗಳು ಹೆಚ್ಚಿಗೆ ದೊರೆತಿರುವದಿಲ್ಲ.

ಈ ಎಲ್ಲ ಶಿಷ್ಟ ಸಾಹಿತ್ಯವನ್ನು ವಿಶ್ಲೇಷಣೆ ಮಾಡಿದಾಗ ಕಂಡುಬಂದ ಸಂಗತಿಗಳನ್ನು ಹೀಗೆ ಗುರುತಿಸಲಾಗಿದೆ.

## ಬಾಲ್ಯ ಜೀವನ :

ಗೊಲ್ಲಾಳನನ್ನು ಬೇರೆ ಬೇರೆ ಹೆಸರುಗಳಿಂದ ಪುರಾಣ ಕಾವ್ಯಗಳು ಉಲ್ಲೇಖಿಸುತ್ತವೆ. 'ಗೊಲ್ಲಾಳ, ಗೊಲ್ಲಾಳರಾಯ, ಕಾಟಕೂಟ, ವೀರಗೊಲ್ಲಾಳ, ತರುಣ ಗೊಲ್ಲಾಳ, ಕುರುಬಗೊಲ್ಲಾಳ, ಗೊಲ್ಲೇಶ್ವರ, ಕಾಟಕೂಟ ಗೊಲ್ಲ, ಕೂಟಕೂಟ ಸೂತಗೊಲ್ಲ, ಕಾಟಕೂಟ ಗೊಲ್ಲನ ಮಗ ಗೊಲ್ಲಾಳ" ಎಂದು ಹೀಗೆ ವೈವಿಧ್ಯಮಯವಾಗಿ ಕಾವ್ಯ ಪುರಾಣಗಳು ಕರೆದಿರುವುದುಂಟು.

"ದಿವಿಪುರಕೆ ಸಮ ।
ಭವನದೊಳಗೆಲ್ಲಿಯು
ಲವಲವಿಕೆ ಮಿರಿಸಿರುವಂತೆ ॥
ಹವಳ ಮಾಣಿಕ ಮುತ್ತು

ಧವಳ ಮೈ ಒಲಿವಂತೆ

ಧವಳಾರವೆಂಬ ಪುರಮೆರೆದು"[೨೩] (೨-೨೪)

ಶ್ರೀ ಗೊಲ್ಲಾಳೇಶ್ವರ ಪುರಾಣವು 'ಧವಳಾರವೆಂಬ ಪುರವನ್ನು ವರ್ಣಿಸಿರುವದನ್ನು ಗಮನಿಸಿದಾಗ" ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಪೂರ್ವ ದಿಕ್ಕಿಗೆ ಸುಮಾರು ಇಪ್ಪತ್ತೈದು ಕಿಲೋಮೀಟರ ದೂರದಲ್ಲಿರುವ ಗೋಲಗೇರಿ ಈತನ ಮುಖ್ಯನೆಲೆ. ಈ ಗ್ರಾಮದ ನೈರುತ್ಯಕ್ಕಿರುವ 'ಡವಳಾರ' ಗ್ರಾಮದಲ್ಲಿದ್ದ 'ಬಲ್ಲುಗ' ಮತ್ತು 'ದುಗ್ಗಳದೇವಿ' ಯವರ ಮಗನೇ ಗೊಲ್ಲಾಳೇಶ್ವರ.

ಕಾಟಕೂಟ ಎಂಬುದು ಈತನ ಮೊದಲಿನ ಹೆಸರು. ಕುರಿಗಳನ್ನು ಅಡವಿಗೆ ಹೊಡೆದುಕೊಂಡು ಹೋಗಿ ಮೇಯಿಸಿಕೊಂಡು ಬರುವುದು ಗೊಲ್ಲಾಳನ ದಿನನಿತ್ಯದ ಕಾಯಕ. ಈ ರೀತಿಯ ಕಾಯಕವನ್ನು ಸಿದ್ಧರಾಮನ ಬದುಕಿನ ಚಾರಿತ್ರ್ಯದಲ್ಲಿಯೂ ಕಾಣಬಹುದು. ಇಲ್ಲಿ ಗೊಲ್ಲಾಳ ಕುರಿಯನ್ನು ಕಾಯ್ದರೆ, ಅಲ್ಲಿ ಸಿದ್ಧರಾಮನು ದನಕಾಯುವ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದನ್ನು ಸ್ಮರಿಸಬಹುದು. ಹೀಗಿರುವಾಗ ಶರಣರ ಜೀವನ ಸಿದ್ಧಾಂತ ಕಾಯಕವಾಗಿತ್ತು. ಹೀಗೆ ಗೊಲ್ಲಾಳನೂ ಕುರಿ ಕಾಯುತ್ತಿದ್ದ ಸಂದರ್ಭದಲ್ಲಿ "ಒಂದು ದಿನ (ಯುಗಾದಿ ಹಬ್ಬ)ದಂದು ಕುರಿ ಕಾಯುತ್ತಿದ್ದಾಗ ಶ್ರೀಶೈಲಕ್ಕೆ ಹೊರಟಿದ್ದ ಪರಿಶೆ (ಭಕ್ತ ಸಮೂಹ)ಯೊಂದು ಜಯಘೋಷ ಹಾಕುತ್ತ ಹೊರಟಿತ್ತು. ಮುಗ್ಧ ಭಕ್ತಿಯ ಗೊಲ್ಲಾಳನು ಅವರನ್ನು ತಡೆದು ಶಿವಲಿಂಗ ತರುವಂತೆ ವಿನಂತಿ ಮಾಡಿಕೊಂಡ. ತಂದೆ ಬಲ್ಲುಗನು ಸಂಗ್ರಹಿಸಿಟ್ಟಿದ್ದ ಹೊನ್ನು, ಹಣವನ್ನು ಶ್ರೀಶೈಲಕ್ಕೆ ಹೊರಟಿದ್ದವರಲ್ಲಿ ಪ್ರಮುಖ ವ್ಯಕ್ತಿಯಾಗಿದ್ದ ನಂದಯ್ಯ ಸ್ವಾಮಿಗೆ ಕೊಡುತ್ತಾನೆ. ಇದು ಗೊಲ್ಲಾಳನ ಜೀವನದ ಪೂರ್ವಾರ್ಧ.

ಲಿಂಗವನ್ನು ತಂದುಕೊಡು ಎಂಬ ನಿರೂಪಣೆಯ ರೀತಿಯನ್ನು ಗಮನಿಸಿದರೆ ಗೊಲ್ಲಾಳನ ಪೂವಾರ್ಧದ ಬದುಕು 'ಶೈವ' ಸಂಪ್ರದಾಯಕ್ಕೆ ಹತ್ತಿರವಾಗಿದೆ. "ಶ್ರೀಶೈಲದ ಮಲ್ಲಯ್ಯನಿಗೆ ಹೋಗುವ ಜಂಗಮನಿಗೆ ತನಗೊಂದು ಲಿಂಗವನ್ನು ತರಲು ಹೇಳುವ ಕತೆ ಶೈವ ಸಂಪ್ರದಾಯದ ಎಳೆಯನ್ನು ಹೊಂದಿದೆ." ಮುಂದಿನ ಕಥೆ ಗೊಲ್ಲಾಳನು ಇಷ್ಟಲಿಂಗಕ್ಕೆ ಮಾರುಹೋದುದನ್ನೂ ವಿವರಿಸುವದು.

ಮಲ್ಲಿಕಾರ್ಜುನ ದರ್ಶನ ಪಡೆದು ಹಿಂತಿರುಗುವಾಗ ನಂದಯ್ಯಸ್ವಾಮಿಯು ಶಿವಲಿಂಗ ತರುವುದನ್ನು ಮರೆತು ಬಿಟ್ಟನು. ದಾರಿಯಲ್ಲಿ ಗೊಲ್ಲಾಳನನ್ನು ನೋಡಿದ ಕೂಡಲೇ ಈತನಿಗೆ ತನ್ನತಪ್ಪಿನ ಅರಿವಾಯಿತು. ಕೂಡಲೇ ಅಲ್ಲಿಯೇ ಬಿದ್ದಿದ್ದ ಕುರಿ ಹಿಕ್ಕೆಯನ್ನು ಗೊಲ್ಲಾಳನಿಗೆ ಕೊಟ್ಟು ಅದರಲ್ಲಿಯೇ ಶಿವನನ್ನು ಕಾಣಲು ಹೇಳುತ್ತಾನೆ. ಆತನ ಮಾತಿನಂತೆ ಗೊಲ್ಲಾಳನು ಕುರಿಯ ಹಿಕ್ಕೆಯನ್ನು ಕುರಿ ಹಿಕ್ಕೆಗಳ ರಾಶಿಯಲ್ಲಿರಿಸಿ ಲಿಂಗಗಳನ್ನಾಗಿ ಮಾಡಿ ಪೂಜಿಸುತ್ತ ಪ್ರತಿನಿತ್ಯ ಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದನು. ಈ ಘಟನೆಯನ್ನು ಪರಾಮರ್ಶಿಸಲಾಗಿ "ಶ್ರೀಶೈಲದಿಂದ ಲಿಂಗ ತರಲು ಮರೆಯುವ ಈ ಸಂಗತಿ ಗೊಲ್ಲಾಳನಿಗೆ ಶೈವ ಸಂಪ್ರದಾಯದಿಂದ ಲಿಂಗಾಯತ ಸಂಪ್ರದಾಯದೆಡೆಗೆ ಸೆಳೆಯುವ ಪ್ರಯತ್ನವೆಂದು ತಿಳಿಯಬಹುದಾಗಿದೆ. ಶೈವ ಸ್ರಂದಾಯದ ಪ್ರಕಾರ ಲಿಂಗವನ್ನು ಕೊಡುವ ಬದಲು ಗುರು ನಂದಯ್ಯ ಗೊಲ್ಲಾಳನಿಗೆ ಕೊಟ್ಟದ್ದು ಕುರಿಹಿಕ್ಕೆ, ಲಿಂಗವಂತೂ ಅಲ್ಲ. ಕುರಿಹಿಕ್ಕೆಯಂತಹ

ಲಿಂಗವನ್ನು ಅಂದರೆ ಇಷ್ಟಲಿಂಗವನ್ನು ಕೊಟ್ಟನು ಎಂದಿಟ್ಟುಕೊಂಡರೆ ಗುರುವಿನಿಂದ ಗೊಲ್ಲಾಳನಿಗೆ ಲಿಂಗದೀಕ್ಷೆಯಾದುದನ್ನು ಈ ಪ್ರಸಂಗ ಹೇಳುತ್ತಿದೆ ಎನಿಸುತ್ತದೆ." ಲಿಂಗವೇ ನಿಜವಾದ ಶಿವ(ಮಲ್ಲಯ್ಯ)ನೆಂದು ಪೂಜಿಸಿದ ಗೊಲ್ಲಾಳನ ಈ ಭಕ್ತಿಯ ಆಟವನ್ನು ಕಂಡು ತಂದೆ ಮಗನಿಗೆ ಬಯ್ದು ಕುರಿ ಹಿಕ್ಕೆಗಳ ದಿನ್ನಿಗೆ ಒದೆಯುತ್ತಾನೆ. ಹಾಗೂ ಕುರಿಹಿಕ್ಕಿ ದಿನ್ನಿಯನ್ನು ಚಲ್ಲಾಪಿಲ್ಲಿ ಮಾಡುತ್ತಾನೆ. ಶಿವಲಿಂಗದಲ್ಲಿ ಅಪಾರ ಭಕ್ತಿಯನ್ನು ಹೊಂದಿದ್ದ ಗೊಲ್ಲಾಳನು ತಂದೆಯ ಈ ಕೃತ್ಯವನ್ನು ಸಹಿಸದಾದ. ಆತ ತಂದೆಯ ಶಿರವನ್ನೇ ಕತ್ತರಿಸಿ ಶಿವನಿಗೆ ಅರ್ಪಿಸುತ್ತಾನೆ. ಗೊಲ್ಲಾಳನ ಲಿಂಗನಿಷ್ಠೆಗೆ ಒಲಿದ ಶಿವ ವರವನ್ನು ನೀಡಿ ಬಲ್ಲುಗನಿಗೆ ಪುನರ್‌ಜನ್ಮ ನೀಡಿ ಶಿವಗಣ ಪದವಿಯನ್ನು ಇತ್ತನು. ಇಂಥ ವಿಶಿಷ್ಟ ಶಿವಭಕ್ತನಾದ ಗೊಲ್ಲಾಳನ ಹೆಸರಿನ ಪ್ರಧಾನ ದೇವಾಲಯವು ಗೋಲಗೇರಿಯಲ್ಲಿದೆ. ಇದರಿಂದ ಗೊಲ್ಲಾಳನ ಕೊನೆಯ ದಿನಗಳನ್ನು ಗಮನಿಸಲಾಗಿ, ಗೊಲ್ಲಾಳನು ಇಲ್ಲಿಯೇ ಐಕ್ಯನಾಗಿರಬಹುದು. ಇದು ಗೊಲ್ಲಾಳನ ಜೀವನದ ಉತ್ತರಾರ್ಧದ ಬದುಕು.

"ಇವನ ಮುದ್ರಿಕೆಯೂ ವೀರಬೀರೇಶ್ವರ ಎಂದು ಹಳಕಟ್ಟಿಯವರು ಹೇಳುತ್ತಾ ಗೊಲ್ಲಾಳ ಒಬ್ಬ ವಚನಕಾರ ಎಂಬ ಅಂಶವನ್ನೂ ಸ್ಪಷ್ಟಪಡಿಸಿ ಹಿಂಡಿಗೊಡೆಯನಾಗಿ ಕಾವಗೊಲ್ಲಾಳ ನೀನೇ ವೀರ ಬೀರೇಶ್ವರ ಎಂಬ ಅಂಕಿತನಾಮದಿಂದ ಗೊಲ್ಲಾಳ ಒಬ್ಬ ಐತಿಹಾಸಿಕ ವ್ಯಕ್ತಿ ಎಂಬ ಊಹೆಯನ್ನು ಮಾಡಿದ್ದಾರೆ. ಡಾ. ಬಿ.ಎಸ್. ಗದ್ದಗಿಮಠರು, ಹಳಕಟ್ಟಿಯವರು ಹೇಳುವ ವಿಚಾರವನ್ನು ಬೆಂಬಲಿಸುತ್ತಾ, ಈತ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದು, ಬಸವಣ್ಣನಕಿಂತ ಪೂರ್ವದ ವ್ಯಕ್ತಿ ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಎಷ್ಟು ವರುಷ ಹಿಂದಿನವನು ಎಂದು ಹೇಳಲು ಸಾಧ್ಯವಾಗುವುದಿಲ್ಲ ಎಂಬ ವಾದವನ್ನು ಇಡುತ್ತಾರೆ. ಆರ್ ನರಸಿಂಹಾಚಾರ ಅವರು ಕರ್ನಾಟಕ ಕವಿಚರಿತೆಯಲ್ಲಿ ವೀರಗೊಲ್ಲಾಳ ಅಂಕಿತದ ವಚನವೊಂದನ್ನು ಉಲ್ಲೇಖಿಸಿ ಗೊಲ್ಲಾಳನ ಕಾಲ ಸು. ೧೧೬೦ ಎಂದು ಹೇಳಿದ್ದಾರೆ. (ಈಗಾಗಲೇ ಎಲ್. ಬಸವರಾಜು ಅವರು ಗೊಲ್ಲಾಳನು ಬಸವಪೂರ್ವದವನು ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.) ಬದನೆಯ ಕಾಯ್ಗಳ ಲಿಂಗಗಳಂ ಮಾಡಿ ಚೋರನನ್ನು ಭಕ್ತನೆನಿಸಿದಲ್ಲಿ ಬಳ್ಳ ಹಿಕ್ಕೆಗಳನ್ನು ಲಿಂಗಗಳಂ ಮಾಡಿದ ಬಳ್ಳೇಶ ಮಲ್ಲಯ್ಯ, ಕಾಟಕೂಟರ ಕಥೆಯನ್ನು ಬಿಜ್ಜಳನ ಸತಿಯರನ್ನು ಜಂಗಮಾಕಾರವಂ ಮಾಡಿದುದು ಜೋಳದ ರಾಶಿಯಂ ಮುತ್ತಿನ ರಾಶಿಯಂ ಮಾಡಲು ಹೊರಟ ಬೊಮ್ಮಯ್ಯನ ಕಥೆಯನ್ನು ಹೇಳಿದರು ಎಂಬಲ್ಲಿ ಮೇಲಿನ ಅಭಿಪ್ರಾಯ ತಳೆದಿದ್ದಾರೆ.

ಕಂಬಿಯ ಹಾಡುಗಳಲ್ಲಿ ಇಳಿಹಾಳ ಬೊಮ್ಮಯ್ಯನೊಂದಿಗೆ ಗೋಲಗೇರಿ ಗೊಲ್ಲಾಳನ ಹೆಸರು ಪ್ರಸ್ತಾಪಗೊಂಡಿದೆ. ಹಾಗೆಯೇ ಚನ್ನಬಸವಣ್ಣನು ಗೊಲ್ಲಾಳನ ಕಥೆಯನ್ನು ಸಿದ್ಧರಾಮನಿಗೆ ಹೇಳುವ ಸಂದರ್ಭವೊಂದು ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ ಬಂದಿದೆ.

"ಕೋಳೂರು ಕೊಡಗೂಸು ಹಾಲನೀಶಂಗೆರೆದಳೊಲವಿನಿಂ ಬಲುಹೇನನು

ಗೂಳಿಯೆಂದಿರಿದಾತನೊಡಲನಿಬ್ಬಗಿ ಮಾಡಿ

ಸೀಳಿದಂ ರಾಮನಾಥಂ ಗೊಲ್ಲಾಳಂ ತಂದೆ

ಕಾಲಿಂದೆ ಲಿಂಗಮಂ ನೂಂಕೆ ಸಿರಿವರೆದನೆಲೆ ರಾಮೇಶ ಕೇಳೆಂದನು"[೨೪]

ಈ ಮೇಲೆ ಗುರುತಿಸಿದ ವಿವರಗಳನ್ನು ಪರಿಶೀಲಿಸಿದಾಗ ಗೊಲ್ಲಾಳನು ಬಸವಪೂರ್ವದ ವ್ಯಕ್ತಿಯಾಗಿದ್ದು ಬಸವಣ್ಣ, ಚನ್ನಬಸವಣ್ಣ ಈತನನ್ನು ಸ್ಮರಿಸಿದ್ದು, ಇಳಿಹಾಳ ಬೊಮ್ಮಯ್ಯನ ಜೊತೆ ಜೊತೆಯಲ್ಲಿ ಗೊಲ್ಲಾಳನ ಹೆಸರು ಅನೇಕ ವೀರಶೈವ ಪುರಾಣ ಕಾವ್ಯಗಳಲ್ಲಿ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದು. ಹಾಗೆಯೇ ಕಂಬಿಯ ಹಾಡುಗಳಲ್ಲಿ ಜನಪದರು ಸ್ಮರಿಸಿರುವುದು ಕಂಡುಬರುತ್ತದೆ. "ವೀರ ಗೊಲ್ಲಾಳೇಶ್ವರ ಮಹಿಮೆಯನ್ನು ಜನಪದರು ನಾನಾ ವಿಧವಾಗಿ ಹಾಡಿ ಹರಸುತ್ತಾರೆ. ಹಂಸಭಾವಿಯ ತಾಯಿ ಶಿವಶರಣೆ ಇವರು ಸಂಗ್ರಹಿಸಿದ ಮಾದರಿ ವಚನವೊಂದು ಹೀಗಿದೆ.

"ಹೊತ್ತು ಮುಳುಗಿದರೇನು ಕತ್ತಲಾದರೇನು ಅಪ್ಪನಿನಗುಡಿಗೆ ಬರುವೆನು

ಗೊಲ್ಲಾಳೇಶಾ ಗೋಲಗೇರಿ ಲಿಂಗೇಶಾ ಮುತ್ತಿನ ಕದವಾ ತೆರೆದಿರೋ"[೨೫] ಎಂದು ಗೊಲ್ಲಾಳನ ಕುರಿತಾದ ಭಕ್ತಿ ಮತ್ತು ಮಹಿಮೆಯನ್ನು ಕೊಂಡಾಡಿದ್ದಾರೆ.

ಇಳಿಹಾಳ ಬೊಮ್ಮಯ್ಯನ ಜಾತ್ರೆಯ ವಿಧಿವಿಧಾನಗಳು ಗೋಲಗೇರಿ ಗೊಲ್ಲಾಳನ ಜಾತ್ರೆ ವಿಧಿವಿಧಾನಗಳು ಒಂದೇ ರೀತಿಯಾಗಿರುವುದನ್ನು ಗುರುತಿಸಿದ ವಿದ್ವತ್ ಪರಂಪರೆ ಗೊಲ್ಲಾಳ ಮತ್ತು ಇಳಿಹಾಳ ಬೊಮ್ಮಯ್ಯ ಸಮಕಾಲೀನರೆಂದು ಹೇಳಬಹುದಾಗಿದೆ ಎಂದಿರುವರು.

ಬಸವಪೂರ್ವಯುಗದ ಕೊಂಡಗೂಳಿ ಕೇಶಿರಾಜ, ಕೆಂಭಾವಿ ಭೋಗಣ್ಣ, ರಾಗದ ಸಂಗಣ್ಣ, ಇಳಿಹಾಳ ಬೊಮ್ಮಯ್ಯರ ಸಮಕಾಲೀನ ವ್ಯಕ್ತಿ ಗೊಲ್ಲಾಳನಾಗಿರಬೇಕು. ಬಸವಣ್ಣನವರಿಗಿಂತ ಇಳಿಹಾಳ ಬೊಮ್ಮಯ್ಯ ೫೦-೬೦ ವರ್ಷ ಹಿರಿಯನಾಗಿರಬೇಕು ಎಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ. ಹಾಗೆಯೇ ಗೊಲ್ಲಾಳನು ಕೂಡ ಬಸವಣ್ಣನಿಗಿಂತ ೬೦-೭೦ ವರ್ಷ ಹಿರಿಯ ವ್ಯಕ್ತಿಯಾಗಿರಬೇಕು ಎಂಬ ಅಂಶ ದೃಢಪಡುತ್ತದೆ. ಆದ್ದರಿಂದ ಆರ್. ನರಸಿಂಹಾಚಾರ ಅವರು ಅಭಿಪ್ರಾಯ ಪಡುವಂತೆ ಗೊಲ್ಲಾಳನ ಕಾಲ ಸು. ೧೧೬೦ ಎಂದು ನಿರ್ಧರಿಸಬಹುದಾಗಿದೆ. ಗೊಲ್ಲಾಳನ ಕುರಿತು ನಾಡಿನಾದ್ಯಂತ ಈಗ್ಗೆ ಕಂಡು ಬಂದಿರುವಂತೆ ಹದಿನೈದು ದೇವಾಲಯಗಳಿವೆ. (ಪ್ರಧಾನ ದೇವಾಲಯ ಗೋಲಗೇರಿಯಲ್ಲಿನದು) ಇದು ಗೊಲ್ಲಾಳೇಶ್ವರನ ಸಮಾಧಿಯಾಗಿದೆ. ದೇವಸ್ಥಾನದ ಎದುರುಗಡೆ 'ನಾಗರಕಟ್ಟೆ' ಎಂದು ಹೆಸರಿಸುವ ಸಮಾಧಿ ಗದ್ದುಗೆ ಇರುವದು. ಇದು ಗುಹೆಯಂತೆ ಇರುವದು.

## ಶ್ರೀ ಗೊಲ್ಲಾಳೇಶ್ವರ ಪುರಾಣ

"ಭಾರತೀಯ ಸಂಸ್ಕೃತಿಯ ವ್ಯಾಸಂಗಕ್ಕೆ ಪುರಾಣ ಸಾಹಿತ್ಯ ಅತ್ಯಂತ ಸಹಕಾರಿಯಾದದ್ದು. ಪುರಾಣಗಳ ಸಹಾಯವಿಲ್ಲದೆ ಭರತಖಂಡದ ಪೂರ್ವ ಚರಿತ್ರೆಯನ್ನು ತಿಳಿದುಕೊಳ್ಳುವುದು ಅಸಾಧ್ಯ. ಭಾರತೀಯರ ನೈತಿಕ

ಮತ್ತು ಸಾಮಾಜಿಕ ಪ್ರಗತಿ ಪುರಾಣಗಳಲ್ಲಿ ಚನ್ನಾಗಿ ವರ್ಣಿತವಾಗಿದೆ. ಭಾರತೀಯರ ಆರಾಧ್ಯ ದೇವತೆಗಳ ಸ್ವರೂಪ ವಿಚಾರಕ್ಕೆ ವೇದಗಳಂತೆಯೇ ಪುರಾಣಗಳೂ ಆಕರಗಳಾಗಿವೆ. ವೇದಾಂತ ಶಾಸ್ತ್ರದ ಪ್ರಸ್ಥಾನತ್ರಯವಾದ ಉಪನಿಷತ್ತು ಗೀತೆ ಮತ್ತು ಬ್ರಹ್ಮಸೂತ್ರಗಳಲ್ಲಿ ನಿರೂಪಿತವಾಗಿರುವ ಗಹನ ವಿಷಯಗಳೆಲ್ಲವೂ ಆಖ್ಯಾನ - ಉಪಾಖ್ಯಾನಗಳ ರೂಪದಲ್ಲಿ ಪುರಾಣಗಳಲ್ಲಿ ಪ್ರಸ್ತಾಪವಾಗಿರುವುದರಿಂದ ಪುರಾಣಾಧ್ಯಯನ ಆಧ್ಯಾತ್ಮ ಜ್ಞಾನ ಸಾಧನೆಗೂ ನೆರವು ನೀಡುತ್ತವೆ. ಭಾರತದ ತೀರ್ಥಕ್ಷೇತ್ರಾದಿ ವಿಚಾರಗಳಿಂದ ಪುರಾಣಗಳು ನಿಬಿಡವಾಗಿ ಅವು ದೇಶ ಸ್ವರೂಪ ಪರಿಚಯಕ್ಕೂ ಆಕರಗಳಾಗಿವೆ."[೨]

ಅಧ್ಯಯನಕ್ಕೆ ಪೂರಕವಾಗಿ ಗೊಲ್ಲಾಳೇಶ್ವರರ ಕುರಿತು ರಚಿತವಾದ 'ಶ್ರೀ ಗೊಲ್ಲಾಳೇಶ್ವರ ಪುರಾಣ' ಕಥೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಅದಕ್ಕಿಂತಲೂ ಪೂರ್ವದಲ್ಲಿ ಪುರಾಣಗಳ ಸಾಹಿತ್ಯ ಸ್ವರೂಪ ಕುರಿತು ವಿವೇಚಿಸುವ ಮೊದಲು ಪುರಾಣ ಶಬ್ದದ ಅರ್ಥವನ್ನು ತಿಳಿದುಕೊಳ್ಳುವದೂ ಅಗತ್ಯ.

"ಪುರಾತನ ಕಾಲದಿಂದಲೂ ನಡೆದುಬಂದಿರುವದರಿಂದ ಪುರಾಣವೆಂದು ಸ್ಮೃತವಾಗಿದೆ. ಪಾಣಿನಿಯ ಪ್ರಕಾರ 'ಪುರಾಭಾವಂ ಪುರಾಣಂ' ಎಂದು ವ್ಯುತ್ಪತ್ತಿ- ಹಿಂದೆ ಆದದ್ದು - ನಡೆದದ್ದು ಪುರಾಣ.

ಅಥ ಪುರಾಣಂ ನಾನ್ ವಿಶ್ವಸ್ಯ ಪೂರ್ವಾವಸ್ಥಾನಿಕರೂಪಕಂ

ವ್ಯಾಸಾದಿ ಮುನಿಪ್ರಣೀತಂ ಪಂಚಲಕ್ಷಣಾನ್ವಿತಂ ಶಾಸ್ತ್ರಂ

ಪುರಾಣವೆಂದರೆ ಪ್ರಪಂಚದ ಪೂರ್ವಕಾಲದ ಅವಸ್ಥೆಯನ್ನು ನಿರೂಪಿಸಿರುವುದಾಗಿ ವ್ಯಾಸರೇ ಮೊದಲಾದ ಮುನಿಗಳಿಂದ ರಚಿತವಾದ ಪಂಚಲಕ್ಷಣಸಮನ್ವಿತವಾದ ಶಾಸ್ತ್ರ -ಎಂದೂ ಪುರಾಣ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾರೆ.

ಈ ವರೆಗೆ ಉದಾಹರಿಸಿದ ಎಲ್ಲ ವಾಕ್ಯಗಳಿಂದ ಪುರಾಣ ಎಂದರೆ ಪೂರ್ವದಲ್ಲಿ ನಡೆದ ಸಂಗತಿಗಳೆಲ್ಲವನ್ನು ತಿಳಿಸುವ ಗ್ರಂಥ ಎಂದು ಅರ್ಥವಾಗುತ್ತದೆ.[೨]

ಮೇಲಿನ ವ್ಯಾಖ್ಯಾನದ ಶಬ್ದಾರ್ಥವನ್ನು ಗಮನಿಸಿದರೆ, ಪುರಾಣದ ಹುಟ್ಟನ್ನು ನಿರ್ದಿಷ್ಟವಾದ ಕಾಲಮಾನದಲ್ಲಿ ಗುರುತಿಸಲಿಕ್ಕಾಗದು. ಜಗತ್ತಿನ ಯಾವುದೇ ಜನಸಮುದಾಯ ತಮ್ಮ ಬದುಕಿನ ನೋವು ನಲಿವುಗಳ ಅಭಿವ್ಯಕ್ತಿಯನ್ನು ಎರಡು ಸಂಪ್ರದಾಯಗಳಲ್ಲಿ ಉಳಿಸಿಕೊಂಡಿರುತ್ತದೆ. ೧. ಮೌಖಿಕ ಸಂಪ್ರದಾಯ ೨. ಲಿಖಿತ ಸಂಪ್ರಾದಯ. ಮೌಖಿಕ ಸಂಪ್ರಾದಯ ಅನಕ್ಷರಸ್ಥರಿಂದ ಸೃಷ್ಟಿಯಾದರೆ, ಎರಡನೆಯದು ಅಕ್ಷರಸ್ಥ(ಪಂಡಿತ)ರಿಂದ ಸೃಷ್ಟಿಯಾಗುತ್ತದೆ. ಮೊದಲನೆಯದಾಗಿ ಮೌಖಿಕ ಸಾಹಿತ್ಯ ಬೆಳೆದು, ನಂತರ ಎರಡನೆಯದಾಗಿ ಲಿಖಿತ ಸಾಹಿತ್ಯ ಬೆಳೆದದ್ದು ಸಾಮಾನ್ಯ ಪ್ರಕ್ರಿಯೆ. ಕಾಲಾಂತರದಲ್ಲಿ ಇವುಗಳು ಒಂದರ ಪ್ರಭಾವಕ್ಕೆ ಇನ್ನೊಂದು ಒಳಗಾಗುತ್ತಲೇ ಬಂದಿವೆ. ಪ್ರತಿಭೆಗಳಿಂದ ಸೃಷ್ಟಿಯಾದ ಸಾಹಿತ್ಯವು ಜನಸಮುದಾಯದ ಮಧ್ಯದಲ್ಲಿ ಸ್ವಚ್ಛಂದವಾಗಿ ಹಾರಾಡುತ್ತಿತ್ತು. ಸಹೃದಯರೂ, ಸಾಹಿತ್ಯ ಸವಿಯನ್ನು ಸ್ವಚ್ಛಂದವಾದ ಮನಸ್ಸಿನಿಂದ

ಅನುಭವಿಸುತ್ತಿದ್ದರು. ಆದರೆ ಒಂದು ಜನಾಂಗದ ಮೂಲ ಸೆಲೆಯಾದ ಜಾನಪದವು ತನ್ನ ಅಭಿವ್ಯಕ್ತಿಯಲ್ಲಿ ಸ್ವಂತಿಕೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆಯಾದರೂ, ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಬದಲಾವಣೆಯಾದಂತೆ; ಹಾಗೂ ವಿಜ್ಞಾನ, ಜಾಗತೀಕಕರಣದ ಪ್ರಭಾವಗಳಿಂದುದಿಸಿದ ಆಲೋಚನೆ, ಅಭಿರುಚಿ, ಜೀವನ ವಿಧಾನಗಳಲ್ಲಿಯೂ ಬದಲಾವಣೆಗಳಾದವು. ಅನ್ಯ ಸಂಸ್ಕೃತಿಯ ಪ್ರಭಾವ, ವಿಚಾರಧಾರೆಗಳು, ಒತ್ತಡಗಳು, ಇವುಗಳಿಂದ ಮೌಖಿಕ ಸಾಹಿತ್ಯ ಮರೆಯಾಗುತ್ತಾ; ಲಿಖಿತ ಸಾಹಿತ್ಯ ಪ್ರಾಧಾನ್ಯತೆಯನ್ನು ಪಡೆಯಿತು. "ಜಾನಪದವು ಕಾಲಕಾಲಕ್ಕೆ ರೂಪಾಂತರಗೊಂಡು ಕಾವ್ಯಮಯವಾದ ಲಿಖಿತ ದಾಖಲೆಗಳಾಗಿ ಪುರಾಣಗಳಲ್ಲಿ ಮೈದಾಳಿರುವುದನ್ನು ನಾವು ನೋಡಬಹುದು. ಬಹುಶಃ ಜಾನಪದ ಗೀತೆಗಳ ರೂಪದಲ್ಲಿದ್ದ ಪಟಗತೆಗಳು (ancient tales), ಇತಿಹಾಸ ಪೂರ್ವದ ವಿಶ್ವೋತ್ಪತ್ತಿ ವೈಚಿತ್ರ್ಯದ ಕಾಲ್ಪನಿಕ ಕಥೆ (legend), ಸಾಂಪ್ರದಾಯಿಕವಾಗಿ ಬಂದ ಪ್ರಾಚೀನ ಘಟನಾವಳಿಗಳು (episodes), 'ಪ್ರಾಚೀನ ಗಾಥಾ' ಎಂದು ಕರೆಯಲಾಗುತ್ತಿದ್ದು ಮುಂದೆ ಅವುಗಳ ಸಂಕಲನವು 'ಪುರಾಣ ಗಾಥಾ' ಆಯಿತು. ಆನಂತರ ಆ ಓಲೆಯ ಕೃತಿಗಳೆಲ್ಲ ಮುಂದೆ 'ಪುರಾಣ'ವೆಂಬ ಅನ್ವರ್ಥನಾಮದಿಂದಲೇ ರೂಢಿಯಲ್ಲಿ ಬಂದವು."[೨೮]

ಪುರಾಣಗಳು ಇತಿಹಾಸವನ್ನು ಬಣ್ಣಿಸುತ್ತವೆ ಎಂದು ಹೇಳಬಹುದು. ಹಿಂದೆ ಯಾವುದೋ ಕಾಲದಲ್ಲಿ ಅಥವಾ ತಿಳಿದಿರುವ ಹಿಂದಿನ ಘಟನೆಗಳನ್ನು ಪುರಾಣಗಳು ವರ್ಣಿಸಿ ಆಯಾ ಜನಾಂಗಗಳ ದೈವೀ ನಂಬುಗೆ, ಆಚರಣೆ, ಸಂಪ್ರದಾಯಗಳನ್ನು ಬಿಂಬಿಸುತ್ತವೆ. "ಜನಾಂಗಗಳ ಮೂಲಭೂತವಾದ ನಂಬಿಗೆಗಳ ಚೌಕಟ್ಟಿನಲ್ಲಿ" ಇವು ವಿಶ್ವನಿಯಮಗಳನ್ನು ವರ್ಣಿಸುತ್ತವೆ; ಅಮಾನುಷ ಸಂಪ್ರದಾಯಗಳನ್ನು ವಿವರಿಸುತ್ತವೆ; ಸೃಷ್ಟಿಯ ವೈಚಿತ್ರ್ಯಗಳು ಹಾಗೂ ಅವುಗಳ ರಹಸ್ಯವನ್ನು ಭೇದಿಸಲು ಪ್ರಯತ್ನಿಸುತ್ತವೆ. ಈ ರಹಸ್ಯಗಳು ವೈವಿಧ್ಯಮಯವಾದವು. ಅವು ಮಾನವನ ಹುಟ್ಟು, ಸೂರ್ಯ-ಚಂದ್ರ-ನಕ್ಷತ್ರ-ವಿಶ್ವಗಳ ಉಗಮವನ್ನು ಕುರಿತದ್ದಾಗಬಹುದು. ಪ್ರಕೃತಿಯಲ್ಲಿನ ವೈಚಿತ್ರ್ಯಗಳ ಬಗೆಗೆ ವಿಶ್ಲೇಶಣೆ, ಚಿಂತನೆಯಾಗಬಹುದು. ಮರ-ಗಿಡ-ಬಳ್ಳಿ, ಪ್ರಾಣಿ-ಪಕ್ಷಿಗಳ ಬಗೆಗಿನ ಕುತೂಹಲ ಜಿಜ್ಞಾಸೆಗೆ ಪ್ರೇರಣೆ ಕೊಡಬಹುದು. ವಿಶ್ವದ ಸೃಷ್ಟಿ -ಸ್ಥಿತಿ ಲಯಗಳ ಬಗೆಗೆ ಪರ್ಯಾಲೋಚಿಸುವಾಗ ಇವುಗಳ ಹಿಂದಿರುವ ಅದೃಶ್ಯ ಶಕ್ತಿಗಳ ಬಗೆಗೆ ಇರುವ ನಂಬುಗೆ, ವಿಶ್ವಾಸ, ಶ್ರದ್ಧೆ, ಭಕ್ತಿಗಳು ಪುರಾಣಗಳಲ್ಲಿ ಮೈದಾಳಬಹುದು.[೨೯]

ಪುರಾಣಗಳ ವಸ್ತು ವಿಷಯ ಮುಖ್ಯವಾಗಿ ಧಾರ್ಮಿಕವಾದವು. ಆಯಾ ಧರ್ಮದಲ್ಲಿ ಉದಯಿಸಿದ ಹಾಗೂ ದೈವೀ ಸಂಭೂತರೆನಿಸಿಕೊಂಡಿರುವವರ ಕುರಿತು ರಚಿತವಾದಂಥವುಗಳು ಒಂದೊಂದು ಧರ್ಮಕ್ಕೂ ತನ್ನದೇ ಆದ ಪುರಾಣಗಳು ರಚಿಸಲ್ಪಟ್ಟಿವೆ. ಈ ಪುರಾಣಗಳು ತಮ್ಮದೇ ಆಗಿರತಕ್ಕಂತ ಧರ್ಮದ ಇತಿ-ಮಿತಿಗಳಲ್ಲಿ ಲಕ್ಷಣಗಳನ್ನು ಹೊಂದಿರುತ್ತವೆ. ಹಾಗೆಯೇ ಗೊಲ್ಲಾಳೇಶ್ವರನ ಪುರಾಣವು ರಚಿಸಲ್ಪಟ್ಟಿದೆ.

ಹನ್ನೆರಡನೆಯ ಶತಮಾನದ ಪೂರ್ವಕಾಲ ಹಾಗೂ ಈ ಕಾಲಮಾನ ಸಂದರ್ಭದಲ್ಲಿ ಅಸಂಖ್ಯಾತ ಶರಣ-ಶರಣೆಯರು ನಡೆಸಿದ ಜಾಗೃತಾ ಆಂದೋಲನದಲ್ಲಿ ಅಕ್ಷರಸ್ಥರು, ಅನಕ್ಷರಸ್ಥರು, ಅರಿತವರು, ಅರಿಯದವರು,

ಶ್ರೀಮಂತರು, ಬಡವರು, ಮೇಲು -ಕೀಳು ಎನ್ನದೆ ಎಲ್ಲರೂ ಒಟ್ಟುಗೂಡಿ ಮಾಡಿದ ಕ್ರಾಂತಿ ಐತಿಹಾಸಿಕವಾದುದಾಗಿದೆ. ಈ ಕ್ರಾಂತಿಯು ಕೆಲವೇ ಕೆಲವು ವರ್ಷಗಳಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಕ ಕ್ಷೇತ್ರಗಳಲ್ಲಿ ವಿನೂತನವಾದ ಬದಲಾವಣೆಯನ್ನು ತಂದಿತು. ಕಲ್ಯಾಣಕ್ರಾಂತಿಯ ಫಲವಾಗಿ ಎಲ್ಲೆಲ್ಲೂ ಭಯದ ವಾತಾವರಣ ಸೃಷ್ಟಿಯಾಯಿತು. ಆಗ್ಗೆ ಆ ಕ್ರಾಂತಿಯ ಪರಿಣಾಮವಾಗಿ ಶರಣ -ಶರಣೆಯರು ಕಟ್ಟಿಕೊಂಡ ಸಂಘಟನೆ ಒಡೆಯಿತು. ಆದರೆ ಶಿವಶರಣರು ಮತ್ತು ಇವರುಗಳು ಬೋಧಿಸಿದ ನೀತಿ, ಸಿದ್ಧಾಂತ, ತತ್ವಾದರ್ಶಗಳು ಬೇರು ಬಿಟ್ಟಿದ್ದವು. ಇವರುಗಳು ಮೌಖಿಕವಾಗಿ ಹೇಳಿದ ಮತ್ತು ಬರೆದಿಟ್ಟ ಸಾಹಿತ್ಯ ಸಂಪೂರ್ಣ ನಾಶವಾಗಲಿಲ್ಲ.

"ಕಲ್ಯಾಣ ಕ್ರಾಂತಿಯ ನಂತರದ ಕಾಲಾವಧಿಯಲ್ಲಿ ವೀರಶೈವ ಸಾಹಿತ್ಯ ರಚನೆಯಲ್ಲಿ ಮೂರು ಪ್ರಮುಖ ಬಗೆಗಳನ್ನು ಗುರುತಿಸಬಹುದು. ಮೊದಲನೆಯದು, ಬಸವಾದಿ ಶಿವಶರಣರು ನಡೆಸಿದ ಸಮಾಜೋ ಧಾರ್ಮಿಕ ಚಳುವಳಿಯಿಂದ ಸ್ಫೂರ್ತಿ ಪಡೆದು ವಸ್ತುವಿನ ಆಯ್ಕೆ, ನಿರೂಪಣಾ ವಿಧಾನ ಭಾಷೆ, ಛಂದಸ್ಸು, ಇವುಗಳೆಲ್ಲ ಜನಸಮ್ಮುಖವಾದುದು. ಎರಡನೆಯದು ಆಂಧ್ರದ ಪಾಲ್ಕುರಿಕೆ ಸೋಮನಾಥನು ದ್ವಿಪದಿಗಳಲ್ಲಿ ಬರೆದ ತೆಲುಗು, 'ಬಸವ ಪುರಾಣವನ್ನು ಕನ್ನಡದ ಭೀಮಕವಿ ಭಾಮಿನಿ ಷಟ್ಪದಿಯಲ್ಲಿ ಕನ್ನಡಕ್ಕೆ ರೂಪಾಂತರಿಸಿದುದು; ಇಲ್ಲಿಂದ ವೀರಶೈವ ಪುರಾಣ ಪರಂಪರೆ ಪ್ರಾರಂಭವಾದುದು. ಮೂರನೆಯದು ಲಕ್ಕಣ ದಂಡೇಶ, ಜಕ್ಕಣಾರ್ಯ ಮೊದಲಾದವರ ನೇತೃತ್ವದಲ್ಲಿ ವೀರಶೈವ ಪುನರುಜ್ಜೀವನ ಕಾರ್ಯ ಬೃಹತ್ ಪ್ರಮಾಣದಲ್ಲಿ ನಡೆದುದು, ಆ ಹಿನ್ನೆಲೆಯಲ್ಲಿ ವೀರಶೈವ ಸಾಹಿತ್ಯ ಸೃಷ್ಟಿಯಾದುದು."[೩೦]

ಭೀಮ ಕವಿ ತನ್ನ ಮುಂದಣ ಕವಿಗಳಿಗೆ ಪುರಾಣ ರಚನಾ ಪ್ರಕಾರಕ್ಕೆ ಗಟ್ಟಿಯಾದ ತಳಹದಿ ಹಾಕಿದವನು. ಬಸವ ಪುರಾಣದಲ್ಲಿ ಬಸವಣ್ಣನ ಜೀವನ ಚರಿತ್ರೆ ಮುಖ್ಯವಾಗಿಲ್ಲ. ಇದರಲ್ಲಿ ಬಸವಪೂರ್ವದ ಹಾಗೂ ಬಸವನ ಸಮಕಾಲೀನ ಶಿವಭಕ್ತರ, ಶರಣರ, ಕಥೆಯು ಪ್ರಧಾನವಾಗಿದೆ. ವೀರಶೈವ ಪುರಾಣಗಳನ್ನು ಅವಲೋಕಿಸಿದರೆ, ಈ ಧರ್ಮಕ್ಕೆ ಅನುಗುಣವಾಗಿ ಬಾಳಿ ಬೆಳಗಿದ ಮಹಾಪುರುಷರ ವ್ಯಕ್ತಿಚಿತ್ರಣವನ್ನು ಕಾಣಬಹುದು. ಇವುಗಳಿಗೆ ವೀರಶೈವ ಪುರಾಣಗಳೆಂದು ಕರೆಯಬಹುದು.

ವೀರಶೈವ ಪುರಾಣಗಳು ಬಸವಾದಿ ಶಿವಶರಣರ ತತ್ವಗಳನ್ನು ಭಕ್ತಿ, ಶಿವನಿಷ್ಠೆಯನ್ನು ಜಗತ್ತಿಗೆ ತಿಳಿಹೇಳುವುದಕ್ಕಾಗಿ ರಚಿತವಾದವುಗಳೆಂಬುದು ಸುಸ್ಪಷ್ಟ. ಪ್ರಸ್ತುತ ಇಂದಿನ ವಿಜ್ಞಾನಯುಗದ ಕಾಲಮಾನ ಸಂದರ್ಭದಲ್ಲಿ ಪುರಾಣಗಳು ನೀಡುವ ತತ್ವಪ್ರತಿಪಾದನೆಯ ಅರಿವನ್ನು ತಂದುಕೊಳ್ಳುವುದು ಅತ್ಯವಶ್ಯಕವಾಗಿದೆ. ಜನರು ಒಳ್ಳೆಯ ಮಾರ್ಗವನ್ನು ಕಂಡುಕೊಂಡು ಶಾಂತಿಯುತ ಬದುಕನ್ನು ಸಾಗಿಸಬೇಕಾಗಿದೆ. " ಮಹಿಮಾಶೀಲರ ಪವಿತ್ರ ಚರಿತ್ರೆಗಳನ್ನು ಓದುವುದರಿಂದಲೂ, ಕೇಳುವುದರಿಂದಲೂ ಪುಣ್ಯವು ಪ್ರಾಪ್ತವಾಗುವುದಲ್ಲದೆ ಅವರ ನಡೆತೆಗೂ ನಮ್ಮ ನಡತೆಗೂ ಒರೆಹಚ್ಚಿ ನೋಡಿ ಇದ್ದ ನ್ಯೂನಾತಿರೇಕಗಳನ್ನು ಸರಿಪಡಿಸಿಕೊಂಡು ಮನುಷ್ಯರು ಪರಮೇಶ್ವರನ ಪ್ರೀತಿಗೆ ಪಾತ್ರರಾಗಬೇಕೆಂಬುದೇ ಪುರಾಣದ ಮುಖ್ಯ ಉದ್ದೇಶವು ಆಗಿದೆ."[೩೦]

"ಶುದ್ಧ ಸಾಹಿತ್ಯವಿರಲಿ, ಪುರಾಣ ಸಾಹಿತ್ಯವಿರಲಿ ಅದು ಈ ನಿಯಮಕ್ಕೆ ಬದ್ಧವಾಗಿದೆ. ಶಿವನನ್ನು ಎಂದರೆ ಪರಶಿವನನ್ನು ಕುರಿತು ಎಂಬುದು ಸುಸ್ಪಷ್ಟ. ಲೋಕೋದ್ಧಾರ ನಿಮಿತ್ತ ಶಿವನು ಭೂಲೋಕದಲ್ಲಿ ಅವತರಿಸುವುದಿಲ್ಲ. ಅವನ ಲೀಲೆಯ ಈ ಚರಾಚರಸೃಷ್ಟಿ. ಲೀಲೆಯಾದಡೆ ಉಮಾಮಹೇಶ್ವರ; ಲೀಲೆ ನಿಂದಡೆ ಸ್ವಯಂಭು. ಆ ಲೀಲೆಯಲ್ಲಿಯೇ ಶಿವನು ವಿವಿಧ ರೂಪದಲ್ಲಿ ಗೋಚರಿಸಿ ಭಕ್ತರನ್ನು ಉದ್ಧರಿಸುವನು. ಆತನ ಅನಂತ ಲೀಲೆಗಳಲ್ಲಿ ಪಂಚವಿಂಶತಿ ಲೀಲೆಗಳು ಪ್ರಸಿದ್ಧವಾಗಿವೆ. ಶೈವ ಸಾಹಿತ್ಯದಲ್ಲಿ ಅವುಗಳ ಉಲ್ಲೇಖ ವಿಪುಲವಾಗಿದೆ.

**ಆ ಪಂಚವಿಂಶತಿ ಲೀಲೆಗಳೆಂದರೆ**

| | |
|---|---|
| ೧. ಸೋಮಧರ ಲೀಲೆ | ೨. ಉಮಾಮಹೇಶ್ವರ ಲೀಲೆ |
| ೩. ವೃಷಭಾರೂಢ ಲೀಲೆ | ೪. ತಾಂಡವಲೀಲೆ |
| ೫. ಗಿರಿಜಾಕಲ್ಯಾಣ ಲೀಲೆ | ೬. ಭಿಕ್ಷಾಟನ ಲೀಲೆ |
| ೭. ಮಾರಹರಲೀಲೆ | ೮. ಕಾಲಹರಲೀಲೆ |
| ೯. ತ್ರಿಪುರದಹನ ಲೀಲೆ | ೧೦. ಜಲಂಧರ ಲೀಲೆ |
| ೧೧. ಅಚಾರಿ ಲೀಲೆ | ೧೨. ವೀರಭದ್ರ ಲೀಲೆ |
| ೧೩. ಶರಭ ಲೀಲೆ | ೧೪. ಅರ್ಧನಾರೀಶ್ವರ ಲೀಲೆ |
| ೧೫. ಕಿರಾತ ಲೀಲೆ | ೧೬. ಕಂಕಾಳ ಲೀಲೆ |
| ೧೭. ಚಂಡೇಶಾನುಗ್ರಹಲೀಲೆ | ೧೮. ವಿಷಧರ ಲೀಲೆ |
| ೧೯. ಚಕ್ರದಾನ ಲೀಲೆ | ೨೦. ವಿಷಪ್ರಸಾದ ಲೀಲೆ |
| ೨೧. ಉಮಾಸ್ಕಂದ ಲೀಲೆ | ೨೨. ಏಕಪಾದ ಲೀಲೆ |
| ೨೩. ಸುಖಾವಹ ಲೀಲೆ | ೨೪. ದಕ್ಷಿಣಾಮೂರ್ತಿ ಲೀಲೆ |
| | ೨೫. ಲಿಂಗೋದ್ಭವ ಲೀಲೆ. |

ಈ ಲೀಲೆಗಳನ್ನು ಆಧರಿಸಿ ಬರೆದ ವೀರಶೈವ ಸಾಹಿತ್ಯದ ಪ್ರಮುಖ ಕೃತಿಗಳಿವೆ,

**ಶಿವಲೀಲಾಪರ ಕೃತಿಗಳು**

ಶುದ್ಧ ಸಾಹಿತ್ಯ ಕಾವ್ಯಗಳು ಪುರಾಣ ಕಾವ್ಯಗಳು

ಶಿವತತ್ವದಲ್ಲಿ ಜೀವಿಸಿ, ಸಾಕ್ಷಾತ್ ಶಿವಸ್ವರೂಪರಾದ ಮಹಾನುಭಾವರು, ಶಿವಭಕ್ತಿ ಪರಾಯಣರು, ಶಿವಸಮಯ ಪ್ರತಿಷ್ಠಾಪಕರು, ಶಿವತತ್ವ ಸಾಧಕರು, ಬೋಧಕರು, ತದೀಯ ಶರಣ ವ್ರಜದಲ್ಲಿಯೇ (ಶಿವತತ್ವವನ್ನು ಜೀವಿಸಿ) ಬರುತ್ತಾರೆ. ನಿಚ್ಚಳ ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ ಷಟ್ಸ್ಥಲ, ಅಷ್ಟಾವರಣ, ಪಂಚಾಚಾರಗಳನ್ನು ಪರಿಪಾಲಿಸಿದವರು ಶಿವಶರಣರು. ಅವರನ್ನು ಪುರಾತನರು, ಬಸವಾದಿ

ಪ್ರಮಥರು, ರೇಣುಕಾದ್ಯಾಚಾರ್ಯರು, ಪಂಡಿತತ್ರಯರು, ವಿರಕ್ತರು -ನೂರೊಂದು ವಿರಕ್ತರು, ಏಳನೂರೊಂದು ವಿರಕ್ತರು ಎಂದು ಮುಂತಾಗಿ ವಿಭಜಿಸಬಹುದು.

ಪುರಾತನರೆಂದರೆ ತಮಿಳುನಾಡಿನ ಶಿವಭಕ್ತರು, ಅರವತ್ತು ಮೂವರು ಪುರಾತನರು ತಮಿಳುನಾಡಿನಲ್ಲಿ ಪ್ರಸಿದ್ಧರಾಗಿ ಹೋಗಿರುವರು. ಜೈನ, ಬೌದ್ಧ ಸಮುದಾಯಗಳ ಮೂಲಕ ಅವತರಿಸಿ ಶಿವಧರ್ಮವನ್ನು ಪ್ರತಿಷ್ಠಾಪಿಸಿದರು. ತಿರುನೀಲಕಂಠರನ್ನು ಮೊದಲ್ಗೊಂಡು ಸೌಂದರ ನಂಬಿಯಣ್ಣರವರೆಗೆ ಅರುವತ್ತು ಮೂವರ ಚರಿತೆಯನ್ನು ತಮಿಳು ಭಾಷೆಯಲ್ಲಿ ಶಕ್ಕೀಳಾರ್ ಕವಿ 'ಪೆರಿಯ ಪುರಾಣಂ' ಎಂಬ ಗ್ರಂಥದಲ್ಲಿ ವಿವರಿಸಿರುವನು. ಕ್ರಿ.ಶ. ೫ನೆಯ ಶತಮಾನದಿಂದ ೯ನೇ ಶತಮಾನದ ವರೆಗಿನ ಅವಧಿಯು ಈ ತ್ರಿಷಷ್ಠಿ ಪುರಾತನರ ಕಾಲವೆಂದು ತಿಳಿಯಬಹುದು. ಇವರು ಐತಿಹಾಸಿಕ ವ್ಯಕ್ತಿಗಳೆಂಬುದು ಗಮನಾರ್ಹ. ಇವರನ್ನು ಕುರಿತು ಕನ್ನಡದಲ್ಲಿ ನಿರ್ಮಿತವಾದ ಸಾಹಿತ್ಯ ಇಂತಿದೆ.






೩. ಬಸವರಾಜ ವಿಜಯ ಷಡಕ್ಷರದೇವ

೩. ಭಕ್ತಿರ ಸೋನೆ (೧೬೫೦)

೪. ನಂದಿಯಾಗಮಲೀಲೆ (ಭಾಮಿನಿ)
ವೀರಸಂಗಯ್ಯ (೧೭೫೮)

೫. ಪ್ರಭುದೇವರ ಪುರಾಣ -ಎಳಂದೂರ ಹರಿಹರ

೬. ಮಹಾದೇವಿಯಕ್ಕನ ಪುರಾಣ - ಹರೀಶ್ವರ

೭. ದೇವರ ದಾಸಿಮಯ್ಯ ಪುರಾಣ (ಭಾಮಿನಿ) -
ವಿರೂಪಾಕ್ಷ ದೇಶಿಕ

೮. ದೇವಾಂಗ ದಾಸಿಮಯ್ಯ ಪುರಾಣ (ಸಾಂಗತ್ಯ)

೯. ಚನ್ನಬಸವಪುರಾಣ -ವಿರೂಪಾಕ್ಷ ಪಂಡಿತ

೧೦. ಶಂಕರದಾಸಿಮಯ್ಯನ ಪುರಾಣ (ಭಾಮಿನಿ) -
ಮಲ್ಲಿಕಾರ್ಜುನದೇವ (೧೬೮೭)

೧೧. ಅಬ್ಬಲೂರ ಚರಿತೆ

೧೨. ಗೊಲ್ಲಾಳೇಶ್ವರ ಪುರಾಣ

೧೩. ಸಕಲೇಶ ಮಾದಿರಾಜು ಪುರಾಣ"[೨]

ಶಿವನ ಲೀಲೆ ಹಾಗೂ ಶಿವಶರಣರ ಭಕ್ತಿ, ಇವರುಗಳು ಬೋಧಿಸಿದ, ನೀಡಿದ ತತ್ವ ನಿರೂಪಣೆ ಇವು ಮೇಲೆ ನಿರ್ದೇಶಿಸಿದ ಕೃತಿಗಳ ವಸ್ತು ಸಾಮಗ್ರಿ. ಮೇಲಿನ ವಸ್ತು ವಿಷಯ ಸಮ್ಮಿಶ್ರಣದಿಂದ ಪುರಾಣ ಸಾಹಿತ್ಯ ಸೃಷ್ಟಿಯಾಗಿದೆ.

ಶ್ರೀ ಗೊಲ್ಲಾಳೇಶ್ವರ ಪುರಾಣವು "ವೀರಶೈವ ಪುರಾಣ"ಗಳಿಗೆ ಸೇರಿದ ಕಾವ್ಯವಾಗಿದೆ. ಹೀಗಾಗಿ ವೀರಶೈವ ಪುರಾಣಗಳಲ್ಲಿ ಬರುವ ವಿಷಯ ರಾಶಿಯು ಇಲ್ಲಿಯೂ ಬಂದಿರುವುದನ್ನು ಗಮನಿಸಬಹುದಾಗಿದೆ.

೧. ಶಿವನ ಪಂಚವಿಂಶತಿ ಲೀಲೆಗಳ ಸುದೀರ್ಘ ವಿವರಣೆ

೨. ಶಿವಭಕ್ತರ ಚರಿತ್ರೆ

೩. ವೀರಶೈವ ಮತತತ್ವ ನಿರೂಪಣೆ

೪. ನಂದೀಶ್ವರನು ಗೊಲ್ಲಾಳನಾಗಿ ಮರ್ತ್ಯಕ್ಕೆ ಬರುವುದು

೫. ಧವಳಾರಪುರದಲ್ಲಿ ಶ್ರೀ ಗೊಲ್ಲಾಳನ ಜನನ

೬. ಇಷ್ಟಲಿಂಗ ಧಾರಣೆ

೭. ಶಿವಭಕ್ತಿ

೮. ಕೈಲಾಸ ಯಾತ್ರೆ.

## ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣ ವಿಶ್ಲೇಷಣೆ

ಪ್ರಸ್ತುತ ಪುರಾಣವು ಶರಣರ ಚರಿತ್ರೆಯನ್ನು ಅರಿಯಲು ಮಹತ್ವದ ಕಾವ್ಯವಾಗಿದೆಯೆನ್ನಬಹುದು. ಇದು ಹತ್ತು ಸಂಧಿಯನ್ನು ಒಳಗೊಂಡಿದೆ. ಆದರೆ ಹತ್ತನೆಯ ಸಂಧಿಯು ಭಿನ್ನವಾಗಿದೆ. ಇದು ಭಾಮಿನಿ ಷಟ್ಪದಿಯಲ್ಲಿದೆ. ಪ್ರತಿಕಾರನು ನಂತರದಲ್ಲಿ ಸೇರಿಸಿದಂತೆ ಕಂಡುಬರುತ್ತದೆ. ಇಲ್ಲಿ ಗೋಲಗೇರಿ ದೇವಸ್ಥಾನದ ಧರ್ಮದರ್ಶಿಗಳೆಂದು ಹೇಳಿಕೊಳ್ಳುವ 'ದೇವರಮನಿ' ಇವರ ಮನೆತನದ ಇತಿಹಾಸವನ್ನು ಹಳಿಸಾಗರದ ಮರಿಯಪ್ಪ ಸಾಹುಕಾರನು ಗೊಲ್ಲಾಳೇಶ್ವರನ ಭಕ್ತನಾದುದನ್ನು ಹಾಗೂ ಗೋಲಗೇರಿಯಲ್ಲಿ ಗುಡಿಕಟ್ಟಿಸಿ ಇಲ್ಲಿಯೇ ಈ ಮನೆತನವು ನೆಲೆಸಿದ ಪವಾಡ ಕಥನವನ್ನೂ ಹೇಳಲಾಗಿದೆ. ಏಳುನೂರ ಐವತ್ತಾರು ಶರಷಟ್ಪದಿಗಳು ಇರುತ್ತವೆ ಹಾಗೂ ಪ್ರತಿ ಸಂಧಿಯ ಆರಂಭದಲ್ಲಿ ಮತ್ತು ಕೊನೆಯಲ್ಲಿ ಖ್ಯಾತ ಕರ್ನಾಟಕ ವೃತ್ತಗಳಲ್ಲಿ ಒಂದನ್ನು ಮತ್ತು ಕಂದ ಪದ್ಯ ಒಂದನ್ನು ಬಳಸಿದ್ದು ಇರುತ್ತದೆ. (ಆದರೆ ಆ ಅಕ್ಷರಗಣ ಮತ್ತು ಮಾತ್ರಾ ಗಣದ ವಿಂಗಡಣೆಯಲ್ಲಿ ನಿರ್ದಿಷ್ಟತೆಯಿಲ್ಲ. ಕವಿ ಹರೀಶ್ವರನು ಛಂದೋ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿಲ್ಲ ಎಂಬುದು ಕಂಡುಬರುತ್ತದೆ. )

'ಶ್ರೀ ಗೊಲ್ಲಾಳಲಿಂಗೇಶ್ವರ' ಈ ಕಾವ್ಯದ ಕರ್ತೃ ಹರೀಶ್ವರ. ತನ್ನನ್ನು "ಹಂಪೆಯ ಹರೀಶ್ವರ"ನೆಂದು ಗುರುತಿಸಿಕೊಂಡಿದ್ದಾನೆ. ಪ್ರಸ್ತುತ ಪುರಾಣ ಕಾವ್ಯವು ಗೊಲ್ಲಾಳನ ಜೀವನ ವೃತ್ತಾಂತಗಳನ್ನು ತಿಳಿಯಪಡಿಸುವ ಒಳ್ಳೆಯ ಕೃತಿಯಾಗಿದೆ. ಚಾರಿತ್ರಿಕ ದೃಷ್ಟಿಯಿಂದ ಈ ಕೃತಿಯು ಮಹತ್ವದ್ದಾಗಿದೆ ಎಂದು ಹೇಳಬಹುದು. ಇದು ಗೊಲ್ಲಾಳೇಶ್ವರ ಚರಿತ್ರೆಯ ಅಧ್ಯಯನಕ್ಕೆ ಪ್ರಮುಖ ಆಕರ ಕೃತಿಯೂ ಆಗಿರುತ್ತದೆ. ಈತನ ಕುರಿತ ಪುರಾಣದ ಹಸ್ತಪ್ರತಿಯು ಗೋಲಗೇರಿಯ (ವಿಜಾಪೂರ ಜಿಲ್ಲೆಯ, ಸಿಂದಗಿ ತಾಲೂಕಿನ) ಶ್ರೀ ಶರಣಪ್ಪ ಹೊಳೆಪ್ಪ ದೇವರಮನಿ ಅವರಲ್ಲಿ ಈಗಲೂ ದೇವರ ಜಗಲಿಯ ಮೇಲೆ ಪೂಜೆಗೊಳ್ಳುತ್ತಿದೆ. (ಉಕ್ಕಲಿ ಗೌಡರ ಮನೆಯಲ್ಲಿಯೂ ಇದೆ.) ಇದನ್ನು ಗೋಲಗೇರಿಯ ಪೋಸ್ಟ ಮಾಸ್ಟರರು, (ಶ್ರೀ ನೀಲಪ್ಪ) ದೇವರ ಮನೆಯವರಿಂದ ಪಡೆದುಕೊಂಡು ಇದರ ಪ್ರತಿಯನ್ನು ಮಹಾಗಾಂವದ ಬ್ರ.ಶ್ರೀ. ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಜ್ಯೋತಿಷ್ಯ ಪಾಠಶಾಲಾ ಇವರಿಗೆ ನೀಡಿದರು. ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ ಮಹಾಗಾಂವ್ ಜಿ. ಗುಲಬರ್ಗಾ ಇವರ ಪ್ರಕಾಶನದಲ್ಲಿ ಮೊದಲನೇ ಮುದ್ರಣವಾಗಿ ದಿನಾಂಕ ೧೦.೪.೧೯೭೧ ರಲ್ಲಿ ಪ್ರಕಟನೆಗೊಂಡಿರುತ್ತದೆ. ಶರಣ ಗೊಲ್ಲಾಳನ ಚರಿತ್ರೆಯ ದೃಷ್ಟಿಯಿಂದ ಹಾಗೂ ಅಧ್ಯಯನಾಸಕ್ತರಿಗೆ, ಭಕ್ತರಿಗೆ ಈ ಅಮೂಲ್ಯ ಕೃತಿಯನ್ನು ನೀಡಿದ ರುದ್ರಾರಾಧ್ಯ ಶಾಸ್ತ್ರಿಗಳು ವಂದನಾರ್ಹರು.

"ಶ್ರೀ ಗೊಲ್ಲಾಳ ಲಿಂಗೇಶ್ವರನ ಪುರಾಣದ ಹಸ್ತಪ್ರತಿಯು ನಮಗಿಂದಿನವರೆಗೂ ಉಪಲಬ್ಧವಿರಲಿಲ್ಲ. ಗೋಲಗೇರಿ ದೇವರ ಮನೆಯವರಲ್ಲಿ ಇರುವುದೆಂದು ಕೇಳಿ, ಅಲ್ಲಿಯ ಪೋಸ್ಟಮಾಸ್ಟರರಿಗೆ ಒಂದು ಪತ್ರ ಬರೆದೆವು. ಅವರು ಸಾಹುಕಾರ ಶ್ರೀ ಶರಣಪ್ಪನವರಿಂದ ಪುರಾಣದ ಹಸ್ತಪ್ರತಿಯನ್ನು ಪಡೆದು ಪೋಸ್ಟ ಮೂಲಕ

ಕಳಿಸಿಕೊಟ್ಟು ಉಪಕರಿಸಿದರು. ಆ ಪ್ರತಿಯನ್ನು ನಾವು ಇದ್ದಕ್ಕಿದ್ದಂತೆ ಬರೆದುಕೊಂಡು ಮರಳಿ ಅವರಿಗೆ ಕಳುಹಿಸಿಕೊಟ್ಟೆವು.

ಪುರಾಣವನ್ನು ಓದಿ ನೋಡಲಾಗಿ ಸಂಪೂರ್ಣ ಅಶುದ್ಧವಾಗಿದೆ. ಬರೆದ ಕವಿಯು ಹಂಪೆಯ ಹರೀಶ್ವರನೆಂದು ತಿಳಿಯಿತು. ಹರಿಹರನ ಆ ಪ್ರೌಢಶೈಲಿಗೂ ಈ ಪುರಾಣದ ಭಾಷೆಗೂ ಅಜಗಜಾಂತರವಿದೆ. ಆದರೂ ಆತನ ಹೆಸರಿನಿಂದ ರಚಿಸಿದ ಕವಿಯ ವಿದ್ವತ್ತು ಎಷ್ಟೇ ಇದ್ದರೂ, ಆತನ ಭಕ್ತಿಯನ್ನು ಮೆಚ್ಚಬಹುದಾಗಿದೆ. ಹೃತ್ಪೂರ್ವಕವಾಗಿ ಮನಸಾರೆ ಹಾಡಿದ್ದಾನೆ. ಆದುದರಿಂದ ಇದನ್ನು ತಿದ್ದುವುದು ಕಷ್ಟ, ತಿದ್ದದೇ ಇರುವುದೂ ತೊಂದರೆ. ಯಾಕೆಂದರೆ ಕವಿಯ ಉದ್ದೇಶಕ್ಕೆ ಭಂಗ ಬರಬಾರದು ಎಂಬ ದೃಷ್ಟಿಯನ್ನಿಟ್ಟುಕೊಂಡು ಸಮಯೋಚಿತ ತಿದ್ದುಪಡಿಯನ್ನು ಮಾಡಲಾಗಿದೆ. ವಿದ್ವನ್ಮಣಿಗಳೂ, ಪಂಡಿತರೂ,. ಇದನ್ನು ಸಂಪೂರ್ಣ ಓದಿ, ತಮ್ಮ ಸದಭಿಪ್ರಾಯದ ಜೊತೆಗೆ ತಪ್ಪು ತಡಿಗಳನ್ನು ತಿಳಿಸಿದಲ್ಲಿ ಮುಂದಿನ ಮುದ್ರಣಕ್ಕೆ ಸಹಾಯವಾಗುತ್ತದೆಂದು ವಿನಂತಿಸಿಕೊಳ್ಳುತ್ತೇವೆ."[೩೩] ಎಂದು ಶಾಸ್ತ್ರಿಗಳು ಸಹೃದಯನಿಗೆ ಮುಕ್ತ ಅಭಿಪ್ರಾಯ ನೀಡಲು ವಿನಂತಿಸಿಕೊಂಡಿರುವುದು ಅವರ ಹಿರಿಮೆಯನ್ನು ಗುರುತಿಸುತ್ತದೆ.

ಪುರಾಣದ ಕರ್ತೃ ಆಗಿರತಕ್ಕಂಥ ಕವಿ ಕೊನೆಯಲ್ಲಿ ಹೀಗೆ ಪ್ರಾರ್ಥನೆ ಮಾಡಿರುವನು.

"ಬಲ್ಲಂತೆ ಬಂದೆನಿದರೊಳಗೆ ತಪ್ಪುಳ್ಳೊಡದ
ನೆಲ್ಲ ಸದ್ಭಕ್ತ ಮಾಹೇಶ್ವರರುಗಳು ನೀವು ।
ವಳ್ಳಿತಂ ಮಾಡುವುದು ಬೈಯ್ಯಲಾಗದು ನಿಮ್ಮಣುಗನಣುಗನು ಕಾಣಿರೋ
ಬಲ್ಲ ಶಿವಕವಿವರರು ಸಲ್ಲಿಲೆಯಂತಿದ್ದ ।
ಲೆಲ್ಲ ದೇಶದಿಪುಣ್ಯ ಕಾವ್ಯವೆಂದಿನಿಪುದಿದೆ ।
ಕಲ್ಲಿನಾ ಕರಿಯಲದಿ ಮತಿಗೆ ತಕ್ಕನಿತುಸುರ್ದೆಸದ್ಭಕ್ತಿ ಪೂರ್ವಕದಲಿ

ಧಾರುಣಿಯೊಳತ್ಯಧಿಕ ಸುರಪರಿಯ ನೆಲೆವಾಸ
ಧೀರಗುರು ಸಿದ್ಧನೂರ ಕರುಣದಿಂದ ಮಹಾ
ಮೂರುತಿಯ ತಿಳಿದಷ್ಟು ತಿದ್ದಿದನು ಬಲ್ಲ ಪ್ರೌಢರು ತಿದ್ದಿ ಕೊಂಬರೊಲಿದು ॥
ಆರು ಬರೆದವರೆಂದು ಹಾಸ್ಯ ಬೇಡಿದಕೆ ವಿ ।
ಚಾರ ಮಾಡಿಕೊಂಬು ಹೊಲೆಯಾಗದಿಡು ಬರಿದು।
ದಾರಿಗೆಡಹುದರಿಂದ ಶಿವಭಕ್ತರಾದವರಿಗೆರಗುತಲಾನುಸುರುವೆ ॥
ತಪ್ಪು ಸಾವಿರವಿರ್ದರುಳಿದೊಂದು ಗುಣ ಒಂದ
ಗೊಪ್ಪುಗೊಂಬುವಂತ ಬಲ್ಲಂಥ ಮಹಾಜ್ಞಾನಿಗಳು।

ಕಪ್ಪು ಕಿಂಚಿತ್‌ವಿರಲಿ ಕಳೆದು ದಿವ್ಯಾಮೃತವ ಚಪ್ಪರಿವು

ತಪ್ಪದಿಳೆಯೊಳು ಶರಣ ಜನರು ಶಿವಕವಿಗಳಿಗೆ। ಲೀಂಟದಿಹರ ॥

ಒಪ್ಪದಿಂದೆರಗುವೆನು ತಪ್ಪು ತಿದ್ದಿದವರ್ಗೆ ।

ಅಪ್ಪುವೆನು ಚರಣ ಕಿಂಕರರರ ಕಿಂಕರ ಲೆಂಕನಪ್ಪ ನಾನು"[೩೪]

ಹರೀಶ್ವರನು ತನ್ನಂತೆ ಇರುವ ಶಿವಕವಿಗಳನ್ನು ಹಾಗೂ ಭಕ್ತ ವರ್ಗವನ್ನು ನಮ್ರಪೂರ್ವಕವಾಗಿ ಬಿನ್ನವಿಸಿಕೊಂಡಿದ್ದಾನೆ. ಹಾಗೆಯೇ ಕಾವ್ಯವನ್ನು ಸುರಪದದ ಧೀರಗುರು ಸಿದ್ಧನೂರರ ಕರುಣೆಯಿಂದ ನನಗೆ ತಿಳಿದಷ್ಟು ತಿದ್ದಿದೆನು ಎಂದು ಹೇಳಿಕೊಂಡಿದ್ದಾನೆ. ಸಾವಿರ ತಪ್ಪುಗಳಿದ್ದರೂ ಗುಣ ಒಂದನ್ನೇ ಸ್ವೀಕರಿಸಲು ನಮ್ರವಾಗಿ ಕೇಳಿಕೊಂಡಿದ್ದಾನೆ. ಹಂಸಪಕ್ಷಿಯ ಹಾಗೆ ಹಾಲನ್ನಷ್ಟೇ ಪಡೆಯಿರಿ ಎಂದರ್ಥ. ಶಿವಸ್ತುತಿಯನ್ನು ಕೇಳದವರು ಸಂಕಷ್ಟಕ್ಕೆ ಗುರಿಯಾಗುತ್ತೀರೆಂದು ಎಚ್ಚರಿಕೆಯನ್ನೂ ನೀಡಿದ್ದಾನೆ.

"ಶೂಲಪಾಣಿಯ ಶೃತಿಯ ।

ಆಲಿಸುತ ಕೇಳ್ದವನು ।

ಕಾಲಬಾಧೆಗೆ ಶಿಲುಕಿ ನರಳುತಿಹನು ॥

ಮೇಲೆ ಪುನರಪಿ ಜನನ ।

ಜಾಲ ಮರಣಾದಿಗಳು ।

ತೇಲಿ ಬರುವವು ಎಮ್ಮ ಬಾಳ ಬಳ್ಳಿಯಲ್ಲಿ ॥

ದುರುಳ-ದುರ್ಜನರೆಲ್ಲ ।

ಅರಿಯದಾ ಶುನಕಿಗಳು ।

ಬರೆ ಬಾಯಿಮಾತಾಡಿ ತಿರುಗುತಿಹರು ॥

ಮರೆತು ಶಿವಲಿಂಗವನು ।

ಹರಶರಣರಡಿಗಳನು ।

ಗರುವದಿಂದಲೆದಾಡಿ ಕೆಡುತಲಿಹರು "[೩೫]

ಕೆಟ್ಟ ಜನರು ಎಲ್ಲ ಕಾಲಕ್ಕೂ ಇದ್ದವರೆ, ಹರಟೆ ಹೊಡೆದು ಕಾಲಕಳೆಯುವವರು ಶರಣರ ನಡೆಯನ್ನು ಅರಿಯವದವರಾಗಿದ್ದಾರೆಂದು ಕೆಡುತಿಹರೆಂದು ಕವಿ ದುಃಖಿಸಿದ್ದಾನೆ.

ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣದ ಕೃತಿ ರಚನೆಯ ಕಾಲ ಕೃತಿಯಲ್ಲಿ ನಮೂದಿತವಾಗಿಲ್ಲ. ಆದರೆ ಇದರ ಹಸ್ತಪ್ರತಿಯನ್ನು ಶ್ರೀ ಸಿದ್ರಾಮಪ್ಪ ಕುನ್ನಾಳ ಸಾಕೀನ ಜಿಕನಾಳ ಇವರು ತಯಾರಿಸಿದ್ದಾರೆ. ಅದರ ಮೇಲೆ ಶಾಲಿವಾಹನ ಶಕೆ ೧೩೭೯ ಎಂದಿದೆ. ಈ ವಿಷಯವನ್ನು ತಿಳಿಸಿದವರು ಗೊಲ್ಲಾಳೇಶ್ವರ ದೇವಸ್ಥಾನದ

ಧರ್ಮದರ್ಶಿಗಳಾದ ಶ್ರೀ ಗೊಲ್ಲಾಳಪ್ಪ ದೇವರಮನಿ ಎಂಬುವರು. ಆದರೆ ಈ ಕುರಿತು ಪ್ರಕಟಿತ ಪುರಾಣದಲ್ಲಿ ಆಧಾರ ಇರುವುದಿಲ್ಲ. ಆದ್ದರಿಂದ ಈ ಕೃತಿಯ ರಚನಾ ಕಾಲದ ಬಗೆಗೆ ನಿರ್ದಿಷ್ಟವಾದ ನಿರ್ಣಯಕ್ಕೆ ಬರಲಿಕ್ಕಾಗದು.

"ಪಾರಮಾರ್ಥಿಕ ಬದುಕಿನ ಬಗೆಗೆ ತೀವ್ರ ಆಸಕ್ತಿಯುಳ್ಳ ಪ್ರಾಚೀನ ಭಾರತೀಯರು ಪ್ರಾಪಂಚಿಕ ಬದುಕಿನ ವಿಷಯವಾಗಿ ಆ ಬದುಕಿನ ಆಕರ ಸಾಮಗ್ರಿಯ ವಿಷಯವಾಗಿ ತೀರ ಉಪೇಕ್ಷಿತ ನಿಲುವು ತಾಳುತ್ತ ಬಂದಿದ್ದಾರೆ ಮತ್ತು ಅದರ ಇತಿಹಾಸೀಕರಣ ಸಂದರ್ಭದಲ್ಲಿ ಸಾಮಾನ್ಯರು ಐತಿಹ್ಯಕರಿಸುವ (Legend), ವಿದ್ವಾಂಸರು ಪುರಾಣೀಕರಿಸುವ (myth) ದಾರಿ ಹಿಡಿದರು. ಹೀಗಾಗಿ ನಮಗೆ ಸಿಗುವ ಶುದ್ಧ ಆಕರ ಸಾಮಗ್ರಿ ತುಂಬ ಕಡಿಮೆ. ಡಾ. ಎಂ.ಎಂ. ಕಲಬುರ್ಗಿಯವರ ಈ ಮಾತುಗಳು ವಚನ ಸಾಹಿತ್ಯದ ಶಿವಶರಣರ ಚರಿತ್ರೆಗಳಿಗೂ ಅನ್ವಯವಾಗುವತಂಹುಗಳಾಗಿವೆ."[೩೬]

ಕಾವ್ಯವನ್ನು ರಚಿಸಿದವನು ತನ್ನ ಹೆಸರನ್ನು "ಹರೀಶ್ವರ" ಎಂದು ಹೇಳಿಕೊಂಡಿದ್ದಾನೆ. ಆದರೆ ತನ್ನ ತಂದೆ -ತಾಯಿಗಳ ಕುರಿತು ಯಾವುದೇ ಮಾಹಿತಿಯನ್ನು ನಮೂದಿಸಿರುವುದಿಲ್ಲ. ಕವಿ ಕಾವ್ಯದುದ್ದಕ್ಕೂ ತನ್ನ ಹೆಸರನ್ನು ವರಕವಿ ಹರಿದೇವ, ಹರಕವಿ, ಹರೀಶ್ವರ ದೇವಂ, ಹರಿ ಹರೀಶ್ವರ, ಗಬ್ಬಿಗನು, ಹರೀಶ್ವರ ಕವಿ ಎಂದು ಕರೆದುಕೊಂಡಿದ್ದಾನೆ.

"ವಿರೂಪಾಕ್ಷ ಲಿಂಗನ ।
ಕರುಣದಲೊಪ್ಪುವ ।
ಹರಿಹರೀಶ್ವರ ಗಬ್ಬಿಗನು ॥"[೩೭]

॥ಕಂದ॥ "ವಿರುಪಾಕ್ಷಲಿಂಗ ನೊಲುಮೆಯ ।
ವರಕವಿ ಹರಿದೇವನೊರೆದ ಗೊಲ್ಲಾಳಯ್ಯನ ।
ಚರಿತೆಯ ದೊರೆಯಿಂ ಗೊಲ್ಗೆರಿ
ಪುರವಾಸಲಿಂಗ ಲೀಲೆ ಪ್ರಥಮ ಸ್ಥಲಂ"[೩೮]

"ಭೃಂಗೀಶ್ವರಾತಾ ಶಂಕರ ಲಿಂಗವನುಂ ಮನದಿಗೊಂಡು ತಾಂಡವ ಮಾಳ್ಪ. ಮಂಗಲದುತ್ಸವ ಮನದಿಂ ಗಿತಮೇಕೈಕ ನಿರವನಿಂದು ಬಣ್ಣಿಪೆನಿಲ್ಲಿ." ಶಂಕರನನ್ನು ಸಂತೋಷಪಡಿಸಲು ಭೃಂಗೀಶನು, ಮಂಗಲ ಸಮಯದಲ್ಲಿ ತಾಂಡವನರ್ತನಗೈದ ಸನ್ನಿವೇಶವನ್ನು ಬಣ್ಣಿಸುತ್ತಾನೆ. ಮೂರಡಿಯ ಭೃಂಗೀಶನು ನರ್ತನಗೈಯ್ಯುವದಕ್ಕಾಗಿ ಹಾಕಿಕೊಂಡ ವೇಷ-ಭೂಷಣ -ಅಲಂಕಾರಗಳನ್ನು ಭಕ್ತಿಪೂರ್ವಕವಾಗಿ ಹೊಗಳಿರುತ್ತಾನೆ. ನೃತ್ಯಕ್ಕೆ ಬೇಕಾದ ಸಾಹಿತ್ಯ ಪರಿಕರಗಳು ತಾಳ, ಮದ್ದಳೆ, ಸಂಗೀತಗಾರರ ಸಮೂಹವನ್ನು ಹಾಗೂ ಅಲ್ಲಿ ಕೂಡಿರುವ

ದೇವಗಣಂಗಳು, ಗಂಧರ್ವರು, ಮುನಿಗಳು, ಕಿಂಪುರುಷರು, ಖೇಚರರು ಎಲ್ಲರೂ ನೆರೆದಿರುವುದನ್ನು ವರ್ಣಿಸುತ್ತಾನೆ. ಈ ಸಂದರ್ಭದಲ್ಲಿ ಸಹೃದಯಿಗಳು, ಶ್ರಾವಕರು ದೇವಲೋಕದ ಆನಂದಾತಿಶಯವನ್ನು ಅನುಭವಿಸುತ್ತಾರೆ. ಭೃಂಗೀಶನು ತಾಂಡವನರ್ತನದ ವಿವಿಧ ಗತಿಗಳನ್ನು ತೋರಿಸುವನು.

ಪುರಾಣ ಪ್ರವಚನದ ವಸ್ತು ಯಾವ ರೀತಿ ಹೆಣೆಯಬೇಕೆಂಬುದು ಚೆನ್ನಾಗಿ ತಿಳಿದಿರುವಂತಿದೆ. ಇದೂ ಬಹುತೇಕ ಪುರಾಣಕಾವ್ಯ ಕರ್ತೃಗಳಿಗೆ ತಿಳಿದಿರುವ ವಿಷಯವೇ ಆಗಿದೆ. ಬರೀ ವೇದಿಕೆಯ ಭಾಷಣದಿಂದ ಪುರಾಣದ ವಿಚಾರ ಜನರಿಗೆ ಮನದಟ್ಟಾಗಲಾರದು. ಆದುದರಿಂದ ಪೌರಾಣಿಕ ವಿಷಯ ಪರಿಣಾಮಕಾರಕ ಮಾತುಗಳ ಜತೆಯಲ್ಲಿ, ಭಾವಪೂರ್ಣ ಆಂಗಿಕ ಅಭಿನಯ, ಸುಶ್ರಾವ್ಯ ಸಂಗೀತ, ರಾಗತಾಳ, ದೃಷ್ಟಾಂತಾದಿಗಳ ಮೂಲಕ ಪುರಾಣದ ಮುಖ್ಯಕಥೆ ಕೇಳುಗರಿಗೆ ಬೇಸರವಾಗದಂತೆ ಮತ್ತೆ ಜ್ಞಾಪಕದಲ್ಲಿಟ್ಟುಕೊಳ್ಳಲು ಸಹಾಯಕವಾಗಲೆಂದು ಉಪಕಥೆಗಳ ಮೂಲಕ ಪುರಾಣ ಪ್ರವಚಿಸುತ್ತ, ಪಂಡಿತ ಪಾಮರರೆಲ್ಲರ ಮನರಂಜಿಸುತ್ತ, ಆ ಮುಖೇನ ತತ್ವಸಿದ್ಧಾಂತ, ಹಾಡು, ಮಾತು, ಸಂಗೀತ, ಅಭಿನಯಾದಿಗಳ ಮೂಲಕ ಕಥೆಯನ್ನು ರಂಜನೀಯವಾಗಿ ಹೇಳುವ ಕ್ರಮವಿದೆ.

ಭೃಂಗಿಯು ನಾಟ್ಯದಲ್ಲಿ ಬಹುವಿಧವಾದ ರೂಪಗಳನ್ನು, ಶೃಂಗಾರಮಯವಾದ ಸಮಸ್ತ ರಸಗಳನ್ನು ತೋರಿಸುವನು. ಮಹೇಶ್ವರನನ್ನು ನಾನಾವಿಧವಾಗಿ ಕೊಂಡಾಡುವನು. ಶಿವನ ಅನೇಕ ಲೀಲೆಗಳನ್ನು ನಾಟ್ಯವಾಡುವನು. ಶಿವ ಸಭೆಯಲ್ಲಿ ಕೂಡಿದ ಭಕ್ತರು ಮನದಲ್ಲಿ ಸಂತೋಷಪಡುವರು.

"ಅಂತುಹರನ ಸಭೆ ।
ಚಿಂತಾಯ ರಾಶಿಯೊಳ ।
ನಂತ ತೆರದಿ ಭಕ್ತಾದಿಗಳ ॥
ಅಂತರದೊಳಗೆ ।
ಅಂತರದೊಲವುಮ ।
ಹಂತನ ಕೃಪೆ ಮಿಗೆ ಸಂತನ ಶರಧಿ"[೩೯]

ಮೃತ್ಯುಂಜಯನನು ಮನವೆತ್ತು ನೋಡಲು ಸಭೆಯು ಸಂತೋಷದ ಶರಧಿಯಲ್ಲಿ ಉಕ್ಕೇರಿ ಮೆರೆಯಿತು. ಈ ತೆರನಾಗಿ ಎಲ್ಲರೂ ಸಂತಸದಲ್ಲಿ ಮುಳುಗಿರುವ ಸಮಯದಲ್ಲಿ 'ರೇಣುಕ'ನು ಶಿವನು ಕುಳಿತೆಡೆಗೆ ಸಮೀಪಿಸುತ್ತಾನೆ. ಬರುವಾಗ ಮಧ್ಯದಲ್ಲಿ 'ದಾರುಕ'ನನ್ನು ದಾಟಿ ಬರುತ್ತಾನೆ. ಈ ನಡೆಯ ಪರಿಯನ್ನು ಗಮನಿಸಿದ ಹರನು ಅಸಂತುಷ್ಟನಾಗುತ್ತಾನೆ. ಶಿವನು ಮನದಲ್ಲಿಯೇ 'ರೇಣುಕಗೆ ಅಹಂಕಾರ ಬಂದಿದೆ' ಎಂದು ಅರಿತು ನಾರದರೊಡನೆ ವಿಚಾರ ನಡೆಸುತ್ತಾನೆ.

"ಎನಲೀಶನಾಗಳು ।

ನಿನಗೆ ತಾಮಸ ಸರಿ ।

ಜನಿಸೀತು ಮರ್ತ್ಯಲೋಕದಲಿ ॥

ಜನಿಸಿ ರೇಣುಕ ತಮ ।

ವನು ನೀಗಿ ಬಾರೆಂದು ।

ಸನುಮತದಿ ಶಿವನು ಬೋಧಿಸಲು" ॥

ಪ್ರಸ್ತುತ ಪುರಾಣದಲ್ಲಿ ಶರಣರ ಚರಿತ್ರೆಯನ್ನು ಅಳವಡಿಸಲಾಗಿದೆ. ಈ ತೆರನಾಗಿ ಹೇಳಲು, ಮುಖ್ಯ ಕಾರಣ ಶರಣ ಧರ್ಮ ತತ್ವದ ಘನತೆಯನ್ನು ಸಾರಲು, ಅವರ ಮಹಿಮೆಯನ್ನು, ಕರ್ತೃತ್ವ ಶಕ್ತಿಯನ್ನು, ಸಾರಲು ಇವೆಲ್ಲ ರಚನೆಗೊಂಡುದು ವಿದಿತವಾಗುವುದು. ಶರಣರ ತತ್ವಮಯ ಬದುಕು, ಸಂದೇಶ, ನಿಹಿತವಾಗಿರುವುದನ್ನು ತಿಳಿಯುವೆವು. ಇದರಂತೆ ರೇಣುಕನು 'ಕೊಲ್ಲಿಪಾಕಿ ನೆಲೆಯಲ್ಲಿ ಉದ್ಭವಿಸುತ್ತಾನೆ.

"ಕೊಲ್ಲಿಪಾಕಿ ನೆಲೆಯಲ್ಲಿ ಸೋಮಲಿಂಗನಲ್ಲಿ ಮಸ್ತಕದಲುದ್ಭವಿಸಿ ಚಲ್ವ ಸೌಂದರ ಮಿಗಿಲಲ್ಲಿ ಮಹತ್ವವ ಗೆಲ್ಲು ಮರುಳೆ ಹೋಗೆನಲು, ಮೃಡ ನುಡಿ ಗೇಳುತಲಾ ಪೊಡವಿಗೆ ರೇಣುಕ ನಡೆಯೆ"[೪೦] ಈ ಸಂದರ್ಭದಲ್ಲಿ ರೇಣುಕನು ಕೊಲ್ಲಿಪಾಕಿಯಲ್ಲಿ ಜನಿಸಿದನು ಹಾಗೂ ಈ ಸಂದರ್ಭದಲ್ಲಿ ಶರಣೆ ಅಕ್ಕಮಹಾದೇವಿಯ ಪ್ರಸ್ತಾಪವಾಗಿದೆ.

"ಚರಣಸೋಕಲಿದೇವಿ ಹಿರಿದು ಜರಿಯಲಿಕಂ

ಗಿರಿಸುತೆ ಮಹದೇವಿಯರಿಗೆ

ಹರಭಕ್ತ ಮುಗ್ಧೆಗೆ ಬಿರಿನುಡಿಯಾಕೆಂದು

ಧರೆಯೊಳು ಜನಿಸು ಹೋಗೆನಲು

ಅದು ಕಾರಣ ಜನಿಸಿದಳು ವಿರಕ್ತಿಯ

ಮುದಮಿಗೆ ತಾಳಿ ಶ್ರೀ ಗಿರಿಯ

ಕದಳಿಯ ಹೊಕ್ಕಳು ಸದ್ಭಕ್ತಿಯಲಿ ನಿಮ್ಮ

ಪದಪಂಕಜಸವೆಯಲಿ "[೪೧]

ಹೀಗೆ ಹನ್ನೆರಡನೆ ಶತಮಾನದಲ್ಲಿ ಆಗಿ ಹೋದ ಶಿವ-ಶರಣೆಯರ -ಶಿವಶರಣರ ಉಲ್ಲೇಖವು ಯಥೇಚ್ಛವಾಗಿ ಪ್ರಸ್ತಾಪವಾಗಿರುವುದು ಈ ಪುರಾಣದಲ್ಲಿ ಕಂಡುಬರುತ್ತದೆ. ರೇಣುಕ, ಅಕ್ಕಮಹಾದೇವಿ, ಬಸವಣ್ಣ, ಅಲ್ಲಮಪ್ರಭು ಇತ್ಯಾದಿ ಶರಣರನ್ನು ಸ್ಮರಿಸಿದ್ದು ಕಾಣಬಹುದಾಗಿದೆ.

ಭಾಷೆ ಮತ್ತು ಶೈಲಿಯ ದೃಷ್ಟಿಯಿಂದ ವಿಶ್ಲೇಷಣೆ ಮಾಡಿದಾಗ "ಜನಪದ ಜನಾಂಗದ ರಸನೆಯಲ್ಲಿ ನಲಿದಾಡುತ್ತಿರುವ ನುಡಿಗಟ್ಟು, ನಾಣ್ಣುಡಿಗಳ ಆಕರ್ಷಣೆಗೆ ಒಳಗಾದ ಪಂಡಿತ ಕವಿಗಳು ತಮ್ಮ ಕೃತಿಗಳಲ್ಲಿ ಅವುಗಳನ್ನು ಬಳಸಿಕೊಂಡು ದೇಸಿಚೆಲ್ವಿಕೆಯನ್ನು ಮೆರೆದಿದ್ದಾರೆ. ಸಂಸ್ಕೃತದ 'ಗಾಥಾ', ಪ್ರಾಕೃತದಲ್ಲಿ 'ಗಾಹೆ'ಯಾಗಿ ಕನ್ನಡದಲ್ಲಿ 'ಗಾದೆ'ಯೆಂದು ಬಳಕೆಯಲ್ಲಿದೆ. 'ಗಾಥಾ' ಇದು ಸಂಸ್ಕೃತದಲ್ಲಿ ಛಂದೋಪ್ರಕಾರ. ಕನ್ನಡದಲ್ಲಿ ಇದಕ್ಕೆ ಸಂವಾದಿಯಾದ ಪದ ನಾಣ್ಣುಡಿ (ನಾಡು+ನುಡಿ) ಕನ್ನಡದಲ್ಲಿ 'ಗಾದೆ' ನಾಣ್ಣುಡಿಯ ಅರ್ಥವನ್ನು ಅಳವಡಿಸಿಕೊಂಡು ರೂಢಿಗೆ ಬಂದನಂತರ ಅದು ಮರೆಯಾಯಿತು.'[೪೨] ಈ ಪರಿಯಲ್ಲಿ ಬೆಳೆದು ಬಳಕೆಯಲ್ಲಿರುವ ನಾಣ್ಣುಡಿಗಳ ಬಳಸಿದ್ದನ್ನು ಗಮನಿಸಬಹುದು.

"ನಾರದ ನುಡಿದ ವಿ ।
ಚಾರ ವೀಲೋಕದ
ತೋರಿಕೆಯ ನಾಣ್ಣುಡಿಯಹುದು ॥
ಧಾರುಣಿಯೊಳು ಮುಗ್ಧ
ಚಾರಿತ್ರ್ಯದೋಳ್ಪುಟ್ಟಿ
ಸಾರಭಕ್ತಿಯಲ್ಲಿರೆ ಲೇಸು"[೪೩]

ಈ ತೆರನಾಗಿ ಭಾಷೆಯ ಮಹತ್ವದ ಅಂಶಗಳಲ್ಲಿ ಒಂದಾದ ಗಾದೆಯ ಬಳಕೆಯನ್ನು ಕಾವ್ಯದ ಕೆಲವು ಭಾಗಗಳಲ್ಲಿ ಅರ್ಥಪೂರ್ಣವಾಗಿ ಬಳಸಿದ್ದಾನೆ. ಕವಿಯು ತನ್ನ ಕಾಲ ಸಂದರ್ಭದಲ್ಲಿ ಹಾಗೂ ಜನ ಮಧ್ಯದಲ್ಲಿ ಚಲಾವಣೆಯಲ್ಲಿರುವ ಆಡುನುಡಿ, ದೇಸಿನುಡಿ, ಗಾದೆಮಾತುಗಳನ್ನು ಬಳಸಿದ್ದು ಆ ಕಾಲದ ಹಿನ್ನೆಲೆಯಲ್ಲಿ ಸೂಕ್ತವಾದುದೆಂದು ಹೇಳಬಹುದು.

ಕಾವ್ಯ ಸೌಂದರ್ಯಕ್ಕೆ ಕಾರಣವಾಗುವ ಅನೇಕ ಅಲಂಕಾರಗಳನ್ನು ಬಳಸಿಕೊಂಡು ಪುರಾಣ ಕಾವ್ಯವನ್ನು ಚೇತೋಹಾರಿಯಾಗುವಂತೆ ಮಾಡಲು ಕವಿ ಪ್ರಯತ್ನಿಸಿದಂತೆ ಕಾಣುತ್ತದೆ. ಇಲ್ಲಿ ನಿಸರ್ಗ ಸೌಂದರ್ಯ ವರ್ಣನೆಯನ್ನು ಕಾಣುತ್ತೇವೆ. ಉಪಮೆ, ರೂಪಕ, ದೃಷ್ಟಾಂತ, ಅರ್ಥಾಂತರನ್ಯಾಸ. ವಿಶಿಷ್ಟ ಬಗೆಯ ಅಲಂಕಾರಗಳನ್ನು ಇದರಲ್ಲಿ ಕಾಣುತ್ತೇವೆ. ಈ ರೀತಿಯಾಗಿ ಅಲಂಕಾರಗಳನ್ನು ಬಳಸುವುದರಿಂದ ಪುರಾಣ ಕಾವ್ಯ ಜನಸಾಮಾನ್ಯರಿಗೆ ದೂರಿನದಾಗಿ, ಹೊರಗಿನದಾಗಿ ಕಾಣುವುದೇ ಇಲ್ಲ. ಉಪಮಾ ರೂಪಕಾದಿಗಳು, ಕವಿಯ ಸುತ್ತಣ ಪರಿಸರದಿಂದ ಸಾಮಗ್ರಿ ಪಡೆದು ಪುರಾಣದಲ್ಲಿ ಬಳಕೆಗೊಳ್ಳುವುದರಿಂದ, ಶ್ರೀ ಸಾಮಾನ್ಯರು ಪುರಾಣದ ವಿಷಯಕ್ಕೆ ತೀವ್ರವಾಗಿ ಸ್ಪಂದಿಸಲು ಅನುಕೂಲವಾಗಿದೆ. ಇವುಗಳಿಂದ ಕಾವ್ಯದ ಸೊಬಗು ಹೆಚ್ಚಿದುದಕ್ಕಿಂತಲೂ, ಧರ್ಮದ ವಿಷಯ ಪರಿಣಾಮಕಾರಿಯಾಗಿ ಪ್ರಕಟವಾಗಿದೆ ಇದು ಹರೀಶ್ವರನ ಜಾಣತನಕ್ಕೆ ನಿದರ್ಶನವಾಗಿದೆ.

"ಘುಳಿ ಘುಳಿಸುವ ವನ ।
ಹೊಳೆ ಹೊಳೆ ತಳತಲಿ ।
ನಳನಳಿಸುವ ಬಲು ದನಿಯ ॥
ಛಳಿಪಳಿ ಸುತಕಂ ।
ಗೊಳಿಸಿ ಶೋಭಾಯತ ।
ಜಳನಿಧಿಯಂ ಬಣ್ಣಿಸುವೆ
ಮುತ್ತಿನ ಚಿಪ್ಪುಗ ।
ಳುತ್ತಮ ರತ್ನಗ
ಳಿತ್ತರ ವಿದ್ರುಮ ಮಲ್ಲಿ ॥
ಚಿತ್ತರ ಸರನಿಧಿ
ಯತ್ತದಿ ನೋಡಲು
ಮತ್ತತ್ತ ತಾನೆಯಾಗಿಹುದು"[೪೪]

ಇಲ್ಲಿ ಉಕ್ತವಾದ ಪದಗಳು ಜನಸಾಮಾನ್ಯರಿಗೆ ಚಿರಪರಿಚಿತವಾದವು. ಹೀಗೆ ಕಾವ್ಯ ಕಟ್ಟಿದ ಮಹಾಕವಿ, ವರಹರೀಶ್ವರ, ಮುನಿವರ ಸುಪಾರಶಗೊಲಿದು ಅವನ ಇಚ್ಛೆಯಂತೆ ಗೊಲ್ಲಾಳನ ಕಥೆಯನ್ನು ಹೇಳುವನು. ಕೇಳಿದ ಶರಣರಿಗೆ ಅಹುದು ಸತ್ಪಥಮ್ ಎಂದು ಕವಿ ಸದಿಚ್ಛೆಯನ್ನು ವ್ಯಕ್ತಪಡಿಸಿದ್ದಾನೆ. ಈ ಧರಣಿಗೆ ಮುಗುದನು ಬರಲು ಗಿರಿಗಳಲ್ಲಿ ಸವಾಲಕ್ಷ ದ್ವೀಪಗಳಲ್ಲಿ, ತಪ್ಪಲು ಪ್ರದೇಶಗಳಲ್ಲಿ ಒಂದೇ ಸಮನೆ ಮಳೆಗರೆದು ತರುಲತೆಗಳೆಲ್ಲ ತಣಿದವು, ಬೆಳೆದವು. ಈ ಪ್ರಕೃತಿಯ ಸೌಂದರ್ಯವನ್ನು ದಿಟ್ಟಿಸುತ್ತ, ಸವಿಯುತ್ತ ಜಂಬೂದ್ವೀಪವನ್ನು ಸುತ್ತುವರಿದು ಮೆರೆಯುತ್ತಿರುವ ಸಮುದ್ರವನ್ನು ಕಂಡು ಮುಗ್ಧನು ಬೆರಗಾದನು. ಈ ಮೊದಲು ಇಂತಹ ನಿಸರ್ಗದ ಚೆಲುವನ್ನು ಕಂಡಿರಲಿಲ್ಲವೆಂದು ಚಕಿತನಾದನು ಎಂದು ಹೇಳುತ್ತ ಕವಿಯು 'ಜಲನಿಧಿಯಂ ಬಣ್ಣಿಸುವೆಂ' ಎಂದು ಸಾಗರದ ವರ್ಣನೆಗೆ ತೊಡಗುತ್ತಾನೆ.

'ಕುಂತಳ ದೇಶಕೆ । ಚಿಂತಾಮಣಿಯೊಪ್ಪ । ಮಂತಳದೇಶ ಮಧ್ಯದಲ್ಲಿ ।
ಸಂತತ ಸೊಬಗನಾ ।ಯೆಂತು ತೋರ್ಪುದು ಭೂ ।
ಕಾಂತೆ ಮಂಗಳ ತಾಳಿಯಂತೆ ॥

ಜಂಬೂದ್ವೀಪದ ಮಧ್ಯದ ಇಂಬಿನಲ್ಲಿ ಕುಂತಳದೇಶವಿದ್ದು, ಅಲ್ಲಿ ಶಂಬರಾರಿಯ ಮಾತೆ ಬಂದು ಲೀಲೆಯಾಡಿದಳು. ಅದರಂತೆ ಅಲ್ಲಿ ಮಹದೇವ ಭಕ್ತರು, ಮುನೀಶ್ವರರು, ಪ್ರಮಥರು ನೆಲೆಸಿದ್ದರು. ಆ ದೇಶವು ಅಷ್ಟೈಶ್ವರ್ಯಗಳಿಂದಲೂ, ನಿಸರ್ಗ ಸಂಪತ್ತುಗಳಾದ ಬೆಳೆ, ಹೂ, ಹಣ್ಣು ಕೆರೆಭಾವಿಗಳಿಂದಲೂ

ತುಂಬಿಕೊಂಡು ಶೋಭಿಸುತ್ತಿತ್ತು. ದಾರಿ ಹೋಕರಿಗೆ, ಪಯಣಿಗರ ಬಾಯಾರಿಕೆಗೆಂದು ಅರವಟ್ಟಿಗೆಗಳೂ ಇದ್ದವು. ನೀರೆರೆಯಲು ನಗುಮೊಗದ ತುಂಬು ಜವ್ವನೆಯರೂ ಇದ್ದರು.

ಈ ಕುಂತಳ ದೇಶದ ಮಧ್ಯದಲ್ಲಿ ಭೂಕಾಂತೆಯ ಎದೆಯ ಮೇಲಿನ ಮಂಗಳಸೂತ್ರದಂತೆ, ದೇವಲೋಕಕ್ಕೆ ಸಮನೆನಿಸುವಂತೆ, ಭೂಲೋಕದಲ್ಲಿ ಎಲ್ಲೆಡೆಗೂ ಲವಲವಿಕೆ ಮಿಗುವಂತೆ, ಹವಳ ಮತ್ತು ಮಾಣಿಕ್ಯಗಳ ಕಾಂತಿಯಂತೆ "ಢವಳಾರ" ಪುರವು ಕಂಗೊಳಿಸುತ್ತಿತ್ತು.

"ದಿವಿಜಪುರಕೆ ಸಮ ।
ಭವನದೊಳಗೆಲ್ಲಿಯು ।
ಲವಲವಿಕೆ ಮೀರಿಸುವಂತೆ ॥
ಹವಳ ಮಾಣಿಕ ಮುತ್ತು ।
ಧವಳ ಮೈ ಒಲಿದಂತೆ ।
ಢವಳಾರವೆಂಬ ಪುರಮೆರೆದು".

ಇಲ್ಲಿರುವ ಭವ್ಯವಾದ ಕೋಟೆ, ಹುಲಿಯ ಮುಖದಂತಿರುವ ದ್ವಾರ ಇತ್ಯಾದಿಗಳ ವರ್ಣನೆಯನ್ನು ಕವಿ ಓತಪ್ರೋತವಾಗಿ ಹೊಗಳಿದ್ದಾನೆ. ಢವಳಾರ ಪುರಕ್ಕೆ ದೇವಲೋಕದ ದೇವೇಂದ್ರನಂತಿದ್ದ ಮಹಾದೇವ ಭೂಪನು ಒಡೆಯನಾಗಿದ್ದನು. ಈತನು ಸತ್ಯನೂ, ನೀತಿ ನಿಪುಣನೂ ಚಿನುಮಯ ಭಕ್ತನೂ ಆಗಿದ್ದನು. ಅವನ ಸತಿ ಪತಿಭಕ್ತಿ ಸಂಪನ್ನೆ ರತ್ನಾವಳಿ. ರೂಪದಲ್ಲಿ ಕಾಮನಂತೆ, ಭಕ್ತಿಯಲ್ಲಿ ಅರುಂಧತಿಯಾಗಿದ್ದಳು. ಸತಿ-ಪತಿಯರು ಭಕ್ತಿಯಲ್ಲಿ ಏಕೋಭಾವದವರಾಗಿದ್ದರು. ಮಹದೇವ ನೃಪನು ಢವಳಾರಕ್ಕೆ ಕಾಮಧೇನುವಾಗಿದ್ದನು. ಚತುರಂಗಬಲ, ಇತರ ಭೌತಿಕ ಸಂಪತ್ತನ್ನು ಹೊಂದಿದ್ದ ಅರಸು ಮಹದೇವ ಸತಿ ರತ್ನಾವಳಿಯೊಂದಿಗೆ ಸಂತಸದಿಂದಿದ್ದನು.

ಢವಳಾರ ಗ್ರಾಮವು ವಿಜಾಪೂರ ಜಿಲ್ಲೆಯ, ಸಿಂದಗಿ ತಾಲ್ಲೂಕಿನಲ್ಲಿರುತ್ತದೆ. ಈ ಗ್ರಾಮವು ಗೋಲಗೇರಿಯಿಂದ ನಾಲ್ಕು ಕಿಲೋಮೀಟರ ಅಂತರಲ್ಲಿದಲ್ಲಿರುತ್ತದೆ. ಈ ಊರಿನ ಇತಿಹಾಸ ಕಾಲಗರ್ಭದಲ್ಲಿ ಮಸಕಾಗಿ ಹೋಗಿದ್ದುದು ಕಂಡುಬರುವುದು. ಹೊಸದಾಗಿ ಕಟ್ಟಿಕೊಂಡ ಊರಿನ ಪಕ್ಕದಲ್ಲಿಯೇ ಪ್ರಾಚೀನ ಢವಳಾರದ ಕುರುಹುಗಳಿವೆ. ಇಲ್ಲಿಯೂ ಲಿಂಗಯ್ಯನ ದೇವಸ್ಥಾನವಿದೆ. ಇಲ್ಲಿ ವಾಸಿಸುವ ಜನಾಂಗ ಹಾಗೂ ಸಮಾಜ ಇವೆರಡನ್ನೂ ಗುರುತಿಸಲಿಕ್ಕಾಗಿ, ಈ ಗ್ರಾಮದಲ್ಲಿ ಹೆಚ್ಚು ಕುರುಬ ಜನಾಂಗವೇ ಹೆಚ್ಚು ವಾಸವಾಗಿದೆ. ಇವರೆಲ್ಲರೂ ನಶಿಸಿ ಹೋಗಿರತಕ್ಕಂಥ ಗ್ರಾಮದ 'ಲಿಂಗಯ್ಯ"ನನ್ನು ಆರಾಧಿಸುತ್ತಾರೆ. ಪ್ರಮುಖವಾದ ಅಂಶವೆಂದರೆ ಅಗಸಿ ಬಾಗಿಲು ಎಂದು ಗುರುತಿಸಿಕೊಳ್ಳುವ ಎರಡೂ ಕಲ್ಲಿನ ಸ್ತಂಭಗಳು ಈಗಲೂ ನಿಂತಿವೆ. ಮತ್ತು ಹೊಲದ ಪಕ್ಕದ ಬದುವಿನಲ್ಲಿ ಹಣಮಂತ ದೇವರ ಮೂರ್ತಿಯೂ ಅನಾಥವಾಗಿ ಬಿದ್ದಿರುತ್ತದೆ.

ಸುಮಾರು ನಾಲ್ಕು ಎಕರೆಯಷ್ಟು ವಿಸ್ತಾರವಿರುವ ಈ ಜಮೀನನ್ನು ಪರೀಕ್ಷಿಸಲಾಗಿ ಕಲ್ಲು ಮತ್ತು ಹಾಳುಮಣ್ಣಿನಿಂದ ಕೂಡಿದೆ. ಈ ಜಮೀನಿನಲ್ಲಿ ಬಿದ್ದಿದ್ದ ನಾಲ್ಕು ಶಾಸನ ಕಲ್ಲುಗಳನ್ನು ದೇವಸ್ಥಾನದಲ್ಲಿರಿಸಿದ್ದಾರೆ. ಆದರೆ ಓದಲು ಸಾಧ್ಯವಾಗದಷ್ಟು ಹಾಳಾಗಿ ಹೋಗಿವೆ.

ಗೊಲ್ಲಾಳನ ವಂಶಸ್ಥರ ಕುರುಹುಗಳ ಕುರಿತು ಢವಳಾರ ಗ್ರಾಮದ ಗ್ರಾಮಸ್ಥರ ಕುರಿತು ಹೇಳಿಕೆ ಪಡೆಯಲಾಗಿ, ಗೊಲ್ಲಾಳನು ಢವಳಾರದಲ್ಲಿ ಹುಟ್ಟಿದ್ದಾನೆ. ಈಗಲೂ ಗೋಲಗೇರಿಯಲ್ಲಿ ಗೊಲ್ಲಾಳನ ತೇರು ಎಳೆಯುವಾಗ ನಮ್ಮೂರಿನಿಂದ ಮಿಣಿ (ತೇರು ಎಳೆಯುವ ಹಗ್ಗ)ಯನ್ನು ತೆಗೆದುಕೊಂಡು ಹೋಗುತ್ತೇವೆಂದು ಹೇಳಿದರು. ಇತ್ತಿತ್ತಲಾಗಿ ಎಂಟು ಹತ್ತು ವರುಷಗಳಿಂದ ಅದು ನಿಂತಿದೆ ಎಂದು ವಿವರಿಸಿದರು. ಗೋಲಗೇರಿ ಎಂಬುದು ಮೊದಲು ಗ್ರಾಮವಾಗಿರಲಿಲ್ಲ. ಅದು ಗೊಲ್ಲಾಳನು ಹಾಕಿದ ಕುರಿಗಳ ದೊಡ್ಡಿ. ಭೌಗೋಳಿಕವಾಗಿ ಗೋಲಗೇರಿ ಎತ್ತರದ ದಿನ್ನಿಯ ಮೇಲಿರುತ್ತದೆ. ಸುತ್ತಲಿನ ಗ್ರಾಮದ ಜನರ ಹೇಳಿಕೆಯು ಇದೇ ಆಗಿದೆ. ಢವಳಾರದಲ್ಲಿ ಕುರುಬ ಜನಾಂಗ ಹೆಚ್ಚಾಗಿ ವಾಸಿಸುತ್ತಿದ್ದುದರಿಂದಲೇನೋ ಇವರೆಲ್ಲರೂ ಅಮೋಘಸಿದ್ಧನನ್ನು ಆರಾಧಿಸುತ್ತಾರೆ. ಗೊಲ್ಲಾಳನಿಗೆ ನಡೆದುಕೊಳ್ಳುತ್ತಾರೆ.

ಮಹದೇವ ನೃಪ ಇವನ ಸತಿ ರತ್ನಾವಳಿಯರು ಇಲ್ಲಿ ವಾಸವಾಗಿದ್ದರು. ಈತ ಢವಳಾರಪುರಕ್ಕೆ ಅರಸನಾಗಿದ್ದನೆಂಬುದಕ್ಕೆ ಯಾವ ಐತಿಹಾಸಿಕ ಪುರಾವೆಗಳಿಲ್ಲ. ಇದು ಕವಿ ಕಲ್ಪಿತ ಪಾತ್ರವೆಂದು ಹೇಳಲಿಕ್ಕಾಗದು. ಈ ವಿಷಯದಲ್ಲಿ ಇನ್ನೂ ಹೆಚ್ಚು ಸಂಶೋಧನೆ ಆಗಬೇಕಾಗಿದೆ.

ಪುರಾಣಕಾವ್ಯದಲ್ಲಿ ಮಹಾಕಾವ್ಯಗಳ ಲಕ್ಷಣಗಳಾದ ಹದಿನೆಂಟು ತೆರನಾದ ವರ್ಣನೆಗಳನ್ನು ತನ್ನ ಈ ಚಿಕ್ಕ ಪುರಾಣದಲ್ಲಿ ಹಿಡಿದಿಡುವ ಕವಿಯ ಪ್ರಯತ್ನವನ್ನು ಮೆಚ್ಚಲೇಬೇಕು.

ಮಹದೇವ ಅರಸರ ಸಂಪತ್ತು ಭೋಗ ವೈಭವವನ್ನು ವರ್ಣಿಸುವುದರ ಜೊತೆಗೆ ಶೃಂಗಾರ ರಸವನ್ನು ಉಣಬಡಿಸಿದ್ದಾನೆ ಕವಿ. ಶ್ರೇಷ್ಠ ಹೆಣ್ಣುಗಳು ಯಾರು ? ಯಾರು ? ಎಂಬುದನ್ನು ಹೆಸರಿಸಿದ್ದಾನೆ.

"ಹಸ್ತಿನಿ ಚಿತ್ತಿನಿ ।
ಮತ್ತೆ ಶಂಕಿನಿಯ
ರುತ್ತಮ ಪದ್ಮಿನಿಯರ್ ಶೋಭಿಪರು ॥
ಚಿತ್ತಸೆಳೆವ ಸ್ತ್ರೀ ।
ವಾರ್ತೆಯ ಕೇಳುತ ।
ಸುತ್ತುತ ರಾಜಕುವರರಲ್ಲಿ ॥

ಹೆಣ್ಣಿನ ಚಲುವ ಲಾ।
ವಣ್ಯವ ನೊರೆವರೆ ।
ಚಿಣ್ಣವಿಚರು ಬಾಯ್ಬಿಡುತಿಹರು ॥

ನಾಣ್ಯಸೆಳೆವ ಆ ।

ಗಣ್ಯ ಹೆಣ್ಣುಗಳು ।

ಕಣ್ಣು ಹಾರಿಸುವ ಕುಂಟಣಿಗರು॥"[೪೫]

ಪುರಾಣ ರಚನೆಯು ಭಾರತೀಯರ ಬದುಕಿನಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡಿದೆ. ತತ್ವ, ಜ್ಞಾನ, ನೀತಿಗಳನ್ನು ಸಾಮಾನ್ಯ ಜನರಲ್ಲಿ ಬಿಂಬಿಸಲು ಅವು ತಮ್ಮದೇ ಮಾರ್ಗವನ್ನು ಅನುಸರಿಸುತ್ತವೆ. ಕಥಾಹಂದರದ ರಂಜನೀಯತೆ ಹಾಗೂ ತಾತ್ವಿಕ ನಿರೂಪಣೆಗಳು ಅದರಲ್ಲಿ ಮೇಳೈಸಿರುತ್ತವೆ. 'ಪುರಾಣ' ಎಂಬುದು ಭಾರತೀಯ ಎಲ್ಲಾ ಧರ್ಮಗಳಲ್ಲಿ ಕಾಣಿಸಿಕೊಂಡಿದೆ. ಶಾಸ್ತ್ರೀಯ ದೃಷ್ಟಿಕೋನ, ಕಾವ್ಯದ ಕಲ್ಪನೆ, ಇತಿಹಾಸಾದಿಗಳ ವೃತ್ತಾಂತಗಳೂ ಪುರಾಣದಲ್ಲಿ ಕಾಣಿಸುವುದುಂಟು. ಆದರೆ ಪುರಾಣಗಳು ಪ್ರಧಾನವಾಗಿ ಜನರಲ್ಲಿ ತತ್ವಧರ್ಮಗಳನ್ನು ಪ್ರಚುರಪಡಿಸುವ ಧ್ಯೇಯ ಹೊಂದಿರುತ್ತವೆ. ಜನಮನಕ್ಕೆ ತಲುಪಿಸಲು ಮೇಲಿನಂತೆ ಕೆಲವು ತಂತ್ರಗಳನ್ನು ಬಳಸಿಕೊಂಡರೂ, ಹೇಳುವುದನ್ನು ಅವು ಅಧಿಕೃತವಾಗಿ ಸಾರುತ್ತವೆ. ಇಲ್ಲಿಯೂ ಬಳಸಿದ ತಂತ್ರಗಾರಿಕೆಯನ್ನು ಗಮನಿಸಬಹುದು. ಮಧುಮಾಸ ಕಾಲಿಟ್ಟಿತು. ಎಲ್ಲೆಡೆಗೂ ಹಸಿರು ಚಿಗುರು, ಹೂಮಿಡಿಗಳಿಂದ ತರುಲತೆಗಳು ರಾರಾಜಿಸಿದವು. ಅದನ್ನು ಕಂಡು ರತ್ನಾಂಬಿಕೆ ಧರಣೀಶ ಮಹದೇವನಿಗೆ ಚೈತ್ರಾಗಮನವನ್ನು ಅರುಹಿದಳು. ಅಂದಿನ ಹಗಲನ್ನು ಸವಿಯುತ್ತ ಆನಂದಿಸುತ್ತಿರಲು ಸೂರ್ಯ ಪಶ್ಚಿಮಾದ್ರಿಗಿಳಿದನು. ಪೌರ್ಣಿಮೆಯ ಚಂದ್ರನು ಉದಯಿಸಿದನು. ಚಂದ್ರಿಕೆ ದೆಸೆದೆಸೆಗಳಲ್ಲಿ ಪಸರಿಸಿ ಪುರವನ್ನು ಬೆಳಗಿತು. ಅರಸನು ಗಂಧ ಪರಿಮಳಪೂಸಿತನಾಗಿ, ವಿದೂಷಕರನ್ನು ಕೂಡಿಕೊಂಡು ಪುರದ ವೀದಿಗಳನ್ನು ಸುತ್ತಲು ಹೊರಟನು. ಹಾಗೆಯೇ ವೀಕ್ಷಿಸುತ್ತ ಬರುತ್ತಿರಲು ಸೊಬಗಿನ ತಾಣ ಗಣಿಕೆಯರ ವೀದಿಗೆ ಬಂದನು. ಅಲ್ಲಿ ನಡೆಯುತ್ತಿದ್ದ ನಾಟ್ಯ-ಸಂಗೀತ, ತಾಳ-ಮೇಳಗಳ ಅನುರಾಗದ ಉಲಿ, ಭೋಗಿ ಜನರಾನಂದದ ನೆಲೆಯನ್ನು ಕಂಡನು.

ವೇಶ್ಯೆಯರಾದ ಎಳೆಯರು, ಹರೆಯದವರು, ಪ್ರೌಢರು, ಮುದಿಯರ ಕುರಿತಾದ ನಿರರ್ಗಳವಾದ ವರ್ಣನೆಗೆ ತೊಡಗಿದ್ದಾನೆ. ಬೀದಿ ಬೀದಿಗಳನ್ನು ಸುತ್ತಿ ಸುತ್ತಿ, ಆನಂದಿಸಿ, ಬಳಲಿ ಬೆಳಗಾಗುವ ಹೊತ್ತಿಗೆ ನೃಪನು ತನ್ನ ನಿಲಯವನ್ನು ಸೇರುತ್ತಾನೆ. ಅದನ್ನೇ ಕವಿ ಹೀಗೆ ಹೇಳಿದ್ದಾನೆ.

"ಇಂತಿರೆ ವೇಶ್ಯೆಯ । ರಂತರ ಕೇರಿಯು ।

ತಿಂಥಿಣಿಯನು ನೃಪನೋಡಿ

ಸಂತಸವಾಗುತ ।ಕಾಂತಿ ಎಸಗಲು ।

ಶಾಂತಿ ಮೂಡಲೊಳು ಕೆಂಪೇರಿ ॥"

ರವಿತೇಜನ ಉದಯ ವರ್ಣನೆ ಮಾತ್ರವಲ್ಲದೆ, ಚಂದ್ರೋದಯ, ಅರವಟ್ಟಿಗೆ, ಚೈತ್ರದ ಆಗಮನ, ಇತ್ಯಾದಿಗಳ ವರ್ಣನೆಯ ನಿರೂಪಣೆಯೇ ಪ್ರಧಾನ ಅಂಶವಾಗಿದೆ.

ಹೀಗೆಯೇ ಶರಣ ಚರಿತೆಯ ದ್ಯೋತಕವಾಗಿರುವ ವೀರಶೈವ ಪುರಾಣಗಳು ವ್ಯಕ್ತಿನಿಷ್ಠವಾಗಿ, ವಸ್ತುನಿಷ್ಠವಾಗಿ, ನೀತಿ -ತತ್ವನಿಷ್ಠವಾಗಿ ರಚನೆಗೊಂಡಿವೆ. ಗೊಲ್ಲಾಳನು ಏಳನೂರ ಎಪ್ಪತ್ತು ಅಮರಗಣಾಧೀಶರಲ್ಲಿ ಒಬ್ಬನಾಗಿದ್ದಾನೆ. ಶಿವಲೋಕದಲ್ಲಿ ತಪ್ಪು ಕಾರ್ಯ ಎಸಗಿದ ನಿಮಿತ್ತ ಭೂಲೋಕದಲ್ಲಿ ಜನಿಸಬೇಕಾಯಿತೆಂಬ ಉಲ್ಲೇಖಿಸಿದೆ.

"ಆ ಪುರದೊಳು ಕುರಿ ।
ಪ್ರೀತಿಲಿ ಕಾಯುವ ।
ಪಾಪಿ ಲೋಭಿಗಳ ಒಡೆತನದಲ್ಲಿ ॥
ಒಪ್ಪುವ ನೀತಿಯು ।
ಸತ್ಪಥಹೀನನು ।
ತಪ್ಪು ಕೃತಿಗಳನು ಎಸಗುವನು ॥"[೪೬]

ಮೇಲಿನ ಮಾತುಗಳನ್ನು ಬ್ರ. ಶ್ರೀ. ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ ಮಹಾಗಾಂವ ಜಿ. ಗುಲಬರ್ಗಾ ಅವರ ಪ್ರಕಾಶನದಲ್ಲಿ ಪ್ರಕಟವಾದ ಈ ಪುರಾಣದಲ್ಲಿ ಹೆಚ್ಚಿಗೆ ಈ ಪದವನ್ನು ಸೇರಿಸಿದಂತಿದೆಯೆಂದು ಹೇಳಬಹುದು. ಗೊಲ್ಲಾಳನು ದೇವಲೋಕದಲ್ಲಿ ಅಮರಗಣಾಧೀಶ್ವರನಾಗಿದ್ದು ಕುರಿಗಳನ್ನು ಕಾಯುತ್ತಿದ್ದ ಎಂಬುದು ಅಷ್ಟೊಂದು ಸಮಂಜಸವಾಗುವುದಿಲ್ಲ. ಮೂಲ ಶ್ರೀ ಹರೀಶ್ವರ ಕವಿ ರಚಿಸಿದ ಪುರಾಣದಲ್ಲಿಯೂ ಹೀಗಿರಲಿಕ್ಕಿಲ್ಲ. ಅದರಂತೆ ಶ್ರೀ ಗೊಲ್ಲಾಳೇಶ್ವರ ಪುರಾಣವನ್ನು ಇನ್ನೊಬ್ಬ ಪ್ರಕಾಶರರಾದ "ಶ್ರೀ ಪ್ರಸಾದ ಪ್ರಕಾಶನ" ......ವಿಜಯನಗರ, ಬೆಂಗಳೂರು-೪೦ ಇವರ ಪ್ರಕಾಶನದಲ್ಲಿ ಪ್ರಕಟವಾದ ಪುರಾಣದಲ್ಲಿ ಮೇಲಿನ ಪದ್ಯವು ಇರುವುದಿಲ್ಲ. ಪ್ರಕಟವಾದ ಎರಡೂ ಪುರಾಣಗಳಲ್ಲಿ ಸಾಕಷ್ಟು ವ್ಯತ್ಯಾಸವಿರುವುದನ್ನು ಕಾಣಬಹುದಾಗಿದೆ. ಈ ಕೆಳಗಿನ ಪದ್ಯವನ್ನು ಎರಡೂ ಪುರಾಣಗಳಲ್ಲಿ ಹೇಗೆ ರಚಿಸಲ್ಪಟ್ಟಿದೆ ಎಂಬುದನ್ನು ಲಕ್ಷಿಸಬಹುದು.

ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಪ್ರಕಟಿಸಿದ ಪುರಾಣ ಕಾವ್ಯದಲ್ಲಿ

'ಮೇಘ ಲಕ್ಷದ ಮೂರು ॥
ಸಾಸಿರವಾಳುವ ।
ಮೀಸಲದಲಿ ಪೊನ್ನಗಣಿತವು ॥
ಲೇಸಿನ ಸತಿಯಳಿ ।
ಗಾಸರವಿಲ್ಲದೆ ॥
ಈಶನ ಚಿಂತೆಯಲಿರುತಿರಲು ॥"[೪೭]

ಇದೇ ಪದವನ್ನು "ಶ್ರೀ ಪ್ರಸಾದ ಪ್ರಕಾಶನ ಬೆಂಗಳೂರು ಇವರು ಪ್ರಕಟಪಡಿಸಿದ ಶ್ರೀ ಗೊಲ್ಲಾಳೇಶ್ವರ ಪುರಾಣದಲ್ಲಿ ಹೀಗಿದೆ.

"ಮೇಘು ಲಕ್ಷದ ಮೂರು ಸಾಸಿರವಾಳುವ
ಮೀಸಲು ಹೊನ್ನಗಣಿತವು
ಲೇಸಿನ ಸತಿ ಸುಗ್ಗಿ ಚಾರು ಸುತರ ಬಯಸಿ
ಈಶನ ಚಿಂತೆಯೊಳಿರಲು"[೪೮]

ಈ ಎರಡೂ ಪದಗಳನ್ನು ವಿಶ್ಲೇಷಿಸಲಾಗಿ ಗೊಲ್ಲಾಳನ ತಾಯಿಗೆ ಸಾಕಷ್ಟು ಸಂಪತ್ತಿನ ಭೋಗ ವೈಭವವಿತ್ತು. ಮಕ್ಕಳಾಗಿರಲಿಲ್ಲ. ಗೊಲ್ಲಾಳನ ತಾಯಿ ಮಕ್ಕಳಿಗಾಗಿ ಹಂಬಲಿಸುತ್ತಿದ್ದಳು ಎಂದರ್ಥ. ಸತಿ - ಪತಿಯ ಭಕ್ತಿಯಿಂದ ಗೊಲ್ಲಾಳನ ಜನನವಾಯಿತು ಎಂಬುದೇ ಸರಿಯಾಗಿದೆ.

ಗೊಲ್ಲಾಳೇಶ್ವರನ ತಂದೆ-ತಾಯಿಗಳು ಶಾಖಾಹಾರಿಗಳಾಗಿದ್ದರು. ಇವರುಗಳು ಸೇವಿಸುವ ಆಹಾರ ಪದ್ಧತಿಯನ್ನು ಬಹುವಾಗಿ ವರ್ಣಿಸಿದ್ದಾನೆ.

"ಕಮ್ಮನೆ ಕಂಪಿನ ನವಘೃತ ಹಪ್ಪಳ
ಎಮ್ಮೆಯ ಕೆನೆ ಮೊಸರುಗಳ
ನಿರ್ಮಳದಲಿ ಪತಿಗೆ ಗಮ್ಮನೆ ಸಲಿಸುತ
ದಮ್ಮನೆ ದಣಿಗಳು ಸವಿದು."[೪೯]

ಈ ಪದವು ಆದಿ ಪ್ರಾಸದಿಂದ ಕೂಡಿದೆ. ಕಮ್ಮನೆ, ಎಮ್ಮೆಯ, ನಿರ್ಮಳ, ದಮ್ಮನೆ ಹೀಗೆ ಪ್ರಾಸಪದವನ್ನು ಸೊಗಸಾಗಿ ಹೆಣೆಯಲಾಗಿದೆ. ಇಲ್ಲಿ ಶಿಷ್ಟರೂಪದ ನಡುಗನ್ನಡ ಭಾಷೆಯಲ್ಲಿ ಶ್ರೀ ಗೊಲ್ಲಾಳೇಶ್ವರ ಪುರಾಣವನ್ನು 'ಹರೀಶ್ವರ' ಕವಿ ರಚಿಸಿದ್ದು ಆ ಕಾಲದ ಹಿನ್ನೆಲೆಯಲ್ಲಿ ಸೂಕ್ತವಾದುದು.

ಅತ್ಯಂತ ಸ್ಥಿತಿವಂತ ಮನೆತನದವರಾದ 'ದುಗ್ಗಳೆ'(ಗೊಲ್ಲಾಳನ ತಾಯಿ)ಯನ್ನು ಮಕ್ಕಳಿಲ್ಲದ ಕೊರತೆ ಅವಳನ್ನು ಕಾಡುತ್ತಿತ್ತು. (ಆದರೆ ಗೊಲ್ಲಾಳನ ತಂದೆಯ ಹೆಸರನ್ನು ಹೆಸರಿಸಿಲ್ಲ) ಆ ಕಾರಣದಿಂದ ಈರ್ವರು ದಂಪತಿಗಳು ಸಂಗಮನಾಥನಲ್ಲಿ ಮೊರೆಯಿಡುತ್ತಾರೆ. ಇದರ ಫಲವಾಗಿ ಅಂದರೆ ಸಂಗಮನಾಥನ ಕೃಪಾ ಆಶೀರ್ವಾದದಿಂದ ಮಕ್ಕಳಿಲ್ಲದ ಕೊರತೆಯನ್ನು ನೀಗಿಸಿಕೊಂಡರು. ಗೊಲ್ಲಾಳನು ಹುಟ್ಟಿದ ನಂತರ ಆ ನಾಡಿನ ಸಿರಿಸಂಪತ್ತು ಹೆಚ್ಚಾಯಿತು. ಮುಂದೆ ದಿನಗಳೆದಂತೆ ನೋಡುವರ ಕಣ್ಮಣಿಯಾಗಿ ಅಂಬೆಗಾಲಿಡುತ್ತಾ ಮನೆತುಂಬಾ ಓಡಾಡ ಹತ್ತಿದ. ಆವಾಗ್ಗೆ ದುಗ್ಗಳೆ ತನ್ನ ಕಣ್ಣು ತಾನೇ ನಂಬದಂತಾಗಿ ಆನಂದದಿಂದ ಕಂದನೊಡನೆ ತಾನೂ ಆಡುವಳು. ಈತನಿಗೆ ಹದಿನಾರು ವರುಷಗಳು ತುಂಬಿದವು. ತೋರಿದವರಿಗೆ ಕುಠಾರ ಕರಕೋಲು I ನೇರ ಸುತ್ತಿಗೆಯಚ್ಚು ಕಟ್ಟಾದ ಕೊಡಲಿ ಕೊಟ್ಟು ತಮ್ಮ ಕುಲದ ಕಸುಬಾದ ಕುರಿಕಾಯುವುದಕ್ಕೆ ಹಚ್ಚುತ್ತಾರೆ.

"ಮರೆದುದಾ ಪೂರ್ವ ಚರಿತೆ ಪ್ರಪಂಚಿನ
ನರಜನ್ಮದ ಮಾಯ ಒಲಿದು

ವರಮಾತೆ ಪಿತನಾಜ್ಞೆ, ಹಿರಿದಂ ಸಂಸಾರದ

ಗರ ಹಿಡಿದಂದು ಬಳಿಕವಗೆ

ಪೂರ್ವ ಜನ್ಮದ ನೆನಪು ಮರೆಯಿತು. ನರಜನ್ಮದ ಮೋಹ ಬಲಿಯಿತು. ಗೊಲ್ಲಾಳ ತನ್ನ ವೃತ್ತಿಯೊಂದಿಗೆ ಸಂತೋಷದಿಂದಿದ್ದನು. ಕಾಲಸವೆಯುತ್ತ ಮುಂದೆ ಬಂದಿತ್ತು. ಫಾಲ್ಗುಣ ಮಾಸ. ಎಲೆಗಳುದುರಿ ಹೊಸಚಿಗುರು ಮೂಡುತ್ತಲಿತ್ತು. ಅನೇಕಾನೇಕ ಪಕ್ಷಿಗಳು ಉಲಿಯತೊಡಗಿದ್ದವು. ಮಾಘಮಾಸದಲ್ಲಿ ಶಿವಭಕ್ತರು ಶ್ರೀಶೈಲದ ಪರಿಸೆಗೆ ಸಂತೋಷದಿಂದ ಹೋಗುತ್ತಿದ್ದರು. ಅವರ ಕೈಯಲ್ಲಿ ನಂದಿಧ್ವಜ. ಅಂದಣ, ಸತ್ತಿಗೆ ತಾಳವಾದ್ಯಗಳು ಮೊಳಗುತ್ತಿದ್ದು, ಉಘೇ ಉಘೇ ಎಂಬ ಹರಘೋಷವು ಮಾರ್ದನಿಗೊಡುತ್ತಿತ್ತು. ಪರಿಸೆಗಾಗಿ ಬಂದ ಭಕ್ತರು ಡಂಬಳ ಗ್ರಾಮದ ನದಿಯ ತಟದಲ್ಲಿ ಬೀಡಾರ ಬಿಟ್ಟರು. ಯಾತ್ರಾರ್ಥಿಗಳ ಹಾಡು, ಕುಣಿತ, ಭಜನೆ, ಹರಘೋಷಣೆಯನ್ನು ಕೇಳಿ, ಕಂಡು ಗೊಲ್ಲಾಳನ ಮನ ಮಾರುಹೋಯಿತು. ಪರಿಸೆ ಜೈ ಜೈಕಾರದೊಡನೆ ಹೊರಟಿತ್ತು. ಗೊಲ್ಲಾಳನಿಗೆ ಅಗಾಧವೂ, ಆನಂದವೂ ಆಯಿತು. ಮನ ಸಂತಸದಿಂದ ಕುಣಿಯಿತು. ಮನದಲ್ಲಿ ಭಕ್ತಿ ಅಂಕುರಿಸಿ, ಅವರಿದ್ದೆಡೆಗೆ ಹೋಗಿ ವಿಚಾರಿಸಿದನು. ಮೇಲಿಂದ ಮೇಲೆ ಎಲ್ಲಿಗೆ ಹೊರಟಿರುವಿರಿ ಎಂದು ಪ್ರಶ್ನಿಸಹತ್ತಿದನು.

ಗೊಲ್ಲಾಳನಲ್ಲಿ ಈ ಪ್ರಶ್ನೆ ಹುಟ್ಟಲೇನು ಕಾರಣ ಎಂಬುದಕ್ಕೆ ಉತ್ತರವನ್ನೂ ಹುಡುಕಬೇಕಾಗಿದೆ. ಪರಿಸೆ ಹೊರಟ ಯಾತ್ರಾರ್ಥಿಗಳಲ್ಲಿ ನಗೆಮೊಗ ನೋಟದ ಸೊಗಸು, ಚೆಲುವಿನ ಕುಚದ ಬಿಗುಹುಂ ಮಧ್ಯದ ಬಡತನವು, ಜಘನ ಗೌರವ ಬಾಳೆ ಬಗೆದೊಡೆ ಹೆಂಗಳು ಅತ್ಯಂತ ಸಂಭ್ರಮ ವೆತ್ತುನಡೆವುತಿರೆ ಮತ್ತಲ್ಲಿ ಜಾರ ಜಾರೆಯರು, ಹರಕೆಯ ಭಕ್ತಿಯ ತೆರನೆಂಬ ನೆವದಲ್ಲಿ ನೆರೆ ಮಿಂಡರೊಳು ಸನ್ನೆಯಲಿ, ಪತಿಸುತ ಕೆಲಬರು, ಹಿತಸಖನೆಂಬ ಸತ್ಮತಪರ ಪುರುಷ ಸಂಗತಿಯ ಅತಿಶಯದೇಕ ಪ್ರತತಿ ನೆರೆದಾಳುತ, ಕೃತಕ ಜಾರೆಯರಲ್ಲಲ್ಲಿ, ಗಂಡನ ವಂಚಿಸಲಡತನದ ಲತ್ತೆಯಂಡಲೆ ಪೂಣದು ಮೈದುನರು ತಂಡವ ನೆಣಿಸುವದುದ್ಧಕಿಯಲಿ ಹೊಸ ಮಿಂಡನ ಭ್ರಮನ ಭಯಕಿಲಿ, ಮಂಡೆಯರು, ಕೆಲಮದನಂಡರಿಯಲಿ ಸನ್ನೆ ಮಿಂಡರುಗಳಿಗಿದಿರಿಕ್ಕಿ ಕೊಂಡು ಯಾತ್ರೆಯ ನೆವಗೊಂಡು ಹೋಗುವುದರೊಂದು ತಂಡದ ಕೆಲ ಜಾರೆಯರು, ಮೊಲೆಯೆಂಬ ಕೂಸುನುಳಿಯಿಟ್ಟು ಮಿಂಡನ ಬಳಿವಿಡಿದೆಯಿದು ತವಕ ಹಲಬುವ ಮಕ್ಕಳ ಕೆಲರಲ್ಲಿ ಜರಿವುತ ಬಲುಮೆಯಿಂ ಪೊರಮಡುವ ಜಾರೆಯರು. ಮೇಲಿನ ಮಾತುಗಳನ್ನು ಲಕ್ಷಿಸಲಾಗಿ, ಸ್ಥಾವರಕ್ಕೆ ಮುಖಮಾಡಿದವರೆಂದೂ ಭಕ್ತರಲ್ಲ ಇವರಲ್ಲಿ ಕಡುಲೋಭಿಗಳು, ಭೋಗಲಾಲಸೆಯುಳ್ಳವರು, ನೀತಿಗೆಟ್ಟವರು ಸೇರಿಕೊಂಡಿರುವರೆಂದೇ ಅರ್ಥೈಸಬೇಕಾಗುತ್ತದೆ. ಅಂದರೆ ಯಾತ್ರಾರ್ಥಿಗಳಲ್ಲಿ ಕೆಲವರು ಈ ತೆರನಾದ ವರ್ತನೆಯುಳ್ಳವರು ಇರುತ್ತಾರೆಂಬುದನ್ನು ಲಕ್ಷಿಸಬೇಕು.

"ಭಕ್ತ್ಯೋಪಾಸಕರು ಮುಕ್ತಿಯ ಸಾಧನೆಗಾಗಿ, ಆತ್ಮೋದ್ಧಾರಕ್ಕಾಗಿ, ಇಲ್ಲವೆ ಭಕ್ತಿಯ ಉದ್ವೇಗಕ್ಕೆ ಒಳಗಾಗಿ ಹಾಡಿ, ಕುಣಿದು, ಸುಖಪಡುವುದಕ್ಕಾಗಿ, ತಮ್ಮ ವೈಯಕ್ತಿಕ ದೇವರನ್ನು ಆರಾಧಿಸಿಕೊಂಡು ಹೋದರೆ

ಶರಣರು ಮಾನವ ಕಲ್ಯಾಣಕ್ಕಾಗಿ, ಸಮಾಜದ ಶ್ರೇಯೋಭಿವೃದ್ಧಿಗಾಗಿ ಜನರ ಸೇವೆಯನ್ನು ಮಾಡಿಕೊಂಡು ಹೋದರು."[೫೦] ಇಲ್ಲಿ ಗೊಲ್ಲಾಳನ ಜ್ಞಾನ ಅರುಹಿನೆಡೆಗೆ ಚಲಿಸುತ್ತಿತ್ತು. ಆದರೆ ಅವನೆದುರಿಗೆ ಇರುವ ಯಾತ್ರಾರ್ಥಿಗಳು ಅರುಹಿನಲ್ಲಿರಲಿಲ್ಲವೇನೋ, ಆದ್ದರಿಂದ ಗೊಲ್ಲಾಳನನ್ನು ಅವರು ಗುರುತಿಸಿದ್ದು ಬೇರೆ ರೀತಿಯದೇ ಆಗಿತ್ತು. ಹೆಡ್ಡ ಕುರುಬನಿವನ ಅಡ್ಡ ಬಂದ ಎಮ್ಮನ ಎಡ್ಡು ತನದೆ ಕೇಳುವನು. ಮಡ್ಡನ ಇವನ ಮಾತಿನ ಒಡ್ಡಣೆಯ ಏನೆಂದು ಅಸಡ್ಡೆಮಾಡಿಯೆ ಹೇಳುವರು. ಕೇಳೆಲವೊ ಮರುಳೆ, ನಾವೆಲ್ಲ ಶ್ರೀಗಿರಿಯ ಒಡೆಯ ಮಲ್ಲಯ್ಯನ ಜಾತ್ರೆಗೆ ಹೊರಟಿರುವೆವು. ಆ ಮಲ್ಲಯ್ಯನು ಲಿಂಗ ರೂಪದಲ್ಲಿರುವನು. ಭಕ್ತಿಭಾವದಿಂದ ಪೂಜಿಸಿ, ಭಜಿಸಿ, ಆತನ ದರ್ಶನ ಪಡೆಯಲು ಹೋಗುತ್ತಿರುವೆವು. ಹಾಗೆಯೇ ಜಂಗಮರ ಸೇವೆಗೈದು ನಮ್ಮ ಮನದ ಬಯಕೆಗಳು ಈಡೇರಲೆಂದು ದೇವರಲ್ಲಿ ಬೇಡಿಕೊಳ್ಳುವೆವು ಎಂದೆಲ್ಲಾ 'ಲಿಂಗಯ್ಯನನ್ನು' ಸ್ಥೂಲವಾಗಿ ಗೊಲ್ಲಾಳನಿಗೆ ವಿವರಿಸಿ ಹೇಳುವನು. ಆದರೆ ದೇವರೆಂದರೆ ಏನು ಎನ್ನುವ ಪ್ರಶ್ನೆಗೆ ಮಾತ್ರ ಖಚಿತವಾದ ಉತ್ತರ ಹೇಳಲಿಲ್ಲ.

ದೇವರ ಕುರಿತು 'ಅವರವರ ನಂಬಿಕೆ ಅವರವರಿಗೆ' ಎನ್ನುವ ಹಾಗೆಯೇ ಗೊಲ್ಲಾಳನು ತನ್ನ ದೈವೀನೆಲೆಯನ್ನು ಅರಸಿಕೊಂಡು ಹೋಗಲು ಪ್ರಯತ್ನಿಸುತ್ತಾನೆ. "ಎಷ್ಟೋ ಮಂದಿ ಋಷಿಮುನಿಗಳು, ತಪಸ್ವಿಗಳು, ದಾಸರು, ಸಂಗೀತಗಾರರು, ಭಕ್ತಾಗ್ರಣಿಗಳು ದೇವರನ್ನು ಕಂಡ ತಮ್ಮ ಅನುಭವವನ್ನು ದಾಖಲಿಸಿದ್ದಾರೆ. ಏಕದಂ ನಿರಾಕರಿಸುವುದು ಎಂದರೆ, ಅದು ಸತ್ಯವನ್ನು ನಿರಾಕರಿಸಿದಂತೆಯೇ, ಅಂಥವಾ ಜಿಜ್ಞಾಸುತನವನ್ನು ಧಿಕ್ಕರಿಸಿದಂತೆಯೇ. ಬೇಕಿದ್ದರೆ ಈ ಹೇಳಿಕೆಗಳಿಗೆ ಸಿಗ್ಮಂಡ್ ಫ್ರಾಯ್ಡ್‌ನ ಮನಶಾಸ್ತ್ರದ ನಿಯಮಗಳನ್ನು ಅನ್ವಯಿಸಿ ಹೇಳುವುದಾದರೆ, ವ್ಯಕ್ತಿ ತಾನೇನನ್ನು ಕಾಣಬೇಕೆಂದು ನಿರಂತರವಾಗಿ ಹಂಬಲಿಸುತ್ತಾನೆಯೋ. ಅದನ್ನಾತ ಅಂತೆಯೇ ಕಾಣುತ್ತಾನೆ. ಅರ್ಥಾತ್ ಹಾಗೆ ಕಂಡಂತ ಭ್ರಮೆಯನ್ನು ಕಟುವಾಸ್ತವದ ನೆಲೆಯಲ್ಲಿ ಅನುಭವಿಸುತ್ತಾನೆ "[೫೧] ಗೊಲ್ಲಾಳನ ನಂಬಿಗೆಯ ಕುರಿತು ಇದನ್ನೆ ಹೇಳಬೇಕಾಗುತ್ತದೆ.

ಶ್ರೀಶೈಲದ ವರ್ಣನೆಯನ್ನು ಸವಿಸ್ತಾರವಾಗಿ ಮಾಡಲಾಗಿದೆ. ಶ್ರೀಶೈಲವು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯಲ್ಲಿ ಬರುತ್ತದೆ. ಕಂಬಿ(ಪರಶೆ)ಯನ್ನು ತೆಗೆದುಕೊಂಡು ಹೋಗುವ ಯಾತ್ರಾರ್ಥಿಗಳು ಬಹುದೂರ ಕಾಲ್ನಡಿಗೆಯ ಪ್ರಯಾಣವನ್ನು ಮಾಡಬೇಕಾಗುತ್ತದೆ. ಗೋಲಗೇರಿಯಿಂದ ೫೭೦ (ಐದುನೂರಾ ಎಪ್ಪತ್ತು) ಕಿಲೋಮೀಟರ್ ಅಂತರದಲ್ಲಿದೆ ಶ್ರೀಶೈಲ.

"ಶ್ರೀ ಗಿರಿ ಶೈಲ ಮಹಾತ್ಮೆಯ ।
ತೆರನೆಲ್ಲವ ಗೊಲ್ಲಾಳಂಗೊರೆದ ಪ್ರಭಾನಂದಿ ॥
ಶ್ವರ ಕರುಣಿಸಿ ನಯದೋಳ್ ಮುನಿಗಂ ।
ಹರಿದೇವ ಪೇಳ್ವ ಪಂಪೆಯರಸನ ಕೃಪೆಯಿಂ ॥"[೫೨]

ಶ್ರೀಶೈಲ ಸುಂದರವಾದ ಸುಕ್ಷೇತ್ರ. ತಪಸ್ವಿಗಳ ತಾಣವಾಗಿರುವ ತಪ್ಪಲು ಪ್ರದೇಶ. ಅಲ್ಲಿ ಶ್ರೀಶೈಲಗಿರಿಯನ್ನು ಏರುವಾಗ ಮೊದಲು ಸಿಗುವ ಸ್ಥಳ ಕಡಳ್ಳಿ. ಇದು ಆತ್ಮಂಪೂರದಿಂದ ಎರಡುವರೆ ಕಿಲೋಮೀಟರ್ ಅಂತರದಲ್ಲಿದೆ. ಇಲ್ಲಿ ಗಣಪತಿ ದೇವಸ್ಥಾನವಿದೆ. ನಂತರ ಕಡೆಬಾಗಿಲು, ಈ ಕಡೆಬಾಗಿಲಿನಲ್ಲಿಯೇ ವರ್ಷಕ್ಕೊಮ್ಮೆ ಹೋಗುವ ಪರಸೆಗಳು (ಕಂಬಿಗಳು) ಇಲ್ಲಿ ಕೂಡುತ್ತವೆ. ಸುಮಾರು ನಾಲ್ಕುವರೆ ಸಾವಿರ ಕಂಬಿಗಳು ಕೂಡುತ್ತವೆ. ಈ ಕಂಬಿಗಳು ಕರ್ನಾಟಕ ಮತ್ತು ಮಹಾರಾಷ್ಟ್ರದಿಂದಲೂ ಬಂದು ಸೇರುತ್ತವೆ. ಕಡೆಬಾಗಿಲು ಗುಡ್ಡದ ಪ್ರದೇಶದಲ್ಲಿದೆ. ಇಲ್ಲಿ ಐದು ದ್ವಾರಬಾಗಿಲುಗಳಿದ್ದು ಈಗ್ಗೆ ಎರಡು ಮಾತ್ರ ಅಲ್ಪಸುಸ್ಥಿತಿಯಲ್ಲಿದ್ದರೆ, ಇನ್ನುಳಿದ ಮೂರು ದ್ವಾರಬಾಗಿಲುಗಳು ಹಾಳಾಗಿವೆ ಹಾಗೂ ಕಡೆಬಾಗಿಲಿನಲ್ಲಿ 'ಕರಿವೀರಭದ್ರ' ದೇವಸ್ಥಾನವಿರುತ್ತದೆ. ಶ್ರೀಗಿರಿಯನ್ನು ಏರಲು ಇಲ್ಲಿಂದಲೇ ಏರಬೇಕು. ಬೆಟ್ಟಕ್ಕೆ ಮೆಟ್ಟಿಲುಗಳನ್ನು ಜೋಡಿಸಲಾಗಿದೆ. (ಪ್ರಾಚೀನಕಾಲದಲ್ಲಿ) ಬೆಟ್ಟ -ಗುಡ್ಡಗಳ ಅರಣ್ಯ ಮಧ್ಯದ ದಾರಿಯು ಮೊದಲಿಗೆ ಅಂಬಲಿಹಳ್ಳ, ಗಂಗನಪಳ್ಳಿ, ಡಂಗಮಲ್ಲಪ್ಪನ ಗುಂಡ, ಭೀಮನಕೊಳ್ಳ, ಕೈಲಾಸಬಾಗಿಲು ಎಂಬ ಸ್ಥಳಗಳು ಸಿಗುತ್ತವೆ. ದಾರಿಯ ಮಧ್ಯದಲ್ಲಿ ಎಲ್ಲಿಯೂ ಗ್ರಾಮಗಳು ಇರುವುದಿಲ್ಲ. ಆದಿವಾಸಿ ಜನಗಳು ಕಾನನ ಮಧ್ಯದಲ್ಲಿ ವಾಸಿಸುತ್ತಾರೆ. ಸುಂದರವಾದ ಅರಣ್ಯಪ್ರದೇಶವು ಇದಾಗಿದೆ.

ಕೈಲಾಸ ಬಾಗಿಲು ಮುಟ್ಟಿದರೆ ಶಿವಲೋಕಕ್ಕೆ ನಾವು ಬಂದು ತಲುಪಿದೆವು ಎಂದು ಭಕ್ತರು ಭಾವಿಸಿಕೊಳ್ಳುತ್ತಾರೆ. ಕೈಲಾಸಬಾಗಿಲಿನಿಂದ ಮುಂದೆ, ಅಡಕೇಶ್ವರ, ಪಂಚಾದಾರಿ, ಪಲ್ಲದಾರಿ ಎಂಬ ಸ್ಥಳಗಳಿವೆ. ಸಾಸವಿಕಾಳ ಗಣಪ್ಪ, ಈ ಗಣಪನ ಮೊದಲು ದರ್ಶನ ಆಗಬೇಕು. ನಂತರ ಮಲ್ಲಯ್ಯನ ದರ್ಶನ ಮಾಡಬೇಕು ಎಂಬ ಪ್ರತೀತಿ ಇರುವುದು. ಮಲ್ಲಯ್ಯನ ದೇವಸ್ಥಾನಕ್ಕೆ ನಾಲ್ಕು ದ್ವಾರ ಬಾಗಿಲುಗಳು, ನಾಲ್ಕು ಬಾಗಿಲುಗಳಿಗೆ ಐದು ಐದು ಬಂಗಾರದ ಕಳಸಗಳಿರುತ್ತವೆ. ದೇವಾಲಯದ ಆವರಣದಲ್ಲಿ ಅರವತ್ತಮೂರು ಬಾವಿಗಳಿದ್ದವು ಎಂದು ಹೇಳುವರು. ಆದರೆ ಈಗಿರುವುದು ಒಂದೇ ಬಾವಿ. ಈ ದೇವಸ್ಥಾನಕ್ಕೆ ಮೊದಲು 'ಮದಿಮಲ್ಲಪ್ಪನ ಗುಡಿ' ಎಂದು ಕರೆಯುತ್ತಿದ್ದರು ಈಗ್ಗೆ 'ಮಲ್ಲಯ್ಯನ ಗುಡಿ' ಎಂದು ಕರೆಯುವರು. ಮಲ್ಲಯ್ಯನ ದೇವಸ್ಥಾನ ಹಿಂದುಗಡೆ ಭವ್ಯವಾದ ಬೌರಮ್ಮನ ದೇವಸ್ಥಾನವಿರುತ್ತದೆ. ರಚನೆಯಲ್ಲಿ ಗೊಲ್ಲಾಳನ ದೇವಸ್ಥಾನದ ಹಾಗೂ ಶ್ರೀಶೈಲ ಮಲ್ಲಯ್ಯನ ದೇವಸ್ಥಾನದ ಇರುವಿಕೆಯಲ್ಲಿ ಸಾಮ್ಯತೆ ಕಂಡುಬರುತ್ತದೆ. (ಹೀಗೆ ಗೊಲ್ಲಾಳನ ದೇವಸ್ಥಾನದ ಹಿಂದುಗಡೆ ಹೆಣ್ಣು ದೇವತೆಯ ದೇವಾಲಯ ಇರುವ ಸಾಮ್ಯತೆಯ ಕುರಿತು ಹೆಚ್ಚಿನ ಅಧ್ಯಯನದ ಅವಶ್ಯಕತೆ ಇರುವುದು.) ಬೌರಮ್ಮಳು ಮಲ್ಲಯ್ಯನ ಹೆಂಡತಿ ಎಂದು ಹೇಳುವರು.

ಶ್ರೀಶೈಲ ದೇವಸ್ಥಾನದ ಸುತ್ತಲಿನ ಪ್ರದೇಶದಲ್ಲಿ ಪಾತಾಳಗಂಗಿ, ಪಾದಗಟ್ಟಿ, ಮಲ್ಲಮ್ಮನ ದಡ್ಡಿ, ಕದಳಿವನ ಇರುವವು. ಕದಳಿವನವು ಮಲ್ಲಯ್ಯನ ದೇವಸ್ಥಾನದಿಂದ ಎಂಟು (೮) ಕಿಲೋ ಮೀ.ಅಂತರದಲ್ಲಿದೆ. ಇದು ಅರಣ್ಯ ಪ್ರದೇಶದಲ್ಲಿದ್ದು ಇಲ್ಲೊಂದು ಬೃಹತ್ ಗವಿ ಇರುತ್ತದೆ. ಈ ಗವಿಯಲ್ಲಿ ಏಕಕಾಲಕ್ಕೆ ೨೫ ರಿಂದ ೩೦ ಸಾವಿರ ಜನ ಒಮ್ಮೆಲೆ ಕೂಡಬಹುದಾದ ವಿಶಾಲ ಪ್ರಾಂಗಣ ಇದೆ. ಇನ್ನೊಂದು ವಿಶೇಷವೆಂದರೆ

ಇದನ್ನುಒಂದೇ ಕಲ್ಲಿನಲ್ಲಿಯೇ ನಿರ್ಮಿಸಲಾಗಿದೆ. ಇದು ಎಲ್ (L) ಆಕಾರದಲ್ಲಿರುವುದು. ಶರಣೆ ಅಕ್ಕಮಹಾದೇವಿ ಇಲ್ಲಿಯೇ ಐಕ್ಯಳಾದಳು ಎಂದು ಹೇಳಲಾಗುವುದು.

ಸುಂದರ ನಿಸರ್ಗ ಸೌಂದರ್ಯದ ಮಧ್ಯದಲ್ಲಿರುವ ಶ್ರೀಶೈಲವು ಒಂದು ಜಾಗೃತ ಸ್ಥಳ, ಗ್ರಾಮವೂ ಆಗಿರಲಿಲ್ಲ. ಮೊದಲು ದೇವಸ್ಥಾನ ಮಾತ್ರ ಇದ್ದಿತು. ಶ್ರೀಶೈಲ ಸುಂದರವಾದ ಸುಕ್ಷೇತ್ರ. ಇಲ್ಲಿ ತುಪ್ಪದ ಹೊಂಡ, ಅರಿಶಿನ ಹೊಂಡ, ನೀರಿನಗುಂಡ, ಬಿಸಿನೀರಿನ ಗುಂಡಗಳು ಪಂಚಮಠಗಳು ಶಿವನ ಮಹಿಮೆಯನ್ನು ಸಾರುತ್ತವೆ. ಶ್ರೀಶೈಲ ಲಿಂಗಕ್ಕೆ ಜ್ಯೋತಿರ್ಲಿಂಗದ ಖ್ಯಾತಿಯಿದೆ. ಮಲ್ಲಿಕಾರ್ಜುನ ದೇವರ ಎದುರಿಗೆ ಕಡಲೆ ಬಸವಣ್ಣನ ಭವ್ಯ ಮೂರ್ತಿಯು ಆರೂಢವಾಗಿದೆ. ಈ ತೆರನಾದ ಪರ್ವತ ಮಲ್ಲಯ್ಯನ ಮಹಿಮೆಯನ್ನು 'ನಂದಯ್ಯ ಜಂಗಮನಿಂದ ಶ್ರದ್ಧೆಯಿಂದ ತನ್ಮಯತೆಯಿಂದ ಆಲಿಸಿದ ಗೊಲ್ಲಾಳನ ಮನದ ಜಡತೆ ಮರವೆ ಹರಿದು ಅರಿವು ಮೂಡಿ, ಗಿರಿಯು ಲಿಂಗಮಯ ಹಿರಿಯ ತವರುಮನೆ, ಪರುಷ ಲಿಂಗಗಳು ಅಲ್ಲಿಹವು. ಎಂದು ಹೇಳುವುದನ್ನು ಕೇಳಿ ಹರ್ಷಿತವಾಗಿ ಗೊಲ್ಲಾಳನು ಜಂಗಮನ ಪಾದಕ್ಕೆರಗಿ ತನಗೊಂದು ಲಿಂಗವನ್ನು ತರಬೇಕೆಂದೂ ಮರೆಯಬಾರದೆಂದೂ ಅಂಗಲಾಚಿ ಬೇಡಿಕೊಳ್ಳುವನು. ಗೊಲ್ಲಾಳನ ಭಕ್ತಿಯ ಮುಗ್ಧತೆಯನ್ನು ಅರಿತ ಲಿಂಗಯ್ಯ ಲಿಂಗವನ್ನು ತಂದುಕೊಡುವುದಾಗಿ ಭರವಸೆ ಕೊಟ್ಟು ಪರಸೆಯೊಂದಿಗೆ ಪ್ರಯಾಣ ಮಾಡುವನು.

ಗೊಲ್ಲಾಳನು ಲಿಂಗಯ್ಯನಿಗೆ ಲಿಂಗವನ್ನು ತೆಗೆದುಕೊಂಡು ಬಾ ಎಂದದ್ದು ಮುಗ್ಧಭಕ್ತಿಯಿಂದಲೋ ಅಥವಾ ಕಾಯಕದಲ್ಲಿ ನಿರತನಾಗಿ ಹೀಗೆ ಬೇಡಿದನೋ, ಹೇಳಲಾಗುವುದಿಲ್ಲ. ಸ್ಥಾವರಕ್ಕೆ ವಿರೋಧಿಯಾಗಿ ಹೀಗೆ ಹೇಳಿರಬಹುದು ಎಂಬುದೂ ಪ್ರಶ್ನೆಯಾಗಿದೆ. ಧಾರ್ಮಿಕ ಸಂಬಂಧದಲ್ಲಿ ವ್ಯಕ್ತಿಗತ ದೇವರ ಮೇಲೆ ಭಕ್ತನಿಗಿದ್ದ ನಿರ್ವ್ಯಾಜ ಪ್ರೇಮ, ಪೂಜೆ, ಆರಾಧನೆ ಅಥವಾ ಉಪಾಸನೆಗೆ ಭಕ್ತಿಯೆಂಬ ಅರ್ಥವಿದೆ. ಆ ಉಪಾಸನೆ ಮುಖ್ಯವಾಗಿ ವ್ಯಕ್ತಿಗತ ದೇವರಿಗೆ ಸಂಬಂಧಿಸಿದ್ದು, ಅದು ಭಕ್ತಿಯ ಮುಖ್ಯ ಗುರುತಾಗಿದೆ.

ಕಾಯಕಕ್ಕೆ ಬಹು ಪ್ರಾಮುಖ್ಯತೆಯನ್ನು ನೀಡಿದ ಶರಣರು ವೃಥಾ ಯಾತ್ರೆಯೆಂದು ಕಾಲಹರಣ ಮಾಡುವುದಕ್ಕಿಂತ ತಾವೇ 'ಲಿಂಗ' 'ಆಗುವುದು' ಮುಖ್ಯವಾಗಿತ್ತು. 'ಮಾಡುವುದು' ಬೇಕಾಗಿರಲಿಲ್ಲ. ಇದನ್ನೇ ವಿದ್ವಾಂಸರು 'ಆಗುವುದು' ಎನ್ನುವ ತತ್ವವೆಂದು ಹೇಳುತ್ತಾರೆ.

"ವಚನಕಾರರಿಗೆ 'ಆಗುವುದು' ಮುಖ್ಯ ಅವರಿಗೆ 'ಲಿಂಗ'ವು 'ಲಿಂಗ'ವಾಗಬೇಕು. ಅದೇ ಬದುಕಿನ ಸಾರ್ಥಕ್ಯ. ಅದೇ ಬದುಕಿನ ಸಾಧನೆ. ದೇಹವು ದೇವಾಲಯ ಆಗುವುದು ಹೇಗೆ ಎಂಬುದು ಅವರ ಮುಂದಿರುವ ಪ್ರಶ್ನೆ. ಇದು ಜಂಗಮಮುನಿ ವಿಚಾರ. ದೇವಾಲಯ ಮಾಡುವುದು ಮುಖ್ಯವಲ್ಲ. ದೇವಾಲಯ ಆಗುವುದು ಮುಖ್ಯ"[೫೭] ಗೊಲ್ಲಾಳನಿಗೆ ಶ್ರೀಶೈಲ ಯಾತ್ರೆಗೆ ಹೋಗುವುದು ಮುಖ್ಯವಲ್ಲ. ಶ್ರೀಶೈಲ ತಾನಾಗುವುದು ಮುಖ್ಯವಾಗಿತ್ತು.

ಶ್ರೀಶೈಲ ಪರಸೆಗೆ ಹೋದವರು ಮರಳಿ ಬರುತ್ತಿದ್ದರು. ಅವರಲ್ಲಿ ಕೆಲವರನ್ನು ಗುರುತಿಸಿ ನನಗೊಂದು ಲಿಂಗವನ್ನು ತಂದಿರಾ ಎಂದು ಕೇಳುತ್ತಾನೆ. ಅಂದರೆ ಅವರು ನಕಾರಾತ್ಮಕವಾಗಿ ಇಲ್ಲವೆಂದು ಗೋಣು

ಅಲ್ಲಾಡಿಸುತ್ತಿದ್ದರು. ಲಿಂಗಯ್ಯನು ಲಿಂಗವನ್ನು ಮರೆತು ಬಂದಿದ್ದನು. ಲಿಂಗ ದುಡ್ಡು ಕೊಟ್ಟು ಪಡೆಯುವುದಲ್ಲ. ಯಾತ್ರೆಗೆ ಹೋಗಿ ಲಿಂಗಯ್ಯನನ್ನು ಕಾಣುವದಲ್ಲ. ಅಂಗ ಲಿಂಗಾಗುವದು ಮುಖ್ಯ. ಇದು ಲಿಂಗ ತತ್ವವಾಗಿದೆ. ಲಿಂಗಯ್ಯನು ಈ ಅರೆ ಮರುಳನಿಗೆ, ಲಿಂಗದ ಮಹತ್ವವನ್ನು ಅರಿಯದವನಿಗೆ, ಲಿಂಗವನ್ನು ಕೊಟ್ಟರೆ, ತಮಗೆ ಪಾಪ ಬರಬಹದು. ಅಲ್ಲದೆ "ಕಂತುಹರನ ಉರಿ । ಯಂತಹ ಲಿಂಗವ ।ದೆಂತು ಪಾಮರರು ಪೂಜಿಪರು ॥ ಮೊದಲೇ ಕುರುಬ, ಪಾಮರ, ದುರುಳ, ತಾಮಸಿ ಇಂಥವನಿಗೆ ಲಿಂಗವನ್ನು ಕೊಡಬಹುದೆ ? ಕೊಡಬಾರದು.

ಒಂದೆಡೆ ಲಿಂಗದ ಮಹಿಮೆಯನ್ನು ವಿವರಿಸಿದರೆ, ಇನ್ನೊಂದೆಡೆ ಮಾನವರಲ್ಲಿ ಕುಲಜಾತಿ ಮೇಲು-ಕೀಳು ಎಂಬ ಬೇಧವೂ ಇದೆ. ಇದಕ್ಕಾಗಿಯೇ, ಅಂದರೆ ಈ ಭಾವ ತೆಗೆದುಹಾಕುವುದಕ್ಕಾಗಿಯೇ, ಶರಣ - ಶರಣೆಯರು ಈ ನಾಡಿನಲ್ಲಿ ಸಂಘಟನೆ ಆಗಿರಬಹುದು. ಶರಣರು ಆಲಯ ಸಂಸ್ಕೃತಿಯನ್ನು ತಿರಸ್ಕರಿಸಿದ್ದಾಗಿದೆ. ಲಿಂಗವನ್ನು ಯಾರಿಗೆ ನೀಡಬೇಕು ಎಂಬುದರ ಕುರಿತು ಲಿಂಗತತ್ವಕ್ಕೆ ಅನುಗುಣವಾಗಿ ಚರ್ಚಿಸಿದರು. ಪಾರಮಾರ್ಥಿಕತೆಯ ಪರಿಭಾಷೆಯು ದಾರಿತಪ್ಪಿಸಿದೆ. ಕೆಳಗಿನ ಪದಗಳನ್ನು ಅರ್ಥೈಸಿ ಸರಿದಾರಿಯೆಡೆಗೆ ಹೋಗುವುದು ಉಚಿತವಾದುದು. ಶರಣನ ಅಂತರಂಗದಲ್ಲಿ ಶಿವನಿರುವನು.

"ಪಾತಕ ಪತಿತನ್ಯ ಜಾತಿಯನಿಷ್ಠುರ
ಮಾತಿನ ಕೂಳ ಕಳ್ಳರಿಗೆ
ಘಾತಕನಜ್ಞಾನಿದ್ಯೋತಕಪಾಣ್ಬನಿ
ಗೋತು ಲಿಂಗವ ಕೊಡಬಹುದೆ

ಮತಿಹೀನ ಕಪಟಾತದ ಸ್ತುತಿಪರನಿಂದೆಗೆ
ಪಿತಮಾತೆ ದ್ವೇಷ ಮೂರ್ಖರಿಗೆ
ಅತಿ ಪುಸಿಕಂಗೆ ಕೆಡುಕಗತಿ ಪಿಸುಣಂಗೆ ಲಿಂಗ
ವ್ರತಗೇಡಿಗೀವುದೇನೀತಾ
ಜಡನಿಗೆ ನಿಷ್ಠುರ ನುಡಿವ ಕೃತಘ್ನಗೆ
ಮಡದಿಯ ಮಾತಿನೊಳಿಹಗೆ
ಕಡುಲೋಭಿಗೆ ಕಷ್ಟಗೆ ಬಡಮನ ದ್ರೋಹಿಗೆ
ಕೊಡಲಾಗದು ಲಿಂಗವನು

ದುಷ್ಟರಿಗೆ ದುರ್ವ್ಯಸನಿಗೆ ಜಾತಿಭ್ರಷ್ಟಗೆ
ಭ್ರಷ್ಟಗೆ ವ್ಯಾಧಿ ಪೀಡಿತಗೆ

ಇಷ್ಟಲಿಂಗವ ಕೊಟ್ಟ ಶ್ರೇಷ್ಠ ಗುರುಗಳಿಗೆ
ದುಷ್ಟನರಕಯಿಹಪರದಿ."[೫೪]

ಪುರಾಣಕಾವ್ಯದ ಮೇಲಿನ ಪದ್ಯಗಳನ್ನು ವಿಶ್ಲೇಷಣೆ ಮಾಡಲಾಗಿ ಎಲ್ಲಿಯೂ ಜಾತಿಯ ಮಾತು ಬಂದಿರುವುದಿಲ್ಲ. ಪಾತಕ, ಅನ್ಯರಿಗೆ ಅಸಹ್ಯಪಡುವವ, ಕಳ್ಳರಿಗೆ, ಅಜ್ಞಾನಿಗೆ, ಕಪಟನಿಗೆ, ಪರನಿಂದೆ ಮಾಡುವವರಿಗೆ, ತಂದೆ -ತಾಯಿಯರನ್ನು ದ್ವೇಷ ಮಾಡುವವರಿಗೆ ಮೂರ್ಖರಿಗೆ, ಪುಸಿಕನಿಗೆ, ಪಿಸುಣಗೆ, ಜಡನಿಗೆ, ಕೃತಘ್ನಗೆ, ಕಡುಲೋಭಿಗೆ ದ್ರೋಹಿಗೆ ಲಿಂಗವನ್ನು ನೀಡಬಾರದೆಂದು ಹೇಳಲಾಗಿದೆ.

ಜ್ಞಾನಿಯಾದವನಿಗೆ, ನೀತಿಯುಳ್ಳವನಿಗೆ, ನಡೆ -ನುಡಿಯಲ್ಲಿ ಒಂದಾಗಿ ಇರುವವರಿಗೆ, ಮಾನವ ಸಮಾಜ ಹಾಗೂ ಜೀವರಾಶಿಗಳಲ್ಲಿ ದಯೆಯುಳ್ಳವರಿಗೆ ಎಲ್ಲ ಕಾರ್ಯದಲ್ಲೂ ಒಳಿತನ್ನು ಬಯಸುವವರಿಗೆ ಲಿಂಗ ನೀಡಬೇಕೆಂದು ಪದ್ಯಗಳನ್ನು ಅರ್ಥೈಸುವುದು ಯೋಗ್ಯವೆನಿಸುವದು. ಇಷ್ಟಾಗಿಯೂ ಲಿಂಗವೆಂದರೇನು? ಅದಕ್ಕೆ ರೂಪವಿದೆಯೇ ಈ ಕುರಿತು ಈಗಗಾಲೇ ಸಾಕಷ್ಟು ಚರ್ಚೆಗಳು ನಡೆದಿವೆ. ಲಿಂಗವೆಂದರೆ ಪ್ರಕೃತಿ, ಪ್ರಕೃತಿಯು ಹೇಗೆ ನಮ್ಮ ಕಣ್ಣುಗಳ ಮುಂದೆ ಇದೆಯೋ ಅದು ಅಂತರಂಗದಲ್ಲಿಯೂ ಅದೇ ಆಗಿದೆ. ಬಹಿರಂಗ, ಅಂತರಂಗ ಎಂಬುದು ಬೇರೆ ಇಲ್ಲ. ಇದುವೇ ಲಿಂಗವಾಗಿದೆ. ಲಿಂಗತತ್ವವೂ ಆಗಿದೆ.

ಲಿಂಗಯ್ಯನು ಗೊಲ್ಲಾಳನಿಗೆ ಕುರಿಹಿಕ್ಕೆಯನ್ನು 'ಲಿಂಗ'ವೆಂದು ನೀಡಿದನು. ಅದನ್ನು ಈತ ಭಕ್ತಿಯಿಂದ ಸ್ವೀಕರಿಸಿದ. ಭಕ್ತಿ ಎಂದರೇನು? ಅದು ವ್ಯಕ್ತವಾಗುವುದು ಕೊಡುವುದರ ಮೂಲಕ. ಎಲ್ಲಿ ಕೊಡುವುದು ಇಲ್ಲ. ಅಲ್ಲಿ ಭಕ್ತಿಯೂ ಇಲ್ಲ. ಕೊಡುವ ಗುಣ ಸುಮ್ಮನೆ ಇರುವುದಿಲ್ಲ. ಕೊಡುವುದು ಎಂದರೆ ಗಳಿಕೆಯನ್ನು, ಸಂಪತ್ತನ್ನು ಕೊಡುವುದು. ಮನುಷ್ಯನಿಗೆ ಸಹಜವಾಗಿ, ತನು, ಮನ, ಧನ ಇವುಗಳ ಮೇಲೆ ಪ್ರೀತಿ ಇರುತ್ತದೆ. (ಗೊಲ್ಲಾಳನಿಗೂ ಇವುಗಳಲ್ಲಿ ವ್ಯಾಮೋಹವಿತ್ತು) ಇದರ ಜೊತೆಗೆ ನನಗೆ ನಾನು, ನನ್ನದು ಇವು ಅಪಾರವಾಗಿ ಪ್ರತಿ ವ್ಯಕ್ತಿಯಲ್ಲಿ ತುಂಬಿ ತುಳುಕಾಡುತ್ತವೆ. ಈ ದ್ರವ್ಯಗಳು ನಮ್ಮಲ್ಲಿ ಇರುವುದರಿಂದಲೇ ಮನುಷ್ಯ ಸಾಹಸ ಪ್ರವೃತ್ತಿಯಿಂದ ಕ್ರಿಯಾಶಾಲಿಯಾಗುವುದು. ನಾನು ಗಳಿಸಬೇಕು ಎನ್ನುವ ಮನೋಧರ್ಮವೇ ಅನುಭವಿಸಬೇಕು ಎನ್ನುವ ಸಹಜ ಭಾವನೆಯನ್ನು ಹೊಂದಿರುತ್ತದೆ. ಇದು ಪ್ರತಿ ಜೀವಿಯಲ್ಲಿರುವ ಸಹಜ ಗುಣ. ಈ ಸಹಜ ನೆಲೆಗಳನ್ನು ದಾಟಿ ಇವುಗಳ ಮೋಹ ಪಾಶಗಳನ್ನು ಹರಿದೊಗೆದು 'ಕೊಡುವ' ಭಾವ ತನ್ನಲ್ಲಿ ಬಂದರೆ ವ್ಯಕ್ತಿಯ ಸ್ವಾರ್ಥ ಆ ಮಟ್ಟಿಗೆ ಕಡಿಮೆ ಆಯಿತು. ಸ್ವಾರ್ಥದಿಂದಾಗಿಯೇ ಲೋಕದಲ್ಲಿ ಏನೆಲ್ಲ ಕದನಗಳು ನಡೆಯುತ್ತವೆ. ಭಕ್ತಿಯು ಇಂತಹ ಸ್ವಾರ್ಥಗಳಿಗೆ ಇತಿಶ್ರೀ ಹಾಡುತ್ತದೆ. ಮನುಷ್ಯನನ್ನು ಸಮಾಜಮುಖಿಯಾಗಿ ಹೊರಳಿಸುತ್ತದೆ. ಗಳಿಕೆ ಇಲ್ಲಿ ಬಳಕೆಯಾಗುತ್ತಿದ್ದಂತೆ, ಅಂದರೆ ಅವನ ತಂದೆ ಕೂಡಿಟ್ಟ ಹೊನ್ನಿನ ಬಿಂದಿಗೆಯನ್ನು ಲಿಂಗಯ್ಯನಿಗೆ ನೀಡಿರುವುದು ಹಾಗೂ ಶಿವಭಕ್ತರಾದವರೆಲ್ಲ ಒಂದೇ ಎನ್ನುವ ಮೂಲಕ ಅವರ ಬೇಡಿಕೆಗಳನ್ನು ಪೂರೈಸುವ ಮೂಲಕ ಇಲ್ಲದವರ ಬದುಕಿಗೆ ಆಸರೆಯಾಗುವ ಪರಿಕಲ್ಪನೆ ಉಂಟಾಗುತ್ತದೆ. ಆ ಜೀವಿ, ಈ ಜೀವಿ ಎನ್ನದೆ,

ಆ ಕಾಯಕ, ಈ ಕಾಯಕ ಎನ್ನದೆ ಎಲ್ಲ ಜೀವಿಗಳೂ ಶ್ರೇಷ್ಠ ಎಲ್ಲ ಕಾಯಕವೂ ಶ್ರೇಷ್ಠ ಎಲ್ಲವೂ ಲಿಂಗಮಯವೆಂದೇ ಸಮಾಜ ಸ್ವಾಸ್ಥ್ಯಕ್ಕಾಗಿ ಬದುಕುವುದೇ ಲಿಂಗಮಯಿ ಬದುಕಾಗಿದೆ.

ಲಿಂಗಯ್ಯನು ಗೊಲ್ಲಾಳನಿಗೆ ನಿಮ್ಮವರು ಹಿಂದೆಂದೂ ಲಿಂಗಸಂಬಂಧವನ್ನು ಹೊಂದಿದವರಲ್ಲ. ಅದರ ಬಗ್ಗೆ ತಿಳಿದವರೂ ಅಲ್ಲ. ಆದ್ದರಿಂದ ನಿನಗೆ 'ಲಿಂಗ' ಕೊಡುವುದು ಉಚಿತವಲ್ಲವೆಂದರು. ಆಗ ಗೊಲ್ಲಾಳನು ಹೇಳಿದ ಮಾತು. ತಂದಿರೆ ಲಿಂಗವನೆಂದು ಕೇಳಲು ತಾವು ತಂದೆವು ಕುಡುವೆನುಯೆನಲು, ಇಂದಿವನಲ್ಲಿ ಭಕ್ತಿಯಂದವೆಂತಹುದೆಂದು ವೊಂದಜ ಹಿಕ್ಕೆಯನೀಯೆ ಗೊಲ್ಲಾಳನ ಭಾವುಕತೆ, ಪರವಶತೆಯನ್ನು ಮನಗಂಡ ಜಂಗಮಯ್ಯ ಅಲ್ಲಿಯೇ ಬಿದ್ದಿದ್ದ ಕುರಿಯ ಹಿಕ್ಕೆಯನು 'ಲಿಂಗ'ವೆಂದು ನೀಡಿದನು.

ಇದನ್ನು ಭಕ್ತಿಯಿಂದ ಪೂಜಿಸು, ನಿನ್ನ ಅಭೀಷ್ಟವನ್ನು ಈಡೇರಿಸಿಕೊಳ್ಳುವುದಕ್ಕೆ, ಮುಕ್ತಿ ಪಡೆಯುವುದಕ್ಕೆ 'ಇಷ್ಟಲಿಂಗವೇ' ಉತ್ತಮವಾದುದುಯೆನ್ನುತ್ತಾ ಗೊಲ್ಲಾಳನಿಗೆ ಲಿಂಗದೀಕ್ಷೆಯನ್ನು ನೀಡುತ್ತಾನೆ. ಇದಕ್ಕೆ ನಿನ್ನ ಭಕ್ತಿಯ ನಂಬಿಕೆಯು ಮುಖ್ಯವೆಂದು ಹೇಳುವನು. ಶರಣ 'ನುಲಿಯ ಚಂದಯ್ಯ'ನನ್ನು ಉದಾಹರಿಸುವನು.

"ನುಲಿಯ ಚಂದಯ್ಯ ಲಿಂಗ ಜಲದೊಳಗಲಿ
ಮುಳಿದು ಮರಳಿ ಬರುತಿರೆ
ಒಲಿದಾಗ ಬನ್ನಿರೆ ಎನ್ನಲು ಹಲಬುತ ಬರುತಿರೆ
**ಲಲಸುತಲಾ** ಶಿವಶರಣ.

ಶರಣ ನುಲಿಯ ಚಂದಯ್ಯನನ್ನು ಬೆನ್ನು ಹತ್ತಿ ಬಂದ ಲಿಂಗದ ಮಹಿಮೆಯನ್ನು ಕೆಲವರು ಜಂಗಮವೇಷಧರಿಸಿ, ಕೊರಳಲ್ಲಿ ಬದನೇಕಾಯಿಗಳನ್ನು (ಲಿಂಗವೆಂದು ಹೇಳಿ ) ಕಟ್ಟಿಕೊಂಡು ಚೋರಚಿಕ್ಕಯ್ಯ ಆರೋಗಣೆಗೆ ಬರಲು ಬಸವನ ಕೃಪಾದೃಷ್ಟಿಯಿಂದ ಬದನೆಕಾಯಿಗಳು ಲಿಂಗವಾದವು. ಅದು ಕಾರಣ ನೀನು ಇದನ್ನು (ಹಿಕ್ಕೆಯನ್ನು) ನಿಜವಾದ ಭಾವನೆ (ನಿಜಲಿಂಗವೆಂದು ತಾನೆನಿಸಿ) ದೃಢವಾದ ಮನಸ್ಸಿನಿಂದ ನಿಷ್ಠೆಯಿರಿಸಿದರೆ ಒಲಿಯುವನೆಂದು ಗೊಲ್ಲಾಳನನ್ನು ನಂಬಿಸುವನು. ಹೀಗೆ ಮಡಿವಾಳ ಮಾಚಯ್ಯ, ಶರಣನ ಚರಿತ್ರೆಗಳನ್ನು ಹೇಳಿ ಅವನ ಮನಸ್ಸನ್ನು ಮುದಗೊಳಿಸುವನು. ಗಟ್ಟಿಗೊಳಿಸುವನು. ಅನುಭಾವಿ ಶರಣರು, ಭಕ್ತರು ನಡೆದುಕೊಂಡಂತೆ ನೀನು ನಡೆದುಕೋ ಎಂದು ಉಪದೇಶಿಸಿದನು. ಗುರು-ಜಂಗಮನ ಬೋಧೆಯನ್ನು ಗಮನವಿಟ್ಟು ಶ್ರದ್ಧೆಯಿಂದ ಆಲಿಸಿದ ಗೊಲ್ಲಾಳನಿಗೆ ಅರಿವು ಮೂಡಿತು. ಹೀಗೆ ಭಕ್ತಿಯೆಡೆಗೆ ಗೊಲ್ಲಾಳನನ್ನು ಒಲಿಸಿ ಬಲಿಸಿದನು. ಗುರು ಬೋಧೆಯಿಂದ ಪುಳಕಿತನಾದ ಗೊಲ್ಲಾಳನು ಹಿರಿಯರಿಟ್ಟ ಧನದ (ಹೊನ್ನಿನ) ಬಿಂದಿಗೆಯನ್ನು ತೆಗೆದು ಗುರುವಿಗೆ ತನು, ಮನ, ಧನವ ಅರ್ಪಿಸಿ ಬೀಳ್ಕೊಡುವನು.

ಅಲ್ಲಿಯೇ ಕುರಿಯ ಹಟ್ಟಿ (ದೊಡ್ಡಿ)ಯಲ್ಲಿಯೇ ವ್ಯವಸ್ಥಿತವಾದ ಸ್ಥಳವನ್ನು ಸಿದ್ಧಪಡಿಸುವನು. ಅಲ್ಲಿ ಗುರುಕೊಟ್ಟ 'ಹಿಕ್ಕೆಯನ್ನು' 'ಲಿಂಗವನ್ನಾಗಿ' ಪರಿವರ್ತಿಸಿಕೊಂಡು, ಹಳ್ಳದ ನೀರನ್ನು ತಂದು, ಕಾಡಿನಲ್ಲಿರುವ ತರತರದ ಹೂಗಳನ್ನು ಬಿಲ್ವಪತ್ರೆಗಳನ್ನು ತಂದು ಭಕ್ತಿಯಿಂದ ಲಿಂಗಕ್ಕೇರಿಸಿ ಪೂಜಿಸುವನು. ಹಾಗೂ ಲಿಂಗಕ್ಕೆ

ಕುರಿಯ ಹಾಲಿನಿಂದ ಮಜ್ಜನಕ್ಕೆರೆಯುತ್ತ ಅಭಿಷೇಕ ಮಾಡುತ್ತ ಪೂಜೆ ಸಲ್ಲಿಸುತ್ತಿದ್ದ. ಈ ತೆರನಾಗಿ 'ಇಷ್ಟಲಿಂಗ'ವನ್ನು ಭಕ್ತಿಯಿಂದ ಆರಾಧಿಸುತ್ತಿದ್ದನು.

"ಇಷ್ಟಲಿಂಗ ವೀರಶೈವದ ಕೇಂದ್ರ ತತ್ವ. ಈ ತತ್ವದ 'ಸರಿಯಾದ ವ್ಯಾಖ್ಯಾನ' ಮಾಡುವ ವಿದ್ವಾಂಸರಿಗೆ ಈ ಪದದ 'ಸರಿಯಾದ ಅರ್ಥ' ಹೇಳುವುದು ಇಂದಿಗೂ ಬಹುಶಃ ಸಾಧ್ಯವಾಗಿಲ್ಲ. ಹೇಳುತ್ತಲಿರುವ ಅರ್ಥಗಳ ಬಗ್ಗೆಯೂ ಸಂದೇಹಗಳು ಉದ್ಭವಿಸುತ್ತವೆ. ೧. ಇಷ್ಟಾರ್ಥವನ್ನು ಪೂರೈಸುವ ಲಿಂಗವೇ ಇಷ್ಟಲಿಂಗವೆಂದು ಸಾಮಾನ್ಯವಾಗಿ ಅರ್ಥ ಹೇಳುತ್ತಾರೆ. ಆದರೆ ಸ್ಥಾವರಲಿಂಗವೂ ತನ್ನ ಭಕ್ತರಿಗೆ ಇಷ್ಟಾರ್ಥವನ್ನು ಕೊಡುವುದರಿಂದ ಅದೂ ಅವರ ಇಷ್ಟಲಿಂಗವೇ ಎನಿಸಿ, ವೀರಶೈವದ 'ಇಷ್ಟಲಿಂಗ' ಪದಕ್ಕೆ ಅರ್ಥನಿರ್ದಿಷ್ಟತೆ ಇಲ್ಲದೆ ಹೋಗುತ್ತದೆ. ೨. ಇಷ್ಟಿ= ಪೂಜೆ ಪೂಜಿಸಲ್ಪಡುವುದು ಇಷ್ಟ, ಈ ಲಿಂಗವೇ ಇಷ್ಟಲಿಂಗವೆಂದು ಮಣ್ಣೆಯ ಮಾಯಿದೇವ ವಿವರಣೆ ನೀಡುತ್ತಾನೆ. ಆದರೆ ಇಂಥ ಅಪರಿಚಿತ ಶಬ್ದಾರ್ಥದ ಹಿನ್ನೆಲೆಯಲ್ಲಿ ಒಂದು ಜನಪ್ರಿಯ ತತ್ವದ ಹೆಸರು ರೂಢಗೊಳ್ಳುವದು ಅಸಂಭವ. ೨. ಭಾವಲಿಂಗ. ಪ್ರಾಣಲಿಂಗಗಳಲ್ಲಿಯ ಭಾವ, ಪ್ರಾಣ ಶಬ್ದಗಳು ದೇಹದ ಭಾಗವನ್ನು ಸೂಚಿಸುವಂತೆ ಇಷ್ಟಲಿಂಗದಲ್ಲಿಯ ಇಷ್ಟವೆಂಬುದು ದೇಹದ ಭಾಗವನ್ನು ಸೂಚಿಸದೆ ಪ್ರತ್ಯೇಕ ನಿಲ್ಲುತ್ತದೆ. ಈ ಎಲ್ಲ ಸಂದೇಹಗಳ ಕಾರಣವಾಗಿ ಇಷ್ಟಲಿಂಗ ಶಬ್ದದ ಮೂಲ ಅರ್ಥ ಮತ್ತು ಅರ್ಥವಿಕಾಸಗಳನ್ನು ಬೇರೆ ರೀತಿಯಲ್ಲಿ ಶೋಧಿಸಲು ಮನಸ್ಸಾಗುತ್ತದೆ.'[೫೫] ಅಂದರೆ ಸಮಾಜಮುಖಿಯಾದ ನೀತಿ, ಸತ್ಯತೆಯಿಂದ ಕೂಡಿದ ಭಾವ ಭಕ್ತಿಯ ಪೂಜೆಯೇ (ಉಪಾಸನೆ) ಇಷ್ಟಲಿಂಗ ಆರಾಧನೆ ಎನ್ನಬಹುದು.

ಗೊಲ್ಲಾಳನು ಲಿಂಗದಲ್ಲಿ ಭಾವ ಬೆರೆಸಿ ಲಿಂಗ ಪೂಜೆಯಲ್ಲಿ ಧ್ಯಾನದಲ್ಲಿಯೇ ಸಮಯ ಕಳೆಯುತ್ತಿರುವ ಸಂಗತಿ ಹೆತ್ತವರಿಗೆ ತಿಳಿಯಿತು.

"ಆ ಸಮಯದಿ ಬೊಲ್ಲುಗ ತಮ್ಮಿಷ್ಟ ರ
ವಾಸ ಗ್ರಾಮಗೆ ಪಗಲೆಂಟು
ವಾಸರಗಳದು ಬಾಹಸಮಯಕೆ ಗೊಲ್ಲಾಳ
ನೀಶಭಕ್ತಿಯ ಮನದಿರವ"[೫೬]

ಗೊಲ್ಲಾಳನ ತಂದೆ 'ಬೊಲ್ಲುಗ' ಎಂದು ಪ್ರಸ್ತುತ ಕಾವ್ಯದಲ್ಲಿ ಹೇಳಲಾಗಿದೆ. ಈತನ ತಂದೆಯ ಉಲ್ಲೇಖವೂ ಇಲ್ಲಿ ಪ್ರಸ್ತಾಪಿಸಲಾಗಿದೆ. ಗೊಲ್ಲಾಳನ್ನು 'ಲಿಂಗ'ಕ್ಕೆ ಹಾಲು, ತುಪ್ಪದ ಅಭಿಷೇಕ ನೀಡುವದು, ತಿಳಿದು ಹೆತ್ತ ಮಗನು ಹಾಳುಮಾಡುತ್ತಿದ್ದಾನೆಂದು ಮಗನ ಮೇಲೆ ಕುದಿಯಹತ್ತಿದ ತಂದೆ ಇದೇನು ಈತನ ಉದ್ಧಟತನೆಂದು ಗೊಣಗುತ್ತ ನೇರವಾಗಿ ಗೊಲ್ಲಾಳನಿದ್ದ ಹಟ್ಟಿಗೆ ಬರುತ್ತಾನೆ. ಅಲ್ಲಿ ಹೊನ್ನ ಬಿಂದಿಗೆ, ತುಪ್ಪದ ಹರವಿಗಳು ಖಾಲಿಯಾಗಿ ಅಲ್ಲಲ್ಲಿ ಬಿದ್ದಿರುವುದನ್ನು ನೋಡಿ ಕನಲುತ್ತಾನೆ. ಇಂಥ ಮನೆಹಾಳನನ್ನು ಸುಮ್ಮನೆ ಬಿಡಬಾರದು. ಬುದ್ಧಿ ಕಲಿಸಬೇಕೆಂದು ಕೈಯಲ್ಲಿ ಕೊಡಲಿಯನ್ನು ಹಿಡಿದು ದೊಡ್ಡಿಗೆ ಬರುತ್ತಾನೆ. ಗೊಲ್ಲಾಳನ ಉಪಾಸನೆಯ ದೃಶ್ಯವನ್ನು ಕಂಡು ದಂಗಾಗುತ್ತಾನೆ. ಸುತ್ತಲೂ ಹಿಕ್ಕಿಗೊಬ್ಬರದ ಕಟ್ಟೆಯಕಟ್ಟಿ, ದಿನ್ನೆಯ ನೆತ್ತಿಯ

ಮೇಲೆ ಲಿಂಗವ ಸ್ಥಾಪಿಸಿದ್ದಾನೆ. ಲಿಂಗಕ್ಕೆ ಸುರಿದ ಹಾಲು -ತುಪ್ಪದ ಅಭಿಷೇಕ ಹಳ್ಳವಾಗಿ ಹರಿಯುತ್ತಿರುವದು. ಇದಾವುದರ ಪರಿವೆಯೂ ಇಲ್ಲದೆ ಲಿಂಗಪೂಜೆಯಲ್ಲಿ ತಲ್ಲೀನನಾಗಿದ್ದ ಗೊಲ್ಲಾಳ. ತನ್ನಿರವನ್ನೇ ಮರೆತು ಇರುವಾಗ ತಂದೆಯ ಆಗಮನ ತಿಳಿಯಲಿಲ್ಲ. ಇದನ್ನು ಬೊಲ್ಲುಗ ತಪ್ಪಾಗಿ ಭಾವಿಸಿ ಮಗನು ತನ್ನನ್ನು ಅವಮಾನಿಸಿದನೆಂದು ಅರ್ಥೈಸಿಕೊಳ್ಳುತ್ತಾನೆ. ಈ ಅವಮಾನವನ್ನು ಸಹಿಸಿಕೊಳ್ಳಲಿಕ್ಕಾಗದೆ "ಎಲೆ ಬುದ್ಧಿಗೇಡಿ ಮಗನೆ, ನಿನಗೇಕೆ ಈ ಗಿರಿಲಿಂಗ ಪೂಜೆಯ ಹುಚ್ಚು ? ಎಂದು ಆರ್ಭಟಿಸಿ ಕಿಡಿನುಡಿಯುತ ಮಗನು ಪೂಜೆಗೈಯ್ಯುವ ಸ್ಥಳವನ್ನು ಕಾಲಿನಿಂದ ತುಳಿಯುವನೆಂದಿದೆ. (ಬ್ರ.ಶ್ರೀ. ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಸಂಪಾದಿಸಿದ ಗ್ರಂಥದಲ್ಲಿ ಇರುವದು.) ಆದರೆ ಎಂ. ಚಂದ್ರಶೇಖರ್ ಹಾಗೂ ಹಿ.ಚಿ. ಶಾಂತವೀರಯ್ಯ, ಅವರು ಸಂಪಾದಿಸಿದ ಗ್ರಂಥಸಂಪಾದನೆಯಲ್ಲಿ ಎಡಗೈಯಲ್ಲಿರುವ ಕೋಲಿನಿಂದ ಹಿಕ್ಕೆಯ ಗುಂಪಿಯನ್ನು ಕೆದರಿದನೆಂದು ಇರುವದು. (ಹೀಗೆ ಮೂವರು ಸಂಪಾದಿಸಿದ ಕಾವ್ಯದಲ್ಲಿ ಅರ್ಥವ್ಯತ್ಯಾಸ ಅನೇಕ ಪದ್ಯಗಳಲ್ಲಿ ಇರುತ್ತವೆ. ಬ್ರ.ಶ್ರೀ. ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಸಂಪಾದಿಸಿದ ಪದ್ಯದಲ್ಲಿ

"ಕಾಲಿಂದೊದ್ದನು ।
ಕೋಲಿಂ ಕೆದರುತ।
ಮೇಲೆ ಮಗನ ಬೈಯುತಲಿ ॥
ಹಾಲು ತುಪ್ಪಗಳ ।
ಹಾಳು ಮಾಡಿದೆಯ ।
ಕ್ಷುಲ್ಲಕತನ ಹುಡುಗಾಟದಲಿ ॥"[೫೭]

ಎಂದಿದ್ದರೆ ಎಂ. ಚಂದ್ರಶೇಖರ, ಹಿ.ಚಿ. ಶಾಂತವೀರಯ್ಯ ಅವರುಗಳು ಕೂಡಿ ಸಂಪಾದಿಸಿದ ಪದ್ಯದಲ್ಲಿ ಹೀಗಿದ್ದೂ (ಮುಂದಿನ ಪದ್ಯದಲ್ಲಿ 'ಬೊಲ್ಲುಗ' ಕಾಲಿನಿಂದ ಒದೆದನು ಎಂಬ ಪದ್ಯಗಳಿವೆ.)

"ಬಿಡದಲೆಚಪ್ಪಗೊಡಲಿ ಕಚ್ಚುಟ ಸುತ್ತಿ
ನುಡಿನುಡಿಗೆ ಕುಣಿವ ಗೊಲ್ಲಾಳ
ಬಿಡದಿಟ್ಟಿಸುತೆ ಬಂದೆಡಗಯ್ಯ ಕೋಲಿನಿಂದ
ಕೆಡೆವದು ಹೊಡೆದನಾ ....."[೫೮]

ಇವರುಗಳು ಸಂಪಾದಿಸಿ ಪ್ರಕಟಿಸಿದ ಪುರಾಣ ಗೊಲ್ಲಾಳನ ಜೀವನ ಚರಿತ್ರೆ ತಿಳಿಯಲು ಸಹಕಾರಿಯಾಗಿದೆ. ಆದರೆ ಹಸ್ತಪ್ರತಿ ತುಂಬ ತೃಟಿತವಾಗಿದೆಯೆಂದು ಹೇಳಿಕೊಂಡು ಕೆಲವು ಕಡೆ ಅರ್ಥವ್ಯತ್ಯಾಸ ಬರುವಹಾಗೆ ಇವರುಗಳ ಸಂಪಾದನೆಯಲ್ಲಿ ಕೆಲವು ಪದ್ಯಗಳು ವ್ಯತ್ಯಾಸದಿಂದ ಇರುವುದು ಕಂಡುಬರುವುದು. ಇದು ಕಗ್ಗಂಟಾದರೂ, ಮತ್ತೊಂದು ಹಸ್ತಪ್ರತಿ ದೊರೆತು ತುಲನೆ ಮಾಡಿದರೆ ಸುಧಾರಿಸಬಹುದಾಗಿದೆ.)

ತನ್ನ ಮಗನ ಭಕ್ತಿಯ ತನ್ಮಯತೆಯನ್ನು ಹುಚ್ಚು ಹುಡುಗಾಟವೆಂದು ಹಾಗೂ ಹಾಲು -ತುಪ್ಪ, ಮಣ್ಣುಪಾಲಾಯಿತೆಂದೂ, ಕಿರುಚಾಡಿದನು ಬೊಲ್ಲುಗ. ತಂದೆಯ ಈ ಕಿರುಚಾಟದಿಂದ ಎಚ್ಚರಗೊಂಡ ಗೊಲ್ಲಾಳ ತನ್ನ ಲಿಂಗಕ್ಕಾದ ಅವಗತಿಯನ್ನು ಕಂಡು ಕನಲಿ ಕೆಂಗಣ್ಣಾದನು. ಎಲವೋ ಮೂಢಮತಿ, ಎನ್ನ ಲಿಂಗಕ್ಕೆ ಅವಮಾನಿಸಿದ ನೀನು ನನ್ನ ತಂದೆಯಲ್ಲ. ಘುಡಘುಡಿಸುತ್ತಲಿ ಒಡನೆ ಕೋಪದಿಂದ ಕಿಡಿಕಿಡಿಯಾಗುತ ನೋಡುತಲಿ ॥ ಕೊಡಲಿಯಿಂದ ಕಾಲ್॥ ಕಡಿಯಲು ಹೋದನು ನುಡಿದ ನಾಲಿಗೆಯ ಸಹವಾಗಿ ಕೊಡಲಿಯಿಂದ ತಂದೆಯ ಶಿರವನ್ನು ಕತ್ತರಿಸಿದನು. ಒಡನೆಯೇ ದೇಹವು ನೆಲಕ್ಕುರುಳಿ ಒದ್ದಾಡುತ್ತಿರುವದನ್ನು ನೆರೆದ ಜನಗಳು ನೋಡಿ ಗಾಬರಿಯಾದರು. ಭೂಕಂಪನವಾಗಿ ನೆಲಕಂಪಿಸಿದಂತೆ ಜನಮನ ಕಂಪಿಸಿತು. ತಲ್ಲಣಗೊಂಡು ಭಯಭೀತರಾಗಿ ಓಡಿಹೋದರು, ನೋಡಿದ ಜನರೆಲ್ಲಾ ಕೂಗಾಡುತ್ತ ಬೀದಿಯಲ್ಲಿ ತಮ್ಮೆದುರಿಗೆ ಸಿಕ್ಕಿದವರಿಗೆಲ್ಲ 'ಖೋಡಿ ಮಗ ಗೊಲ್ಲಾಳ ತಂದೆಯನ್ನು ಕೊಂದ" ಎಂದು ಸಾರುತ್ತ ದಿಕ್ಕೆಟ್ಟು ಓಡಿದರು.

ಗೊಲ್ಲಾಳನು ತಂದೆಯನ್ನು ಕೊಲೆಗೈದ ಸುದ್ದಿಯು "ಧವಳಾರ" ಪುರವನ್ನು ಆಳುತ್ತಿದ್ದ ಅರಸನಿಗೆ ಮುಟ್ಟಿತು. ಖೂಳ ಗೊಲ್ಲಾಳನಿಗೆ ಕೀಳು ಜನರ ಚಾಳಿ ಇದೆ ಎಂದು ಬೈದು, ಆತನನ್ನು ಹಿಡಿದು ತರಲು ಸೇವಕನನ್ನು ಆನೆ, ಕುದುರೆ ಬಲಸಹಿತ ಕಳಿಸಿದನು. ದೊರೆಯ ಆಜ್ಞೆಯಂತೆ ಗೊಲ್ಲಾಳನನ್ನು ಹಿಡಿದು ತರಲು ಸೈನಿಕರು ಆನೆ-ಕುದುರೆ ಸಹಿತ ಹೊರಟು ಬಂದರು. ಅನಿರೀಕ್ಷಿತವಾಗಿ ಕಾಳ್ಗತ್ತಲೆ ಕವಿಯಿತು. ದಾರಿ ಕಾಣದಂತಾಯಿತು. ಭಯ ಭೀತರಾದರು. ಮಾರಿ ಮಸಣಿಗಳ ಘರ್ಜನೆ, ಬೇತಾಳ, ಬ್ರಹ್ಮರಾಕ್ಷಸರ ವಿಕಟರೂಪ, ವಿಕಾರ ಧ್ವನಿಗಳಿಗಂಜಿ ಮರಳಿ ಓಡಹತ್ತಿದರು. ತನ್ನ ಸೈನ್ಯಕ್ಕಾದ ಅವಸ್ಥೆಯನ್ನು ಕೇಳಿದ ಅರಸ ತಾನೇ ಹೊರಟು ನಿಂತನು. ಆಗ ಎದ್ದ ಭೀಕರ ಗಾಳಿ, ದೂಳಿಯಿಂದ ಅರಸ ಕಂಗೆಟ್ಟು ದಾರಿ ಕಾಣದಾದನು. ದಿಕ್ಕೆಟ್ಟ ತನಗೆ ದಾರಿ ತೋರಿಸಬೇಕೆಂದೂ ತನ್ನನ್ನು ರಕ್ಷಿಸಬೇಕೆಂದೂ ಸಂಗಮೇಶನ ಮೊರೆಹೊಕ್ಕನು. ಇತ್ತ ಕಡೆ ಗೊಲ್ಲಾಳನು ಲಿಂಗವನ್ನು ಅರಸುತ್ತ ದೊಡ್ಡಿಗೆ ಬಂದನು. ಅಲ್ಲಿ ಗೊಲ್ಲಾಳ ಲಿಂಗವನ್ನು ಮೊದಲಿನಂತೆಯೇ ಇರಿಸಿ ಉಪಾಸನೆಗೈಯ್ಯಲು ಪ್ರಾರಂಭಿಸಿದ್ದನು. ಅಷ್ಟರಲ್ಲಿ ಲಿಂಗವು ತೇಜೋರೂಪಕ್ಕೆ ಹೊರಳಿತ್ತು. ಇದನ್ನು ನೋಡಿ ಅಚ್ಚರಿಪಟ್ಟನು. ಕಣ್ಣುಗಳಲ್ಲಿ ಆನಂದಬಾಷ್ಪದ ಕೋಡಿ ಹರಿಯಲಾರಂಭಿಸಿತು. ನಾಲಿಗೆಯ ಮೇಲೆ ಶಿವಸಹಸ್ರ ನಾಮಗಳನ್ನು ಜಪಿಸಹತ್ತಿದನು. ಕ್ರಮೇಣ ಉದ್ವಿಗ್ನ ಮನಸ್ಸಿನಿಂದ ಹೊರಬಂದು ಶಾಂತನಾದನು. ಪಾತಕ ತಂದೆಯಿಂದ ಲಿಂಗಕ್ಕಾದ ಅವಮಾನವನ್ನು ನೆನೆಸಿಕೊಂಡು ದುಃಖಿಸಿದನು.

ನಿನ್ನನ್ನು ಅವಮಾನಿಸಿದ ನನ್ನ ತಂದೆಗೆ ಭವಾವಳಿ ತಪ್ಪದು. ಆದರೆ ನಿನ್ನನ್ನು ನಂಬಿದವರಿಗೆ ಕೈಲಾಸಪದವಿಯನ್ನು ದಯಪಾಲಿಸಿರುವಿ. ನಿನ್ನ ಮಹಿಮೆಯನ್ನು ವರ್ಣಿಸಲು ಎನ್ನ ಅಳವಲ್ಲ ಎಂದು ಹಲಬುವನು. ಶಿವಭಕ್ತಿಯ ಪಾರಮ್ಯಕ್ಕೆ ಮೆಚ್ಚಿ, ಗೊಲ್ಲಾಳನ ಈ ದೃಢಭಕ್ತಿಗೆ ಒಲಿದು ವರ ನೀಡಿದ ಶಂಭು ನಂದಿವಾಹನವೇರಿ ಸಕಲ ಪರಿವಾರದೊಂದಿಗೆ ಭೂಲೋಕಕ್ಕೆ ಬರಲಾಗಿ ಗೊಲ್ಲಾಳನ ಭಕ್ತಿಪರವಶತೆಯನ್ನು

ಕಂಡು ಪ್ರಮಥರು, ದೇವತೆಗಳು, ಮನದುಂಬಿ ಕೊಂಡಾಡಿದರು. ಮಗನಿಂದ ವಿಚ್ಛೇದಿತನಾದ ತಂದೆಗೆ ಶಿವನ ಕರುಣೆಯಿಂದ ಪ್ರಾಣದಾನವಾಯಿತು. ಅಲ್ಲದೆ ತಂದೆ-ತಾಯಿಗಳಿಗೆ ಸದ್ಗತಿ ದೊರೆಯಿತು. ಶಿವನು ಗೊಲ್ಲಾಳನಿಗೆ, 'ಗೊಲ್ಗೇರಿಲಿಂಗ' ಎಂಬ ಹೆಸರಿನಿಂದ ಜಗದಲ್ಲಿ ಪ್ರಸಿದ್ಧಿ ಪಡೆಯುವಂತಾಗು, ಲೋಕದಲ್ಲಿ ನಿನ್ನ ಶಿವಭಕ್ತಿಯ ಕೀರ್ತಿಯು ಎಲ್ಲೆಡೆ ಹರಡಲೆಂದು ಹರಸಿದನು.

ಗುರು-ಲಿಂಗ-ಜಂಗಮದಲ್ಲಿ ಬೆರೆತು ಒಂದಾದ ಗೊಲ್ಲಾಳನು ತಂದೆ-ತಾಯಿಗಳ ಸಮೇತ ಕೈಲಾಸಕ್ಕೆ ಹೋಗುವನು. ಇತ್ತ "ಮೂಜಗದಿ ಪ್ಯಡ ಗೋಲ್ಗಿರಿ ಲಿಂಗ। ಕೊಡುವ ಇಷ್ಟಾರ್ಥವ ಪಡೆವರು ಮರ್ತ್ಯಲೋಕದಲಿ", ಹೀಗೆ ಕಾವ್ಯದಲ್ಲಿ ಗೊಲ್ಲಾಳೇಶ್ವರನ ಭಕ್ತಿಗೆ ಒಳಗಾದವರ ಕುರಿತು ವಿವರಿಸಲಾಗಿದೆ. "ಧರೆಯೊಳಗಿಹ ಸ್ಥಾವರ ಲಿಂಗಗಣಿತ" ಗೋಲಗೇರಿ ಲಿಂಗವು ಸ್ಥಾವರಲಿಂಗಗಳಲ್ಲಿ ಒಂದೆಂದು ಹೇಳಲಾಗಿದೆ.

ಗೊಲ್ಲಾಳ ಸಾಮಾಜಿಕ ಜೀವನದಲ್ಲಿ ಹೇಗೆ ಬಾಳಿದನು ಎನ್ನುವದಕ್ಕಿಂತ ಸಮಾಜದ ಮನಸ್ಸಿನ ಆಳದಲ್ಲಿ ಹೇಗೆ ನೆಲೆಸಿದನು ಎಂಬುದು ಬಹುಮುಖ್ಯವಾಗಿದೆ. ಶತ-ಶತಮಾನಗಳ ಹಿಂದೆ ಬದುಕಿದ್ದ ಗೊಲ್ಲಾಳ ಇಂದಿಗೂ ಅನೇಕ ಸಮುದಾಯಗಳ ದೇವರಾಗಿದ್ದಾನೆ. ಲಿಂಗಾಯತ ಒಳಪಂಗಡಗಳಾದ ಪಂಚಮಸಾಲಿ, ಬಣಜಿಗ, ಗಾಣಿಗ, ಕುಡುಒಕ್ಕಲಿಗ, ಹರಿಜನ, ಮಾದಿಗ, ಕುರುಬ ಇತ್ಯಾದಿ ಸಮುದಾಯದವರು, ಗೊಲ್ಲಾಳನಿಗೆ ನಡೆದುಕೊಳ್ಳುತ್ತಾರೆ, ಅವನನ್ನು ಆರಾಧಿಸುತ್ತಾರೆ. ಗೊಲ್ಗಿರಿಯೇ ಶ್ರೀಗಿರಿಯಾಗಿ ಈತನ ಭಕ್ತಿಗೆ ಪಾತ್ರರಾದವರಿಗೆ, ಯೋಗಿಗೆ, ಯೋಗವು, ಭೋಗಿಗೆ ಭೋಗವು ಆಗಿದೆ. ಧನ, ಧಾನ್ಯ ಅಷ್ಟೈಶ್ವರ್ಯವು, ಪುತ್ರರಿಲ್ಲದವರಿಗೆ ಪುತ್ರಭಾಗ್ಯ ಹೀಗೆ ಮನದ ಅರಿಕೆಯನ್ನು ಈತ ಈಡೇರಿಸುವನೆಂದು ವರ್ಣಿಸಲಾಗಿದೆ. ಹೀಗಿರಲು ಈತನಿಗೆ ಭಕ್ತಸಮೂಹ ಬರುವ ಪರಿಯನ್ನು ಬಣ್ಣಿಸಿದ್ದುಂಟು.

"ಘನಲಿಂಗ ಪತಿಗ
ಳನೇಕ ಮುನಿವರ ।
ಇನಿತು ಷಟ್‌ಸ್ಥಲ ಸ್ವಾಮಿಗಳು ॥
ಮನೆಮಠ ಹಿರಿಯರು ।
ಅನುಪಮ ಜನಗಳು
ದಿನನಿತ್ಯ ಬರುತ ನೇಮದಲಿ ॥"[೨೬]

ಶ್ರೀ ಗಿರಿಯ ಮಲ್ಲಯ್ಯನಿಗೆ ಹೋಗಿ ಬರುವ ಬದಲಾಗಿ ಶ್ರೀಶೈಲ ಲಿಂಗವನ್ನು ಇಲ್ಲಿಯೇ ಕಂಡರು. ಸ್ಥಾವರಲಿಂಗಕ್ಕೆ ಇನ್ನೊಂದು ಸ್ಥಾವರಲಿಂಗ ಸ್ಥಾಪಿಸಿದಂತಾಯಿತು. ಇದರರ್ಥ ದೇವರು ಎಲ್ಲೆಡೆಯೂ ಇರುವನು. ಭಕ್ತರು ನೂರಾರು ಕಿ.ಮೀ. ಅವರಿವರನ್ನು ಜೊತೆಗೂಡಿ ಯಾತ್ರೆಗೈದು ಸಮಯ ಸವೆಸುವುದಕ್ಕಿಂತ ನೆನೆದಲ್ಲಿಹನೆಂದು ಅರಿವಿಗೆ ಒಳಗಾಗಿ ಉತ್ತಮರಾಗಿ ಬದುಕುವುದೇ ನಿಜದ ಬದುಕು ಎನ್ನಬಹುದು.

"ಧರೆಯೊಳು ಕುಂತಳ ।

ಸಿರಿಯ ದೇಶದಲಿ ।

ಪುರನಗರದ ಆ ಸೀಮೆಯೊಳು ॥

ಇರೆ ಗಂಗನಪಳ್ಳಿ ।

ವರ ಗ್ರಾಮದ ಶಿವ ।

ಶರಣ ಮಲ್ಲಪ್ಪನೆಂದಿಹನು ॥"೬೦

ಶಿವಶರಣ ಮಲ್ಲಪ್ಪನು "ಗಂಗನಪಳ್ಳಿ" ಗ್ರಾಮವಾಸಿ ಎಂದು ಹೇಳಲಾಗಿದೆ. ಗಂಗನಪಳ್ಳಿಯು ಶ್ರೀಶೈಲಕ್ಕೆ ಹೋಗುವಾಗ (ಕಡೆಬಾಗಿಲಿನಿಂದ) ಅರಣ್ಯ ಮಧ್ಯದಲ್ಲಿರುತ್ತದೆ. ಈತ ಇಲ್ಲಿಯವನೆಂದು ಹೇಳುತ್ತಾರೆ. ಆದರೆ ಗಂಗನಪಳ್ಳಿಯಲ್ಲಿ ಗ್ರಾಮವಿತ್ತು. ಜನರು ವಾಸವಾಗಿದ್ದರು. ಎಂಬುದಕ್ಕೆ ಯಾವ ಕುರುಹುಗಳೂ ಆ ಸ್ಥಳದಲ್ಲಿ ಇರುವುದಿಲ್ಲ. ಅಲ್ಲಿ ಕೇವಲ ಒಂದು ನೀರಿನ ಹೊಂಡ ಮಾತ್ರವಿರುವುದು. ಈ 'ಗಂಗನಪಳ್ಳಿ' 'ಗಂಗನಹಳ್ಳಿ'ಯಾಗಿರಬಹುದು. ಗಂಗನಹಳ್ಳಿ ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನಲ್ಲಿ ಬರುವದು. ಗೋಲಗೇರಿಯ ಹಾಗೂ ಗಂಗನಹಳ್ಳಿಗೂ ಕಾಲುದಾರಿ ಇರುವದು. ಈ ಕಾಲುದಾರಿಯ ಅಂತರ ಸುಮಾರು ೫೦ ಕಿ.ಮಿ. ಇದನ್ನು ಗಂಗನಹಳ್ಳಿ ಎಂದು ಊಹಿಸಬಹುದು. ಶಿವಪೂಜಾನಿಷ್ಠವಾದ ಮಲ್ಲಪ್ಪನು ಗಿರಿಗೊಲ್ಲ ಲಿಂಗದೊಳು ವಿಶ್ವಾಸವಿರಿಸಿ, ನಿತ್ಯವೂ ಭಕ್ತಿಯಲಿ ಪೂಜಿಸುವನು. ಮಲ್ಲಪ್ಪನನ್ನು 'ಶರಣ'ನೆಂದು ಕರೆಯಲಾಗಿದೆ. ಈತನು ಶರಣನು ಎಂಬುದಕ್ಕೆ ಮಾಹಿತಿಗಳ ಕೊರತೆ ಇದೆ.

ಶರಣ ಮಲ್ಲಪ್ಪನ ಸ್ವಭಾವ ಕುರಿತು ಹೀಗೆ ವಿವರಣೆ ದೊರೆಯುತ್ತದೆ. ಈತ ಸಜ್ಜನ, ಶಿವಭಕ್ತ, ಸನ್ಮತಿ, ಪೂಜ್ಯರೊಡನೆ ಬೆರೆಯುತ್ತಿದ್ದನು. ಕಳ್ಳರು. ಸುಳ್ಳರು, ಕೊಳ್ಳಿಕಾರರು,. ಜೊಳ್ಳು ಖೂಳರು, ಮೂರ್ಖರು, ತಳ್ಳಿಕೋರರು, ಪಾತಕಿಗಳು, ದುರ್ನಡತೆಕೋರರು, ಕೊಂಡೆಯ ನುಡಿವರು, ಭಂಡ ಹೀನರು, ಲೆಂಡರು, ಅತಿ ದುರ್ಜನರಲ್ಲಿ ತಂಡ ನಿಂದಿಸುವ, ಖಂಡ ಲೋಭಿಗಳು - ಇಂಥವರನ್ನು ಕಂಡರೆ ಸೇರನು. ಮನುಷ್ಯನ ಸ್ವಾರ್ಥ -ಕೆಟ್ಟ ಸ್ವಭಾವಗಳ ಕುರಿತು ಬಹು ವಿವರವಾದ ಮಾಹಿತಿ ನೀಡಲಾಗಿದೆ. (ಇಂಥವರನ್ನು ವಿಂಗಡಿಸಿ ಮನಃ ಶಾಸ್ತ್ರೀಯ ಹಿನ್ನೆಯಲ್ಲಿ ಅಧ್ಯಯನ ಮಾಡುವುದು ಉಚಿತ) ಶರಣರು ರಚಿಸಿದ ವಚನಗಳಲ್ಲಿ ಇಂಥವರ ಸಂಗ ಬೇಡವೇ ಬೇಡೆಂದು ಹೇಳಲಾಗಿದೆ. ಉದಾ: ಕಳಬೇಡ ಕೊಲಬೇಡ, .... ಇದೇ ಶರಣ ಸಿದ್ಧಾಂತವೆನ್ನಬಹುದಾಗಿದೆ. ಮಲ್ಲಪ್ಪನ ಕಾಯಕದ ಕುರಿತು ಹೇಳಲಾಗಿದೆ. ಮಲ್ಲಪ್ಪ ಶರಣನು 'ಚಿತ್ತಶುದ್ಧದಲಿ ವೃತ್ತಿಯ ನಿರ್ಮಲ ಮನದಲ್ಲಿ ' ಕಾಯಕವ ಮಾಡುತ್ತಿದ್ದನು. ಈತನ ಸತಿಯಳ ಕುರಿತೂ ವಿವರಿಸಿದೆ.

"ಮಲ್ಲಪ್ಪನ ಸತಿ ।

ಚಲ್ವ ಮಹದೇವಿ ।

ಸಲ್ಲಾಪ ಸದ್ಭಾವದಿಂದ ॥

ಸಲ್ಲಿಸಿ ಪತಿಭಕ್ತಿ ।

ಯಲ್ಲಿ ನಿರ್ಮಲದಿ ।

ಚಲ್ವ ಸುಜ್ಞಾನ ಸಾಹಿತ್ಯದಲಿ ॥[೬೧]

ಮಲ್ಲಪ್ಪನ ಹೆಂಡತಿ "ಮಹದೇವಿ" ಪತಿಯ ಭಕ್ತಿಯಲ್ಲಿ ಬೆರೆತು ಗೋಲಗೇರಿ ಲಿಂಗವನು ಪೂಜಿಸಿದಳೆಂದಿದೆ. ಈ ದಂಪತಿಗಳಿಗೆ ಪುತ್ರ ಭಾಗ್ಯ ಇರಲಿಲ್ಲ. ಇವರುಗಳು ಲೋಕದ ಒಡೆಯನಿಗೆ ಅರ್ಪಿಸಿಕೊಂಡು ತಾವೇ ಮಕ್ಕಳಾಗಿ ಬದುಕಿದವರು. ('ಸತಿ ಮಹದೇವಿಯು ಅತಿ ಹರುಷದಿ ಬರೆ ಪತಿ ಮಲ್ಲಪ್ಪನ ನೋಡಿದಳು. ಸ್ತುತಿಯಿಂದ ಕೇಳಲು ಹಿತದಿಂದೊರೆದನು. ಸುತರಿಲ್ಲದವರ ಬಾಳ್ವೇನು'.) ಇಬ್ಬರೂ ಕೂಡಿಕೊಂಡು ಭಕ್ಷ್ಯ ಭೋಜ್ಯಗಳನು ಶ್ರೀ ಮಹದೇವಗೆ ನೇಮ ಸಮರ್ಪಣ ಮಾಡಲು ದೇವಾಲಯ ಘಂಟೆಗಳು ತಮ್ಮಷ್ಟಕ್ಕೆ ತಾವೇ ನುಡಿದವು. ಮುಚ್ಚಿದ ಬಾಗಿಲು ಕ್ಷಣದೊಳು ತೆರೆಯಿತು. ನೀಡಿದ ಬೋನವು ತಡವಿಲ್ಲದೆ ಮೃಡನುಂಡನು ದೃಢಭಕ್ತಿಯ ಮಲ್ಲಪ್ಪನು ಸಂತಸದಿಂದೋಡಿದನು. ಹೀಗೆ ಗೋಲಗೇರಿ ಲಿಂಗವು ಮಲ್ಲಪ್ಪನಿಗೆ ಒಲಿದ ಪ್ರಸಂಗವನ್ನು ಪವಾಡವೆಂಬಂತೆ ವರ್ಣಿಸಿದ್ದುಂಟು.

ಡಂಬಳ ಗ್ರಾಮದ 'ಗೌರಮ್ಮ'ಳ ಭಕ್ತಿಯ ನಿಷ್ಠತೆಯನ್ನು ಹೀಗೆ ವಿವರಿಸಲಾಗಿದೆ. (ವಿಜಾಪೂರ ಜಿಲ್ಲೆ ಸಿಂದಗಿ ತಾಲ್ಲೂಕಿನಲ್ಲಿ ಡಂಬಳ ಗ್ರಾಮವಿದೆ. ಗೋಲಗೇರಿಯಿಂದ ನಾಲ್ಕು ಕೀ.ಮೀ. ಅಂತರದಲ್ಲಿದೆ) ಮಲ್ಲುಗನಾ ಸತಿ ಗೌರಿ ಎಂಬುವಳಿದ್ದಳು. ಇವರದು ಅವಿಭಕ್ತ ಕುಟುಂಬವಾಗಿತ್ತು. ಇಂತಹ ಕುಟುಂಬಗಳಲ್ಲಿ ವ್ಯಕ್ತಿ ಸ್ವಾತಂತ್ರ್ಯ ಅಪರೂಪವೆಂದೇ ಹೇಳಬೇಕಾಗುತ್ತದೆ. ಗೌರಿ ಹಗಲಿರುಳು ಎನ್ನದೆ ಅರುವಿನಿಂದ ಶಿವನನ್ನು ಧ್ಯಾನಿಸುವಳು. ಸುತ್ತಲೂ ಅತ್ತೆ, ಮಾವ, ಅತ್ತಿಗೆ, ಭಾವರು ಹಿರಿ-ಕಿರಿಯರು ಇರಲಿಕ್ಕಾಗಿ ಚಿತ್ತದಲ್ಲಿ ಮೃತ್ಯುಂಜಯನಾ ನಿತ್ಯದಲಿ ಭಕ್ತಿಯಿಂದ ಭಜಿಸುವಳು. ಇವಳು ಶರಣರ ತತ್ವ ಸಿದ್ಧಾಂತಗಳಿಗೆ ಅನುಗುಣವಾಗಿಯೇ ಹರನನ್ನು ಪೂಜಿಸುತ್ತಿದ್ದಳು ಎಂಬ ಉಲ್ಲೇಖವೂ ಇದೆ.

"ತನುವು ಗುರುವಿನೊಳು।

ಮನವು ಲಿಂಗದಲಿ ।

ಧನವು ಜಂಗಮಕೆ ಸಲ್ಲಿಸುತ ॥

ದಿನವಭ್ಯಂಗದಿ

ಸ್ನಾನವ ಮಾಡುತ

ಘನ ಶುಚಿಯಿಂದಲಿ ಪೂಜಿಸುವಳು ॥"[೬೨]

ಗುರು, ಲಿಂಗ, ಜಂಗಮ, ಇವುಗಳ ಪ್ರಸ್ತಾಪದ ಜೊತೆಗೆ ಶರಣರ "ಕುಟುಂಬ ಜೀವನ " ಕುರಿತು ಮಾತನಾಡಿದ್ದು ಗಮನಾರ್ಹವಾಗಿದೆ. ಕೂಡಿ ಬಾಳಿದರೆ ಸ್ವರ್ಗಸುಖ ಎಂಬಂತೆ ಕುಟುಂಬದಲ್ಲಿ ಕೂಡಿಬಾಳಿದರೆ, ಸಮಾಜದಲ್ಲಿಯೂ ಸಹಬಾಳ್ವೆಯಿಂದ ಸಹನೆಯಿಂದ ಸಹೋದರರಾಗಿ ಬದುಕಲು ಸಾಧ್ಯವಾಗುತ್ತದೆ.

"ಸಹಜೀವನ ಸಿದ್ಧಾಂತ" ಗೊತ್ತಿಲ್ಲದಿದ್ದರೆ ಕುಟುಂಬವಾಗಲೀ, ಸಮಾಜವಾಗಲೀ ಸರಿಯಾಗಿ ರೂಪುಗೊಳ್ಳುವುದಿಲ್ಲ. ಇದನ್ನು ಅರ್ಥ ಮಾಡಿಕೊಂಡ ಶರಣರು "ಸಮಾಜ"ದಂತೆ "ಕುಟುಂಬ"ದ ಬಗ್ಗೆಯೂ ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಆದರೆ ಈ ವರೆಗೆ ಶರಣರ "ಸಾಮಾಜಿಕ ಸಿದ್ಧಾಂತ"ದ ಬಗ್ಗೆ ಮಾಡಿದ ಚರ್ಚೆ "ಕೌಟುಂಬಿಕ ಸಿದ್ಧಾಂತ"ದ ಬಗ್ಗೆ ನಡೆದಿಲ್ಲವೆಂದೇ ಹೇಳಬೇಕು."[14] ಸಾಮುದಾಯಿಕ ಜವಾಬ್ದಾರಿಯ ದೊಡ್ಡ ಘಟಕ ಸಮಾಜವಾದರೆ, ಸಣ್ಣ ಘಟಕ ಅವಿಭಕ್ತಕುಟುಂಬ, ಅತಿ ಸಣ್ಣ ಘಟಕ ವಿಭಕ್ತ ಕುಟುಂಬ ಈ ಸಣ್ಣ, ಅತಿ ಸಣ್ಣ ಘಟಕದಲ್ಲಿ ಗಂಡ - ಹೆಂಡತಿ, ತಂದೆ -ತಾಯಿ ಸಹೋದರ-ಸಹೋದರಿ, ಎಲ್ಲರೂ ಇರುವರು. ಎಲ್ಲರೂ ದುಡಿಯಬೇಕು. ಹಾಗೂ ದಾಸೋಹ ಮಾಡಬೇಕು. ಹೀಗೆಂದು ಶರಣರು ಸಾರಿದ್ದುಂಟು. ಭಕ್ತೆ ಗೌರಮ್ಮಳು ಗೊಲ್ಲಾಳನಿಗೆ ನೈವೇದ್ಯ ನೀಡುತ್ತಿದ್ದಳು.

ಡಂಬಳದ ಗೌರವ್ವನಿಗೆ ಲಿಂಗಯ್ಯನೊಲಿದನು. ಇವಳು ನೀಡುವ ನೈವೇದ್ಯ ಶಿವನಿಗೆ ಅರ್ಪಿತವಾಗುತ್ತಿತ್ತು. ಇವಳನ್ನು ಮನೆಯವರು ಪರೀಕ್ಷಿಸಲು ಚಿನುಮಯನೊಲಿದು ತಾನುಂಬ ಎಂಬುದನ್ನು ಎಲ್ಲರಿಗೂ ತೋರಿಸಿದಳು. ಹೀಗೆ ಗೌರಮ್ಮಳಿಗೆ ಹರನು ಒಲಿದ ಪವಾಡವನ್ನು ಲಕ್ಷಿಸಬಹುದು. ಇವಳ ಹೆಸರಿನ ಗುಡಿಯೊಂದು ಡಂಬಳದಲ್ಲಿದೆ.

ಈ ತೆರನಾಗಿ ಗೊಲ್ಲಗಿರಿ ಭೂತನಾಥನಾ ಖ್ಯಾತಿಯು ಭೂತಳದಲ್ಲಿ ಪಸರಿಸಲು ಭಕ್ತರು ಹೆಚ್ಚಾದರು. ಲಕ್ಷ್ಮೇಶ್ವರದ ಭಕ್ತ (ಪುಲಿಗೆರೆ) ' ನಂದಪ್ಪ' ನ ಭಕ್ತಿಗೆ, ನೇಮಕ್ಕೆ ಮೆಚ್ಚಿ, ಭಕ್ತನಿದ್ದ ಲಕ್ಷ್ಮೇಶ್ವರಕ್ಕೆ ಹೋಗಿ ನೆಲೆಸಿದ್ದಾನೆ. ಅಲ್ಲಿ ಈಗಲೂ ಗೊಲ್ಲಾಳೇಶ್ವರ ಕುರಿತಾದ ಪುರಾತನ ದೇವಾಲಯವಿರುತ್ತದೆ. ಗೊಲ್ಲಾಳನು ಪುಲಿಗೆರೆಯಲ್ಲಿ ನೆಲೆಸಿದ್ದಕ್ಕೆ ಐತಿಹ್ಯವಿರುವುದು. ನಂದಯ್ಯನು ಪ್ರತಿ ಹುಣ್ಣಿಮೆ ಹಾಗೂ ಅಮವಾಸ್ಯೆಗೆ ನೈವೇದ್ಯ ತಪ್ಪದೆ ನೀಡುವವನು,. ಹೀಗಿರಲು ಶ್ರಾವಣಮಾಸ ನೂಲ ಹುಣ್ಣಿಮೆಗೆ ಗೋಲಗೇರಿಗೆ ಬರುವ ಸಂದರ್ಭದಲ್ಲಿ ಭೋರೆಂದು ಮಳೆಯಾಗಲು ಕೃಷ್ಣೆ ತುಂಬಿ ಹರಿಯಹತ್ತಿದಳು. ಕೃಷ್ಣೆ ದಾಟಲು ಹರಿಗೋಲು ಹುಡುಕಿದ ಸಿಗಲಿಲ್ಲ. ಆಗ ಭಕ್ತಿಯ ಉತ್ಕಟತೆಯಿಂದ 'ಕಾಯುವವ ಕೊಲ್ಲುವವ ನೀನೇ ದೇವಾ ' ಎಂದು ಭಾವಪರವಶನಾಗಿ ನದಿಗೆ ಇಳಿಯಲು ನದಿಯು ಈತನಿಗೆ ದಾರಿಮಾಡಿಕೊಟ್ಟಿತು. ಈ ಪರಿ ನಂದಯ್ಯ ಗೋಲಗೇರಿಗೆ ಬಂದು ತಲುಪಿದ. ಭಕ್ತನ ನಿಷ್ಠೆಯನು ಮೆಚ್ಚಿ ದೇವರು ನಂದಯ್ಯನ ಸ್ವಪ್ನದಲ್ಲಿ ಬಂದು ನೀನಿರುವೆಡೆಗೆ ನಾನೇ ಬರುವೆನೆಂದು ಹೇಳುವನು. ಬರುವ ಪರಿಯನ್ನು ನಾನು ಹೇಗೆ ಅರಿಯಲಿ? ಎನ್ನುವನು.

"ಗುರು ಸೋಮನಾಥ!
ಸ್ಮರಿಸಿದ ಸ್ಥಳದೊಳು ।
ಪರಿಕಿಸಲ್ಲಿ ನೂತನವಾಗಿ ॥
ಕರಿಮಲ್ಲಿಗೆ ಹೂ ।

ಪರಿಮಳ ಪೂಜೆಯ ।

ಪರಿಭವದು ಲಕ್ಷ ನಿನಗಾಗಿ ।।"[೬೪]

ಗೊಲ್ಲಾಳನ ಗುರು ಸೋಮನಾಥನೆಂದು ಇಲ್ಲಿ ಉಲ್ಲೇಖಿಸಲಾಗಿದೆ. ಲಕ್ಷ್ಮೇಶ್ವರದಲ್ಲಿ ಪುರಾತನ ಸೋಮನಾಥ ದೇವಾಲಯವಿರುವುದು. ಸೋಮನಾಥನು ಗೊಲ್ಲಾಳನ ಗುರು ಆಗಿದ್ದನು ಎಂಬುದಕ್ಕೆ ಶಾಸನಗಳಲ್ಲಾಗಲಿ, ಜನಪದ ಗೀತೆಗಳಲ್ಲಿಯಾಗಲಿ ಉಲ್ಲೇಖವಿಲ್ಲ. ಗೊಲ್ಲಾಳನಿಗೆ ಕುರಿಹಿಕ್ಕೆಯನ್ನು 'ಲಿಂಗ'ವೆಂದು ನೀಡಿ ಲಿಂಗದೀಕ್ಷಾ ಬೋಧನೆ ಮಾಡಿದ 'ನಂದಯ್ಯ'ನೇ (ಲಿಂಗಯ್ಯ) ಗೊಲ್ಲಾಳನ ಗುರುವಾಗಿದ್ದ ಎನ್ನುವುದು ಸೂಕ್ತವಾಗುತ್ತದೆ.

ನಂದಯ್ಯನು ಸೋಮನಾಥನು ನೆಲೆಸಿದ ಸೀಮೆಯಲ್ಲಿ ಗೊಲ್ಲಾಳ ಬಂದ ಪರಿಯನ್ನು ಅರಿತು (ಸ್ವಪ್ನದಲ್ಲಿ ಹೇಳಿದಂತೆ) ನೋಡಿ ದಂಗಾದ. ಕರಿಮಲ್ಲಿಗೆ ರಾಶಿಯನ್ನು ಅದರ ಪರಿಮಳದಿಂದ ತುಂಬಿ ಪೂಜೆಗೊಂಡದ್ದನ್ನು ಕಂಡು ಭಕ್ತಿ ಪುಳಕಿತನಾದನು. ಹೀಗೆ ನಂದಯ್ಯ ತನ್ನೂರಲ್ಲಿಯೇ ಅನ್ನ -ತುಪ್ಪದ ನೇಮ ಪೂರೈಸಿದುದು, ಲಿಂಗಕ್ಕೆ ಅರ್ಪಿತವಾದುದು ಅವನಿಗೆ ಮೇರೆ ಮೀರಿದ ಸಂತೋಷವನ್ನು ನೀಡಿತು. ಗೋಲಗೇರಿ ಗೊಲ್ಲಾಳೇಶನು ಪುಲಿಗೆರೆಯಲ್ಲಿ ಅಂದರೆ ಲಕ್ಷ್ಮೇಶ್ವರದಲ್ಲಿ ನೆಲೆಸಿದ ಪವಾಡ ಕಥೆ ಇದಾಗಿದೆ.

ಪುರಾಣದ ಕೊನೆಯ ಹಂತದಲ್ಲಿ ಗೋಲಗೇರಿ ಲಿಂಗಯ್ಯನನ್ನು ಹತ್ತಾರು ಸಲ ಸ್ತುತಿಸಲಾಗಿದೆ. ಹರನಿಗೆ ಸಹಸ್ರನಾಮಗಳು. ಅವುಗಳಲ್ಲಿ ಗೋಲಗೇರಿ ಲಿಂಗಯ್ಯ ನಾಮವೂ ಒಂದು. ಅರ್ಥಾತ್ ಶಿವನ ಮತ್ತೊಂದು ಅವತಾರ ಗೋಲಗೇರಿ ಲಿಂಗಯ್ಯ. ಈಗಾಗಲೇ ರೇಣುಕನು ಕೊಲ್ಲಿಪಾಕದಲ್ಲಿ ಉದಯಿಸಿದ ಪರಿಯನ್ನು ವಿವರಿಸಿದರೂ, ಮತ್ತೊಮ್ಮೆ ಕಥನ ನಿರೂಪಣೆಯಾಗಿದೆ. "ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ರೇವಣಸಿದ್ಧನದು ದೊಡ್ಡ ಹೆಸರು. ಜೀವಿತ ಕಾಲಾವಧಿಯಲ್ಲಿ ಈ ಧಾರ್ಮಿಕವನ್ನು ಮೀರಿ, ಸಾಮಾಜಿಕ - ರಾಜಕೀಯ ಕ್ಷೇತ್ರಗಳ ಮೇಲೆಯೇ ವಿಪುಲ ಪ್ರಭಾವ ಬೀರಿದ್ದ ಈತ, ಆಮೇಲೆಯೇ ಕರ್ನಾಟಕ ಕ್ಷೇತ್ರಗಳ ಒಳಹೊರಗಿನ ವೀರಶೈವ ಮತ್ತು ಕುರುಬ ಸಮಾಜಗಳಲ್ಲಿ ಲಿಖಿತ ಮತ್ತು ಅಲಿಖಿತ ಮಾಧ್ಯಮಗಳ ಮೂಲಕ ವ್ಯಾಪಕವಾಗಿ ಹರಡಿಕೊಂಡಿದ್ದಾನೆ. ಲಿಖಿತ ಸಾಮಗ್ರಿಯದೇ ಒಂದು ಸ್ವತಂತ್ರ ಅಭ್ಯಾಸ, ಅಲಿಖಿತ ಸಾಮಗ್ರಿ (ಮೌಖಿಕ ಸ್ಮಾರಕ) ಯದೇ ಒಂದು ಸ್ವತಂತ್ರ ಅಭ್ಯಾಸ ವಾಗುವಷ್ಟು ಇವನು ವಿಸ್ತಾರ ಪಡೆದುಕೊಂಡಿದ್ದಾನೆ."[೬೫]

ಕವಿ ವಿರೂಪಾಕ್ಷ ಕೃಪೆಯಿಂ ಪೊರೆವೆನು ಪ್ರಮಥರ । ವರ ನಾಮಗಳೊರನೆ ಬಲ್ಲಂತೆ ಎಂದಿರುವದು ಹಾಗೆಯೇ ಶಿವಭಕ್ತರಾದ ಮಲುಹಣ, ಹಲಾಯುಧ, ಕರಿಕಾಲಚೋಳ, ಶರಣರಾದ ಸತ್ಯಣ್ಣ, ಬಹುರೂಪಿ ಬ್ರಹ್ಮಯ್ಯ, ಬಿಲ್ಲಮ ಉರಿಗಣ್ಣ ಶಂಕರದಾಸಿಮಯ್ಯ, ಜೇಡರ ದಾಸ, ಮರುಳ ಶಂಕರದೇವ, ಶಾಂತಯ್ಯ, ವೀರಬಲ್ಲಾಳ, ಕೊಂಡೆಯ ಮಂಚಣ್ಣ, ಪಂಡಿತ ಗೋವಿಂದ, ಕೊಂಡಗೂಳಿ ಕೇಶಿರಾಜ. ಬಿಬ್ಬಿ ಬಾಚರಸ,

ಲದ್ದಿ ಸೋಮಯ್ಯ, ಕಕ್ಕಯ್ಯ, ಗುಂಡ ಬ್ರಹ್ಮಯ್ಯ, ಮಡಿವಾಳ ಮಾಚಯ್ಯ, ಅಜಗಣ್ಣ, ಗೊಗ್ಗಯ್ಯ, ಶಂಕ್ರಯ್ಯ, ಪಡಿಹಾರಿ ರೇವಣ್ಣ, ಹೋರಿ ಬ್ರಹ್ಮದೇವಯ್ಯ, ಅಂಬಿಗರ ಚೌಡಯ್ಯ, ಕುಂಬಾರ ಗುಂಡಯ್ಯ, ಕೆಂಭಾವಿ ಭೋಗಯ್ಯ, ನಂಬೆಣ್ಣ, ಹಾವಿನಾಳ ಕಲ್ಲಯ್ಯ, ಸೊನ್ನಲಗಿ ಸಿದ್ಧರಾಮಯ್ಯ, ಮಾದಾರ ಚನ್ನಯ್ಯ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಒಕ್ಕಲಿಗರ ಮುದ್ದಣ್ಣ, ಬಂಕಯ್ಯ, ಹೆಂಡದ ಮಾರಯ್ಯ, ಬೊಂಕಯ್ಯ, ಚೌಡಯ್ಯ, ಚನ್ನಕ್ಕ, ಸತ್ಯಕ್ಕ, ನಿಂಬೆವ್ವ, ರೇಚವ್ವೆ, ಅಮ್ಮವ್ವೆ, ಗೊಗ್ಗವ್ವೆ, ಕೋಳೂರು ಕೊಡಗೂಸು, ಪಿಟ್ಟವ್ವೆ ಇತ್ಯಾದಿ ಶರಣರ ಹೆಸರುಗಳನ್ನು ಸ್ತುತಿಸಿದ್ದಾನೆ. ಈ ಪುರಾಣ ಕಾವ್ಯದಲ್ಲಿ ಬರುವ ಶರಣರ ಉಲ್ಲೇಖದ ಮೇಲಿಂದ ಶರಣರ ಇತಿಹಾಸವನ್ನು ವಿಷಯದ ಕುರಿತು ಇನ್ನೂ ವಿಸ್ತೃತವಾದ ಅಧ್ಯಯನ ಮಾಡಬಹುದು.

ಒಟ್ಟಾರೆ ಈ ಪುರಾಣದಲ್ಲಿ ಈಗ್ಗೆ ಪ್ರಕಟವಾಗಿರುವ ಎರಡೂ ಆವೃತ್ತಿಗಳ ವಿಷಯ ವ್ಯಾಪ್ತಿಯನ್ನು ಗಮನಿಸಲಾಗಿ, ಶಿವಸ್ತೋತ್ರ, ಶಿವಸ್ತುತಿ, ಶಿವಲಿಂಗಲೀಲೆ, ಶರಣರ ಸಹಸ್ರನಾಮಾವಳಿ, ಶರಣರು ಮೆರೆದ ಲಿಂಗಮಹಿಮೆ ಇತ್ಯಾದಿಗಳ ಮಾಹಿತಿಯನ್ನು ನೀಡುವುದು. ಹಾಗೂ ಶಿವಶರಣರ ಚರಿತ್ರೆಯನ್ನು ಇನ್ನಷ್ಟು ಆಳವಾಗಿ ಅಧ್ಯಯನ ಮಾಡಲು ಪ್ರೇರಣೆ ನೀಡುವುದೇ ಆಗಿರುತ್ತದೆ ಎಂದರೆ ಅತಿಶಯೋಕ್ತಿಯೇನಲ್ಲ.

ಗೊಲ್ಲಾಳ ಲಿಂಗೇಶ್ವರ ಕುರಿತು ಪ್ರಕಟವಾದ ಪುರಾಣಗಳಲ್ಲಿ ಒಂದರಲ್ಲಿ ೯ ಸ್ಥಲಗಳಿದ್ದರೆ ಎರಡನೆಯದರಲ್ಲಿ ೧೦ ಸಂಧಿಗಳಿವೆ. ಅಂದರೆ ಕ್ರಮವಾಗಿ ಎಂ. ಚಂದ್ರಶೇಖರ, ಮತ್ತು ಹಿ.ಚಿ. ಶಾಂತವೀರಯ್ಯ ಇವರೀರ್ವರು ಕೂಡಿಕೊಂಡು ಸಂಪಾದನೆ ಮಾಡಿದ ಪುರಾಣದಲ್ಲಿ ಒಂಬತ್ತು ಸ್ಥಲಗಳಿವೆ. ಎರಡನೆಯದಾಗಿ ಬ್ರ.ಶ್ರೀ. ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಸಂಪಾದಿಸಿದ ಕೃತಿಯಲ್ಲಿ ಹತ್ತು ಸ್ಥಲಗಳಿವೆ. ಪ್ರಕಟವಾದ ಎರಡೂ ಆವೃತ್ತಿಗಳಲ್ಲಿ ಒಂಭತ್ತನೇ ಸ್ಥಲ -ಸಂಧಿಗಳಲ್ಲಿ ಹೆಚ್ಚು ಸಾಮ್ಯತೆ ಇರುವದು. ಆದರೆ ಶಾಸ್ತ್ರಿಗಳು ಸಂಪಾದಿಸಿದ ಆವೃತ್ತಿಯ ಹತ್ತನೆಯ ಸಂಧಿಯಲ್ಲಿ ಹೆಚ್ಚಿನ ವಿಷಯ ಸೇರ್ಪಡೆಯಾಗಿದೆ. ಕ್ರಮವಾಗಿ ಒಂಬತ್ತನೇ ಸ್ಥಳ -ಸಂಧಿಗಳ ವರೆಗೆ, ಛಂದಸ್ಸಿನಲ್ಲಿ ಸಾಮ್ಯತೆ ಇರುವದು. ಅಂದರೆ ಶರಷಟ್ಪದಿಯಲ್ಲಿ ವೃತ್ತ, ಕಂದ, ಪದ್ಯಗಳು ಇರುವವು. ಶಾಸ್ತ್ರಿಗಳು ಸಂಪಾದಿಸಿದ ಹತ್ತನೆಯ ಸಂಧಿಯು ಭಾಮಿನಿ ಷಟ್ಪದಿಯಲ್ಲಿರುವದು. ವಿಷಯ ದೃಷ್ಟಿಯಿಂದ ಗಮನಿಸಲಾಗಿ ಇಂದು ಗೋಲಗೇರಿ ದೇವಸ್ಥಾನದ ಉಸ್ತುವಾರಿ ವಹಿಸಿಕೊಂಡಿರುವ ದೇವರಮನಿಯವರು ಗೋಲ್ಲಾಳನ ದೇವಸ್ಥಾನವನ್ನು ಕಟ್ಟಿದ್ದರ ಕುರಿತು ಸಾಕಷ್ಟು ವರ್ಣಿಸಲಾಗಿದೆ. ಈ ಕುರಿತು ಇನ್ನಷ್ಟು ಆಸಕ್ತಿವಹಿಸಿ, ದೇವರಮನೆಯಲ್ಲಿರುವ ಗದ್ದುಗೆಯ ಮೇಲೆ ಪೂಜೆಗೊಳ್ಳುವ ಹಸ್ತಪ್ರತಿಯ ಪೋಟೋ ಕಾಫಿ (ಪ್ರತಿ) ತೆಗೆದುಕೊಂಡು ವಿಶ್ಲೇಷಿಸಲಾಗಿ ಒಂಬತ್ತೆ ಸ್ಥಲಗಳಿರುವುದು ಸ್ಪಷ್ಟವಾಯಿತು. ಇಲ್ಲಿ ಯಾರದ್ದು ತಪ್ಪು ಯಾರದ್ದು ಸರಿ ಎಂದು ಚರ್ಚಿಸುವದಕ್ಕಿಂತ ಚರಿತ್ರೆಯನ್ನು ಮುಂದಿನ ಪೀಳಿಗೆಗೆ ನೀಡುವಾಗ ಸಾಂಸ್ಕೃತಿಕ ಜವಾಬ್ದಾರಿ ಪ್ರತಿಯೊಬ್ಬರಿಗೂ ಇರಲೆಂದು ಆಶಿಸುವೆ.

ಶ್ರೀ ಗೊಲ್ಲಾಳೇಶ್ವರ ಪುರಾಣ ಹಾಗೂ ಗೊಲ್ಲಾಳಯ್ಯ ಪುರಾಣ ಪ್ರಕಟಿತ ಎರಡೂ ಆವೃತ್ತಿಗಳಲ್ಲಿ ಚರಿತ್ರೆಗೆ (ಗೊಲ್ಲಾಳನ) ಪ್ರಾಧಾನ್ಯ ನೀಡಲಾಗಿದೆ. ಮನುಕುಲ ಉತ್ತಮವಾಗಿರಲಿ ಎಂದು ಆಶಿಸಲಾಗಿದೆ.

ಲಿಂಗಧಾರಣ, ಲಿಂಗದೀಕ್ಷೆಯನ್ನು ಮನುಕುಲದಲ್ಲಿ ಬದುಕಲು ಯೋಗ್ಯರಲ್ಲದವರಿಗೆ ಕೊಡಬಾರದು. ಯೋಗ್ಯರಾದವರಿಗೆ ಲಿಂಗದೀಕ್ಷೆಯನ್ನು ನೀಡಬೇಕೆಂದು ಒಳ್ಳೆಯವರ ಪಟ್ಟಿಯನ್ನೇ ಮಾಡಿದ್ದಾನೆ. ಇಂಥವರಿಗೆ ಇಷ್ಟಲಿಂಗ ದೀಕ್ಷಾ ಬೋಧೆಯಾಗಬೇಕೆಂದು ವಿವರಿಸಲಾಗಿದೆ.

ಹರೀಶ್ವರ ಕವಿಯ ಕುರಿತು ಹೆಚ್ಚಿನ ಮಾಹಿತಿ ಇರುವುದಿಲ್ಲ. ಆದರೆ ಗೊಲ್ಲಾಳ ಲಿಂಗೇಶ್ವರ ಪುರಾಣವು ಇತ್ತೀಚಿನದು ಎನ್ನಬಹುದು. ಹರಿಹರನು ಬಸವಾದಿ ಶರಣ ಚಳುವಳಿ ಹಾಗೂ ಶರಣರ ಸಾಮಾಜಿಕ ಜೀವನ ಕುರಿತು ವರ್ಣಿಸಿದ್ದುಂಟು. ಹಾಗೆಯೇ ಹರೀಶ್ವರ ಕವಿಯೂ ಹರಿಹರನನ್ನು ಅನುಸರಿಸಿದ್ದಾನೆನ್ನಬಹುದು.

ಕೆಳಜಾತಿ -ಮೇಲ್ಜಾತಿ ಎನ್ನುವ ಬೇಧವಿತ್ತು. ಇಲ್ಲಿ ಕೆಳಜಾತಿ ಎಂದರೆ ನೀತಿಗೆಟ್ಟವರು, ಮೇಲ್ಜಾತಿಯೆಂದರೆ ಒಳ್ಳೆಯವರು, ಗೊಲ್ಲಾಳನು ಕುರುಬನಾದರೂ ಲಿಂಗ ಪೂಜಿಸಿ ಸ್ವಯಂಲಿಂಗವಾದವನು. ಗಂಡು ಹೆಣ್ಣು ಎಂದು ಲಿಂಗಬೇಧವನ್ನೂ ಮಾಡಬಾರದು. ಈ ಕುರಿತು ಶರಣ ಶರಣೆಯರನ್ನು ಸ್ಮರಿಸಲಾಗಿದೆ. ನಿಷ್ಠೆ, ದೈವಭಕ್ತಿ, ನಂಬಿಕೆ, ಇವುಗಳಲ್ಲಿ ದೈವೀಕೃಪೆ ಹೇಗಾಗುತ್ತದೆಂದು ವಿವರಿಸಿದೆ. ಪ್ರಸ್ತುತ ಪುರಾಣವು ಸಾಮಾಜಿಕ ಬದಲಾವಣೆಗಳನ್ನು ಅರಿಯುವಲ್ಲಿ, ದಾಖಲಿಸುವಲ್ಲಿ, ಪೂರಕ ಪಠ್ಯವಾಗಿದೆಯೆನ್ನಬೇಕು. ಶರಣರ ರಾಜಕೀಯ, ಸಾಮಾಜಿಕ, ಆರ್ಥಿಕ ಚಿಂತನೆಗಳ ವಿಸ್ತೃತ ಅಧ್ಯಯನಕ್ಕೆ ಈ ಪುರಾಣವು ಮಾಹಿತಿ ನೀಡಲು ಸಹಕಾರಿಯಾಗಿದೆ.

## ನಾಟಕ - "ಶ್ರೀ ಗೊಲ್ಲಾಳೇಶ್ವರ ಲೀಲಾಮೃತ ಕಥಾ"

ಗೊಲ್ಲಾಳೇಶ್ವರ ಕುರಿತ ನಾಟಕ ಕೃತಿಯು ವಿ. ಸಿದ್ಧರಾಮಣ್ಣ ಶರಣರು ಸಂಚಾಲಕರು ಅನುಭವ ಮಂಟಪ ಕಲ್ಯಾಣ ಬಸವಕಲ್ಯಾಣ, ಇವರಿಂದ ರಚಿತವಾದ ನಾಟಕ. ಇನ್ನೊಂದು ವಿಜಾಪುರ ಜಿಲ್ಲೆಯ ಸಿಂದಗಿ, ತಾಲೂಕಿನ, ಬಂದಾಳ ಗ್ರಾಮದಲ್ಲಿ ದೊರೆತಿದೆ. ಈ ಕೃತಿಯೂ ಹಸ್ತಪ್ರತಿಯಾಗಿದೆ. ಇದನ್ನು ನೀಡಿದವರು ಬಂದಾಳ ಗ್ರಾಮದವರೇ ಆದ ಶ್ರೀ ಸಿದ್ಧಲಿಂಗಪ್ಪ ಸಿದಗೊಂಡಪ್ಪ ದೇವರಮನಿ, ವಯಸ್ಸು : ೭೫ ವೃತ್ತಿಯಿಂದ ಕೃಷಿಕರಾಗಿದ್ದಾರೆ.

ಪ್ರಕಟಿತ ಹಾಗೂ ಹಸ್ತಪ್ರತಿಯ ರೂಪದಲ್ಲಿ ದೊರೆತಿರುವ ಈ ನಾಟಕದ ಕಥಾವಸ್ತುವಿಗೂ ಹಾಗೂ ಗೊಲ್ಲಾಳೇಶ್ವರ ಕುರಿತು ರಚಿತವಾದ ಪುರಾಣದ ಕಥಾವಸ್ತುವಿಗೂ, ಸಾಮ್ಯತೆ ಕಂಡುಬರುತ್ತದೆ. ಅಂದರೆ 'ಗೊಲ್ಲಾಳೇಶ್ವರ ಲೀಲಾಮೃತ ಕಥಾ' ನಾಟಕದ ಮೇಲೆ ಪುರಾಣದ ಪ್ರಭಾವ ಆಗಿರುವಂತೆ ಕಂಡುಬರುತ್ತದೆ. ಆದರೆ ಪಾತ್ರ ಸೃಷ್ಟಿಯಲ್ಲಿ ಭಿನ್ನತೆ ಇರುತ್ತದೆ.

ಈ ನಾಟಕ ಕಥಾವಸ್ತುವಿಷಯವನ್ನು ವಿಶ್ಲೇಷಣೆ ಮಾಡುವ ಪೂರ್ವದಲ್ಲಿ, ರಂಗಾಭಿನಯ ಕಲೆಯ ಹಿನ್ನೆಲೆಯನ್ನು, ಉಗಮ, ವಿಕಾಸವನ್ನು ಕುರಿತು ವಿವರಿಸುವುದು ಬಹುಮುಖ್ಯವೆನಿಸುತ್ತದೆ. "ಪ್ರತಿಯೊಂದು ಕಲೆಯ ಹಿನ್ನೆಲೆಯಲ್ಲಿ ನಾವು ಶೋಧಿಸಲು ಪ್ರಯತ್ನಿಸುತ್ತಿರುವ ವಿಚಾರಗಳು ನಮ್ಮದೇ ಆದ ದೇಶೀ ಚಿಂತನೆಯ

ಕಡೆಗೆ ನಮ್ಮನ್ನು ಕರೆದೊಯ್ಯಬಲ್ಲವು ಎಂಬ ವಿಶ್ವಾಸ ನಮಗಿದೆ. ಇಲ್ಲಿನ ಕಲೆಗಳ ಪ್ರದರ್ಶನ ಸಂದರ್ಭದಲ್ಲಿ ಆರಾಧನೆಗಳ ಹಿಂದಿನ ಆಶಯಗಳು ಮೂಲ ಸಂಸ್ಕೃತಿಯೊಂದರ ಕಡೆಗೆ ಬೆರಳು ಮಾಡುತ್ತಾ, ಇತಿಹಾಸದ ಹಲವು ಕಾಲ ಘಟ್ಟಗಳಲ್ಲಿ ನಡೆದಿರಬಹುದಾದ ಸಾಂಸ್ಕೃತಿಕ ಸಂಘರ್ಷಗಳ ಕಡೆಗೆ ನಮ್ಮ ಗಮನ ಸೆಳೆಯುತ್ತವೆ. ಹೀಗಾಗಿ ಇವತ್ತು ನಾವು ಬದುಕುತ್ತಿರುವುದೇ ನಿಜ ಎಂಬ ಭ್ರಮೆಗೆ ನಮ್ಮನ್ನು ದೂಡಿರುವ ವರ್ತಮಾನವನ್ನು ಭೂತಕಾಲದ ಬದುಕಿನ ವಿಶ್ಲೇಷಣೆಯ ಮೂಲಕ ವಿಮರ್ಶೆಗೆ ಒಳಪಡಿಸುವದು ಈ ಅಧ್ಯಯನದ ಮುಖ್ಯ ಗುರಿಯಾಗಿದೆ. ಒಂದು ಕಡೆಯಿಂದ ಇಂಗ್ಲೀಷ್ ವಿದ್ವಾಂಸರ ದಾಳಿ ಹಾಗೂ ಮತ್ತೊಂದು ಕಡೆಯಿಂದ ವೈದಿಕಶಾಹಿಗಳ ವೈಭವೀಕರಣ ಮತ್ತು ಇವುಗಳಿಂದಾಗಿ ಆವರಿಸಿದ ವಿಸ್ಮೃತಿಯಿಂದ ಬಿಡುಗಡೆಗೊಳ್ಳಬೇಕಾದ ತುರ್ತು ಇಂದು ಬಹಳ ಮುಖ್ಯವಾಗಿದೆ. ಹಾಗೆ ಬಿಡುಗಡೆಗೊಳ್ಳುವ ಮೂಲಕವೇ ಕನ್ನಡ ಸಂಸ್ಕೃತಿಯೊಂದರ ಶೋಧನೆ ಆಗಬೇಕಾಗಿದೆ."[೬೬]

ಸಾಂಸ್ಕೃತಿಕ ದೇಶವಾದ ನಮ್ಮ ಭಾರತ ದೇಶದಲ್ಲಿ ಅನೇಕ ಜನಾಂಗಗಳು ವಾಸವಾಗಿವೆ. ಆಯಾ ಜನಾಂಗಕ್ಕೆ ಅವರವರದೇ ಆದ ಭಾಷೆಗಳಿವೆ ಹಾಗೂ ಅವರವರ ದೈವನಂಬುಗೆಗಳು, ಆಚರಣೆ ಸಂಪ್ರದಾಯಗಳಿರುತ್ತವೆ. ಈ ದೇಶದ ಅನೇಕ ಜನಾಂಗಗಳು ತಮ್ಮ ತಮ್ಮ ಬದುಕಿಗೆ ಅನುಗುಣವಾಗಿ ಕಲೆ, ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಂಡಿರುತ್ತಾರೆ. ಆ ಸಾಂಸ್ಕೃತಿಕ ಬದುಕಿನಲ್ಲಿಯೇ ಅವರವರ ಧಾರ್ಮಿಕ ನಂಬುಗೆಗಳಿವೆ. ಇದಕ್ಕೆ ಪೂರಕವೆನ್ನಿಸುವ ಹಾಗೆಯೇ ಅವರ ರಾಜಕೀಯ, ಸಾಮಾಜಿಕ, ಬದುಕು ಮುನ್ನಡೆದುಕೊಂಡು ಸಾಗುತ್ತಿದೆ. "ಧರ್ಮ, ದೇವರ ಆರಾಧನೆ, ಪಂಥ, ಪಂಗಡ ಹಾಗೂ ಸಾಮಾಜಿಕ ಶ್ರೇಣೀಕರಣಗಳ ಸಂಕೀರ್ಣ ಬದುಕು ಹೇಗೆ ಈ ಕಲಾ ಜಗತ್ತಿನ ಮೇಲೆ ಪ್ರಭಾವ ಬೀರಿತು ಮತ್ತು ಆ ಮೂಲಕ ಜನಪದ ಕಲೆಗಳು ಕಂಡುಕೊಂಡ ಸ್ಥಾನಗಳೇನು ಎಂಬ ವಿಚಾರಗಳು ಕರ್ನಾಟಕದ ಮಟ್ಟಿಗಂತೂ ವಿಸ್ಮಯಕಾರಿ. ಮನುಷ್ಯನ ಸಾಂಸ್ಕೃತಿಕ ಚರಿತ್ರೆಗೂ ಜನಪದ ಕಲೆಗಳ ಉಗಮಕ್ಕೂ ಅವಿನಾಭಾವ ಸಂಬಂಧವಿದೆ. ಈ ಮಾತನ್ನು ಗಮನದಲ್ಲಿರಿಸಿಕೊಂಡೇ ನಮ್ಮ ಜನಪದ ಕಲೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ದಕ್ಷಿಣ ಭಾರತದ ಇತರೆ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದ ಜನಪದ ಕಲೆಗಳು ಹೆಚ್ಚು ವೈವಿಧ್ಯಮಯ ಈ ಹಿಂದಿನ ಸಾವಿರಾರು ವರ್ಷಗಳಲ್ಲಿ ಮನುಷ್ಯಕುಲ ವಿಕಸನದ ಹಲವು ಮಜಲುಗಳನ್ನು ಕಂಡಿರುವ ಕರ್ನಾಟಕವು ಐತಿಹಾಸಿಕವಾಗಿ ನಾನಾ ಧರ್ಮಪರಂಪರೆಗಳ ಹುಟ್ಟಿಗೆ ಕಾರಣವಾಗಿದೆ. ಒಟ್ಟಾರೆ ಈ ಸಾಂಸ್ಕೃತಿಕ ಇತಿಹಾಸದ ವಿವಿಧ ಘಟ್ಟಗಳಲ್ಲಿ ನಾನಾ ಕಾರಣಗಳಿಗಾಗಿ ಹುಟ್ಟಿಕೊಂಡ ಕಲೆಗಳು, ಕರ್ನಾಟಕದ ವೈವಿಧ್ಯಮಯ ಭೌಗೋಳಿಕತೆಯ ಹಿನ್ನೆಲೆಯಲ್ಲಿ ಭಿನ್ನರೂಪಗಳನ್ನು ಪಡೆದಿದ್ದು ಆಯಾ ಪ್ರದೇಶದ ಜನಸಮುದಾಯದ ಆಶೋತ್ತರಗಳನ್ನು ಬಿಂಬಿಸುತ್ತವೆ. ಬಯಲುಸೀಮೆ, ಪಶ್ಚಿಮ ಘಟ್ಟಗಳು ಮತ್ತು ಪಶ್ಚಿಮ ಕರಾವಳಿ ಇವು ಒಂದಕ್ಕಿಂತ ಒಂದು ಭಿನ್ನವಾದ ಪ್ರದೇಶ ಸ್ವರೂಪ, ವಿವಿಧ ವರ್ಣಗಳ ಅನುಸರಣೆ, ಕನ್ನಡ ಮತ್ತು ಅದರ

ಉಪಭಾಷೆಗಳು ಹಾಗೂ ಗಡಿಭಾಗಗಳ ಮರಾಠಿ, ತೆಲುಗು, ತಮಿಳು, ಮಲೆಯಾಳಿ ಭಾಷಾಸಂಸ್ಕೃತಿಗಳ ಕೊಳು ಕೊಡೆಗಳು ಮುಂತಾದ ಅನೇಕಾನೇಕ ಅಂಶಗಳು ನಮ್ಮ ಕಲೆಗಳ ಸ್ವರೂಪವನ್ನು ನಿರ್ಧರಿಸುತ್ತವೆ."[೬೭]

ಪ್ರಸ್ತುತ ಈ ನಾಟಕವನ್ನು 'ಉತ್ತರ ಕರ್ನಾಟಕದ ಜನಪದ ನಾಟಕ' ಎಂದು ವಿಶಿಷ್ಟ ಗುಂಪಿಗೆ ಸೇರಿಸಿ ಅಧ್ಯಯನ ಮಾಡುವದು ಸೂಕ್ತವೆನಿಸುತ್ತದೆ. ಉತ್ತರ ಕರ್ನಾಟಕದ ಜಿಲ್ಲೆಗಳಾದ ಬೆಳಗಾಂವ, ಧಾರವಾಡ, ವಿಜಾಪೂರ, ಗದಗ, ಹಾವೇರಿ, ಚಿಕ್ಕೋಡಿ, ಗುಲಬರ್ಗಾ, ರಾಯಚೂರ, ಯಾದಗಿರಿ, ಬಳ್ಳಾರಿ, ಬೀದರ ಇಲ್ಲಿ ವಾಸಿಸುವ ಜನರ ದೈವ ನಂಬಿಗೆಗಳು ಹಾಗೂ ಕಲೆ, ಸಾಂಸ್ಕೃತಿಕ ಬದುಕನ್ನು ಇತರೆ ಜಿಲ್ಲೆಗೆ ಹೋಲಿಸಿದರೆ ಭಿನ್ನತೆ ಕಂಡುಬರುತ್ತದೆ. ಇವುಗಳು ತಮ್ಮ ಪ್ರದೇಶಗಳಲ್ಲಿರುವ ದೈವ, ಮಹಾಪುರುಷರು, ಶರಣರನ್ನು ಕುರಿತು ಅನೇಕ ಕಥೆಗಳನ್ನು ಜನಪದರು ರಚಿಸಿರುವುದನ್ನು ನಾವು ಅವರ ಕಲೆಯಲ್ಲಿ ಕಾಣುತ್ತೇವೆ. ಇದನ್ನು ತಮ್ಮ ಬದುಕಿನ ವಿಕಾಸದ ಜೊತೆಗೇ ಅವರು ಬೆಳೆಸಿಕೊಂಡು ಬಂದಿರುತ್ತಾರೆ. ಇಂದಿನ ಆಕಾಶವಾಣಿ, ದೂರದರ್ಶನ ಇತ್ಯಾದಿ ಸಂಪರ್ಕ ಮಾಧ್ಯಮಗಳು ಇರದೇ ಇರುವಾಗ ಜನಪದರು ಕಲೆಗಳಲ್ಲಿ ಆನಂದಿಸುತ್ತಿದ್ದರು.

'ಭಯವೇ ಭಕ್ತಿಯ ಮೂಲ' ಎನ್ನುವ ಹಾಗೆ ಭಕ್ತಿಯೇ ಕಲೆಯ ಮೂಲವೆನ್ನಬಹುದು. ಮಾನವ ಊರು-ಕೇರಿ ಕಟ್ಟಿಕೊಳ್ಳುವ ಪೂರ್ವದಲ್ಲಿ ಬಹಳ ಭಯದಿಂದ ಬದುಕುತ್ತಿದ್ದ. ಮೊದಲು ಬೆಟ್ಟ-ಗುಡ್ಡ-ಪೊದರು, ಗುಹೆಗಳ ಮಧ್ಯದಲ್ಲಿ ಬದುಕುತ್ತಿದ್ದ ಈತನಿಗೆ ಕ್ರೂರ ಪ್ರಾಣಿಗಳಿಂದ ಭಯವಿತ್ತು ಹಾಗೂ ಸೂರ್ಯೋದಯ, ಸೂರ್ಯಾಸ್ತ, ಮಳೆ-ಗಾಳಿ- ಪ್ರಕೃತಿಯ ಎಲ್ಲ ನಡೆಯೂ ಇವನಲ್ಲಿ ವಿಸ್ಮಯವನ್ನು ಮೂಡಿಸುತ್ತಿದ್ದವು. ಇದರ ಆಗು ಹೋಗುಗಳು ಅವನ ಬುದ್ಧಿಗೆ ನಿಲುಕದೆ ಹೋದಾಗ ಅವನಲ್ಲಿ ಒಂದು ತೆರನಾದ ಭಯವನ್ನುಂಟು ಮಾಡುತ್ತಿದ್ದವು. ಈ ಭಯವೇ ದೈವೀ ಭಾವನೆಯ ಹುಟ್ಟಿಗೂ ಕಾರಣವಾಯಿತೆಂಬುದವುದನ್ನು. ನಾವು ಆಚರಿಸುವ ಆಚರಣೆಗಳಲ್ಲಿ ನಂಬಿಕೆಗಳಲ್ಲಿ ದಿನವೂ ಕಾಣುತ್ತೇವೆ. ಸೂರ್ಯಾಸ್ತ ಆದ ನಂತರ ಸಾಯಂಕಾಲ ದೀಪ ಹಚ್ಚಿದ ಕೂಡಲೇ ದೀಪಕ್ಕೆ ನಮಸ್ಕರಿಸುವದು ದೀಪ ಅವನಿಗೆ ದೈವ ಸಂಕೇತವಾಗಿ ಕಾಣುತ್ತದೆ. ಮಾನವನ ಬದುಕು ವಿಕಸನ ಹೊಂದಿದ ಹಾಗೆ ಅಂದರೆ, ಆದಿ ಮಾನವನಿಂದ -ಮಾನವನವರೆಗೆ, ಅನಾಗರಿಕನಿಂದ -ನಾಗರಿಕವಾಗುವವರೆಗೆ ಅನೇಕ ಬದಲಾವಣೆಗಳನ್ನು ಮಾನವನಲ್ಲಿ ಕಾಣುತ್ತೇವೆ. "ಆರಾಧನೆ ಮತ್ತು ಆಚರಣೆಗಳ ಕ್ರಿಯೆಗಳೇ ಕಲೆಗಳಾಗಿ ವಿಕಸನ ಹೊಂದಿ ಪೂರ್ಣಸ್ವರೂಪದ ಕಲೆಗಳಾದದ್ದು ಒಂದು ಬಗೆಯಾದರೆ; ಧರ್ಮ ಪಂಥದ ಉದ್ದೇಶ ಮೀರಿ ಸಾರ್ವಜನಿಕ ಕಲೆಗಳಾದದ್ದು ಇನ್ನೊಂದು ಬಗೆ. ಕಲೆಯೇ ವೃತ್ತಿಯಾಗಿ ನಂತರ ಅದೊಂದು ಪರಂಪರೆಯಾಗಿ ಬೆಳೆದದ್ದು ಒಂದು ಬಗೆಯಾದರೆ ; ಇರುವ ವ್ಯವಸ್ಥೆಗೆ ಪ್ರತಿಭಟನೆಯಾಗಿ ಹೊಸ ಕಲೆಗಳೇ ಹುಟ್ಟಿಕೊಂಡದ್ದು ಮತ್ತೊಂದು ಬಗೆ. ಹೀಗೆ ಹಲವು ಕುತೂಹಲಗಳನ್ನು ಕೆರಳಿಸುವ ಕರ್ನಾಟಕ ಕಲೆಗಳು ನಮ್ಮ ಸಂಸ್ಕೃತಿಯ ಅಧ್ಯಯನಕ್ಕೆ ಪ್ರಧಾನ ಆಕರಗಳಾಗುತ್ತವೆ. ಇಂಥ ಕಲೆಗಳ ಶೋಧನೆಯಿಂದ ಬಹುತೇಕ ದುಡಿಯುವ ವರ್ಗದ ಜನರ ಮೌಖಿಕ ಇತಿಹಾಸವನ್ನು ನಿಜಸ್ವರೂಪದಲ್ಲಿ ಅರ್ಥೈಸಿಕೊಳ್ಳಲು ಸಾಧ್ಯ. ಅಲ್ಲದೇ ಈ ಮೂಲಕ ಇತಿಹಾಸವನ್ನು ಕೂಡ ಸತ್ಯದ ಒರೆಗಲ್ಲಿಗೆ ಹಚ್ಚಿ ಪುನರ್ ರೂಪಿಸಬಹುದಾಗಿದೆ.[೬೮]

ಜಾನಪದ ಅಧ್ಯಯನ ವಿಷಯದಲ್ಲಿ ಕರ್ನಾಟಕ ಜಾನಪದ ಕಲೆಗಳನ್ನು ವಿದ್ವಾಂಸರು ವಿಂಗಡಿಸಿ ಅಧ್ಯಯನ ಮಾಡಿದ್ದಾರೆ. ಅಧ್ಯಯನ ಸಂದರ್ಭದಲ್ಲಿ ವಿಭಾಗ ಕ್ರಮಗಳನ್ನು ಅನುಸರಿಸಿದ್ದಾರೆ. ಆದರೆ ಈ ಸಂದರ್ಭದಲ್ಲಿ ನಾವು ಕಲೆಗಳನ್ನು ಪ್ರಮುಖವಾಗಿ ಎರಡು ರೀತಿಯಲ್ಲಿ ೧. ಧಾರ್ಮಿಕ ೨. ಲೌಕಿಕ ಎಂದು ವಿಂಗಡನೆ ಮಾಡಬಹುದು. ಧಾರ್ಮಿಕ ಕಲೆಗಳು ಪೌರಾಣಿಕ ವಿಷಯಗಳನ್ನೊಳಗೊಂಡ ಕಥಾವಸ್ತುವನ್ನೇ ಮುಖ್ಯವಾಗಿರಿಸಿಕೊಂಡಿರುತ್ತವೆ. ಲೌಕಿಕ ಕಲೆಗಳು ಸಾಮಾಜಿಕ ಬದುಕಿನ ವಸ್ತು ವಿಷಯಗಳನ್ನೇ ಮುಖ್ಯವಾಗಿರಿಸಿಕೊಂಡಿರುತ್ತದೆ. ಆಯಾ ಪ್ರದೇಶದಲ್ಲಿ, ಆಯಾ ಜನಾಂಗದಲ್ಲಿ, ಆಯಾ ಭಕ್ತಸಮೂಹದ ಮಧ್ಯದಲ್ಲಿ ಅವರ ದೈವೀ ಭಾವನೆಗೆ ಪೂರಕವಾಗಿ ಹುಟ್ಟಿಕೊಳ್ಳುವ ಪ್ರಚುರಗೊಳ್ಳುವ ಕಲೆಯನ್ನು ಆರಾಧನಾ ಕಲೆಯೆಂದು ಬೇರೆಯದೇ ಆದ ವಿಂಗಡನಾ ಕ್ರಮದಲ್ಲಿ ಗುರುತಿಸಿ ಅಧ್ಯಯನ ಮಾಡಬಹುದು. "ಒಂದು ಕಾಲಕ್ಕೆ ಆಯಾ ದೈವಗಳ ಆರಾಧನೆಯ ಕ್ರಮಗಳಾಗಿ, ಕ್ರಿಯೆಗಳಾಗಿ, ರೂಪುಗೊಂಡು ಕಾಲಾನಂತರದಲ್ಲಿ ಕಲೆಗಳ ಸ್ವರೂಪವನ್ನು ಪಡೆದ ಅಂಶ ಇಲ್ಲಿ ಮುಖ್ಯ. ಏಕೆಂದರೆ ಈ ಆರಾಧನಾ ಕಲೆಗಳು ಅವುಗಳಷ್ಟಕ್ಕೇ ಅವು ಸ್ವತಂತ್ರವಲ್ಲ. ಏಕೆಂದರೆ ಅಲ್ಲೊಂದು ದೈವವಿರುತ್ತದೆ. ಒಂದು ಸಂದರ್ಭವಿರುತ್ತದೆ ಹಾಗೂ ಆ ಸಂದರ್ಭಕ್ಕೊಂದು ಮಹತ್ವದ ಅರ್ಥವಿರುತ್ತದೆ. ಅಂಥ ವಿಶಿಷ್ಟ ಸಂದರ್ಭದಲ್ಲಿ ಆರಾಧನೆ ಮತ್ತು ಆಚರಣೆಗಳು ಕುಣಿತ, ನರ್ತನ, ಹಾಗೂ ಅಂಗಾಂಗ ಅಭಿನಯಗಳ ಮೂಲಕ ಪ್ರಕಟಗೊಳ್ಳುತ್ತವೆ."[೬೯] ಪ್ರದೇಶವಾರು ಹಾಗೂ ಜನಾಂಗವಾರು ವಿವಿಧ ಸಮುದಾಯಗಳ ಮಧ್ಯದಲ್ಲಿ ಹುಟ್ಟಿ ಬೆಳೆದ ಆರಾಧನಾ ಕಲೆಯನ್ನು ಕುರಿತು ಪ್ರತ್ಯೇಕ ಅಧ್ಯಯನವೇ ಆಗಬೇಕಾಗಿದೆ. ಆಯಾ ಪ್ರದೇಶದಲ್ಲಿ ಹುಟ್ಟಿ ಬೆಳೆದ ಜನಾಂಗ ಸಮುದಾಯದ ಕಲೆಗಳ ಅಧ್ಯಯನ ಮಾಡಿದಾಗ ಅದು ನಮ್ಮನ್ನು ಸಾವಿರಾರು ವರ್ಷಗಳ ಆಚೆಗೆ ಕರೆದೊಯ್ಯುತ್ತದೆ. ಈ ಸಂದರ್ಭದಲ್ಲಿ ಒಂದು ನಾಡಿನ ಸಾಂಸ್ಕೃತಿಕ ಬದುಕನ್ನು ಹಾಗೂ ಈ ಮೂಲಕ ಅನಕ್ಷರಸ್ಥರಿಂದ ರಚಿತವಾದ, ಲಿಖಿತವಲ್ಲದ ಒಂದು ಮಹತ್ವದ ಇತಿಹಾಸವನ್ನು ಮೌಖಿಕ ಪರಂಪರೆಯ ಕಲೆಗಳು ತೆರೆದಿಡುತ್ತವೆ. ಆಗ್ಗೆ ನಮ್ಮ ನಾಡಿನ ಜನಾಂಗದ ಪರ್ಯಾಯ ಸಂಸ್ಕೃತಿ ಎಂದು ಕರೆಯಬಹುದಾದ ಗ್ರಾಮದೇವತೆಗಳು, ಇವರನ್ನು ಕುರಿತು ಆರಾಧಿಸುವ ವಿದಿವಿಧಾನಗಳು ಬಹುಶಃ ಅರಾಧನಾ ಸಂದರ್ಭಗಳಿಂದಲೇ ಜನ್ಮ ಪಡೆದಿರಬಹುದು ಎನ್ನುವ ಅಂಶ ನಮ್ಮ ಗಮನಕ್ಕೆ ಬರುವದು. ಜನಪದರು ದೈವವನ್ನು ಆರಾಧಿಸುವ ರೀತಿ, ಆಚರಿಸುವ ಹಬ್ಬ, ಜಾತ್ರೆ, ಇವುಗಳ ಪ್ರೇರಣೆ ಈ ಆರಾಧನಾ ಕಲೆಯ ಹುಟ್ಟಿಗೆ ಕಾರಣವಾಗಿದೆ. ಆರಾಧನೆ (ಪೂಜೆ) ಎನ್ನುವುದು ಕೇವಲ ಉಪಾಸನೆ ಅಲ್ಲ. ಭಜನೆ ಮಾಡುವದು, ಮೈಗೆ ಬಣ್ಣ ಬಳಿದುಕೊಂಡು ಕುಣಿಯುವದು, ಹಬ್ಬದ ದಿನದಂದು ಹೊಸ ಹೊಸ ಬಟ್ಟೆಗಳನ್ನು ಧರಿಸಿಕೊಂಡು ಉಲ್ಲಸಿತ ಮನಸ್ಸಿನಿಂದ ಹಬ್ಬ ಆಚರಿಸುವದು, ದೈವಕ್ಕೆ ಬೇಡುವ ಅಥವಾ ಅಡ್ಡಬೀಳುವ ಒತ್ತಾಯಿಸುವ ಸಂಪ್ರದಾಯವಿದೆ. ಈ ಸಂಪ್ರದಾಯ ಒಮ್ಮೊಮ್ಮೆ ಆಂಗಿಕ ಅಭಿನಯಗಳ ಮೂಲಕವೂ ಅಭಿವ್ಯಕ್ತಗೊಳ್ಳುತ್ತಿರುತ್ತದೆ. ಇವುಗಳಿಗೆ ಪೌರಾಣಿಕ ಮತ್ತು ಇತಿಹಾಸದ ವಸ್ತು ವಿಷಯಗಳು ದೊರೆತಾಗ ಅದನ್ನು ಒಂದು ಶಿಸ್ತಿಗೆ ಒಳಪಡಿಸಿ ನಾಟ್ಯ -ನಟನೆಯನ್ನು ಸೇರಿಸಿ ಕಲೆಗಳು ಹುಟ್ಟಿಕೊಂಡಿವೆ.

ಆಯಾ ಪ್ರದೇಶದಲ್ಲಿ, ಆಯಾ ಜನಾಂಗದಲ್ಲಿ, ಆಯಾ ಭಕ್ತಸಮೂಹ ಮಧ್ಯದಲ್ಲಿ ದೈವೀ ಭಾವನೆಗಳಿಗೆ ಪೂರಕವಾಗಿ ಹುಟ್ಟಿಕೊಳ್ಳುವ ಕಲೆಯನ್ನು ಆರಾಧನಾ ಕಲೆಯೆಂದು ಗುರುತಿಸಿಕೊಳ್ಳುತ್ತಾ "ಶ್ರೀ ಗೊಲ್ಲಾಳೇಶ್ವರ ಲೀಲಾಮೃತ" ನಾಟಕವನ್ನು ಅಧ್ಯಯನ ಮಾಡಲಾಗಿದೆ.

## 'ಶ್ರೀ ಗೊಲ್ಲಾಳೇಶ್ವರ ಲೀಲಾಮೃತ' ನಾಟಕದ ಕಥನ :

ನಾಟಕವು ಬೃಹತ್ ಆದ ಮೂರು ಅಂಕಗಳಲ್ಲಿ ರಚಿಸಲಾಗಿದೆ. ನಾಟಕದ ಕೇಂದ್ರಬಿಂದು ಗೊಲ್ಲಾಳನಾಗಿದ್ದಾನೆ. ಗೊಲ್ಲಾಳನ ಹುಟ್ಟಿನಿಂದ ಕೈಲಾಸ ಯಾತ್ರೆಯವರೆಗೂ ಇವನ ಸುತ್ತ ಕಥೆ ಹೆಣೆಯಲ್ಪಟ್ಟಿದೆ. ಕೆಳಕಾಣಿಸಿದ ಕ್ರಮದಲ್ಲಿ ಕಥಾವಸ್ತುವನ್ನು ವಿವರಿಸಲಾಗಿದೆ.

೧. ಕೈಲಾಸ ಸಭೆ

೨. ಭೂಲೋಕಕ್ಕೆ ನಂದಿಯ ಪಯಣ

೩. ಗೊಲ್ಲಾಳನ ಜನನ ಮತ್ತು ಬಾಲ್ಯ

೪. ಕುರಿಗಾಹಿ ಗೊಲ್ಲಾಳ

೫. ಗೊಲ್ಲಾಳನಿಗೆ ಲಿಂಗದೀಕ್ಷೆ

೬. ಗೊಲ್ಲಾಳನು ಲಿಂಗಪೂಜಿಸಿದ್ದು

೭. ಗೊಲ್ಲಾಳನ ಲಿಂಗನಿಷ್ಠೆ

೮. ಗೊಲ್ಲಾಳನಿಗೆ ಶಿವದರ್ಶನ




ಹಾಡು -

ಲಿಂಗ ಮಧ್ಯ ಜಗತ್ತಂ
ಭೂಕೈಲಾಸ ಭಾರತಂ
ಲಿಂಗ ಮರ್ಮವರಿತಂ
ಮೋಕ್ಷ ಪದ ಸ್ಥಿರ ಸತ್ಯ

ಭೂಲೋಕದಲ್ಲಿ ನಾರದನು ಧವಳರ ಊರಿಗೆ ಬಂದು, ಗೊಲ್ಲಾಳನ ತಾಯಿಯಾದ ದುಗ್ಗಳಾದೇವಿಯನ್ನು ಸಂದರ್ಶಿಸುತ್ತಾನೆ. ಅವಳ ಸಂಕಟ ಮನೋವೇದನೆಯನ್ನು ಅರಿತುಕೊಂಡು ಕೈಲಾಸದಲ್ಲಿ ನಡೆಯುವ ಸಭೆಗೆ ಹಾಜರಾಗುತ್ತಾನೆ. ನಾರದ ಸರ್ವಲೋಕ ಸಂಚಾರಿ. ಲೋಕದ ವಾರ್ತೆಯನ್ನು ದೇವ ಗಣಂಗಳಿಗೆ ತಂದು ತಲುಪಿಸುವುದು ಈತನ ಕೆಲಸ ಇದರಲ್ಲಿ ಲೋಕೋದ್ಧಾರವೇ ಈತನ ಆಶಯವಾಗಿರುತ್ತದೆ.

ನಾರದರು ಇವರ ಸಭೆಗೆ ವಂದಿಸಿದಾಗ, ಪ್ರತಿಯಾಗಿ ಮಹೇಶ್ವರ ಸಭೆಯು ಪ್ರತಿವಂದಿಸುತ್ತದೆ. ಆಗ ನಾರದರು ಶಿವನನ್ನು ಅನೇಕ ನಾಮಾವಳಿಯಿಂದ ಹೊಗಳುತ್ತಾನೆ. ಶಿವನು ಲೋಕದ ವಾರ್ತೆಯನ್ನು ಅರಿತೂ ಅರಿಯದವನಂತೆ ನಾರದರಿಂದ ತಿಳಿಯಬಯಸುತ್ತಾನೆ. ಆದರೂ ನಾರದರು ಲೋಕದಲ್ಲಿ ನಡೆಯುತ್ತಿರುವ ಅಧರ್ಮದ ಹೋಮ, ಮಾನವನ ದುರಾಶೆ, ದುಶ್ಚಟ, ದುರ್ಬುದ್ಧಿ, ಒಳ್ಳೆಯವರ ಸಂಕಟಗಳು, ಒಟ್ಟಿನಲ್ಲಿ ಅಧರ್ಮದ ಅಂಧಕಾರದಲ್ಲಿ ಜನರು ನಡೆಯುತ್ತಿದ್ದಾರೆ ಎಂದು ವಿವರಿಸುತ್ತಾನೆ. ಈ ವಾರ್ತೆಯನ್ನು ಕೇಳಿದ ಶಿವನು ಲೋಕೋದ್ಧಾರಕ್ಕಾಗಿ ಅಂತಃಕರಣ ದೃಷ್ಟಿಯಿಂದ ಯೋಚಿಸುತ್ತಾನೆ. ಶಿವಧ್ಯಾನದಲ್ಲಿ ತಲ್ಲೀನನಾದ ನಂದೀಶನನ್ನು ಆಹ್ವಾನಿಸುತ್ತಾರೆ ಹಾಗೂ ನಂದೀಶನಿಗೆ ಭೂಲೋಕಕ್ಕೆ ಹೋಗಲು ತಿಳಿಸುತ್ತಾನೆ.

'ನಂದೀಶಾ' ಭೂಲೋಕಕ್ಕೆ ಹೋಗಿ ಭವಿಗಳ ಕಣ್ಣು ತೆರೆಯಿಸಿ ಭಕ್ತಿ ನೆಲೆಗೊಳ್ಳುವಂತೆ ಮಾಡು, ಅವರನ್ನು 'ಲಿಂಗಾಂಗ ಸಂಗಿಯನ್ನಾಗಿ ಮಾಡು', ಎಂದಾಗ ನಂದೀಶ ಶಿವನ ಈ ಮಾತುಗಳನ್ನು ಕೇಳಿ ದಿಗ್ಭ್ರಾಂತನಾಗುತ್ತಾನೆ. 'ಶಿವನೆ, ನಿಮ್ಮ ಪಾದ ಸೇವೆ ಬಿಟ್ಟು ಇರಲಾರೆ. ಭೂಲೋಕದ ಸಂಕಟ, ಯಾತನೆ, ಸಂಸಾರಿಗಳ ಸಂಗ, ಅವರ ಮೋಹ ಈ ಅವಗುಣಗಳ ಮಧ್ಯದಲ್ಲಿ ಬದುಕಲಾರೆ' ಎಂದು ದುಃಖಿಸುತ್ತಾನೆ. ಆವಾಗ್ಗೆ ಶಿವನು 'ದುಃಖಿಸಬೇಡ ಭಕ್ತರಿದ್ದಲ್ಲಿ ನಾನಿರುವೆ, ನಾನೂ ನಿನ್ನ ನೆರಳಾಗಿರುವೆ' ಎನ್ನುತ್ತಾನೆ.

'ಭೂಲೋಕದಲ್ಲಿ ಭರತ ಖಂಡವುಂಟು. ಅದರಲ್ಲಿ ಕನ್ನಡ ನಾಡುಂಟು, ಆ ನಾಡಿನ ಮಧ್ಯದಲ್ಲಿ ಧವಳಾರ ಪಟ್ಟಣವಿದೆ. ಅಲ್ಲಿ ಹಾಲುಗುರುಬರ ಮನೆತನವಿದೆ. ಈ ಮನೆಯಲ್ಲಿ ಶಿಭಕ್ತರಿದ್ದಾರೆ. ಅವರು ನನ್ನನ್ನೇ ನೆಚ್ಚಿಕೊಂಡಿದ್ದಾರೆ. ಈ ದಂಪತಿಗಳ ಉದರದಲ್ಲಿ ಜನಿಸಿ ಲೋಕದಲ್ಲಿ ಭಕ್ತಿಯ ಬೀಜ ಬಿತ್ತಿ ಲಿಂಗಾಂಗ ಸಮರಸವಾಗಿ ನನ್ನ ಪಾದ ಕಾಣು' ಎಂದು ಆಶೀರ್ವದಿಸುತ್ತಾನೆ.

೨. ಭೂಲೋಕಕ್ಕೆ ನಂದಿಯ ಪಯಣ. ನಂದೀಶನು ಭೂಲೋಕಕ್ಕೆ ಬರುವ ಸಂದರ್ಭವನ್ನು ಬಹುವಾಗಿ ವರ್ಣಿಸಲಾಗಿದೆ. ಹಿರಿದಾದ ಬೆಟ್ಟಗಳು, ಆಳವಾದ ಕಣಿವೆಗಳು, ವಿಶಾಲವಾಗಿ ಹರಿಯುವ ನದಿಗಳು, ಈ ಮನೋಹರ ದೃಶ್ಯಗಳು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆಂದು ವರ್ಣಿಸಲಾಗಿದೆ. ಕನ್ನಡ ನಾಡಿನ ನಿಸರ್ಗ ರಮ್ಯತೆಯನ್ನು ಕಣ್ತುಂಬುವಂತೆ ವರ್ಣಿಸಲಾಗಿದೆ. ಕನ್ನಡ ನಾಡಿನಲ್ಲಿ ಜುಳು ಜುಳು ಎಂದು ಹರಿಯುತ್ತಿರುವ ನದಿಗಳು, ಬೆಳೆದು ನಿಂತ ಜದಿರು, ಹಲಸು, ಮಾವು, ಅನಂತ ಹಣ್ಣಿನ ವೃಕ್ಷಗಳನ್ನು ಬಣ್ಣಿಸಲಾಗಿದೆ. ಹಾಗೂ ಚಿಗರೆಗಳ ಜಿಗಿದಾಟ, ನವಿಲುಗಳ ನೃತ್ಯ, ಅಲ್ಲಲ್ಲಿ ಜಾಜಿಮಲ್ಲಿಗೆ, ಗುಲಾಬಿ ಹೂಗಳು ನೀಡುವ ಸುವಾಸನೆ ಸವಿಯುತ್ತಾ ಈ ಸೃಷ್ಟಿಯ ಸೊಬಗನ್ನು ನೋಡಿ ಆನಂದಿಸುತ್ತ ಧವಳಾರ ಪಟ್ಟಣಕ್ಕೆ ನಂದೀಶನು ಬರುತ್ತಾನೆ.

## ೩. ಗೊಲ್ಲಾಳನ ಜನನ ಮತ್ತು ಬಾಲ್ಯ :

ದುಗುಳಾದೇವಿಗೆ ಮಕ್ಕಳ ಭಾಗ್ಯ ಇರುವುದಿಲ್ಲ. ಆದರೆ ಶಿವನಿಷ್ಠೆಯಿಂದ ಭಕ್ತಿಯಿಂದ ದೂರಾಗಿರಲಿಲ್ಲ. ಬಲ್ಲುಗ ಮತ್ತು ದುಗುಳಾದೇವಿ ಹಾಲುಗುರುಬ ಜನಾಂಗದವರು. ನಂದೀಶನು ಈ ಮನೆಯನ್ನು ಗುರುತಿಸಿ ಲೀನವಾಗಿ ದುಗ್ಗಳೆಯ ಗರ್ಭವನ್ನು ಸೇರುತ್ತಾನೆ.

ದಿನಗಳೆದಂತೆ ದುಗುಳಾದೇವಿಯ ಗರ್ಭವು ಬೆಳೆಯಹತ್ತಿತು. ದಿನವಿಡೀ ಶಿವನ ಧ್ಯಾನದಲ್ಲಿಯೇ ಕಾಲಕಳೆಯುತ್ತಿದ್ದಳು. ಹೆಜ್ಜೆ ಹೆಜ್ಜೆಗೂ ಶಿವನನ್ನು ಸ್ಮರಿಸಿ ದೇವಾ ನಮಗೆ ಸಾಕಷ್ಟು ಸಂಪತ್ತು ಕೊಟ್ಟಿದ್ದರೂ ಮಕ್ಕಳ ಸಂಪತ್ತನ್ನು ದಯಪಾಲಿಸಿರಲಿಲ್ಲ. ಇಂದು ಆ ಚಿಂತೆಯನ್ನು ದೂರುಮಾಡಿದಿ ಎಂದು ಸಂತಸಪಡುವಳು. ಶಿವನನ್ನು ಅನಂತ ನಾಮಗಳಿಂದ ಹೊಗಳುವಳು.

ದುಗುಳಾದೇವಿಗೆ ನವಮಾಸ ತುಂಬಿದವು. ಶ್ರಾವಣಮಾಸ ಶುಕ್ಲಪಕ್ಷ ಸೋಮವಾರ ಶುಭ ನಕ್ಷತ್ರ ಶುಭ ತಿಥಿಯಲ್ಲಿ ಸೂರ್ಯೋದಯದ ಮುಂಚಿತ ಪೂರ್ಣಚಂದ್ರ ಹೊಳೆಯುವಂತಹ ಗಂಡುಮಗುವಿಗೆ ದುಗುಳಾದೇವಿ ಜನ್ಮ ನೀಡುತ್ತಾಳೆ. ಈ ವಾರ್ತೆಯನ್ನು ಕೇಳಿದ ಬಲ್ಲುಗನಿಗೆ ಅತೀವ ಆನಂದವಾಗುತ್ತದೆ. ಈ ಸಂತೋಷಕ್ಕೆ ಬಲ್ಲುಗನು ತನ್ನಲ್ಲಿರುವ ಅಲ್ಪ ಸಂಪತ್ತನ್ನು ದಾನ ಮಾಡಿದನು. ಹದಿಮೂರನೇ ದಿನಕ್ಕೆ ತೊಟ್ಟಿಲಲ್ಲಿ ಹಾಕುವ ಕಾರ್ಯವನ್ನು ಇಟ್ಟುಕೊಳ್ಳುತ್ತಾರೆ. ಈ ಸಮಯಕ್ಕೆ ನಾರದ ಆಗಮನವಾಗಿ, ದುಗುಳಾದೇವಿಗೆ ಹಿಂದಿನದನ್ನು ಸ್ಮರಿಸುವಂತೆ ಮಾಡುತ್ತಾರೆ. ಆಗ ಬಲ್ಲುಗ ನಾರದರ ಸಮೀಪಕ್ಕೆ ಬಂದು ಮಗುವಿಗೆ ಏನೆಂದು ನಾಮಕರಣ ಮಾಡಬೇಕೆಂದು ಕೇಳುತ್ತಾನೆ. ಮಗುವಿಗೆ ಗೊಲ್ಲಾಳನೆಂದು ನಾಮಕರಣ ಮಾಡಲು ನಾರದಮಹರ್ಷಿ ಸೂಚಿಸುತ್ತಾರೆ. ಆಗ ಮುತ್ತೈದೆಯರು ಮಗುವಿಗೆ ಗೊಲ್ಲಾಳನೆಂದು ನಾಮಕರಣ ಮಾಡುತ್ತಾರೆ.

ಶಿವನ ಸ್ವರೂಪಿಯಾದ ಮಗು ದಿನಗಳೆದಂತೆ ಲೀಲೆಗಳನ್ನು ಮಾಡುತ್ತಾ ಬೆಳೆಯುತ್ತಾನೆ. ದಿನಗಳು, ತಿಂಗಳಾಗಿ, ತಿಂಗಳು ವರ್ಷವಾಗಿ, ವರ್ಷಗಳು ದಶವರ್ಷವಾಗಿ ಗೊಲ್ಲಾಳನು ಪ್ರಾಯಕ್ಕೆ ಬರುತ್ತಾನೆ. ಜ್ಞಾನ ಬಲಿಯುತ್ತದೆ. ಗೊಲ್ಲಾಳನ ತಂದೆಯಾದ ಬಲ್ಲುಗ ಕಷ್ಟಪಡುವದನ್ನು ಗಮನಿಸಿ, 'ನೀವು ಇನ್ನು ಮೇಲೆ ದುಡಿಯುವುದನ್ನು ಬಿಟ್ಟು ಹಾಯಾಗಿರಿ' ಎಂದು ವಿನಂತಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಗೊಲ್ಲಾಳನು ಕಾಯಕ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ. ಹಾಗೆಯೇ ಮಗನಾದವನು ತಂದೆ ತಾಯಿಗಳ ಸಂರಕ್ಷಣೆ ಮಾಡುವದು ಅವನ ಆದ್ಯ ಕರ್ತವ್ಯವಾಗಿದೆ ಎಂದು ವಾದಿಸುತ್ತಾನೆ. ಆಗ್ಗೆ ತಂದೆ - ತಾಯಿಗೆ ಮಗನನ್ನು ಕೆಲಸಕ್ಕೆ ಕಳಿಸಿಕೊಡುವ ಮನಸ್ಸಿಲ್ಲದಿದ್ದರೂ ಒಪ್ಪಿ ಆಳುಗಳ ಜೊತೆ ಕುರಿಕಾಯುವ ಜವಾಬ್ದಾರಿಯನ್ನು ನೀಡುತ್ತಾರೆ. ಎಲ್ಲವೂ ಶಿವನಿಚ್ಛೆ ಎಂದುಕೊಂಡು ಸುಮ್ಮನಾಗುತ್ತಾರೆ. ಗೊಲ್ಲಾಳನು ಕುರಿಕಾಯುವ ಕೆಲಸದಲ್ಲಿ ನಿರತನಾಗುತ್ತಾನೆ.

## ೪. ಕುರಿಗಾಹಿ ಗೊಲ್ಲಾಳ :

ಕೈಯಲ್ಲಿ ಕೋಲ- ಕೊಡಲಿಯನ್ನು ಹಿಡಿದುಕೊಂಡು ಮೈಮೇಲೆ ಕಂಬಳಿಯನ್ನು ಹೊದ್ದುಕೊಂಡು ಗೊಲ್ಲಾಳನು ಕುರಿಗಳನ್ನು ಮುಂದೆ ಮಾಡಿಕೊಂಡು ಹೊರಡುತ್ತಾನೆ. ಅಡವಿಯಲ್ಲಿ ಕುರಿ ಕಾಯುವಾಗ ನಿಸರ್ಗದ ಸೌಂದರ್ಯವನ್ನು ಕಂಡು ಆನಂದಿಸುತ್ತಾನೆ. ಕುರಿಯ ಹಟ್ಟಿಯೂ ಡಂಭಳ ಗ್ರಾಮದ ಪಕ್ಕದಲ್ಲಿ ಹರಿಯುತ್ತಿರುವ ಹಳ್ಳದ ದಡದಯಲ್ಲಿಯೇ ಇರುತ್ತದೆ. ಇಲ್ಲಿಯೇ ಕುರಿಗಳೊಡಗೂಡಿ ಆಡುತ್ತ ಆನಂದದಿಂದ ಕಾಲವನ್ನು ಕಳೆಯುತ್ತಿದ್ದನು ಗೊಲ್ಲಾಳ.

## ೫. ಗೊಲ್ಲಾಳನಿಗೆ ಲಿಂಗದೀಕ್ಷೆ :

ವಾಡಿಕೆಯಂತೆ ಫಾಲ್ಗುಣ ಮಾಸದಲ್ಲಿ ಶ್ರೀಶೈಲಕ್ಕೆ ಹೋಗುವ ಕಂಬಿಗಳು ಬರುತ್ತಿದ್ದವು. ದೂರದಿಂದಲೇ ನಿರೀಕ್ಷಿಸುತ್ತ ನಿಲ್ಲುತ್ತಾನೆ ಗೊಲ್ಲಾಳ. ಪರಸೆ ಹೊರಟಿರುವ ಜನರು ಭಜನೆ ಮಾಡುತ್ತಾ ಮಲ್ಲಯ್ಯ, ಮಲ್ಲಯ್ಯ, ಶ್ರೀಗಿರಿ ಮಲ್ಲಯ್ಯನನ್ನು ಕಾಣಲು ಬನ್ನಿ ಎಂಬ ಪದಗಳನ್ನು ಹಾಡುತ್ತಾ ಅವರು ಸಾಗುತ್ತಿದ್ದರು. ಆಗ ಗೊಲ್ಲಾಳನಿಗೆ ಆಗಾಧವೂ, ಆನಂದವೂ ಆಗುತ್ತದೆ. ಸನಿಹಕ್ಕೆ ಬಂದು ವಿಚಾರಿಸುತ್ತಾನೆ. ನೀವೆಲ್ಲಾ ಯಾರು? ಎಲ್ಲಿಗೆ ಹೊರಟಿರುವಿರಿ? ನೀವು ಹೀಗೇಕೆ ಚೀರಾಡುವಿರಿ ಎಂದು ವಿನಯದಿಂದ ಕೇಳುತ್ತಾನೆ. ಆದರೆ ಕುರಿಗಾಹಿ ಗೊಲ್ಲಾಳನಿಗೆ ಯಾರೂ ಉತ್ತರ ಕೊಡುವುದಿಲ್ಲ. ಗೊಲ್ಲಾಳನು ಇವರನ್ನು ಕೇಳಿಯೇ ಬಿಡಬೇಕೆಂದು ಅವರಲ್ಲಿ ಒಬ್ಬ ವೃದ್ಧ ಜಂಗಮನನ್ನು ತಡೆದು ಕೇಳುತ್ತಾನೆ. ತಾತಾ ನೀವೆಲ್ಲಾ ಎಲ್ಲಿಗೆ ಹೊರಟಿರುವಿರಿ ? ಹೀಗೇಕೆ ಚೀರಾಡುತ್ತ ಸಾಗಿದೆ ಈ ಜನ ? ಯಾರನ್ನು ಕೇಳಿದರೂ ಯಾರೂ ಉತ್ತರಿಸಲಿಲ್ಲ. ನೀವಾದರೂ ಉತ್ತರಿಸಬೇಕೆಂದು. ಕೇಳಿಕೊಳ್ಳುತ್ತಾನೆ. ಆಗ್ಗೆ ಗೊಲ್ಲಾಳನನ್ನು ವಿಚಾರಿಸಿದ ಜಂಗಮ, ನನ್ನ ಹೆಸರು ನಂದಯ್ಯ. ಪ್ರತಿವರ್ಷ ನಾವು ಶ್ರೀಶೈಲ ಮಲ್ಲಿಕಾರ್ಜುನನ ದರ್ಶನಕ್ಕಾಗಿ ಕಂಬಿಗಳ ಸಮೇತ ಯಾತ್ರೆ ಹೋಗುತ್ತೇವೆ. ಲಿಂಗದರ್ಶನ ಪಡೆದು ಪುನೀತರಾಗಿ ಬರುತ್ತೇವೆ. ಗೊಲ್ಲಾಳನು 'ಲಿಂಗವೆಂದರೇನು? ಲಿಂಗದರ್ಶನವೆಂದರೇನು? ಎಂದು ಪ್ರಶ್ನಿಸುತ್ತಾನೆ.

ಲಿಂಗದ ಮಹಿಮೆಯನ್ನು ನಂದಯ್ಯ ಗೊಲ್ಲಾಳನಿಗೆ ಹೇಳುತ್ತಾನೆ. (ಲಿಂಗದೀಕ್ಷೆ ಇಲ್ಲಿಂದಲೇ ಆರಂಭವಾಗುತ್ತದೆ) ತನಗೊಂದು ಲಿಂಗವನ್ನು ತಂದುಕೊಡಲು ಕೇಳಿಕೊಳ್ಳುತ್ತಾನೆ. ಗೊಲ್ಲಾಳ ಪ್ರತಿಯಾಗಿ ನಂದಯ್ಯ ಬಂಗಾರದ ನಾಣ್ಯಗಳನ್ನು ಪಡೆದುಕೊಂಡು ಲಿಂಗತರುತ್ತೇನೆಂದು ಹೇಳಿ ಹೊರಡುತ್ತಾನೆ.

ಶ್ರೀಶೈಲಕ್ಕೆ ಫಾಲ್ಗುಣ ಮಾಸದಲ್ಲಿ ಹೊರಟ ಪರಿಸೆ ಮರಳಿ ಬರುವುದು ಚೈತ್ರಮಾಸದಲ್ಲಿ. ಚೈತ್ರಮಾಸ ಸಮೀಪ ಬಂದಂತೆಲ್ಲ ನಂದಯ್ಯನ ಆಗಮನವನ್ನು ಗೊಲ್ಲಾಳ ಕಾತರದಿಂದ ಕಾಯುತ್ತಿದ್ದ. ಚೈತ್ರಮಾಸದ ದವನದ ಹುಣ್ಣಿಮೆಯಂದು ನಂದಯ್ಯನು ಬರುತ್ತಾನೆ. ಆದರೆ ಲಿಂಗ ತರುತ್ತೇನೆಂದು ಹೇಳಿ ಹಣ ಪಡೆದುಕೊಂಡಿದ್ದ ನಂದಯ್ಯ ಲಿಂಗವನ್ನು ತಂದಿರುವದಿಲ್ಲ. ಗೊಲ್ಲಾಳನನ್ನು ನೋಡಿದ ಕೂಡಲೇ ಈತನಿಗೆ

ನೆನಪಾಗುತ್ತದೆ. ಹೊನ್ನಿನ ವ್ಯಾಮೋಹದಲ್ಲಿ ಲಿಂಗ ತರುವುದನ್ನು ಮರೆತಿದ್ದ. ಇದಕ್ಕೆ ಪ್ರತಿಯಾಗಿ ನಂದಯ್ಯ ತನ್ನದೇ ಆದ ಸೂಕ್ತ ಪರಿಹಾರವನ್ನು ಕಂಡುಕೊಳ್ಳುತ್ತಾನೆ. ಈತನು ಕುರುಬ. ಲಿಂಗವನ್ನು ಕಂಡಿಲ್ಲ ಅದಕ್ಕಾಗಿ ಕುರಿಹಿಕ್ಕೆಯನ್ನೇ ಲಿಂಗವೆಂದು ಕೊಟ್ಟರಾಯಿತು ಎಂದು ನಿರ್ಧರಿಸುತ್ತಾನೆ. ಅದರಂತೆ ಗೊಲ್ಲಾಳನಿಗೆ ಕುರಿಹಿಕ್ಕೆಯನ್ನೇ ಲಿಂಗವೆಂದು ಹೇಳಿ ಕೊಡುತ್ತಾನೆ. ಕೊಡುವಾಗ ಲಿಂಗಮೂರ್ತಿ ಬಹು ಸೂಕ್ಷ್ಮವಾಗಿದ್ದಾನೆ. ಈ ಬಾಹ್ಯ ಚಕ್ಷುಗಳಿಂದ ನೋಡಿದರೆ ಲಿಂಗಯ್ಯನಿಗೆ ದೃಷ್ಟಿಯಾಗುತ್ತದೆ. ಆದ್ದರಿಂದ ಅಂತರ್ ದೃಷ್ಟಿಯಿಂದ ಇವನನ್ನು ಕಾಣಬೇಕೆಂದು ಲಿಂಗದೀಕ್ಷೆ ಮಾಡುತ್ತಾನೆ.

### ೬. ಗೊಲ್ಲಾಳನು ಲಿಂಗ ಪೂಜಿಸಿದ್ದು :

ನಿಂಗಯ್ಯನಿಂದ ಲಿಂಗ ಪಡೆದನಂತರ ಗೊಲ್ಲಾಳನು ದಿನಂಪ್ರತಿ ಲಿಂಗವನ್ನು ಪೂಜಿಸುವುದರಲ್ಲಿ ಕಾಲಕಳೆಯುತ್ತಿದ್ದ. ಹಾಲಿನ ಅಭಿಷೇಕವನ್ನಿತ್ತು, ತುಪ್ಪದ ಕೊಡಗಳನ್ನು ಲಿಂಗಪ್ಪನಿಗೆ ಎರೆಯುತ್ತ ಕಾಡಿನಲ್ಲಿ ಬೆಳೆದ ಪತ್ರಿ-ಪುಷ್ಪಗಳನ್ನೇರಿಸುತ್ತ, ಭಾವ ಶಿವನಲ್ಲಿರಿಸಿ ಭಜನೆ ಮಾಡಹತ್ತಿದ.

ಲೋಕವನ್ನು ಮರೆತು ದೇವಭಾವಿಯಾಗುವನು. ಶಿವನನ್ನು ಭಜಿಸುತ್ತ, ಹಸಿವು ನೀರಡಿಕೆಗಳನ್ನು ಮರೆತು ಶಿವನಾಮಾವಳಿಯ ಪಠಿಸುತ್ತಾ, ಲಿಂಗ ಸೇವೆಯಲ್ಲಿಯೇ ತತ್ಪರನಾಗಿ ಸರ್ವಸ್ವವನ್ನೇ ತ್ಯಾಗ ಮಾಡುತ್ತಾನೆ. ಹೀಗೆ ಹಗಲು -ರಾತ್ರಿಯೆನ್ನದೆ ಗೊಬ್ಬರ ಗುಂಡಿಯಲ್ಲಿರಿಸಿದ ಲಿಂಗಕ್ಕೆ ಅರ್ಪಿಸಿದ ಹಾಲು -ಮೊಸರು ಹಳ್ಳವಾಗಿ ಹರಿಯಿತು. ಶಿವನಾಮ ಸ್ಮರಣೆಯಲ್ಲಿ ಕಣ್ಮುಚ್ಚಿ ಕುಣಿದಾಡಿದ, ಆನಂದಿಸಿದ, ಭಕ್ತಿಯಿಂದ ಪೂಜಿಸಿದ ಗೊಲ್ಲಾಳ. ಈ ತೆರನಾದ ಪೂಜೆ ನಿತ್ಯವೂ ಸಾಗಿತು.

### ೭. ಗೊಲ್ಲಾಳನ ಲಿಂಗನಿಷ್ಠೆ :

ಲಿಂಗಪೂಜೆಯಲ್ಲಿ ಗೊಲ್ಲಾಳನು ನಿರತನಾಗಿ, ಕಾಯಕದಿಂದ ಬಂದ ಫಲವನ್ನು ತಂದೆಗೆ ಕೊಡದೆ, ಲಿಂಗಕ್ಕೆ ಅರ್ಪಿಸುವ ಸುದ್ದಿ ತಂದೆ ಬಲ್ಲುಗನಿಗೆ ತಿಳಿಯಿತು. ಬಲ್ಲುಗ ಮೊದಲೇ ಕೃಪಣ, ಲೋಭಿಯಾಗಿದ್ದ. ತನ್ನ ಸಂಪತ್ತು ಲಿಂಗಕ್ಕೆ ಅರ್ಪಿತವಾಗಿರುವದನ್ನು ಕೇಳಿ ಕ್ರೋಧಿತನಾಗಿ ಗೊಲ್ಲಾಳನಿರುವೆಡೆಗೆ ಬಂದನು. ಅಲ್ಲಿ ಹಾಲಿನ ಹಳ್ಳ ಹರಿಯುತ್ತಿತ್ತು. ಗೊಲ್ಲಾಳ ಮೈಮೇಲೆ ಎಚ್ಚರವಿಲ್ಲದೆ ಲಿಂಗ ಪೂಜಿಸುತ್ತಿದ್ದ. ಇದನ್ನು ಕಂಡು ಬಲ್ಲುಗ ಕುಪಿತನಾಗಿ ಮನಬಲ್ಲಂತೆ ಸಿಟ್ಟಿನಿಂದ ಚೀರಾಡುತ್ತಾನೆ. 'ನನ್ನ ಸಂಸಾರವನ್ನು ಹಾಳು ಮಾಡಿದೆಯಾ ಚಾಂಡಾಲ' ಎಂದು ಗದರಿಸುತ್ತಾನೆ. ಆಗ ಗೊಲ್ಲಾಳನು, ನನ್ನದು ಎನ್ನುವುದು ಬರಿ ಭ್ರಮೆ. ಇಲ್ಲಿ ನನ್ನದು ಎನ್ನುವುದಿಲ್ಲ. ದೇವರು ಕೊಟ್ಟದ್ದು ದೇವರಿಗೆ ಅರ್ಪಿಸಿದೆನು ಎನ್ನುತ್ತಾನೆ. ಆಗ ಬಲ್ಲುಗನು ನಿನ್ನ ಶಿವನನ್ನು ತೋರಿಸು ಎಂದು ಕ್ರೋಧಮನೋಭಾವದವನಾಗಿ ಲಿಂಗವಿರಿಸಿದ ಗೊಬ್ಬರಗುಂಪಿಯನ್ನು ಕಾಲಿನಿಂದ ಒದೆಯುತ್ತಾನೆ. ಗೊಲ್ಲಾಳನೂ ಕುಪಿತನಾಗಿ ಬಲ್ಲುಗ ತನಗೆ ಜನ್ಮ ನೀಡಿದ ತಂದೆ ಎಂಬುದನ್ನು ಮರೆತು

ಭವದ ಬಂಧವನ್ನು ಹರಿದು 'ನಿನ್ನಂಥಾ ತಂದೆಯಿದ್ದರೆ ಫಲವೇನು' ಎನ್ನುತ್ತಾ ಆವೇಶದಿಂದ ಕೊಡಲಿಯಿಂದ ತಂದೆಯ ಶಿರಚ್ಛೇದನ ಮಾಡುತ್ತಾನೆ.

ಕುರಿಹಟ್ಟಿಯಲ್ಲಿ ಆಗಿರುವ ಈ ಘಟನೆಯ ವಾರ್ತೆ ಧವಳಾರ ಪಟ್ಟಣದಲ್ಲಿ ಹರಡಿತು. ಅತ್ತ ಪತಿಯ ಮರಣದ ಸುದ್ದಿ ಕೇಳಿ ಗಾಬರಿಯಾಗಿ ದುಗ್ಗಳೆ ಹಟ್ಟಿಗೆ ಧಾವಿಸಿ ಬರುತ್ತಾಳೆ. ಅನೇಕ ವಿಧದಲ್ಲಿ ಶೋಕಿಸುತ್ತಾಳೆ. ಗೊಲ್ಲಾಳ ತನ್ನನ್ನೇ ತಾನು ಮರೆತು ಶಿವಸ್ಮರಣೆಯಲ್ಲಿ ಲೀನನಾಗಿದ್ದಾನೆ.

### ೮. ಗೊಲ್ಲಾಳನಿಗೆ ಶಿವದರ್ಶನ :

ಗೊಲ್ಲಾಳನ ಲಿಂಗ ಭಕ್ತಿಗೆ ಮೆಚ್ಚಿ ಆ ಗೊಬ್ಬರದ ಗುಂಪಿಯಲ್ಲಿಯೇ ಶಿವಲಿಂಗ ಉದ್ಭವಿಸಿ ಶಿವದರ್ಶನವಾಗುತ್ತದೆ. ಕಂದಾ ನಿನ್ನ ನಿಷ್ಠಾ ಭಕ್ತಿಗೆ ಮೆಚ್ಚಿದ್ದೇನೆಂದು ಧ್ವನಿ ಬರುತ್ತದೆ. ಗೊಲ್ಲಾಳನು ಕಣ್ತೆರೆದು ನೋಡುತ್ತಾನೆ. ಸೂರ್ಯ ಪ್ರಭೆಯುಳ್ಳ ಶಿವನನ್ನು ನೋಡಿ ಅತೀವ ಆನಂದಿಸುತ್ತ ಹಾಗೂ ತನ್ನ ತಂದೆಯನ್ನು ತಾನೇ ಹತಮಾಡಿದ್ದನ್ನು ವಿವರಿಸುತ್ತಾನೆ. ಈ ಎಲ್ಲ ದೃಶ್ಯವನ್ನು ಅಲ್ಲಿಯೇ ದುಗ್ಗಳಾದೇವಿ ನೋಡುತ್ತಾ ನಿಂತಿರುತ್ತಾಳೆ. ಅವಳು ವಿಸ್ಮಿತಳಾಗಿ, ಮಗನಿಂದ ಮಹಾದೇವನ ದರ್ಶನವೆನ್ನುತ್ತ ಶಿವನಿಗೆ ನಮಸ್ಕಾರ ಮಾಡುತ್ತಾಳೆ. ಆಗ ಶಿವನು 'ಸರ್ವಮಂಗಳೇ ಸೌಭಾಗ್ಯವತಿ ಭವ' ಎಂದು ಆಶೀರ್ವದಿಸಿದಾಗ ಶವವಾಗಿದ್ದ ಬಲ್ಲುಗ ಜೀವಕಳೆತುಂಬಿ ಮೇಲೇಳುತ್ತಾನೆ. ಗೊಲ್ಲಾಳನ ಲಿಂಗನಿಷ್ಠೆಗೆ ಮೆಚ್ಚಿದ ಶಿವನು ನೀನಿಚ್ಛಿಸಿದ ವರವನ್ನು ಕೇಳು ಎನ್ನಲು ಗೊಲ್ಲಾಳನು 'ಈ ಲೋಕದಲ್ಲಿ ನನಗಾವ ಪದವಿ ಬೇಡ ನಿಮ್ಮ ಪಾದಸೇವೆಯೊಂದೇ ಸಾಕು' ಎನ್ನುತ್ತಾನೆ.

ಧನ್ಯ ಗೊಲ್ಲಾಳ, ನೀನೆ ನಾನಾಗಿ ನಾನೇ ನೀನಾಗಿ ಗೊಲ್ಲಾಳೇಶ್ವರನೆಂಬ ನಾಮದಲ್ಲಿ ಇಲ್ಲಿಯೇ ನೆಲೆಗೊಳ್ಳುತ್ತೇನೆ. ಈ ಸ್ಥಳವೇ ಭೂಕೈಲಾಸವೆನಿಸಿ ಜ್ಯೋತಿರ್ಲಿಂಗಗಳಲ್ಲಿ ಒಂದಾಗುವದು ಎಂದು ಹೇಳಿ ಮಹಾದೇವನು ಗೊಲ್ಲಾಳನ ಪರಿವಾರವನ್ನು ತೆಗೆದುಕೊಂಡು ಕೈಲಾಸಕ್ಕೆ ಹೋಗುತ್ತಾನೆ.

### ನಾಟಕದ ಪಾತ್ರಗಳು :

೧. ದುಗ್ಗಳಾದೇವಿ (ದುಗುಳಾದೇವಿ) ದುಗ್ಗಳೆ

೨. ಬಲ್ಲುಗ

೩. ನಾರದ

೪. ಮಹಾದೇವ

೫. ಪಾರ್ವತಿದೇವಿ

೬. ಬ್ರಹ್ಮದೇವ

೭. ವಿಷ್ಣುದೇವ

೮. ನಂದೀಶ್ವರ

೯. ಹೂವಮ್ಮ

೧೦. ಬಳ್ಳೆಪ್ಪ

೧೧. ಅಕ್ಕಮ್ಮ

೧೨. ತಂಗೆಮ್ಮ

೧೩. ತಾಯಮ್ಮ

೧೪. ಬಂದಮ್ಮ

೧೫. ಜಂಗಮ

೧೬. ಆನಂದ

೧೭. ನಂದಿ

೧೮. ನಂದಯ್ಯ

## ನಾಟಕದ ಪೂರ್ವಸಿದ್ಧತೆಗಳು :

ಗೊಲ್ಲಾಳೇಶ್ವರನ ಪಲ್ಲಕ್ಕಿ ಉತ್ಸವವು ವರ್ಷಕ್ಕೆ ಎರಡು ಸಲ ನೆರವೇರುತ್ತವೆ. ಶ್ರಾವಣಮಾಸದ ಕೊನೆಯ ಸೋಮವಾರ ಹಾಗೂ ಯುಗಾದಿ ಹಬ್ಬದ ದಿನದಂದು ನಡೆಯುತ್ತದೆ. ಈ ದಿನಗಳಲ್ಲಿ ಸ್ವಗ್ರಾಮದ ಕಲಾವಿದರಿಂದ ನಾಟಕವು ಪ್ರದರ್ಶಗೊಳ್ಳುತ್ತದೆ. ನಾಟಕವನ್ನಾಡಲು ಗ್ರಾಮದ ಅನೇಕ ಕಲಾವಿದರು ನಾ ಮುಂದೆ, ನೀ ಮುಂದೆ ಎಂದು ಸ್ಪರ್ಧೆಯಲ್ಲಿರುತ್ತಾರೆ. ಆದ್ದರಿಂದ ಗ್ರಾಮದ ಹಿರಿಯರೆಲ್ಲ ಸಭೆ ಸೇರಿ (ಗೊಲ್ಲಾಳೇಶ್ವರ ದೇವಸ್ಥಾನದಲ್ಲಿ) ಮೊದಲು ಕಲಾವಿದರನ್ನು ಆಯ್ಕೆ ಮಾಡುತ್ತಾರೆ. (ಹೆಣ್ಣಿನ ಪಾತ್ರಗಳನ್ನು ಪುರುಷರೇ ಅಭಿನಯಿಸುತ್ತಾರೆ.) ಹಾಗೂ ಒಂದು ಸಮಿತಿಯನ್ನು ರಚಿಸುತ್ತಾರೆ. ಸಮಿತಿಯಲ್ಲಿ ನಾಟಕದ ನಿರ್ದೇಶಕನನ್ನು ಆಯ್ಕೆ ಮಾಡಲಾಗುತ್ತದೆ. ನಿರ್ದೇಶಕನು ನಾಟಕ ಹೇಗೆ ಪ್ರದರ್ಶನಗೊಳ್ಳಬೇಕು. ಪಾತ್ರಧಾರಿಗಳಿಗೆ ಅಭಿನಯ ಕುರಿತು ಮಾಹಿತಿಯನ್ನು ನೀಡುತ್ತಾನೆ ಮತ್ತು ನಾಟಕ ಮಂಡಳಿಯಲ್ಲಿ ಮಾಲೀಕ (ಒಡೆಯ)ನಿರುತ್ತಾನೆ. ಮಾಲೀಕನ ಕೆಲಸ ಹಣಕಾಸಿನ ಜವಾಬ್ದಾರಿಯನ್ನು ನಿರ್ವಹಿಸುವದಾಗಿದೆ.

ಕಲಾವಿದರಿಗೆ ತರಬೇತಿ ನೀಡಲು ಪೇಟಿಮಾಸ್ತರನನ್ನು ನೇಮಕಾತಿ ಮಾಡಿಕೊಳ್ಳುತ್ತಾರೆ. ಈತನಿಗೆ ಸಂಬಳವನ್ನು ಕೊಡಲಾಗುವದು. ಈತನು ಸ್ವತಃ ಹಾಡುಗಾರ ಹಾಗೂ ಕಲಾವಿದನಾಗಿರುತ್ತಾನೆ. ಕಲಾವಿದರ ಮೇಲೆ ಸಂಪೂರ್ಣ ಹಿಡಿತ ಹೊಂದಿರುತ್ತಾನೆ. ಕಲಾವಿದರು ಅನಕ್ಷರಸ್ಥರಾಗಿರುವದರಿಂದ ಅವರಿಗೆ ಇವರಿಂದ

ಸೂಕ್ತವಾದ ತರಬೇತಿ ನೀಡಲಾಗುವದು. ಒಮ್ಮೊಮ್ಮೆ ಕಲಾವಿದರಿಗೆ ಬಡಿದು ಸಹಿತ ಮಾತು ಹಾಗೂ ಅಭಿನಯವನ್ನು ಹೇಗೆ ಮಾಡಬೇಕು, ಮಾತಾಡಬೇಕೆಂಬುದನ್ನು ಪೇಟಿ ಮಾಸ್ತರರು ನೀಡುವಂತಹರಾಗಿದ್ದಾರೆ. ಈತನ ಕರ್ತವ್ಯ ಜವಾಬ್ದಾರಿಯನ್ನು ಗಮನಿಸಿದರೆ, ಈತನೇ ನಿರ್ದೇಶಕನಾಗಿದ್ದಾನೆ ಎಂದು ಕಂಡುಬರುವುದು.

ನಾಟಕದಲ್ಲಿ ಬರುವ ಹಾಡುಗಳನ್ನು ಆಯಾ ಕಲಾವಿದರೇ ತಮ್ಮ ತಮ್ಮ ಹಾಡುಗಳನ್ನು ಹಾಡಬೇಕು. ಹಾಡುಗಳಿಗೆ ಸರಿಹೊಂದುವ ರಾಗವನ್ನು ಪೇಟಿ ಮಾಸ್ತರನೇ ನಿರ್ದೇಶಿಸುವನು. ರಾಗಕ್ಕೆ ತಕ್ಕ ಹಾಗೆ ಬಾರಿಸುವ ಪರಿಣಿತ ತಬಲಾವಾದಕನು ಇರುವನು. ಕಲಾವಿದರಿಗೆ ರಾಗ ಮತ್ತು ತಾಳಕ್ಕೆ ಹೋಲುವ ಹಾಡು, ಮಾತು, ಅಭಿನಯ ಇವುಗಳ ಸ್ಪಷ್ಟತೆ ಕುರಿತು ಅರಿವು ಮೂಡಿಸಲಾಗುವದು. ಇದಕ್ಕೆ ಪೂರ್ವ ತಯಾರಿಗಾಗಿ ತರಬೇತಿ ನೀಡಲಾಗುವದು.

ಪೂರ್ಣ ತರಬೇತಿ ನೀಡಿದ ನಂತರದಲ್ಲಿ ರಂಗಭೂಮಿಯ ಮೇಲೆ ಪ್ರದರ್ಶನಗೊಳ್ಳುವ ಪೂರ್ವದಲ್ಲಿ ರಂಗ ತಾಲೀಮು ಎಂದು ಎರಡು ದಿನಗಳ ತರಬೇತಿ ನೀಡಲಾಗುವದು. ಈ ಸಂದರ್ಭದಲ್ಲಿ ನಾಟಕದ ಸಮಿತಿಯೂ ಹಾಗೂ ಕೆಲ ಊರಿನ ಹಿರಿಯರು ಪ್ರೇಕ್ಷಕರಾಗಿ ಭಾಗವಹಿಸುತ್ತಾರೆ. ಇದು ಒಂದರ್ಥದಲ್ಲಿ Screening committee) ಪರೀಕ್ಷೆಯಾಗಿದೆ. (Some actors look better in real life than on the screen) ಎಂಬ ಅರ್ಥದಲ್ಲಿ ಈ ನಾಯಕರ ಸಭೆಯು ಸಂಭಾಷಣೆ, ಅಭಿನಯ, ಕಥಾವಸ್ತು ವಿಷಯ, ಸಂಗೀತ, ಇತ್ಯಾದಿ ವಿಷಯಗಳನ್ನು ಪರಿಶೀಲಿಸುವುದು. ರಂಗ ತಾಲೀಮಿನ ಇನ್ನೊಂದು ಮುಖ್ಯ ಉದ್ದೇಶ ಪಾತ್ರಧಾರಿಗಳಿಗೆ (ಕಲಾವಿದರಿಗೆ) ರಂಗಭೂಮಿಯ ಭಯ ಇರಬಾರದೆಂದು ಈ ತೆರನಾಗಿ ಮಾಡುವುದಾಗಿದೆ.

ರಂಗಸಜ್ಜಿಕೆಯನ್ನು ದೇವಸ್ಥಾನದ ಎದುರುಗಡೆ ವಿಶಾಲವಾದ ಪ್ರಾಂಗಣದಲ್ಲಿ ನಿರ್ಮಿಸಲಾಗುವದು. ರಂಗಭೂಮಿಯೂ ನಾಟಕದ ಕಥಾ ವಸ್ತುವಿಗೆ ತಕ್ಕಹಾಗೆ ಹಾಕಿರುತ್ತಾರೆ. ರಂಗಭೂಮಿಯ ಮೇಲೆ ಕಲಾವಿದರು ಇದ್ದರೆ ಅವರ ಎದುರುಗಡೆ (ಮುಂಭಾಗದಲ್ಲಿ) ಪ್ರೇಕ್ಷಕರು ಇರುವರು. ಪ್ರೇಕ್ಷಕರಿಗೆ ಯಾವುದೇ ವಿಶೇಷವಾಗಿ ಆಸನಗಳು ಇರುವುದಿಲ್ಲ. ಎಲ್ಲರೂ ನೆಲದ ಮೇಲೆಯೇ ಕುಳಿತುಕೊಂಡು ನಾಟಕವನ್ನು ನೋಡಬೇಕು. ಇದು ನಮ್ಮ ಸಂಸ್ಕೃತಿಯ ಪ್ರತೀಕವೂ ಆಗಿದೆ. ಎಲ್ಲರೂ ಅಣ್ಣಾ, ತಮ್ಮ, ಕಾಕಾ, ಮಾಮ, ಅಕ್ಕ-ತಂಗಿ ಎನ್ನುತ್ತಾ ಒಂದೇ ವೇದಿಕೆಯಡಿ ಕುಳಿತುಕೊಳ್ಳುವರು. ಅಂದು ಅವರಿಗೆ ಸೌಭಾಗ್ಯದ ದಿನವೂ ಆಗಿರುತ್ತದೆ.

**ಕಥಾ ವಿಶ್ಲೇಷಣೆ :**

'ಗೊಲ್ಲಾಳೇಶ್ವರ ಲೀಲಾಮೃತ ಕಥಾ' ನಾಟಕವು ಭಕ್ತಿ ಪ್ರಧಾನವಾದ ನಾಟಕವಾಗಿದೆ. ಈ ನಾಟಕದ ಕಥಾ ವಸ್ತುವಿನಲ್ಲಿ ಲಿಂಗನಿಷ್ಠೆಯೇ ಮುಖ್ಯ ಆಶಯವಾಗಿದೆ. ಇದನ್ನು ಆರಾಧನಾ ನಾಟಕ ಕಲೆಯ ಗುಂಪಿಗೆ ಸೇರಿಸಬಹುದಾಗಿದೆ. ಈ ಪ್ರಕಾರದ ನಾಟಕಗಳು ಪ್ರದರ್ಶನಗೊಳ್ಳುವ ಆರಂಭದ ನಾಂದಿ ಪದದಲ್ಲಿ ಸಾಮಾನ್ಯವಾಗಿ ಈ ಲಕ್ಷಣಗಳನ್ನು ಕಾಣಬಹುದಾಗಿದೆ.

೧. ಒಕ್ಕಣಿಕೆ

೨. ದೇವರ ಸ್ತುತಿ

೩. ಕವಿಸ್ತುತಿ

೪. ಗುರುಸ್ತುತಿ

೫. ಕವಿಯ ಭಕ್ತಿ ಪ್ರಧಾನ ಹಾಡುಗಳು

೬. ಪೀಠಿಕಾ

೭. ಕಥಾ ಮಾತುಗಳು ಮತ್ತು ಪದಗಳು

೮. ಕವಿಪದ (ಕವಿಯು ವರ್ಣನಾ ಮೂಲಕ ಕಥಾ ಸನ್ನಿವೇಶವನ್ನು ಪ್ರೇಕ್ಷಕರ ಗಮನಕ್ಕೆ ತರುವದು.)

೯. ಆಚರಣೆ ಪದಗಳು

೧೦. ಮಂಗಳಾಚರಣ

**ಒಕ್ಕಣಿಕೆ :** ಸಾಮಾನ್ಯವಾಗಿ ನಾಟಕದ ಆರಂಭದ ಹಾಗೂ ಕೊನೆಯ ಭಾಗದಲ್ಲಿ ಆಯಾ ರಚನಕಾರನ ಇಲ್ಲವೆ ಪ್ರತಿಕಾರನ ಸ್ವವಿಷಯ ಮಾಹಿತಿಯನ್ನು ನೀಡಿರುವರು. ಆದರೆ ಈ ನಾಟಕದ ಯಾವುದೇ ಭಾಗದಲ್ಲಿ ಕೃತಿಕಾರನ, ಇಲ್ಲವೇ ಪ್ರತಿಕಾರನ ಕುರಿತು ಮಾಹಿತಿಯನ್ನು ನೀಡಿರುವುದಿಲ್ಲ.

ಕಥಾವಸ್ತುವಿಗೆ ಪೂರಕವಾಗಿ ದೈವ ಸ್ತುತಿಯನ್ನು ಹಾಡಿ ಹೊಗಳಲಾಗುತ್ತದೆ. ದೈವ ಶಿವನಾಗಿರುವುದರಿಂದ ಶಿವನನ್ನು ಕುರಿತು ಸ್ತುತಿಸಲಾಗುತ್ತದೆ. ದುಗ್ಗಳಾದೇವಿಯ ಶಿವಪೂಜೆಯೊಂದಿಗೆ ನಾಟಕದ ಪ್ರದರ್ಶನ ಆರಂಭವಾಗುತ್ತದೆ.

**ನಾಂದಿ ಪದ**

ಗೌರೀವರಹರ ಗಿರಿಜೆನಾಥ ಪಾರ್ವತಿನಾಥ
ಮಲ್ಲೀನಾಥ ಪುಷ್ಪಪೂಜೆ ಮನೋರಥ
ಭಕ್ತಿಷ್ಪಾರ್ಥ ಸುಪುತ್ರ ವರದಾತ
ಮನದಿಷ್ಪಾರ್ಥ ಪೂರೈಸು ಪ್ರಭೋ
ಪ್ರಭೋ ದೀನ ದಯಾ ಕರುಣ
ಕರುಣಾ ಭರಣಾ ಪಾವನ ಚರಣಾ ||ಪ||
ನಂಬಿದೆ ನಿನ್ನ ತುಂಬು ನೀ ಜೀವನ
ಶಂಭುವೇ ನಿನ್ನ ಇಂಬಿಡು ಬಾಳಿನ
ಭರಿಸೇನೂ ಇನ್ನೂ ತಾಪ ತನುವಿನ
ಮಾನಧನಾ ಮಮಮಾನ ಕಾಯ ನೀ ||ಅ.ಪ.||

ನರಜನ್ಮದಿ ನಾ ಬೆಂದೆ ತಂದೆ

ಕೃಪೆ ನೀಡಿ ಸಲಹೋ ಇಂದೇ

ಬಾಳಿನ ಆಸರ ನೀಡು ಇಂದೇ

ಹೆಣ್ಣಿನ ಜನುಮದಿ ನಾ ಬೆಂದೆ

ದುಗುಳಾದೇವಿ ಶಿವನಲ್ಲಿ ಮೊರೆ ಇಡುವುದನ್ನು ಗಮನಿಸಬಹುದು. ಸುಪುತ್ರನಿಗಾಗಿ ಹಾಗೂ ತನ್ನ ಮನದ ಇಷ್ಟಾರ್ಥ ಪೂರೈಸಿಕೊಳ್ಳುವುದಕ್ಕಾಗಿ ಮತ್ತು ಜೀವನದ ಮುಕ್ತಿಗಾಗಿ ಹಂಬಲಿಸುತ್ತಾಳೆ. ಹೆಣ್ಣುಮಕ್ಕಳ ಜೀವನದ ಸಂಕಷ್ಟಗಳನ್ನು ಸೂಚ್ಯವಾಗಿ 'ಹೆಣ್ಣಿನ ಜನುಮದಿ ನಾ ಬೆಂದೆ' ಎಂದು ಹಾಡುತ್ತಾಳೆ. ಭಕ್ತರ ಬಯಕೆಯನ್ನು ಹಾಡಿನಲ್ಲಿ ಹೇಳಲಾಗಿದೆ.

**ಗಣಸ್ತುತಿ :** ಮಹೇಶ್ವರನ ಅನೇಕ ನಾಮಾವಳಿ ಹಾಡಿ ಹೊಗಳುವದು.

**ಕವಿಸ್ತುತಿ :** ಈ ನಾಟಕದ ಮೂಲ ಕಥೆ ಬರೆದವರಾರು ? ಹಾಗೂ ಇದರ ಪ್ರತಿಯನ್ನು ಸಿದ್ಧಪಡಿಸಿದವರಾರು ಎಂಬುದರ ಕುರಿತು ಮಾಹಿತಿ ಇರುವುದಿಲ್ಲ. (ಬಂದಾಳದಲ್ಲಿ ದೊರೆತ ಹಸ್ತಪ್ರತಿಗೆ ಸಂಬಂಧಿಸಿದಂತೆ)

**ಕವಿಯ ಭಕ್ತಿ ಪ್ರಧಾನ ಹಾಡುಗಳು :** ಕಥೆಗೆ ಕೊಂಡಿಯಾಗಿ ರಚನೆಗೊಂಡಿರುವ ಪದಗಳೇ ಕವಿಪದಗಳು. ಈ ನಾಟಕದಲ್ಲಿಯೂ ಭಕ್ತಿ ಪ್ರಧಾನವಾದ ಹಾಡುಗಳನ್ನು ಜೋಡಿಸಲಾಗಿದೆ. ಕಥಾವಸ್ತುವಿಗೆ ಸಂದರ್ಭಕ್ಕೆ ತಕ್ಕಹಾಗೆ ಹಾಡುಗಳನ್ನು ರಚಿಸಿ ಸೇರಿಸಲಾಗಿದೆ.

**ಪೀಠಿಕಾ :** ಕಥೆಯ ಮುಂದಿನ ಹರವನ್ನು ಹಾಡಿನ ರೂಪದಲ್ಲಿ ಇಲ್ಲವೇ ಮಾತಿನ ಸಭಾಷಣೆಯಲ್ಲಿ ಕಾಣುತ್ತೇವೆ. ಈ ಹರವಿನಲ್ಲಿ ಕಥೆ ಮುಂದುವರಿಯುತ್ತದೆ.

ತ್ರಿಲೋಕಸಂಚಾರಿ ನಾರದರು ಬಲ್ಲುಗ ಹಾಗೂ ದುಗುಳಾದೇವಿ ದಂಪತಿಗಳ ಮನೆಗೆ ಬರುತ್ತಾನೆ. ದುಗುಳಾದೇವಿ ನಾರದರಿಗೆ ಅತಿಥಿ ಸತ್ಕಾರ ಮಾಡುತ್ತಾಳೆ. ಶಿವಭಕ್ತರ ಸಮಸ್ಯೆಯನ್ನು ಪರಿಹರಿಸಲು ಬಂದಿದ್ದೇನೆ ಎನ್ನುವ ರೀತಿಯಲ್ಲಿ 'ನಿಮ್ಮದು ಯಾವ ಯಾವ ಮನೆತನ, ನಿಮ್ಮ ಮಕ್ಕಳು ಎಲ್ಲಿ' ಎಂದು ಕೇಳುವನು. ಮೊದಲ ಮಾತಿಗೆ, ನಮ್ಮದು ಕುರುಬ ಜನಾಂಗವೆಂದು ಹೇಳುವಳು. ಗೊಲ್ಲಾಳನು 'ಕುರುಬ' ಜನಾಂಗದವನು ಎಂದು ಹೇಳಲಾಗಿದೆ. ಎರಡನೆಯದಾಗಿ ದುಗುಳಾದೇವಿಗೆ ಮಕ್ಕಳು ಆಗಿರದಿದ್ದರೂ ಮಕ್ಕಳೆಲ್ಲಿ ? ಎಂದೂ ಕೇಳುವದು. ದುಗುಳಾದೇವಿ, ಬಲ್ಲುಗ ದಂಪತಿಗಳು ಸಾಕಷ್ಟು ಸಂಪತ್ತನ್ನು ಹೊಂದಿದ್ದರೂ ಮಕ್ಕಳ ಸಂಪತ್ತು ಇರಲಿಲ್ಲ. ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೇ ಈ ಪ್ರಶ್ನೆಯನ್ನು ಕೇಳಿದ್ದಾಗಿದೆ. ಇದಕ್ಕೆ ಉತ್ತರವಾಗಿ ದುಗುಳಾದೇವಿಗೆ ಇನ್ನೊಂದು ವರ್ಷದಲ್ಲಿ ನಿಮಗೆ ಸಂತಾನ ಫಲವಿದೆ ಎಂದು ಆಶೀರ್ವದಿಸುವದು, ಇದೆಲ್ಲವೂ ನೆಚ್ಚಿನ ಶಿವನು ನೀಡುವ ವರದಾನದ ಸಂಕೇತ ಸೂಚಕವಾಗಿದೆ.

ಕೈಲಾಸ ಸಭೆ ನಡೆದಿರುವ ಸಂದರ್ಭದಲ್ಲಿ ಹಾಡಲ್ಪಡುವ ಹಾಡು.

"ಲಿಂಗ ಮಧ್ಯ ಜಗತ್ತಂ

ಭೂ ಕೈಲಾಸ ಭಾರತಂ

ಲಿಂಗ ಮರ್ಮವರಿತಂ

ಮೋಕ್ಷ ಪದ ಸ್ಥಿರ ಸತ್ಯ "

ಜಗತ್ತಿಗೆ ಒಡೆಯನು ಒಬ್ಬನೇ ಇದ್ದಾನೆ. ಭೂಲೋಕದಲ್ಲಿ ಭಾರತವೇ ಕೈಲಾಸವಾಗಿದೆ. ಲಿಂಗವನರಿದು ನಡೆದರೆ, ಮೋಕ್ಷ ಸಿಗುತ್ತದೆ, ಎಂದು ಹೇಳುವ ಈ ಸಂದರ್ಭವನ್ನು ಹೀಗೆ ಅರ್ಥೈಸಬಹುದು. ಮಂದಿರ, ಮಸೀದಿ, ಚರ್ಚು ಎಂದು ಜಗಳವಾಡದೆ, ನಾವೆಲ್ಲಾ ದೇವರ ಹೆಸರಿನಲ್ಲಿ ಬೀದಿಗಿಳಿಯದೆ, ಎಲ್ಲರೂ ಐಕ್ಯತಾ ಮನೋಭಾವದಿಂದ ಬದುಕಬೇಕು, ಮೂವತ್ತಾರು ಕೋಟಿ ದೇವರುಗಳನ್ನು ಆರಾಧಿಸುವುದನ್ನು ತೊರೆದು, ದೇವರು ಒಬ್ಬನೇ ಇದ್ದಾನೆಂದು ನಿಷ್ಠೆಯಿಂದ ಬದುಕುವುದೇ ಮಾನವ ಜನ್ಮದ ಮೂಲ ಸಿದ್ಧಾಂತವಾಗಬೇಕು. ಈ ವಿಷಯ ಕುರಿತು ಪಾರ್ವತಿದೇವಿ + ಮಹಾದೇವರ ಪಾತ್ರಗಳ ಮಧ್ಯೆ ಸ್ವಾರಸ್ಯಕರವಾದ ಚರ್ಚೆಯೂ ನಡೆಯುತ್ತದೆ. ದೇವರು ಒಬ್ಬನೇ ಆದರೆ ಅವನಿಗೆ ಸಹಸ್ರನಾಮಗಳೇಕೆ ?

ಕತ್ತಲೆಗೆ ಜೊತೆ ಬೆಳಕೆಂಬಂತೆ, ನಮ್ಮ -ನಿಮ್ಮ ಜೊತೆ ಮೂಡಿದ ಆ ಲಿಂಗ ಮಹಾತ್ಮನಲ್ಲವೇ ?ಲಿಂಗ ಮರ್ಮದಿಂದಲೇ ಕರ್ಮ ಕೃತಿಗಳಲ್ಲವೇ ? ಒಂದು ಬೀಜ ಬಿತ್ತಿ ಸಸಿಯಾಗಿ ಮುಂದೆ ತೆನೆಯಾಗಿ, ಅದಕ್ಕೆ ಸಾವಿರಾರು ಧಾನ್ಯವಾಗುವ ಸೃಷ್ಟಿಯ ನಿಯಮ ಪ್ರಕಟವಾಯಿತಲ್ಲವೇ ? ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಈ ಪಂಚರತ್ನಗಳು ಜಗಭರಿತವಾಗಿ ಇದೆಲ್ಲವೂ ಸರ್ವರಲ್ಲಿ ಸೇರಿ ನಾನಾಕಾರವಾಗಿ ಕಂಡು, ಜ್ಞಾನದಿಂದ ತಿಳಿದು ನೋಡಲಾಗಿ ಎಲ್ಲಾ ಒಂದೇ ಎಂದಾಯಿತಲ್ಲವೇ ?

ಸೃಷ್ಟಿಯ ಹುಟ್ಟನ್ನು ಸಮಾಜಕ್ಕೆ ಪರಿಚಯಿಸುವುದು ಅತ್ಯದ್ಭುತವಾಗಿದೆ. ಒಂದೇ ಬೀಜದಿಂದ ತೆನೆ, ತೆನೆಯಿಂದ ರಾಶಿ ಹೇಗಾಯಿತೋ ಹಾಗೆಯೇ ಮಾನವನು, ಮಾನವರು ಬೆಳೆದದ್ದು ಆಗಿದೆ. ದೇವನೊಬ್ಬನೆ ಎನ್ನುವ ಮಾತಿನಲ್ಲಿ, ಮಾನವರೆಲ್ಲಾ ಒಂದೇ ಎನ್ನುವ ಅರ್ಥ ಅಡಗಿದೆ. "ದೇವನೊಬ್ಬ ನಾಮ ಹಲವು' ಎಂಬ ಸೂಕ್ಷ್ಮ ಆಧ್ಯಾತ್ಮಿಕ ತತ್ತ್ವ ವನ್ನು ಮನಗಂಡಿದ್ದ ಬಸವಾದಿ ಶರಣರು ದೇವರನ್ನು ಸಾಧಿಸುವ ಮಾರ್ಗಗಳೂ ಹಲವೆಂಬುದನ್ನು ತಿಳಿದಿದ್ದರು. ಸಹಜವಾಗಿ ತಮ್ಮ ಒಲವು ಭಕ್ತಿಮಾರ್ಗವನ್ನು ಅವಲಂಬಿಸಿತೆಂದು ಎಲ್ಲರೂ ಆ ಮಾರ್ಗವನ್ನೇ ಅನುಸರಿಸಬೇಕೆಂಬ ಛಲ ಅವರಿಗಿರಲಿಲ್ಲ. ವ್ಯಕ್ತಿ ತನ್ನ ಸಂಸ್ಕಾರ ಹಾಗೂ ಮನೋಧರ್ಮವನ್ನು ಅವಲಂಬಿಸಿ ಪ್ರಗತಿ ಪಥದಲ್ಲಿ ಅಡಿಯಿಡಬೇಕೆಂದು ಬಯಸಿದರು. ಈ ಸಾಧಕ ಸ್ಥಿತಿಯಲ್ಲಿ ತಮ್ಮ ಮಾರ್ಗದಿಂದ ಭಿನ್ನವಾದರೂ ಆತ್ಮೋನ್ನತಿಯ ಜಾಡನ್ನು ಬಿಡದಿರುವ ಪ್ರತಿಯೊಬ್ಬನೂ ಸಮಾನ ಧರ್ಮಿಯೆಂಬುದನ್ನು ಒಪ್ಪಿಕೊಳ್ಳುವ ಔದಾರ್ಯ ತೋರಿದರು. ಇಂತಹ ಸಮಾನ ಧರ್ಮಿಗಳು ಒಂದು ಕಡೆ

ಕಲೆತು, ವಿಚಾರವಿನಿಮಯಮಾಡಿ, ವಾದ-ಮಥನಕ್ಕೆ ತಮ್ಮ ತತ್ತ್ವವನ್ನು ಒಡ್ಡಿ ಸತ್ಯಾನ್ವೇಷಣೆಯನ್ನು ಮಾಡಬೇಕಾದ ಅವಶ್ಯಕತೆ ಬಹಳವಾಗಿತ್ತು.[೨೦] ಇದರ ಫಲವಾಗಿ ಜನಪದರು ಭಕ್ತಿಗೆ ಪ್ರಾಧಾನ್ಯತೆಯನ್ನು ನೀಡುವ ಕಲೆಯನ್ನು ಬೆಳೆಸಿದರು. ದೇವಲೋಕವನ್ನು ಭೂಮಿಗೆ ಇಳಿಸಿದರು. ಕೈಲಾಸ ಸಭೆಯನ್ನು ಇಲ್ಲಿಯೇ ನಡೆಸಿದರು. (ಕಲೆ ಮುಖಾಂತರ) ಕೈಲಾಸ ಸಭೆಯಲ್ಲಿ ಮಹಾದೇವ, ಬ್ರಹ್ಮದೇವ, ವಿಷ್ಣುದೇವರಾದ ಈ ತ್ರಿಮೂರ್ತಿಗಳು ಒಂದೆಡೆ ಸೇರಿ ಮಾನವನ ಜನ್ಮ ಹಾಗೂ ಶರೀರ ಸಂಸ್ಕೃತಿ, ಸೃಷ್ಟಿಯ ನಿಯಮ ಕುರಿತು ನಡೆಸುವ ಸಂಭಾಷಣೆಗೆ ಐಕ್ಯತಾ ಭಾವಕ್ಕೆ ಪ್ರೇರಣೆಯಾಗಿದೆ.

"ಜ್ಞಾನ ಶೂನ್ಯ ಮನುಜ, ಮನುಜನನ್ನು ಮುಟ್ಟಿದರೆ ಸೂತಕವಾಯಿತೆಂದು ಕೆಟ್ಟೆನೆಂಬದೆನ್ನುವ ಬುದ್ಧಿಹೀನ ಮನುಜ, ಶುದ್ಧ ಆತ್ಮವಿದ್ದಲ್ಲಿ ಮೇಲೆ ಮುಟ್ಟಿದರೆ ಆಗತಕ್ಕದ್ದೇನು? ಮನ ಶುದ್ಧವಿಲ್ಲದ ಆತ್ಮ ಯಾರನ್ನು ಮುಟ್ಟಿಸಿಕೊಳ್ಳದಿದ್ದರೂ ಶುದ್ಧ ಎಂದಿಗೂ ಆಗಲರಿಯನು. ಶರೀರ ಜನಿಸಿದ ಶೋಧ ಶೋಧಿಸಿದರೆ ಗುರುತಾಗಬಲ್ಲದು. ಶರೀರ ಸಂಸ್ಕೃತಿ"[೨೧] ಮುಟ್ಟಿನೊಳಗೆ ಹುಟ್ಟಿಬಂದ ಮೂರ್ಖ ಮನುಜ ಮುಟ್ಟಾದ ಮೂರು ದಿನಕ್ಕೆ ಮುಟ್ಟಿದರೆ ಗರ್ಭದಲ್ಲಿ ಹುಟ್ಟಿ ಇಂದ್ರಿಯಗಳು ನಾಟಿ, ಮೂವತ್ತು ದಿನಕ್ಕೆ ಮುಟ್ಟಿಗೆಯಾಗಿ ಮೂವತ್ತು ದಿನಕ್ಕೆ ಒಂದು ತಿಂಗಳಾಗಿ ಎರಡು ತಿಂಗಳಿಗೆ ಮೊಳಕೆಯಾಗಿ, ಮೂರು ತಿಂಗಳಿಗೆ ಅವಯವಗಳು ಚಿಗಿಯಲಾಗಿ ನಾಲ್ಕು ತಿಂಗಳಿಗೆ ಅಸ್ತಿ ರೋಮ, ಉಗುರುಗಳಾಗಿ, ಐದು ತಿಂಗಳಿಗೆ ಅವಯವಗಳು ಪೂರ್ಣವಾಗಿ, ಆರು ತಿಂಗಳಿಗೆ ಶುದ್ಧ ಚರ್ಮವಾಗಿ, ಏಳು ತಿಂಗಳಿಗೆ ಪಿಂಡ ರೂಪವಾಗಿ ಏಂಟು ತಿಗಳಿಗೆ ತಾಯಿಯ ಗರ್ಭದಲ್ಲಿ ಮಾಂಸ ಕುಂಡದಲ್ಲಿ ಮಲಮೂತ್ರ, ಮಜ್ಜನಾ, ಮಾಂಸ, ಹೊಲಸಿನ ಬಚ್ಚಲ ಕುಣಿ ಕುಂಡದಲ್ಲಿ ಬಿದ್ದು ಹೊರಳಾಡಿ, ತಿರುಗಿ ಈ ಸ್ಥಲಕ್ಕೆ ಬರಬಾರದೆಂದು ಗೋಳಾಡಿ ಒಂಬತ್ತು ತಿಂಗಳಿಗೆ ನವಮಾಸ ತುಂಬಿ ತಾಯಿಯ ಗರ್ಭದಿಂದ ಕಪಾಳಕ್ಕೆ ಕೈ ಹಚ್ಚಿ ಹೊರಬಿದ್ದು ಭೂಮಿಗೆ ಪತನವಾಗಿ ಶಿಶು ಎಂದೆನಿಸಿ ಮುಕ್ತಿ ಮಾರ್ಗಕ್ಕೆ ಲಿಂಗ ಬಿಟ್ಟು ಸದ್ಗತಿ ಇಲ್ಲ. - ಮಾನವರೆಲ್ಲ ಒಂದೇ ಎಂಬ ಭಾವನೆಯನ್ನು ಬೆಳೆಸಿಕೊಳ್ಳಬೇಕು. ಸೃಷ್ಟಿಯ ಸತ್ಯನಿತ್ಯತೆಯನ್ನು ಅರಿತುಕೊಳ್ಳಬೇಕು. ಸಾಮಾಜಿಕ ಜೀವನದಲ್ಲಿ ಎಲ್ಲರೂ ಒಂದಾಗಿ ಬದುಕಬೇಕು. ಶರಣರು ಕಂಡ ಸಮಾಜ ಜೀವನದಲ್ಲಿ ಎಲ್ಲರೂ ಒಂದಾಗಿ ಬದುಕಬೇಕು. ಶರಣರು ಕಂಡ ಸಮಾಜವಿಚಾರವೂ ಈ ಲಕ್ಷಣಗಳನ್ನೇ ಹೋಲುವುದಾಗಿತ್ತು. "ಸಾಮಾಜಿಕ ಅಂತರಂಗಗಳು ಸಡಿಲಾಗದಂತೆ ಅವು ಒಂದರ ಹತ್ತಿರ ಇನ್ನೊಂದು ಬಂದು ಸೇರಿಕೊಳ್ಳದಂತೆ ದ್ವಿಜರು ಬಿಗಿದ ಬಂಧನಗಳನ್ನು ಒಪ್ಪಿಕೊಳ್ಳಬಾರದೆಂಬ ವಿಧಿ ಬಸವಣ್ಣನದು ಮನೆಗೆ ಯಾರೇ ಬರಲಿ, ಅಪರಿಚಿತರೇ, ಇರಲಿ, 'ನೀವು ಯಾರು, ಯಾವ ಜಾತಿ ಎಂದು ಅವರನ್ನು ಪ್ರಶ್ನಿಸದೆ 'ಬಂದವರೆಲ್ಲರೂ ನಮ್ಮವರು' ಎಂಬ ಭಾವನೆಯನ್ನು ಶರಣರು ಬೆಳೆಸಿಕೊಳ್ಳಬೇಕೆಂಬ ಇಚ್ಛೆ ಅವನದಾಗಿದೆ."[೨೨]

"ಜನನ, ಋತುಚಕ್ರ, ಉಚ್ಚಿಷ್ಠ ಮತ್ತು ಮರಣಗಳ ಸಂದರ್ಭದಲ್ಲಿ ಉಂಟಾಗುವ ಸೂತಕ ಅಥವಾ ಮಾಲಿನ್ಯವನ್ನು ನಿಯಂತ್ರಿಸುವಲ್ಲಿ ಬ್ರಾಹ್ಮಣ ಸಂಸ್ಕಾರಗಳು ದಕ್ಷತೆಯನ್ನು ವಹಿಸಿವೆ."[೨೩] ಮುಟ್ಟುಬೇಡ, ಸೂತಕ, ಜಾತಕ ಫಲ ಅನೇಕ ಆಚರಣೆಗಳನ್ನು ಬ್ರಾಹ್ಮಣ ಜನಾಂಗದಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. "ಜನನ

ಮಾತ್ರದಿಂದ ಯಾರೂ ಉಚ್ಚ-ಕನಿಷ್ಠ ಎಂದೂ ನಿರ್ಧರಿಸಲಾಗದು ಹಾಗೂ ಗಂಡು - ಹೆಣ್ಣು ಎಂದು ಲಿಂಗಬೇಧವನ್ನು ಮಾಡಲಾಗದು; ಎಂಬುದು ಲಿಂಗಾಯತ ಧರ್ಮ ಸಿದ್ಧಾಂತವಾಗಿತ್ತು."[೨೪] ಶೈವ ಹಾಗೂ ವೈಷ್ಣವ ಧರ್ಮಗಳು ಏಕದೈವತಾವಾದವನ್ನು, ಅದರ ಜೊತೆಗೆ ಪರಮಾತ್ಮನ ಸರ್ವಶ್ರೇಷ್ಠತಾ ವಾದವನ್ನು ಬೆಳೆಸಿಕೊಂಡು ಬಂದಿದೆ. ಆತನನ್ನು ಶೈವರು ಪರಬ್ರಹ್ಮನೆಂದು, ವೈಷ್ಣವರು ವಿಷ್ಣುವೆಂದೂ, ಹೆಸರಿಟ್ಟು ಕರೆದಿರುವರು. ಅವನೊಬ್ಬ ಶ್ರೇಷ್ಠ ದೇವರೆಂದು ಪ್ರತಿಪಾದಿಸಿಕೊಂಡು ಬಂದಿರುವ ಅವರ ಪ್ರಮೇಯದಲ್ಲಿ ಅಪ್ರತ್ಯಕ್ಷವಾಗಿ ಬಹುದೈವತಾವಾದವು ಕಾಣಿಸಿಕೊಂಡಿದೆ.

ಶ್ರೇಷ್ಠ ಜ್ಞಾನದ ಬಲದಿಂದ ಲಿಂಗಾಯತರು ಲಿಂಗವನ್ನು ಸಾಂಕೇತಿಕವಾಗಿರಿಸಿಕೊಂಡು, ಒಡೆದುಹೋದ ಸಮಾಜವನ್ನು ಒಂದೇ ಸೂರಿನಡಿಯಲ್ಲಿ ತರಲು ಲಿಂಗ ತತ್ವಸಿದ್ಧಾಂತವನ್ನು ಪ್ರತಿಪಾದಿಸಿದರು.

ಐಕ್ಯತಾಭಾವ, ಏಕದೇವತಾ ಉಪಾಸನೆ, ಲಿಂಗನಿಷ್ಠೆಯನ್ನು ಕುರಿತಾದ ಚಿಂತನೆ, ನಂತರದಲ್ಲಿ ಲೋಕೋದ್ಧಾರ ವಿಷಯ, ಪ್ರಸ್ತಾಪ ಮಾಡಲಾಗಿದೆ. ಮಾನವ ದುರಾಶೆಗಳನ್ನು ತಿರಸ್ಕರಿಸಿ ಇಂದ್ರಿಯ ಭೋಗಾದಿಗಳಿಗೆ ಒಳಗಾಗದೆ ಬದುಕಬೇಕು. ಮನದ ಮಾಯೆ ಮರೆತವನೇ ಮನುಜನು. ಮದಾಂದನೇ ರಾಕ್ಷಸನು, ಈ ಎರಡರ ಬೇಧ ತಿಳಿದವನೇ ದೇವಾಂಶನು. ಮಾನವರಲ್ಲಿ ರಾಕ್ಷಸಗಣ, ಮನುಷ್ಯಗಣ, ದೇವಗಣಗಳೆಂದು ಮೂರು ವರ್ಗಗಳನ್ನಾಗಿ ವಿಂಗಡಿಸಿದ್ದಾರೆ. ನೀತಿ ತಿಳಿಯದವನೇ ರಾಕ್ಷಸ, ಮನದ ಮಾಯೆ ಮರೆತವನೇ ಮನುಷ್ಯ, ದಯೆ ಇದ್ದವನೇ ದೇವಾಂಶನು ಮಹಾಪುರುಷನು ಆಗಿದ್ದಾನೆ.

ಆಶಂ ಮಹಾಪಾಪಂ ಅದಕ್ಕಾಗಿ ಲಿಂಗದಲ್ಲಿ ಆಶೆ ಇಟ್ಟು, ಧರ್ಮದಲ್ಲಿ ಮನಸ್ಸಿಟ್ಟು, ಸತ್ಯದಲ್ಲಿ ನಿಷ್ಠೆ, ವೈರಾಗ್ಯದಲ್ಲಿ ಶೌರ್ಯತೊಟ್ಟು, ಸುಳ್ಳು ಕಟ್ಟಿಟ್ಟು, ಶಾಂತಿ ಬಿಚ್ಚಿಟ್ಟು, ಸಿಟ್ಟು ಸುಟ್ಟು, ಮಾನವನಾಗಿ ಬದುಕಬೇಕು. ಮನದ ಮಾಯೆಯು ಅಜ್ಞಾನ ಕತ್ತಲೆಯು ಕಳೆದು, ಜ್ಞಾನದ ಬೆಳಕಿನಲ್ಲಿ ಲಿಂಗಜ್ಯೋತಿ ಕಂಡುಹಿಡಿದು ಮಾಯಿಗೆ ಮನಗೊಡದೆ ಅಸತ್ಯಕ್ಕೆ ಅನುಸರಿಸದೇ ಕಾಮ ಕ್ರೋದಾದಿಗಳಿಗೆ ಲಕ್ಷಿಸದೇ ನೀನು ಬೇಧವಿಲ್ಲದೇ ಬಯಲೊಳು ನಿರ್ಭಯರಾಗಿ ದಿವ್ಯರೂಪದಿಂದ ಸಮಾಜ ಮುಖಿಯಾಗಿ ಬದುಕು ಎಂಬ ಸಂದೇಶ ನೀಡಲಾಗಿದೆ.

ಭಕ್ತಿಯ ತನ್ಮಯತೆಯನ್ನು ತುಂಬಿ, ಅನೇಕ ಮಹಾಪುರುಷರ ಸಾಧಕರ ಸಾಧನೆಯನ್ನು ವಿವರಿಸಲಾಗಿದೆ. ಅಕ್ಕಮಹಾದೇವಿ, ಹೇಮರಡ್ಡಿ ಮಲ್ಲಮ್ಮ, ವಾಲ್ಮೀಕಿ, ಇವರುಗಳ ಜೀವನ ವೃತ್ತಾಂತವನ್ನು ಸೋದಾಹರಣಾಗಿ ಸಾದರಪಡಿಸಲಾಗಿದೆ. ಈ ದೃಶ್ಯಾವಳಿ ಸಂದರ್ಭದಲ್ಲಿ ನಾರದರ ಆಗಮನವಾಗುತ್ತದೆ. ಔಪಚಾರಿಕ ಸಂಭಾಷಣೆ ನಡೆಯುತ್ತದೆ. ತದನಂತರದಲ್ಲಿ ಮಾನವನಾರು? ನಾನು ನೀನು ಎಂಬ ಭೇದವ ಎಣಿಸದೆ ಎಲ್ಲರೂ ಒಂದಾಗಿ ಬಾಳಿ ಬದುಕಿರಿ, ದೇವನೊಬ್ಬನೇ ಇರುತ್ತಾನೆ. ಅವನನ್ನೇ ಪೂಜಿಸೋಣ, ಭಜಿಸೋಣ ಎಂಬ ಭಾವದೆಡೆಗೆ ಪ್ರೇಕ್ಷಕರನ್ನು ಸಮ್ಮೋಹನಗೊಳಿಸುತ್ತದೆ.

ಏಕದೈವೋಪಾಸನೆಯ ಬೋಧನೆ ಮಾನವ ಸಮಾಜದ ಸ್ವಸ್ಥ ಬದುಕಿಗೆ ಅವಶ್ಯಕವಾಗಿದೆ. ಬಹುದೈವೀವೋಪಾಸನೆಯಿಂದ ಆಗತಕ್ಕಂತ ಅನಾಹುತಗಳು ಅನೇಕವಾಗಿವೆ. ನಾನು ಹಿಂದು, ಮುಸ್ಲಿಂ, ಕ್ರೈಸ್ತ. ಸಿಖ್, ಜೈನ ಎಂದು ಇಂದಿನ ಜಗತ್ತಿನಲ್ಲಿ ಭೇದಭಾವ ಎಂತಹ ಪ್ರಳಯ ಹುಟ್ಟಿಸುತ್ತಿದೆ. ಮೂಲ ಭೂತವಾದಿಗಳು ದೇವರ ಹೆಸರಿನಲ್ಲಿ ಮಾನವ ಕುಲವನನ್ನೇ ನಾಶಮಾಡಬಹುದೇನೋ ಎಂಬ ಆತಂಕಗಳಿವೆ. ಈ ಆತಂಕ ನಿವಾರಣೆಗಾಗಿ ವಿಶ್ವಸಂಸ್ಥೆಯ ಆಶಯವನ್ನು ಈಡೇರಿಸುವಲ್ಲಿ ನಮ್ಮ ಕಲೆಗಳು ಸದ್ವಿಚಾರದ ನಡೆಗೆ ನಮ್ಮನ್ನು ಕರೆದುಕೊಂಡು ಹೋಗುತ್ತವೆ. ಭಯೋತ್ಪಾದನೆ, ಕೊಲೆ, ಸುಲಿಗೆ, ರಾಜಕೀಯಗಳು ಧರ್ಮ-ದೇವರುಗಳು ಹೆಸರಿನಲ್ಲಿ ನಡೆಯುತ್ತಿರುವುದನ್ನು ತಪ್ಪಿಸಲು ಹಾಗೂ ಒಬ್ಬರನ್ನೊಬ್ಬರು ಕಂಡರೆ ಸಂಶಯ ಪಡುವ ಪ್ರವೃತ್ತಿಯನ್ನು ದೂರಮಾಡಲು ಸೌಹಾರ್ದ ಬದುಕಿಗೆ ಹಳ್ಳಿ ಹಳ್ಳಿಯಲ್ಲಿ, ನಗರ-ನಗರಗಳಲ್ಲಿ ರಂಗಸಜ್ಜಿಕೆ, ಕಲೆಗಳು ಹೆಚ್ಚೆಚ್ಚು ಪ್ರದರ್ಶಗೊಳ್ಳುವಂತಾಗಬೇಕು.

ಜಗತ್ತಿನದಲ್ಲಿ ಮೂಲಭೂತವಾದಿಗಳು ಹುಟ್ಟಿಸುವ ತಲ್ಲಣ - ತಳಮಳಗಳಿಂದ ಹೊರಬರಲು, ನಾಡಾಡಿಗಳು ಹುಟ್ಟಿಸಿದ ಸಾಹಿತ್ಯ, ಕಲೆ, ಸಂಸ್ಕೃತಿ, ಜಗತ್ತಿನೆಲ್ಲೆಡೆ ಪ್ರಸರಣಗೊಳ್ಳುವಂತಾಗಬೇಕು. ಸಹಬಾಳ್ವೆಯ ನೀತಿಬೋಧೆ ಜನಪದರ ಕಲೆಗಳಲ್ಲಿ ಅಭಿವ್ಯಕ್ತವಾದಷ್ಟು ಇನ್ನಾವ ಕಲೆಗಳಲ್ಲಿ ಬಿಂಬಿತವಾಗಿರಲಿಕ್ಕಿಲ್ಲ.

ಇಂದು ಭಾರತೀಯರು ಹೆಚ್ಚೆಚ್ಚು ಮಾಂಸಾಹಾರಿಗಳಾಗಿ, ಸೆರೆ, ಸಿಂದಿ, ಗಾಂಜಾ, ಅಫೀಮು ಸೇವನೆ ಮಾಡುತ್ತಿದ್ದಾರೆ. ಆಚಾರ ವಿಚಾರಗಳಿಂದ ದೂರಾಗಿ ನೀತಿಯನ್ನು ಮರೆಯುತ್ತಿದ್ದಾರೆ. ಎಲ್ಲೆಂದರಲ್ಲಿ ಢಾಂಬಿಕತೆ ಹೆಚ್ಚಾಗುತ್ತಿದೆ. ಓಣಿಗೊಬ್ಬ ಧರ್ಮಗುರು ಹುಟ್ಟಿಕೊಂಡು ಕಾಷಾಯ ವಸ್ತ್ರಧಾರಿಗಳಾಗಿ ಜನರನ್ನು (ಭಕ್ತರನ್ನು) ಮೋಸಗೊಳಿಸುತ್ತಿದ್ದಾರೆ. ಧರ್ಮಗುರು ಎನ್ನಿಸಿಕೊಂಡವನು ನೈತಿಕತೆಯನ್ನು ಮರೆಯುತ್ತಿದ್ದಾನೆ. ಜಂಗಮ (ಭಕ್ತಸಮಾಜ)ವನ್ನು ಮರೆತು ಭಕ್ತ ಸತಿಯರನೋಲೈಸುವ ಭವಬಂಡರಾಗಿ ಮೆರೆಯುತ್ತಿದ್ದಾರೆ. ಇವರುಗಳು ಇಂದ್ರಿಯ ಲೋಲುಪತೆಗೆ ಒಳಗಾಗಿ ಐಷಾರಾಮಿ ಬದುಕನ್ನು ಬಯಸಿ ಸ್ವಾರ್ಥಿಗಳಾಗುತ್ತಿರುವದು ವಿಷಾದ ಸಂಗತಿಯಾಗಿದೆ.

ಕಲ್ಯಾಣ ಶರಣರ ಬದುಕಿದ ಪರಿಯಲ್ಲಿ ಬಾಳಿ ನಮ್ಮ ಬಾಳು ಬೆಳಗಬೇಕಾಗಿದೆ. ಜಗಜ್ಯೋತಿ ಬಸವಾದಿಯಾಗಿ ಕಲ್ಯಾಣ ಪುರದಿ ಅನೇಕ ಪವಾಡಗಳು ತೋರಿ ಕಲ್ಯಾಣ ಕ್ರಾಂತಿ ಹುಟ್ಟಿಸಿ, ಸದ್ಬೋಧ ಮಹದಾಮೃತ ಸವಿದೋರಿ ಕಪ್ಪಡಿ ಸಂಗಮನೊಳು ಲಿಂಗಡಕವಾದನು. "ಬಸವಣ್ಣನು ಯೌವ್ವನದಲ್ಲಿ ತಾನು ಓದಿದ, ಪೂಜಿಸಿದ, ಧ್ಯಾನಿಸಿದ ಪುಣ್ಯ ಭೂಮಿ ಸಂಗಮವನ್ನು ಹುಡುಕಿಕೊಂಡು ಅತ್ತ ಹೊರಟುಹೋದನು. "ಲೋಕದ ರಂಗಮಂಟಪದ ಮೇಲೆ ನಡೆದ ನಾಟಕವನ್ನು ಮುಗಿಸು, ದೇವರೆ ನಾನು ಬಹಳವಾಗಿ ನೊಂದುಕೊಂಡಿದ್ದೇನೆ, ಬರಮಾಡಿಕೋ" ಎಂದೆನ್ನುತ್ತ ಕೂಡಲಸಂಗಮವನ್ನು ಸೇರಿ ಅಲ್ಲಿಯೇ ತನ್ನ ಬದುಕಿನ ಕೊನೆಯ ದಿನಗಳನ್ನು ಕಳೆದು ಲಿಂಗೈಕ್ಯನಾದನು."[೨೮]

ಭಕ್ತರೂ ನೀತಿವಂತರಾಗಿ ಲೋಕೋದ್ಧಾರಣೆಯಾಗಬೇಕು. ಸ್ತ್ರೀ-ಪುರುಷರು ಶ್ರೇಷ್ಠರಾಗಿ ಬದುಕಬೇಕು. ಸಮಾಜಕ್ಕೆ ಕಂಟಕರಾಗಿ ಬದುಕಿದರೆ ಮಾನವ ಜನ್ಮವೇ ಬಾರದು. ಭಾಷಾ ಭ್ರಷ್ಟಂ, ಪತಿಭ್ರಷ್ಟಂ, ಸದ್ಗತಿನಷ್ಟಂ ಎಂಬಂತೆ ಎಂದೆಂದಿಗೂ ಇವರಿಗೆ ಸದ್ಗತಿ ಸಿಗದು. ಪುರುಷನೂ ಪರಸ್ತ್ರೀಯರನ್ನು ಕೂಡಿದರೆ ಅವನಿಗೆ ನರಕವೇ ಪ್ರಾಪ್ತಿಯಾಗುತ್ತದೆ.

ಜಗತ್ತಿನಲ್ಲಿರುವ ಪಾಪ-ಪುಣ್ಯ, ಸುಖ-ದುಃಖ ಇವುಗಳಿಗೆ ಸಿಗುವ ಫಲ ಹಾಗೂ ಸೃಷ್ಟಿ, ಮಾನವ, ದೇವರು, ಭಕ್ತಿ, ಸಾಧಕರು, ಈ ಕುರಿತು ಸೋದಾಹರಣವಾಗಿ ಚರ್ಚಿಸಲಾಗಿದೆ.

ಕಥೆಯ ಮುಂದಿನ ಭಾಗದಲ್ಲಿ ಗೊಲ್ಲಾಳನ ಜನನವಾಗುತ್ತದೆ. ಕನ್ನಡನಾಡು ಧವಳಾರಪೂರದಲ್ಲಿ ಕಾಲ್ಕೂಟ ಹಾಲ್ಗುರುಬ ಮನೆತನದ ಬಲ್ಲುಗ ದುಗುಳಾದೇವಿ ದಂಪತಿಗಳಿಗೆ ಶಿವಸ್ವರೂಪಿಯಾದ ಮಗು ಜನಿಸುತ್ತದೆ. "ಧವಾಳರ ಪುರದಲ್ಲಿ ಕಾಲ್ಕೂಟ ಹಾಲ್ಗೂರುಬ ಮನೆತನಲ್ಲಿ ಬಲ್ಲುಗ ದುಗುಳಾದೇವಿಯರೆಂಬ ಇಬ್ಬರು ದಂಪತಿಗಳಿರುವರು"[೨೧] ಗೊಲ್ಲಾಳನ ತಂದೆಯ ಹೆಸರನ್ನು ಕಾಟಕೂಟನೆಂದು ಗುರುತಿಸಲಾಗಿದೆ. "ಗೊಲ್ಲಗಿರಿ ಎಂಬ ಪುರದಲ್ಲಿ ಕಾಟಕೂಟನೆಂಬ ಗೊಲ್ಲನಿರುವನು. ಅವನ ಮಗ ಗೊಲ್ಲಾಳಯ್ಯನು "[೨೨] ಬಲ್ಲುಗನ ತಂದೆಯ ಹೆಸರನ್ನು ಕಾಟಕೂಟನೆಂದು ಗುರುತಿಸಬಹುದಾಗಿದೆ. ನಾಟಕದಲ್ಲಿ ಪ್ರಸ್ತಾಪಿಸಿದಂತೆ ಕಾಲ್ಕೂಟ-ಕಾಟಕೂಟ- ಕಾಟಕೋಟ ಎಂದಾಗಿರಬಹುದು. ಕಾಲ್ಕೂಟ ಹಾಲ್ಗುರುಬ ಮನೆತನದ ಬಲ್ಲುಗನೆಂದರೆ - ಕಾಟಕೂಟನ ಮಗ ಬಲ್ಲುಗನೆಂದು ಊಹಿಸಬಹುದು. ಗೊಲ್ಲಾಳನ ತಂದೆ ಬಲ್ಲುಗ ತನ್ನ ತಂದೆಯ ಹೆಸರನ್ನು ತನ್ನ ಮಗನಿಗೆ ಕಾಟಕೂಟನೆಂದು ನಾಮಾಂಕಿತ ಮಾಡಿರಬಹುದು. ತಮ್ಮ ತಂದೆ ತಾಯಿಯರ ಹೆಸರನ್ನು ಮಕ್ಕಳಿಗೆ ಇಡುವ ಪದ್ಧತಿ ಈಗಲೂ ಇದೆ. ಗೊಲ್ಲಾಳ ಶಬ್ದದ ಅರ್ಥ ಕುರಿಗಾಹಿ, ದನಗಾಹಿ ಎಂಬುದಾಗಿದೆ. ಈತನು ಕುರಿಕಾಯುತ್ತಿರುವುದರಿಂದ ಗೊಲ್ಲಾಳನೆಂಬ ಹೆಸರು ಬಂದಿರಬಹುದು. ಗೊಲ್ಲಾಳನು ಭಕ್ತಿಯ ತಲ್ಲೀನತೆಯಲ್ಲಿ ಲಿಂಗವನ್ನು ತಿರಸ್ಕರಿಸಿದ ತಂದೆಯನ್ನು ಕೊಂದದ್ದಕ್ಕಾಗಿ ಗೊಲ್ಲಾಳ, ವೀರಗೊಲ್ಲಾಳನೆಂದು ಪ್ರಖ್ಯಾತಿ ಪಡೆದಿರಬಹುದು. ಹಿರಿಯರ ಹೆಸರನ್ನು ತಮ್ಮ ಮಕ್ಕಳಿಗೆ ನಾಮಕರಣ ಮಾಡುವ ಪದ್ಧತಿಯಿಂದ ಕಾಟಕೂಟನೆಂದು, ವೃತ್ತಿಯಿಂದ ಗೊಲ್ಲಾಳನೆಂದು, ಗುಣಸ್ವಭಾವದಿಂದ (ಅನ್ವರ್ಥಕನಾಮ) ವೀರಗೊಲ್ಲಾಳನೆಂದು ಹೆಸರು ಪಡೆದಿರಬಹುದಾಗಿದೆ. ಈಗ ಲಭ್ಯವಿರುವ ಮಾಹಿತಿಯನ್ನು ಆಧರಿಸಿ ಗೊಲ್ಲಾಳನ ಮನೆತನದ ಚರಿತ್ರೆಯನ್ನು ಹೀಗೆ ಗುರುತಿಸಬಹುದು.

ಊರು ಧವಳಾರ (ವಿಜಾಪೂರ ಜಿಲ್ಲೆ, ಸಿಂದಗಿ ತಾಲೂಕ)

ಹಾಲ್ಗೂರುಬ (ಜನಾಂಗ)

ಕಾಟಕೂಟ (ಬಲ್ಲುಗನ ತಂದೆ) (ಗೊಲ್ಲಾಳನ ಅಜ್ಜ)

ಬಲ್ಲುಗ + ದುಗಳಾದೇವಿ (ದಂಪತಿಗಳು)

ಕಾಟಕೂಟ (ಬಲ್ಲುಗ+ ದುಗುಳಾದೇವಿಯರ ಪುತ್ರ)

ಗೊಲ್ಲಾಳ (ವೃತ್ತಿಯಿಂದ ಪಡೆದ ಹೆಸರು)

ವೀರಗೊಲ್ಲಾಳ (ಲಿಂಗನಿಷ್ಠೆಯಲ್ಲಿದ್ದ ಗೊಲ್ಲಾಳನಿಗೆ ತಂದೆ ಬಲ್ಲುಗ ಲಿಂಗವನ್ನು, ಲಿಂಗಭಕ್ತಿಯನ್ನು ಅವಮಾನಿಸಿದಾಗ ಬಲ್ಲುಗನನ್ನು ಕೊಂದದ್ದಕ್ಕಾಗಿ ಪಡೆದ ಹೆಸರು)

**ಗೊಲ್ಲಾಳೇಶ್ವರ** - (ಲಿಂಗನಿಷ್ಠೆಯನ್ನು ಗೊಲ್ಲಾಳನು ಕುರಿಹಿಕ್ಕೆಯಲ್ಲಿ ತೋರಿಸಿದ್ದಕ್ಕಾಗಿ ಹಾಗೂ ಗಣಪದವಿಯನ್ನು ಪಡೆದುದಕ್ಕಾಗಿ ಗೊಲ್ಲಾಳ+ಈಶ್ವರ)

ಗೊಲ್ಲಾಳನ ಜನನದ ಕಾಲ ಯಾವುದೆಂಬುದನ್ನು ನಿರ್ಧರಿಸಲು ಯಾವ ಪುರಾವೆಗಳನ್ನು ನೀಡಿಲ್ಲ. ಆದರೂ ಸೋಮವಾರ ಸೂರ್ಯೋದಯ ಸಮಯದಲ್ಲಿ ಹುಟ್ಟಿದ್ದಾನೆಂದು ಗುರುತಿಸಿದ್ದಾರೆ. ಆದ್ದರಿಂದ ಗೊಲ್ಲಾಳನ ಜೀವಿತಾವಧಿಯನ್ನು ನಿರ್ಧರಿಸುವುದು ಇಲ್ಲಿ ಕಷ್ಟಸಾಧ್ಯವಾಗಿದೆ. ಗೊಲ್ಲಾಳನ ಬಾಲ್ಯ ಜೀವನ ಕುರಿತು ವಿವರಣೆ ನೀಡಲಾಗಿದೆ. ತಾಯಿಯ ಮಮತೆಯಲ್ಲಿ ಮುದ್ದಾಗಿ ಬೆಳೆಯುತ್ತಾನೆ. ತಾಯಿಯಿಂದ ಆಧ್ಯಾತ್ಮ ಅನುಭವವನ್ನು ಪಡೆಯುತ್ತಾನೆ. "ತನು ಶೋಧಿಸಿದವನೇ ಸದ್ಗುಣಿ, ತನ್ನ ತಾನೇ ತಿಳಿದವನೇ ದೇವಮಣಿ, ಸತ್ಯದಿಂದ ನಡೆದವನೆ ಸುಗುಣಿ ತನ್ನಂತೆ ಪರರ ಜೀವನವೆಂದವನೇ ಪುಣ್ಯಪ್ರಾಣಿ"[೨೮] ಅಮೂಲ್ಯವಾದ ಸದ್ಬೋಧದಲ್ಲಿ ಮಗನನ್ನು ಬೆಳೆಸುತ್ತಾಳೆ.

ಜ್ಞಾನಾಮೃತವನ್ನು ಪಡೆದು ಕಾಯಕ ಸಿದ್ಧಾಂತವನ್ನು ಅರಿತ ಮೇಲೆ ಮನಸ್ಸು ಕಾಯಕಕ್ಕಾಗಿ ಹಾತೊರೆಯುತ್ತದೆ. ಶರಣರ ಕಾಯಕ ತತ್ವವು ಚರ್ಚಿತವಾಗಿದೆ. ಗೊಲ್ಲಾಳನು ಕುರಿಕಾಯಲು ಪ್ರಾರಂಭಿಸುತ್ತಾನೆ. ತಂದೆಯು ಕಷ್ಟಪಡುವುದನ್ನು ತಪ್ಪಿಸುತ್ತಾನೆ. ಕಾಯಕನಿರತನಾಗಿ ಜೀವನವನ್ನು ಸಾಗಿಸುತ್ತಿರುತ್ತಾನೆ.

"ಮುಸ್ಲಿಮರಿಗೆ ಮಕ್ಕಾ ಮದಿನಾ, ಸಿಕ್ಕರಿಗೆ ಅಮೃತಸರ, ಲಿಂಗಾಯತರಿಗೆ ಭಾರತದಲ್ಲಿ ಇಪ್ಪತ್ತೊಂದು ಜ್ಯೋತಿರ್ಲಿಂಗಗಳು ಪೂಜಾಸ್ಥಳಗಳು ಅದರಲ್ಲಿ ಶ್ರೀಶೈಲ ಲಿಂಗವೂ ಒಂದಾಗಿದೆ." ಶ್ರೀಶೈಲದಲ್ಲಿ ಪ್ರತಿವರ್ಷ ಎರಡು ಸಲ, ಶಿವರಾತ್ರಿ ಹಾಗೂ ಯುಗಾದಿಯಂದು, ಜಾತ್ರೆ ನೆರವೇರುತ್ತದೆ. ದೇಶದ ನಾನಾ ಭಾಗಗಳಿಂದ ಭಕ್ತಾದಿಗಳು ಜಾತ್ರೆಗೆ ಬರುತ್ತಾರೆ. ಕರ್ನಾಟಕದಿಂದಲೂ ಲಕ್ಷಾಂತರ ಭಕ್ತಾದಿಗಳು ಯುಗಾದಿಯಂದು ಸೇರುವರು. ದೇವರ ದರ್ಶನಕ್ಕೆ ಕಾಲ್ನಡಿಗೆಯಿಂದ ಬರುವರು. ಈ ಸಂದರ್ಭದಲ್ಲಿ ಕಂಬಿ (ಪರಿಶೆ) ತೆಗೆದುಕೊಂಡು ಹೋಗುವ ಸಂಪ್ರದಾಯವಿದೆ. ಹೋಗಿ-ಮರಳಿ ಬರುವುದಕ್ಕೆ ಭಕ್ತರಿಗೆ ಒಂದು ತಿಂಗಳ ಸಮಯ ಬೇಕಾಗುತ್ತದೆ. ಯಾತ್ರಾ ಸಂದರ್ಭದಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ್ನು ಕುರಿತು, ಶ್ರೀಶೈಲ ಚರಿತ್ರೆ ಕುರಿತು ಹಾಡುಗಳನ್ನು ಹಾಡುವರು. ಭಕ್ತರು ಭಕ್ತಿ. ತನ್ಮಯತೆಯಲ್ಲಿ, ಆತ್ಮದರ್ಶನದ ಹಂಬಲದಲ್ಲಿ ದಾರಿ ತುಳಿಯುತ್ತಾರೆ.

ಪವಿತ್ರ ಸ್ಥಳಗಳಿಗೆ ಈ ಯಾತ್ರಾ ಹೋಗುವ ಸಂಪ್ರದಾಯವನ್ನು ವಿಶ್ಲೇಷಣೆ ಮಾಡಿದಾಗ ಕಂಡುಬರುವ ಸಂಗತಿಗಳೇನೆಂದರೆ ಈ ಯಾತ್ರೆಯಲ್ಲಿ ಎಲ್ಲ ತೆರನಾದ ಜನಾಂಗದವರು ಇರುತ್ತಾರೆ. ಒಟ್ಟೊಟ್ಟಿಗೆ ನಡೆಯುತ್ತಾರೆ. ಒಟ್ಟೊಟ್ಟಿಗೆ ತಿನ್ನುತ್ತಾರೆ, ಕುಡಿಯುತ್ತಾರೆ, ಮಲಗುತ್ತಾರೆ. ನಿರ್ಬಯಲಾದ ಬಯಲಿನಲ್ಲಿ ಆಕಾಶವನ್ನೆ ಹೊದಿಕೆಯನ್ನಾಗಿ ಮಾಡಿಕೊಳ್ಳುತ್ತಾರೆ. ಭೂಮಿಯನ್ನು ಹಾಸಿಗೆಯನ್ನಾಗಿ ಮಾಡಿಕೊಳ್ಳುತ್ತಾರೆ. ಇದರಿಂದ ನಾವೆಲ್ಲ ಒಂದೇ, ಮಾನವಕುಲದಲ್ಲಿ ಮೇಲು-ಕೀಳು ಎನ್ನುವುದು ಇಲ್ಲ. ನಾವು ಉಣ್ಣುವ - ಕುಡಿಯುವ,

ಮಲಗಿಕೊಳ್ಳುವ ಭೂಮಿ, ಎಲ್ಲವೂ ಒಂದೇ ಆಗಿರುವಾಗ ನಾವೇಕೆ ಆ ಜಾತಿ, ಈ ಜಾತಿ, ನಾ ಹೆಚ್ಚು, ನೀ ಹೆಚ್ಚು ಎಂದು ಹೊಡೆದಾಡಬೇಕು. ಪ್ರಕೃತಿಯಂತೆ ಈ ಪ್ರಕೃತಿ (ಕಾಯ) ಎಂಬ ಭಾವ ಅವರಲ್ಲಿ ಮೂಡುತ್ತದೆ. ಈ ಯಾತ್ರೆಯಿಂದ ಸಹಬಾಳ್ವೆಯ ಕಲ್ಪನೆ, ಅನುಭವ ಅರಿವಿಗೆ ಬರುತ್ತದೆ. ಇಂತಹ ಒಂದು ಯಾತ್ರೆ ಶ್ರೀಶೈಲಕ್ಕೆ ಹೊರಟಿರುತ್ತದೆ.

ಭಕ್ತಾದಿಗಳು ಪರಿಶೆಯನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ, ಮಲ್ಲಯ್ಯ, ಮಲ್ಲಯ್ಯಾ ಶ್ರೀಗಿರಿ ಮಲ್ಲಯ್ಯನ ನೋಡಲು ಬನ್ನಿ, ಎಲ್ಲಾ ದೇವರಿಗೆ ಒಡೆಯ ಬಲ್ಲಿದನು ಚನ್ನಮಲ್ಲ, ಅನ್ನದಾನಿ ಬಹುಳೇ ಮಲ್ಲ ಚಿನ್ನದ ಶುಚಿಚನ್ನಮಲ್ಲ, ಎಲ್ಲಿ ನೋಡಿದರೂ ಹಾನಲ್ಲ (=ಇದ್ದಾನಲ್ಲ) ನಂಬಿದ ಭಕ್ತರಿಗ್ಹಾನಲ್ಲ. ಈ ರೀತಿ ಮಲ್ಲಿಕಾರ್ಜುನನನ್ನು ಹಾಡಿ ಹೊಗಳುತ್ತಾ ನಡೆಯುತ್ತಿರುತ್ತಾರೆ.

ಕುರಿಗಾಹಿ ಗೊಲ್ಲಾಳ ಕುರಿಗಳನ್ನು ಕಾಯುತ್ತಾ ಇರುವೆಡೆ ಈ ಕಾವಡಿಯ ಸಮೇತ ಬರುವ ಜನಜಾತ್ರೆಯನ್ನು ನೋಡುತ್ತಾನೆ. ಆಶ್ಚರ್ಯಚಕಿತನಾಗಿ, ತದೇಕಚಿತ್ತನಾಗಿ, ಏನಿದು ಇವರೆಲ್ಲರೂ ಹೀಗೇಕೆ ಕೂಗುತ್ತಾರೆ ಏನಾಗಿದೆ ಇವರಿಗೆಂದು ಹೋಗುವವರನ್ನು ತಡೆಗಟ್ಟಲು ಪ್ರಯತ್ನಿಸುತ್ತಾನೆ. ನಿಮಗಾದ ಕಷ್ಟ-ಸಂಕಷ್ಟಗಳೇನು? ಎಂದು ಪ್ರಶ್ನಿಸುತ್ತಾನೆ. ಕಾವಡಿಯನ್ನು ಹೊತ್ತ 'ನಿಂಗಯ್ಯ' ಎಂಬುವನು ಹುಚ್ಚಾ ಈಗ ಹೇಳಲು ಸಮಯವಿಲ್ಲ ದಾರಿಯನ್ನು ಬಿಡು ಅಡ್ಡಗಟ್ಟಬೇಡವೆನ್ನುತ್ತಾನೆ. ಈ ಮಾತಿಗೂ ಮಣಿಯದೆ ನಂದಯ್ಯನನ್ನು ಬಿಡದೆ ಇರುವಾಗ, ನಂದಯ್ಯ ಉಪಾಯ (ಹಂಚಿಕೆ) ಮಾಡಿ ಹಣ ನೀಡಿದರೆ ಮಾತ್ರ ನಮ್ಮ ಸಮಾಚಾರವನ್ನು ತಿಳಿಸುತ್ತೇವೆ ಎನ್ನುವನು. ಆಗ ಗೊಲ್ಲಾಳನು ನಿಮಗೆ ಬೇಕಾದಷ್ಟು ಹಣ, ದ್ರವ್ಯ, ದಾನ ಕೊಡುತ್ತೇನೆ. ಈಗಲಾದರೂ ಹೇಳಿ ಎನ್ನುತ್ತಾನೆ.

ಆಗ ನಂದಯ್ಯನವರು ಈ ಕೂಡಿದ ಜನಸಮೂಹ ಶ್ರೀಶೈಲ ಮಲ್ಲಿಕಾರ್ಜುನನ ಯಾತ್ರೆಗೆ ಹೋಗುತ್ತಿದ್ದಾರೆ. ಶ್ರೀಶೈಲದಲ್ಲಿ ಲಿಂಗದರ್ಶನ ಮಾಡಿಕೊಳ್ಳುತ್ತಾರೆ. ಅವರಿಗೆ ಯಾವ ಸಂಕಟವೂ ಬರುವುದಿಲ್ಲ. ಆನಂದದಿಂದ ಕೂಗಾಟ, ಚೀರಾಟ. ಜೈ ಜೈಕಾರವನ್ನು ಉಗ್ಗಡಿಸುತ್ತಾ ಶಿವನ ಆತ್ಮಲಿಂಗ ದರ್ಶನಕ್ಕಾಗಿ ಹೋರಟಿದ್ದೇವೆ. ಆಗ ಗೊಲ್ಲಾಳನು 'ಈ ಯಾತ್ರೆ ಮಾಡಿದರೆ ಏನಾಗುವದು'? ಎಂದು ಪ್ರಶ್ನಿಸುತ್ತಾನೆ. ಆಗ ನಂದಯ್ಯ ಮಾಡಿದ ಪಾಪ ಪರಿಹಾರಕ್ಕಾಗಿ, ಸುಖ-ಸೌಖ್ಯ ಪಡೆಯುವುದಕ್ಕಾಗಿ, ಲಿಂಗದರ್ಶನಕ್ಕೆ ಹೋಗುತ್ತಿದ್ದೇವೆ ಎಂದು ಹೇಳುತ್ತಾನೆ. ಆಗ ಮತ್ತೆ ಗೊಲ್ಲಾಳನು ಆ ಶ್ರೀಶೈಲ ಗಿರಿಯಲ್ಲಿ ಮತ್ತೆ ಯಾವ ಮಹತ್ವದ ಸ್ಥಳವುಂಟು ಹೇಳಿರೆಂದು ಕೇಳಿಕೊಳ್ಳುತ್ತಾನೆ. ನಂದಯ್ಯನು ಹೇಳಿದ ಹಾಗೆ ಶ್ರೀಶೈಲಕ್ಕೆ ಕಾವಡಿಯ ಯಾತ್ರೆ ಹೋಗುವ ಸಂದರ್ಭದಲ್ಲಿ ಕೈಲಾಸ ಬಾಗಿಲ, ವೀರಭದ್ರ, ಭೀಮನಕೊಳ್ಳ, ಪಾತಾಳಗಂಗೆ, ಅಡಕೇಶ್ವರ, ಮಹಾನಂದಿ, ಗಣೇಶ್ವರ, ಮಲ್ಲಮ್ಮ, ಬೌರಮ್ಮ, ಅಕ್ಕಮಹಾದೇವಿ, ಬಾಗಿಲು ವೀರಣ್ಣ, ಶಿವಶರಣೆಯರ ಐಕ್ಯಸ್ಥಳಗಳುಂಟು ಎಂದು ಹೇಳುತ್ತಾನೆ.

ಇದನ್ನೆಲ್ಲಾ ಗೊಲ್ಲಾಳ ತದೇಕಚಿತ್ತದಿಂದ ಕೇಳಿದನಂತರ ಮತ್ತೆ ನಂದಯ್ಯನ ಮುಂದೆ ತನ್ನ ಬೇಡಿಕೆಯನ್ನು ತಿಳಿಸುತ್ತಾನೆ. ನೀವು ಮರಳಿ ಬರುವಾಗ ನನಗೆ 'ಲಿಂಗ'ವನ್ನು ತಂದುಕೊಡಿರಿ. ನಿಮಗೆ ಬೇಕಾದಷ್ಟು ದ್ರವ್ಯ, ಸಂಪತ್ತು ನಾನು ಕೊಡುತ್ತೇನೆಂದು ಹೇಳುತ್ತಾನೆ. ನಂದಯ್ಯ ಈ ಮಾತುಗಳನ್ನು ಕೇಳಿ ಸಂತುಷ್ಟನಾಗುತ್ತಾನೆ. 'ಲಿಂಗ'ವನ್ನು ತಂದು ಕೊಡುತ್ತೇನೆಂದು ಗೊಲ್ಲಾಳನಿಗೆ ವಚನವನ್ನು ನೀಡುತ್ತಾನೆ. ಗೊಲ್ಲಾಳ ನೀಡಿದ ಹೊನ್ನಿನ ಕುಡಿಕೆಯನ್ನು ಪಡೆದುಕೊಂಡು ಹೊರಡುತ್ತಾನೆ.

ಶ್ರೀಶೈಲದಿಂದ ಪರಿಶೆಯನ್ನು ಹೊತ್ತ ಜನಸಮೂಹ ಮರಳಿ ಬರುತ್ತಿರುವುದನ್ನು ಗೊಲ್ಲಾಳನು ನೋಡುತ್ತಾನೆ. ಆಗ ಅದರಲ್ಲಿ ನಂದಯ್ಯನನ್ನು ಹುಡುಕಿ ಇವನಿಗೆ ತನ್ನ ಬೇಡಿಕೆಯನ್ನು ತಿಳಿಸಿದ ಹಾಗೆಯೇ ಲಿಂಗವನ್ನು ಬೇಡಲು ಎದುರಿಗೆ ಬರುತ್ತಾನೆ. ನಿಂಗಯ್ಯನು ದೂರದಿಂದಳೇ ಗೊಲ್ಲಾಳನನ್ನು ನೋಡಿದ ಕ್ಷಣ ಗೊಲ್ಲಾಳನ ಬೇಡಿಕೆ ನೆನಪಾಗುತ್ತದೆ. 'ಲಿಂಗ' ಮರೆತು ಬಂದಿರುತ್ತಾನೆ. ಇಕ್ಕಟ್ಟಿನಲ್ಲಿ ಇದ್ದ ನಂದಯ್ಯ ಇಲ್ಲಿಯೂ ಉಪಾಯ ಮಾಡಿ ಅಲ್ಲಿಯೇ ಬಿದ್ದ 'ಕುರಿಹಿಕ್ಕೆ'ಯನ್ನು ಕಾಲಿನ 'ಅಂಗುಷ್ಟ' ದಿಂದ ತೆಗೆದುಕೊಂಡು ಕೈಯಲ್ಲಿರಿಸಿಕೊಂಡು ಗೊಲ್ಲಾಳನ ಎದುರಿಗೆ ಬರುತ್ತಾನೆ. ಆಗ ಗೊಲ್ಲಾಳನು ನಂದಯ್ಯನವರೆ, ನನ್ನ ಲಿಂಗಪ್ಪನೆಲ್ಲಿ, ಪಾತಾಳ ಗಂಗೆಯ ಪನ್ನಿರೆಲ್ಲಿ ತೋರಿಸಿ, ನನ್ನ ಹೆಗಲ ಮೇಲೆ ತನ್ನಿರಿ. ನನ್ನ ಬಗಲಲ್ಲಿ ಎತ್ತಿಕೊಳ್ಳುವೆ. ನನ್ನ ಶಿರದ ಮೇಲೆ ಇರಿಸಿಕೊಳ್ಳುವೆ. ನಿಮಗೆ ಬಹುಭಾರವಾಗಿದೆ ತನ್ನಿರಿ ಎಂದು ಬೇಡಿಕೊಳ್ಳುತ್ತಾನೆ. ಆಗ ನಂದಯ್ಯ 'ಲಿಂಗ'ವನ್ನು ನೀಡುವೆ ಆದರೆ ನಾನು ಹೇಳಿದ ಹಾಗೆಯೇ ನೀನು ನಡೆದುಕೊಳ್ಳಬೇಕೆಂದು ಹೇಳಿದಾಗ ಅದೇನೆಂದು ಗೊಲ್ಲಾಳನು ಕೇಳಿದಾಗ ನಿಂಗಯ್ಯ ಹೇಳಿದ್ದು.... ಮಲ್ಲಿಕಾರ್ಜುನ ಆತ್ಮಲಿಂಗ ಗುಪ್ತಭಕ್ತಭಾವ ಬೆರೆದ ಭಗವಾನ್ ಮುಕ್ತಿಲಿಂಗ ಬಹಿರಂಗ ನೋಡಲು ಭವಭಂಗ, ಬಹು ಕಠಿಣವೆಂದು ಹೇಳುತ್ತಾನೆ ಮತ್ತು ಬಾಹ್ಯ ದೃಷ್ಟಿಯಿಂದ ನೋಡಬಾರದೆಂದು ತಿಳಿಸುತ್ತಾನೆ.

ಈ ತೆರನಾಗಿ ಗೊಲ್ಲಾಳನು ನಂದಯ್ಯನಿಂದ ಲಿಂಗವನ್ನು ಪಡೆದ ನಂತರ ಲಿಂಗವನ್ನು ಬಾಹ್ಯ ದೃಷ್ಟಿಯಿಂದ ನೋಡದೇ ಆತ್ಮದ ಕಣ್ಣುಗಳಿಂದ ನೋಡುತ್ತಾನೆ. ಆ ಲಿಂಗದೊಡನೆ ತಾನೇ ತಾನಾಗಿ ಮಾತಾಡುತ್ತಾನೆ. ಲಿಂಗದಲ್ಲಿ ಒಂದಾಗುತ್ತಾನೆ. ಗೊಲ್ಲಾಳನ ಭಕ್ತಿಯ ಏಕತಾನತೆ ಆತನ ತಂದೆಯಾದ ಬಲ್ಲುಗನಿಗೆ ತಿಳಿಯುತ್ತದೆ. ಮೊದ -ಮೊದಲು ಗೊಲ್ಲಾಳನಿಗೆ ಹುಚ್ಚು ಹಿಡಿದಿದೆಯೆಂದು ಭಾವಿಸಿಕೊಳ್ಳುತ್ತಾನೆ. ಮಗನ ಆತ್ಮಸಾಕ್ಷಾತ್ಕಾರವನ್ನು ಅರಿಯದೆ, ನಾಸ್ತಿಕನಾಗಿ ಮಗನ ಆಸ್ತಿಕ ಭಾವವನ್ನು ತಿರಸ್ಕರಿಸುತ್ತಾನೆ. ಗೊಲ್ಲಾಳನಿಂದ ದೂರವಾಗುತ್ತಾನೆ. ಲಿಂಗದ ಮೇಲೆ ಪ್ರಹಾರ ಮಾಡಲು ಬಲ್ಲುಗ ಪ್ರಯತ್ನಿಸುತ್ತಾನೆ. ತಂದೆಯ ಈ ನಡವಳಿಕೆಯನ್ನು ಸಹಿಸಿಕೊಳ್ಳದ ಗೊಲ್ಲಾಳನು ಕೊನೆಗೆ ಬಲ್ಲುಗನನ್ನು ಕೊಲ್ಲುತ್ತಾನೆ. ಈ ಘಟನಾವಳಿ ತಾಯಿ ದುಗುಳಾದೇವಿಗೆ ತಿಳಿಯಲು ಶಿವನಲ್ಲಿ ಮೊರೆ ಹೋಗುತ್ತಾಳೆ. ಶಿವನು ಪ್ರತ್ಯಕ್ಷನಾಗಿ ಇವರೆಲ್ಲರನ್ನು ಕೈಲಾಸ ಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ. ಎಲ್ಲರೂ ಲಿಂಗ ಮಧ್ಯ ಒಂದಾಗುತ್ತಾರೆ. ಇಲ್ಲಿಗೆ ನಾಟಕ ಸಮಾಪ್ತಿಗೊಳ್ಳುತ್ತದೆ.

ಗೊಲ್ಲಾಳನ ಈ ನಾಟಕದ ಕಥಾವಸ್ತುವಿಷಯವನ್ನು ವಿಶ್ಲೇಷಣೆಯನ್ನು ಮಾಡುವ ಈ ಸಂದರ್ಭದಲ್ಲಿ ದೇವರು ಹಾಗೆಂದರೇನು? ಶರಣರು ದೇವರನ್ನು, ದೇವರು ಕುರಿತಾದ ಅವರ ನಂಬಿಕೆ ನಿಲುವುಗಳೇನು" ಗೊಲ್ಲಾಳನು ಬಾಳಿಬದುಕಿದ ಆ ಸಮಯ ಸಂದರ್ಭದಲ್ಲಿ ಆಚಾರ್ಯವರ್ಗದ ಪಾತ್ರವೇನು ? ಹಾಗೂ ಅಂದಿನ ರಾಜಕೀಯ, ಸಮಾಜಿಕ, ಧಾರ್ಮಿಕ ಸ್ಥಿತಿಗತಿಗಳೇನು? ಈ ಹಿನ್ನೆಲೆಯಲ್ಲಿ ದೇವರ ಕುರಿತಾದ ಇನ್ನುಳಿದ ವಿಷಯಗಳಿಗೆ ಸಂಬಂಧಿಸಿದಂತೆ ಗೊಲ್ಲಾಳನ ದೃಷ್ಟಿಕೋನ ಏನಾಗಿತ್ತು ಎಂಬುದರ ಕುರಿತು ಅಧ್ಯಯನ ಮಾಡಲಾಗಿದೆ.

"ಅಜ್ಞಾತವಾದುದನಭಾವವನೆ ನಾಸ್ತಿಕನು
ಅಜ್ಞೇಯವೆಂದದಕೆ ಕೈಮುಗಿಯೆ ಭಕ್ತ
ಜಿಜ್ಞಾಸ್ಯವೆಂದು ಪರಿಕಿಸತೊಡಗೆ ವಿಜ್ಞಾನಿ
ಸುಜ್ಞಪ್ತಿ ಶೋಧಿ ಮುನಿ - ಮಂಕುತಿಮ್ಮ ॥"

ದೇವರ ಬಗೆಗೆ, ದೈವಭಕ್ತಿಯ ಬಗೆಗೆ, ಆಸ್ತಿಕ್ಯ-ನಾಸ್ತಿಕ್ಯಗಳ ಬಗೆಗೆ, ವಿಜ್ಞಾನ ತತ್ವ ಶಾಸ್ತ್ರ(ದರ್ಶನ)ಗಳ ಬಗೆಗೆಲ್ಲ ಚಿಂತಿಸತೊಡಗಿದಾಗ ತನ್ನ ಜಾಗ್ರದನುಭವಕ್ಕೆ, ಇಂದ್ರಿಯಾನುಭವಕ್ಕೆ ದಕ್ಕದ್ದನ್ನೆಲ್ಲ ಅಭಾವವೆಂದೇ ಗಣಿಸುವವನು ನಾಸ್ತಿಕನಾದರೆ, ಇಂಥ ಅತೀಂದ್ರಿಯ ಸಂಗತಿಯು ನಮ್ಮಳವಿಗೆ ಮೀರಿದ ಕಾರಣ ಅದುವೇ ದೇವರೆಂದು ಕೈಮುಗಿದು ಕುಳಿತಿರುವವನು ಭಕ್ತ. ಎಂಥದ್ದನ್ನೂ ಇಂದ್ರಿಯಗಳ ಪರಿಯಲ್ಲಿ ಅಳವಡಿಸಿ ಜಾಲಾಡುವೆನೆಂದು ಹುಡುಕಲು ಹೊರಡುವ ತರ್ಕಪ್ರಯೋಗಕುಶಲಿಯು ವಿಜ್ಞಾನಿಯಾದರೆ, ಈ ಮೂವರಿಗಿಂತ ಭಿನ್ನವಾಗಿ ಜಾಗ್ರದನುಭವಗಳೆಲ್ಲ ಕಾರ್ಯ-ಕಾರಣ ಸಂಬಂಧವೆಂದೂ, ಕಾರ್ಯಕಾರಣಭಾವಗಳೆಲ್ಲ ದೇಶ ಕಾಲಗಳ ಫಲಿತವೆಂದೂ, ಇಂಥ ಸಾಪೇಕ್ಷತೆಯು ಸ್ವಪ್ನಾನುಭವಕ್ಕೆ ಕೂಡ ಹೊರತಲ್ಲವೆಂದೂ ಕೇವಲ ಸುಷುಪ್ತ್ಯನುಭವ (ಗಾಢ ನಿದ್ರಾನುಭವ) ವಷ್ಟೇ ಇಂದ್ರಿಯಾತೀತವೆಂದು, ಈ ನೆಲೆಯಲ್ಲಿ ದೃಕ್ಕು-ದೃಶ್ಯಗಳೆರಡೂ ದರ್ಶನವೆಂಬ ಒಂದೇ ಬಿಂದುವಿಗೆ ಬರುತ್ತದೆಂದೂ, ಇಂಥ ಸಾರ್ವತ್ರಿಕಾನುಭವ ಶೋಧನೆಯ ಪೂರ್ಣತರ್ಕವೊಂದೇ ತತ್ವನಿಶ್ಚಯಕ್ಕೆ ಬುನಾದಿಯೆಂದೂ ಅರಿತು ಸಕಲಾನುಭವಗಳನ್ನೂ ಅಧ್ಯಾರೋಪವಾದ ಪ್ರಕ್ರಿಯೆಯ (ಅದಾರೋಪಾಪವಾದ ಪ್ರಕ್ರಿಯೆಯೆಂದರೆ ಪರಮಸತ್ಯದ ಮೇಲಿರುವ ನಾಮ-ರೂಪಗಳೆಂಬ ಸಾಪೇಕ್ಷ ಸತ್ಯ (ಅಧ್ಯಾರೋಪ)ಗಳನ್ನು ವಿವೇಕದಿಂದ ಪಕ್ಕಕ್ಕೆ ಸರಿಸುವ (ಅಪವಾದ) ವಿಧಾನ. ಇದು ಅಕ್ಕಸಾಲಿಗನು ಒಡವೆಯೊಂದಕ್ಕೆ ಬೆಲೆಕಟ್ಟುವಾಗ ಅದರ ಆಕಾರ -ಹೆಸರುಗಳನ್ನು ಗಣಿಸದೆ ಕೇವಲ ಹೊನ್ನಿಗೆ ಮಾತ್ರ ಗಮನವಿಡುವಂತೆಯೇ) ನಿಕಷಕ್ಕೆ ಒಳಪಡಿಸಿ, ತನ್ಮೂಲಕ ಇರುವುದೊಂದೇ - ಅದು ಅರಿವು ಹೌದು, ನಿಲವು ಹೌದು; ನಿರ್ಭೀತಿಯ ಬಲಕ್ಕೆ ನಿಸ್ಪೃಹತೆಯ ಗೆಲಕ್ಕೆ ಸಲ್ಲುವವನು. ತತ್ತ್ವಜ್ಞಾನಿ ಅಥವಾ ಆತ್ಮಜ್ಞಾನಿ, ಇರವು-ಅರಿವು-ನಲಿವು ಅಥವಾ ಉಲಿವು-ತಿಳಿವು-ನಲಿವುಗಳನ್ನೇ ಸಂಸ್ಕೃತದಲ್ಲಿ ಸಚ್ಚಿದಾನಂದವೆಂದು ಹೇಳುತ್ತಾರೆ. ಇದಕ್ಕೆ ಮಿಗಿಲಾದ ಉತ್ತರ ಇಲ್ಲವೂ ಇಲ್ಲ. ನಮಗೆ ಬೇಕಾಗಿಯೂ ಇಲ್ಲ. ಏಕೆಂದರೆ ಮೊದಲಿಗೆ ನಾವು

ಇದ್ದರಲ್ಲವೇ ಇಲ್ಲದುದರ ಜಿಜ್ಞಾಸೆ ಅಥವಾ ಇನ್ನುಳಿದುದರ ಜಿಜ್ಞಾಸೆ. ಇಂಥ ಜಿಜ್ಞಾಸೆಗಾದರೂ ಬಂಡವಾಳ ನಮ್ಮ ಅರಿವೇ ತಾನೆ, ತಿಳಿವೇ ತಾನೆ ! ಇವು ಈ ಎಲ್ಲ ಚರ್ಚೆಗಳೂ ನಮ್ಮ ಮತ್ತುಳಿದೆಲ್ಲ ಕೆಲಸಗಳೂ ಹವಣು-ಹರಡುಗಳೂ ನಲಿವಿಗಾಗಿಯೇ ಹೌದಲ್ಲವೆ ! ಆದುದರಿಂದ ದೇವರೆಂದರೆ ಈ ಸಚ್ಚಿದಾನಂದದ ಮೊತ್ತವೆ."[೨೯]

ಗೊಲ್ಲಾಳನು ಆತ್ಮಜ್ಞಾನಿಯಾಗಿ ಸಚ್ಚಿದಾನಂದನನ್ನು ಅರಿವಿಗೆ ತಂದುಕೊಂಡವನು. ದೇವರ ದರ್ಶನಕ್ಕೆಂದು ಕಾವಡಿಯ ಜೊತೆ ಯಾತ್ರೆ ಹೋಗುವವರು ಯಾತ್ರೆಯ ಸಂದರ್ಭದಲ್ಲಿ ಯಾತ್ರಾರ್ಥಿಗಳನ್ನು ಕುರಿತು (ನಂದಯ್ಯನಿಗೆ) ಪ್ರಶ್ನಿಸಿದ್ದು. ಶರಣರು ಗುಡಿ (ದೇವಾಲಯ)ಯಲ್ಲಿರುವ ದೇವರನ್ನು ನಂಬಲಿಲ್ಲ. ಈ ಹಿನ್ನೆಲೆಯಲ್ಲಿ ನಾಟಕವನ್ನು ವಿಶ್ಲೇಷಣೆ ಮಾಡುವದು ಮುಖ್ಯ ಎನಿಸಿದ್ದರಿಂದ ದೇವರ ಕುರಿತ ಗೊಲ್ಲಾಳನ ನಿಲುವು ಏನಿತ್ತು ಎಂದು ಕಂಡುಕೊಳ್ಳುವುದಾಗಿದೆ.

ನಂದಯ್ಯನಿಗೆ ಗೊಲ್ಲಾಳನು ಲಿಂಗವನ್ನು ಶ್ರೀಶೈಲದಿಂದ ನನಗೆ ತಂದುಕೊಡು. ಇದಕ್ಕಾಗಿ ನಿನಗೆ ಬೇಡಿದಷ್ಟು ಹಣ ನೀಡುತ್ತೇನೆ ಎಂದಾಗ ನಂದಯ್ಯನು ಹಣದಾಸೆಗೆ ಲಿಂಗವನ್ನು ತಂದುಕೊಡುತ್ತೇನೆಂದು ಮಾತು ಕೊಟ್ಟದ್ದು ಇದೆಲ್ಲವನ್ನು ಗಮನಿಸಿದಾಗ, ಈ ನಂದಯ್ಯನಾರು? ಎಂದು ಗುರುತಿಸುವದು ಅವಶ್ಯವೆನಿಸುತ್ತದೆ. 'ನಂದಯ್ಯ' ಲಿಂಗಾಯತರಿಗೆ ಆಚಾರ್ಯ (ಗುರು) ಈಗಲೂ ನಂದಯ್ಯನ ಜನಾಂಗದವರು (ಜಂಗಮರು, ಸ್ವಾಮಿಗಳು, ಐನೋರು) ಹಿರೇಮಠ ಸಮಾಜಕ್ಕೆ ಸೇರಿದವರಾಗಿದ್ದಾರೆ. ಇವರು ಲಿಂಗಾಯತರ ಮನೆಯಲ್ಲಿ ನಡೆಯುವ ಧಾರ್ಮಿಕ ಕಾರ್ಯಕ್ರಮಗಳು ಅಂದರೆ ಹುಟ್ಟಿದಾಗ, ನಾಮಕರಣ ಮಾಡುವಾಗ, ಮದುವೆಯ ಸಂದರ್ಭದಲ್ಲಿ, ಹಬ್ಬಹರಿದಿನಗಳಲ್ಲಿ, ಸತ್ತಾಗ ಇತ್ಯಾದಿ ಯಾವುದೇ ಸಂಪ್ರದಾಯಗಳನ್ನು ಆಚರಿಸುವ ಸಂದರ್ಭದಲ್ಲಿ ಇವರು ಲಿಂಗಾಯತರ ಮನೆಯಲ್ಲಿ ಪ್ರಮುಖ ಸ್ಥಾನವನ್ನು ಅಲಂಕರಿಸಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುತ್ತಾರೆ. ಇವರಿಂದಲೇ ನಮಗೆ ಮೋಕ್ಷ ಪ್ರಾಪ್ತಿಯಾಗುತ್ತದೆಂದು ಇವರುಗಳ ಪಾದ ತೊಳೆದು, ತೊಳೆದು ಉಳಿದ ನೀರನ್ನು ಪಾದೋದಕವೆಂದು ಸ್ವೀಕರಿಸಿ ಕುಡಿಯುತ್ತಾರೆ. ಮನೆಯಲ್ಲಿ ಸಿಂಪಡಿಸುತ್ತಾರೆ. ಇದರಿಂದಲೇ ಇವರು ಲಿಂಗಾಯತ ಜನಾಂಗಕ್ಕೆ ಯಾವ ತೆರನಾಗಿ ಮುಖ್ಯರಾಗಿದ್ದೆಂಬುದನ್ನು ಗುರುತಿಸಬಹುದಾಗಿದೆ. ಈ ಮೇಲು ಸ್ಥಾನದಲ್ಲಿರುವ ಆಚಾರ್ಯವರ್ಗ ವರ್ಷಕ್ಕೊಮ್ಮೆ ಕಾವಡಿಯ ಯಾತ್ರೆಯನ್ನು ಹೊರಡಿಸಿ ಲಿಂಗಾಯತ ಸಮಾಜದಿದ ಹಣ ಪಡೆಯುವದೇ ಇವರ ಉದ್ಯೋಗವಾಗಿತ್ತು. ಇದನ್ನು ಅಪರೋಕ್ಷವಾಗಿ ಗೊಲ್ಲಾಳನು ವಿರೋಧಿಸಿದ. ಜನರಲ್ಲಿ ಜಾಗೃತಿಯನ್ನು ಮೂಡಿಸಲು ಹವಣಿಸಿದ. ಲಿಂಗವೆಂದರೇನು? ಎಂದು ಪ್ರಶ್ನಿಸಿದ. ನನಗೆ ಲಿಂಗ ತಂದುಕೊಡು ಎಂದು ಕೇಳಿಕೊಂಡ. ಗೊಲ್ಲಾಳನಿಗೆ ಬೇಕಾದದ್ದು ಆತ್ಮಲಿಂಗ (ಇಷ್ಟಲಿಂಗ) ಈ ಬಾಹ್ಯರೂಪದ ದೈವೋಪಾಸನೆ ತಿರಸ್ಕರಿಸುವುದಾಗಿತ್ತು. ಶರಣ ಧರ್ಮ ಉದ್ಭವಿಸಿದ್ದು, ವ್ಯಕ್ತಿಶುದ್ಧಿ, ಸಮಾಜಶುದ್ಧಿ, ಸಮಾಜಸಮೃದ್ಧಿಗಾಗಿ. ಈ ತತ್ವಗಳ ಅಡಿಯಲ್ಲಿ ಬದುಕುವವರು ಡಾಂಭಿಕತನವನ್ನು, ವಿವಿಧ ದೈವೀ ಉಪಾಸನೆಯನ್ನು, ದೇವರುಗಳನ್ನು ಅಲ್ಲಗಳೆದರು.

ಶರಣರ "ಲಿಂಗಾಯತವನ್ನು ಶೋಷಣೆಯ ಮಾಧ್ಯಮ ಮಾಡಿಕೊಂಡ ಆಚಾರ್ಯರ ಬಗ್ಗೆ, ಕೊರಳಲ್ಲಿ ಲಿಂಗವಿದ್ದೂ ತತ್ವವಿಮುಖರಾಗಿ ಬದುಕುವ ಭಕ್ತರ ಬಗ್ಗೆ ಈ ಕೊಡೇಕಲ್ಲ ಬಸವಣ್ಣ, ಮಂಟೇಸ್ವಾಮಿ ಸಾಹಿತ್ಯದಲ್ಲಿ ದೊಡ್ಡ ತಿರಸ್ಕಾರವಿದೆ. "ಹಂಗು ಹರಿ ಲಿಂಗದ" ಎನ್ನುತ್ತಾರೆ ಕೊಡೇಕಲ್ಲು ಬಸವಣ್ಣ. ಮಂಟೇಸ್ವಾಮಿಯು ಅಂದಿನ ಭ್ರಷ್ಟ ಆಚಾರ್ಯರರನ್ನು, ಭಕ್ತರನ್ನೂ ಕಂಡು ಹೇಸಿ

"ಕುರುಬರ ಬೀರಯ್ಯ ಲಿಂಗ
ಮಡಿವಳ ಮಾಚಯ್ಯ ಲಿಂಗ
ಹೊಲ್ಯಾರ ಹೊನ್ನಯ್ಯ ಲಿಂಗ
ಹಡಪದ ಅಪ್ಪಣ್ಣ ಲಿಂಗ
ಕುಂಬಾರ ಗುಂಡಯ್ಯ ಲಿಂಗ
ಮಾದರ ಚನ್ನಯ್ಯ ಲಿಂಗ
ದೇವಾಂಗ ದಾಸಯ್ಯ ಲಿಂಗ
ಮೇಲು ಸಕ್ಕರಿ ಶೆಟ್ಟಿ ಲಿಂಗ
ಗಂಗಡಿಕಾರ ಗೌಡ ಲಿಂಗ
ಜಗತ್ತಿನಲ್ಲಿ ಒಂಬತ್ತೇ ಲಿಂಗ
ಮಿಕ್ಕಾದ ಲಿಂಗವಂತರೆಲ್ಲ ಕಲ್ಲುವಡ್ಡರಾಗಿರಿ

ಎಂದು ಶಾಪ ಕೊಟ್ಟನೆಂಬ ಮಾತು ಇವರ ಹಾಡಿನಲ್ಲಿ ಬರುತ್ತದೆ. ಅಂದರೆ ಕುರುಬ, ಮಡಿವಾಳ, ಹೊಲೆಯ ಇತ್ಯಾದಿ ಒಂಬತ್ತು ಕೆಳವರ್ಗದ ಸಮಾಜಗಳ ಜನ ಮಾತ್ರ ನಿಜಲಿಂಗ, ಮಿಕ್ಕ ಆಚಾರ್ಯರು -ಆಚಾರವಿಹೀನ ಭಕ್ತರು ಲಿಂಗವಂತರೇ ಅಲ್ಲ ಎಂದು ಮಂಟೇಸ್ವಾಮಿ ಶಾಪ ನೀಡಬೇಕಾದರೆ ಲಿಂಗಾಯತದ ಅಂತರಂಗ ಮಲೀನವಾಗಿದ್ದಿತೆಂದು ಸ್ಪಷ್ಟವಾಗುತ್ತದೆ."[೮೦]

ಗೊಲ್ಲಾಳನ 'ಲಿಂಗ' ಕುರಿತಾದ ನಂಬಿಕೆಯ ಪ್ರಮಾಣವೇ ಬೇರೆಯಾಗಿತ್ತು. ಲಿಂಗ ನೀಡಿದ 'ನಂದಯ್ಯ'ನ ಭಾವವೇ ಬೇರೆಯಾಗಿತ್ತು. ಗೊಲ್ಲಾಳನ ಲಿಂಗ ನಂಬಿಕೆಯನ್ನು ಮಾತುಗಳಲ್ಲಿ ಸ್ಪಷ್ಟಪಡಿಸುವದು ಕಠಿಣತರವಾದದ್ದು. ಗೊಲ್ಲಾಳನಿಗೆ ಆಚಾರ್ಯ ನೀಡಿದ್ದೇನು ? ಕುರಿಯ ಹಿಕ್ಕೆ- ಕುರಿಯ ಹಿಕ್ಕೆಯನ್ನೇ ನಂದಯ್ಯ ಲಿಂಗವೆಂದು ಗೊಲ್ಲಾಳನನ್ನು ನಂಬಿಸಿದನು. ಅಂದರೆ ಗೊಲ್ಲಾಳನು ಅದನ್ನು ಸ್ವೀಕರಿಸಿ ಕಣ್ಮುಚ್ಚಿ ಬಾಹ್ಯರೂಪವನ್ನೇ ನೋಡದೆ, ಆತ್ಮದಲ್ಲಿ, ಅನುಭಾವದಲ್ಲಿ ಲಿಂಗವನ್ನು ಕಂಡನೆಂದರೆ, ಗೊಲ್ಲಾಳ ನಂಬಿದ್ದು ಇಷ್ಟಲಿಂಗವೇ ಆಗಿದ್ದಿತು. ನಂದಯ್ಯ ಗೊಲ್ಲಾಳನಿಗೆ ನೀಡಿದ ಲಿಂಗ ದೀಕ್ಷಾ ಬೋಧೆ., "ಗೊಲ್ಲಾಳ ಆ ಲಿಂಗವ ತೋರುವಂತಿಲ್ಲ ಶ್ರೀಗಿರಿ ಮಹಾಮಲ್ಲಿನಾಥ, ಮಲ್ಲಿಕಾರ್ಜುನ ಆತ್ಮಲಿಂಗ, ಗುಪ್ತಭಕ್ತಿಭಾವ ಬೆರೆದ ಭಗವಾನ್ ಮುಕ್ತಿಲಿಂಗ, ಬಹಿರಂಗ ನೋಡಲು ಭವಭಂಗ. ಬಹು ಕಠಿಣವೆಂದು ಬೋಧಿಸಿದ. ಈ ದೀಕ್ಷಾಬೋಧೆ ಸಂದರ್ಭವನ್ನು ಗಮನಿಸಿದರೆ ಗೊಲ್ಲಾಳನಿಗೆ 'ನಂದಯ್ಯ' ಗುರುವು ಆಗಿದ್ದಾನೆಂದು ಹೇಳಬಹುದು. ಗುರುವಿನ

ಲಿಂಗದೀಕ್ಷಾಬೋಧೆಯನ್ನು ಸ್ವೀಕರಿಸಿದ ಶಿಷ್ಯ ಅದರಂತೆಯೇ ನಡೆದುಕೊಂಡನು. ಲಿಂಗವನ್ನು ಕಣ್ಣಿನಿಂದ ನೋಡಲೇ ಇಲ್ಲ. ಆತ್ಮದಲ್ಲಿರಿಸಿಕೊಂಡನು. ಈ ಕ್ರಿಯೆಯನ್ನಾಧರಿಸಿ ನೋಡಿದರೆ, ಪಶುಪತಿಯೂ, ಅಷ್ಟತನುರೂಪನೂ ಪಂಚಭೂತಗಳನ್ನೊಳಗೊಂಡ ಪಂಚಮನೂ, ಪಂಚವಿಂಶತಿಗುಣಾತ್ಮಕನೂ ಆಗಿರುವ ಶಿವನನ್ನು ಕಾಣಲು ಗುರುವಿನ ಮಾರ್ಗದರ್ಶನರೂಪದ ದೀಕ್ಷೆ ಅವಶ್ಯಕವಾಗಿತ್ತು. ಆದರೆ ನಂಬಿದ ಶಿಷ್ಯರಿಗೆ (ಭಕ್ತರಿಗೆ) ಗುರುವಾದವನು ತನ್ನ ಮತ ಮೌಢ್ಯಗಳ ಆಚರಣೆಗಳಿಂದ ಹೊರಬರಲಿಲ್ಲ. ಎಡಗಾಲಿನ ಅಂಗುಷ್ಠದಿಂದ ಗೊಲ್ಲಾಳನಿಗೆ 'ಲಿಂಗ ನೀಡಿದನು. ಅಂದರೆ, ಕುರುಬ ಗೊಲ್ಲಾಳನಿಗೂ ಹಾಗೂ ಜಂಗಮ (ಸ್ವಾಮಿಗೋಳು, ಐನೋರು) ನಂದಯ್ಯನು ಇವರೀರ್ವರ ಮಧ್ಯದಲ್ಲಿ ಮೇಲು-ಕೀಳು ಎನ್ನುವ ಭಾವ ಜಾರಿಯಲ್ಲಿತ್ತು ಎಂಬುದನ್ನು ಗಮನಿಸಬೇಕಾದ ವಿಷಯವೇ ಆಗಿದೆ. ಈ ಅಂತರವನ್ನು ಅಳಿಸಿ ಹಾಕುವದಕ್ಕಾಗಿಯೇ ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ಸಂಸ್ಥೆಯೇ ಅನುಭವಮಂಟಪ. ಇದರ ಪ್ರಥಮ ಅಧ್ಯಕ್ಷ ಅಲ್ಲಮಪ್ರಭುಗಳಾಗಿದ್ದರು ಎನ್ನುವುದನ್ನು ಎಲ್ಲರೂ ತಿಳಿದ ಸಂಗತಿಯಾಗಿದೆ.

ಗೊಲ್ಲಾಳನು ಲಿಂಗದೀಕ್ಷೆ ಪಡೆದ ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳೇನಿದ್ದವು ಎಂಬುದು ಬಹುಮುಖ್ಯವೆನಿಸುತ್ತದೆ. ಲಿಂಗವನ್ನು ಸ್ವೀಕರಿಸಿದ ಗೊಲ್ಲಾಳ ಗೊಬ್ಬರದ ಗುಂಪಿಯಲ್ಲಿರಿಸಿ ಉಪಾಸನೆ ಮಾಡಿದ. ಲಿಂಗವನ್ನು ಅಂಗದ ಮೇಲಾಗಲಿ, ಪೀಠದಲ್ಲಿರಿಸದೆ, ಉಪಾಸನೆ ಕೈಕೊಂಡ. ಹೀಗೆ ಲಿಂಗಾರ್ಚನೆ ಮಾಡುವದು ಶರಣರ ಮೂಲ ತತ್ವ ಸಿದ್ಧಾಂತವು ಆಗಿರಬಹುದು.

"ಎಲ್ಲ ದೀಕ್ಷೆಗಳನುವ ಬಲ್ಲೆ ನಾಂ ಶ್ರೀ ಗುರುವೆ, ಒಲ್ಲೆನವ ಸತ್ಪಥಕೆ ಸಲ್ಲದವ ಸದ್ಗುರುವೆ," "ದೂರದಿಂದರ್ಚಿಸುತ್ತಾರಿಕಾಗಿರಲಾರೆ". "ಒಚ್ಚಿ ಭಕ್ತನು ಒಚ್ಚಿ ಭವಿಯಾಗಿರಲ್ಕಾರೆ" ಎಂದೂ ಇಲ್ಲಿ ಶಿಷ್ಯನು ಗುರುವಿಗೆ ನಿವೇದಿಸಿಕೊಳ್ಳುವುದು ಚರ್ಚಾಯೋಗ್ಯವೆನಿಸಿದೆ. ಅಂದು ಶೈವಗಳು ದೇವಾಲಯದ ಸ್ಥಾವರಲಿಂಗವನ್ನು "ದೂರದಿಂದರ್ಚಿಸುವ" ಪದ್ಧತಿಯನ್ನೊಳಗೊಂಡುದನ್ನೂ ಅದು ನಿಷ್ಫಲವೆಂಬುದನ್ನು ಇಲ್ಲಿ ಸೂಚಿಸುವಂತಿದೆ. ಇದಲ್ಲದೆ ದೇವಾಲಯಕ್ಕೆ ಹೋದಾಗ ಭಕ್ತ, ಮನೆಗೆ ಮರಳಿದಾಗ ಭವಿಯಾಗುವ ಸ್ಥಿತಿಯಾಗುವುದನ್ನೂ ಇಲ್ಲಿ (ಒಚ್ಚಿ ಭಕ್ತ, ಒಚ್ಚಿ ಭವಿ) ಬಿಡಿಸಿ ಹೇಳಲಾಗಿದೆ. ಇದು ಅಲ್ಲಿ ಶಿವಾಚಾರ, ಇಲ್ಲಿ ಕುಲಾಚಾರವೆಂಬ ಸ್ಥಿತಿ ಮಾಡಿದ್ದಿತು. ಇದನ್ನು ತಪ್ಪಿಸಿಕೊಳ್ಳುವುದಕ್ಕಾಗಿ "ಜೀವ, ಕಾಯದಿ ಲಿಂಗ ತೀವ್ರವಂತೆ" ಮಾಡೆಂದು ಶಿಷ್ಯನ ಮೂಲಕ ವ್ಯಕ್ತಪಡಿಸಲಾಗಿದೆ. ಆಗ ಗುರುವು ಈ "ಅಂಗ ಲಿಂಗದ ಸಂಗ" ತೀರ ಅಸಾಧ್ಯ. ಆದುದರಿಂದ ಸಾಂಪ್ರದಾಯಿಕ ಪೀಠಾರ್ಚನಾ ಕ್ರಮ"ವನ್ನು ಅನುಸರಿಸು ಹೋಗು, ಎಂದು ಆ ಕಾಲದಲ್ಲಿ ಪ್ರಚಲಿತವಿದ್ದ ಬೇರೊಂದು ದೀಕ್ಷಾಕ್ರಮವನ್ನು ಸೂಚಿಸುತ್ತಾನೆ. ಈ ಪೀಠಾರ್ಚನೆಯೆಂಬುದು ಪೀಠದ ಮೇಲೆ ಸ್ಥಾವರಲಿಂಗವನ್ನಿಟ್ಟು ಮಾಡುವ ವಿಫಲ ಪೂಜೆಯಾಗಿದ್ದು, ಬಹುಶಃ ಕೊಂಡಗೂಳಿ ಕೇಶಿರಾಜನದು ಇಂಥ ಪೂಜೆಯಾಗಿದ್ದಿತು. ಇದು ಅಂಗ, ಪ್ರಾಣ, ಮನಗಳಲ್ಲಿ ಲಿಂಗ ಸಾಮರಸ್ಯಗೊಳಿಸುವ ಲಿಂಗಾಯತ ಪೂಜೆಯಲ್ಲವೆಂಬ ಸೂಚನೆ ಇಲ್ಲಿದೆ.

ಲಿಂಗದೀಕ್ಷೆ ಪಡೆಯುವ ಮೊದಲು ದುರ್ಗುಣಗಳನ್ನು ನಿರಸನಗೊಳಿಸಿಕೊಳ್ಳಬೇಕಾಗುತ್ತದೆ. ಇವು ವ್ಯಕ್ತಿಗತ (Personal) ಮತ್ತು ಸಮಾಜಗತ (Social) ಎಂದು ಎರಡು ತೆರನಾಗಿದ್ದು ಇಲ್ಲಿ "ವರ್ಣ ಹದಿನೆಂಟರೊಳು ಉನ್ನತನೆನಿಪ್ಪುದಂ" ವಿಪ್ರನೆಂಬ ಕುಲದರ್ಪಮಂ" ಬಿಡಬೇಕು. ಸಂಜೆ ಜಪ ಹೋಮ ಮುಂಜಿ ಶ್ರಾದ್ಧಂ ಗಳಂ ಬಿಡಬೇಕು, "ತದ್ದಿನಂಗಳ"ನ್ನು ಬಿಡಬೇಕು. ಮಾತೃಪುತ್ರ ಸತಿ ಭೃತ್ಯ ದಾಸಿಯರು ಶಿವಭಕ್ತರಾಗಿರದಿದ್ದರೆ ಅದು ಶ್ವಪಚಗೃಹ. ಲಿಂಗಬಾಹ್ಯಾಂಗನೆಯ ಆಲಿಂಗನ ಚುಂಬನ ಸಲ್ಲ. ಭವಿ ಮನೆಯ ಅನ್ನಪಾನವ ಸೇವಿಸಬಾರದು. ಶಿವಭಕ್ತರಲ್ಲಿ ಕುಲ ವಿಚಾರಿಸಬಾರದು, ಅವರ ಮನೆಯಲ್ಲಿ ಊಟಮಾಡಬೇಕು. ಕುಲಜರಾಗಿದ್ದರೂ ಶಿವಭಕ್ತಲ್ಲದವರ ಮನೆಯಲ್ಲಿ ಉಣಬಾರದು. ತೀರ್ಥಕ್ಷೇತ್ರ ಪರ್ಯಟನ ವರ್ಜಿಸಬೇಕು. ತನ್ನ ಲಿಂಗವನ್ನು ಬಿಟ್ಟು ಅನ್ಯಲಿಂಗಕ್ಕೆ ಹರಿಯಬಾರದು. ಅಂಗದ ಮೇಲಷ್ಟೇ ಅಲ್ಲ, ಪ್ರಾಣದಲ್ಲಿಯೂ ಲಿಂಗ ಸಂಗಿಯಾಗಿರಬೇಕು. ಲಿಂಗವನ್ನು ಒಂದು ನಿಮಿಷವೂ ಹಿಂಗಬಾರದು"[೮೦]

ಗೊಲ್ಲಾಳನಿಗೆ ನಂದಯ್ಯನು ನೀಡಿದ ಲಿಂಗದೀಕ್ಷೆಯನ್ನೇ ಗಮನಿಸಿ ಹೇಳುವುದಾದರೆ, ಇದು ಒಂದು ಧಾರ್ಮಿಕ ಪ್ರಕ್ರಿಯೆಯಲ್ಲ. ಸಾಮಾಜಿಕ ಪ್ರಕ್ರಿಯೆಯೂ ಹೌದು. ನಂದಯ್ಯನಿಂದ ಗೊಲ್ಲಾಳನು ತನ್ನ ವೈಯಕ್ತಿಕ ಪ್ರಜ್ಞೆಯನ್ನು ನೀಗಿಸಿಕೊಂಡು ಸಾಮಾಜಿಕ ಪ್ರಜ್ಞೆಯನ್ನು ಪಡೆದುಕೊಂಡ. ಇದು ಗೊಲ್ಲಾಳನಿಗೆ ಎರಡನೇ ಹುಟ್ಟು. ಇದರಿಂದ ಅವನ ಮೂಲಪ್ರಜ್ಞೆ ಪಲ್ಲಟವಾಯಿತು. ಇದರಿಂದ ಶರಣನಾಗುವ ಪರಿಯನ್ನು ಅರಿತನು. ಶರಣಧರ್ಮದ ಸಿದ್ಧಾಂತದಂತೆ ದಾಸೋಹ ಭಾವ ಹುಟ್ಟಿ, ತನ್ನಲ್ಲಿರುವುದನ್ನೆಲ್ಲ ಲಿಂಗ, ಜಂಗಮನಿಗೆ ಅರ್ಪಿಸಿದನು.

"ವ್ಯಕ್ತಿಯನ್ನು ಅಹಂ ಮಿತಿಗೆ ಬಂಧಿಸಿದುದು ಅವನ ಜನನಗರ್ವ, ಜಾತಿಗರ್ವ, ಸಂಪತ್ತಿನ ಗರ್ವ. ಈ ಮೂರರಿಂದ ಮುಕ್ತಮಾಡುವುದಕ್ಕಾಗಿ ಮೂರು ಬಗೆಯ ದೀಕ್ಷೆ ಅಂದರೆ ಆಣವಮಲನಿವಾರಣ ದೀಕ್ಷೆ, ಮಾಯಾಮಲನಿವಾರಣದೀಕ್ಷೆ, ಕಾರ್ಮಿಕ ಮಲ ನಿವಾರಣ ದೀಕ್ಷೆ, ನೀಡಲಾಗುತ್ತದೆ.

ರೇತ ರಕ್ತದ ಜಠರ ಜಾತವಾಣವಮಲಂ
ಜಾತಿಧರ್ಮಗಳ ಸುಪ್ರೀತಿ ಮಾಯಾಮಲಂ
ಧನದ ಮೇಲಣ ಕಾಂಕ್ಷೆಯನಿತು ಕಾರ್ಮಿಕಮಲಂ

ಇದು ಮಲತ್ರಯದ ನಿಜಸ್ವರೂಪ. ನಿಮಿತ್ತ ತಂದೆ ತಾಯಿಗಳ ಮೋಹವನ್ನು ತ್ಯಜಿಸಿ "ತಂದೆ ಶಿವ, ತಾಯಿ ಪಾರ್ವತಿ, ಬಂಧುಗಳು ಶಿವನವರು" ಎಂದು ಭಾವಿಸುವುದೇ, ಅಂದರೆ ಕುಟುಂಬಿಯಾಗಿ ಉಳಿಯದೆ, ವಿಶ್ವಕುಟುಂಬಿಯಾಗುವುದೇ ಆಣವಮಲ ನಿವಾರಣೆ.

ನಾನು ವಿಪ್ರ, ನಾನು ಕ್ಷತ್ರಿಯ, ನಾನು ವೈಶ್ಯ ಹೀಗೆ ಹದಿನೆಂಟು ಬಗೆಯ ಜಾತಿಮತದ ನಿರಸನ ಮಾಡಿಕೊಳ್ಳುವುದೇ ಮಾಯಾಮಲ ನಿವಾರಣೆ.

ವರ್ಣವಿಲ್ಲಾಶ್ರಮಗಳಿಲ್ಲ ಶಿವಲಿಂಗಕ್ಕೆ
ನಿರ್ಣಯವ ತಿಳಿ ಯಾವ ಕುಲವಿಲ್ಲ ಲಿಂಗಕ್ಕೆ
ಇಂತಾತನಿಂದಾದವರ್ಗಾವ ಕುಲವಿಲ್ಲ.

ಎಂದು ಭಾವಿಸಿಕೊಳ್ಳಬೇಕಲ್ಲದೆ, ಪುರೋಹಿತರು ಅಸ್ತಿತ್ವಕ್ಕೆ ತಂದಿರುವ ಪ್ರೇತಸೂತಕ, ಸ್ತ್ರೀಮಾಸ ಸೂತಕ (ರಜಸ್ಸೂತಕ)ವೂ ಇಲ್ಲವೆಂದು ನಂಬಬೇಕು. ಉದರ ಸಂಜಾತರಿಗೆ ಇವು ಇರಬಹುದು. ಗುರು ಸಂಜಾತರಿಗೆ ಇಲ್ಲ. ಒಟ್ಟಾರೆ

ಸೂತಕಗಳಲ್ಲವೀ ಪರಿ ಶಿವನ ಭಕ್ತರ್ಗೆ
ಜಾತಿ ವಾರ್ತೆಗಳಿಲ್ಲ ಲಿಂಗನಿಜಯುಕ್ತರ್ಗೆ

ಎಂದು ಇಲ್ಲಿ ತೀರ್ಮಾನ ಮಾಡಲಾಗಿದೆ. ದೀಕ್ಷೆ ಕಾರಣವಾಗಿಯೇ ಸ್ತ್ರೀ-ಪುರುಷ, ಷಂಡ, ಶಬರ, ಶ್ವಪಚ, ವಿಪ್ರ ಇತ್ಯಾದಿ ಕಲ್ಪನೆಗಳೆಲ್ಲ ಅಳಿದು, ಇಡೀ ಸಮಾಜ ಏಕಗಣ (ರುದ್ರಗಣ)ವಾಗಬೇಕೆಂಬುದೇ ಈ ಧರ್ಮದ ಸಾಮಾಜಿಕ ನಿಲುವು.

"ಕಾರ್ಮಿಕ ಮಲವ ತ್ಯಜಿಸುವಡೆ ಅರ್ಥದಾರ್ತವ ಬಿಡು", ಒಡವೆಯಾರದು? ಒಡೆಯರಾರೆಂಬುದನ್ನರಿ". ಹುಟ್ಟುವಾಗ ಹಣವನ್ನು ಕಟ್ಟಿಕೊಂಡು ಬಂದೆಯಾ ? ಹೋಗುವಾಗ ಕಟ್ಟಿಕೊಂಡು ಹೋಗುವೆಯಾ ? ಇದು ನಿನ್ನ ಸೊಮ್ಮಲ್ಲ. ಸತಿಗಿರಿಸಿದರೆ ಅನ್ಯಪತಿಗೆ ನೀಡಬಹುದು. ಸುತಗಿರಿಸಿದರೆ ನಿನಗೆ ವೈರಿಯಾಗಿ ಬೆಳೆಯಬಹುದು. ಆದುದರಿಂದ ಅದನ್ನು ದೇವಭಕ್ತ (ಸಾಮಾಜಿಕ)ರಿಗೆ ನೀಡಬೇಕೆಂಬ ಭಾವ ಬೆಳೆಸುಕೊಳ್ಳುವುದೇ ಕಾರ್ಮಿಕ ಮಲ ನಿವಾರಣೆ. ಶಿವನು ಸಂಪತ್ತನ್ನು ಒಂದೆಡೆ ನಿಕ್ಷೇಪಿಸಿಲ್ಲ."[೮]

ಗೊಲ್ಲಾಳನು ಈ ಮೂರು ಮಲತ್ರಯಗಳ ನಿಜಸ್ವರೂಪವನ್ನು ಅರಿತವನಾಗಿದ್ದ. ವಿಶ್ವಕುಟುಂಬಿಯಾಗಿ, ಜಾತಿ ಮದವನಳಿದು, ತನ್ನಲ್ಲಿರುವ ಸಂಪತ್ತನ್ನು ಒಂದೆಡೆ ನಿಕ್ಷೇಪಮಾಡದೆ. ಇವುಗಳನ್ನು ಅರ್ಥಮಾಡಿಕೊಂಡು ಶಿವಭಕ್ತನಾದ ಗೊಲ್ಲಾಳನು ಧನವನ್ನು ಜಂಗಮಕ್ಕೆ ಅರ್ಪಿಸಿ ತನು-ಮನವನ್ನೆ ಲಿಂಗದೊಳು ಇರಿಸಿದನು.

ಈ ನಾಟಕದ ಕೇಂದ್ರ ವಸ್ತು ವಿಷಯ ಅಡಗಿರುವುದು -ನಂಬಿಕೆ (faith) ಎನ್ನುವ ಶಬ್ದದಲ್ಲಿದೆ. ಕುರಿಯ ಹಿಕ್ಕೆಯಲ್ಲಿ ದೈವ ಸಾಕ್ಷಾತ್ಕಾರ ಮಾಡಿಕೊಳ್ಳುವ, ನಿಸರ್ಗದ ಒಂದಂಶದಲ್ಲಿ ಶಿವನನ್ನು ಕಾಣುವ, ಅದರಲ್ಲಿ ಧರ್ಮದ ಬೆಳಕನ್ನು ಕಾಣುವ ಅಂಥ ಶ್ರೇಷ್ಠ ಮನಸ್ಸು ಹೇಗೆ ರೂಪಗೊಂಡಿತು ? ಇಲ್ಲಿ ಮುಗ್ಧರಾರು, ಚತುರರಾರು? ಎನ್ನುವುದು ಮುಖ್ಯವಲ್ಲ. ಸಮಾಜಕ್ಕೆ ಯಾರು ನೆರವಾಗಬಲ್ಲರು, ಎಂಬುದೇ ಮುಖ್ಯವಾಗಿದೆ. ಶ್ರೀ ಗೊಲ್ಲಾಳನನ್ನು ಮಧ್ಯದಲ್ಲಿರಿಸಿಕೊಂಡು, ಆಧುನಿಕ ಮನಸ್ಸುಗಳನ್ನು ಗೊಲ್ಲಾಳನಂತಹ ನಂಬಿಕೆಯೆಡೆಗೆ ತರುವುದೇ ಬಹುಮುಖ್ಯವಾಗಿದೆ.

ನಂಬಿಕೆ, ವಿಶ್ವಾಸ, ಸಹೋದರತೆ, ನಿತ್ಯನೂತನವಾದ ಸದ್ಗುಣಗಳು, ಸತ್ಯ ಅಹಿಂಸೆಗಳಷ್ಟೇ ಪವಿತ್ರವಾದ ಗುಣಗಳು, ಬುದ್ಧ ಅಹಿಂಸೆಯ ಪ್ರತಿಪಾದಕನಾದಂತೆ ಬಸವ ದಯೆಯ ವಕ್ತಾರನಾದಂತೆ, ಗಾಂಧೀಜಿ ಸತ್ಯದ ಪ್ರಚಾರಕನಾದಂತೆ, ಶ್ರೀ ಗೊಲ್ಲಾಳೇಶ್ವರರು 'ನಂಬಿಕೆ' ಎಂಬ ಸದ್ಗುಣದ ಮುಖವಾಣಿಯಾಗಬಲ್ಲ. ಬುದ್ಧ-

ಬಸವ-ಗಾಂದಿ ಇವರುಗಳು ಮುಖ್ಯರೋ, ಅಷ್ಟೇ ಮುಖ್ಯ ಶ್ರೀ ಗೊಲ್ಲಾಳೇಶ್ವರರು ಎಂದೆನ್ನಿಸುತ್ತದೆ. 'ನಂಬಿಕೆ' ಅದೆಂಥ ಸದ್ಗುಣ, ಅದು ಕುಟುಂಬಗಳನ್ನು ಬಂಧಿಸಿ ಇಡಬಹುದು, ಪರಸ್ಪರ ಸಮುದಾಯ ದೇಶಗಳನ್ನು ಪೋಣಿಸಿ ನೆಯ್ಯಬಲ್ಲದು. 'ನಂಬಿಕೆ'ಯನ್ನು ಒತ್ತಿ ಹೇಳುವ "ಶ್ರೀ ಗೊಲ್ಲಾಳೇಶ್ವರರ ಲೀಲಾಮೃತ ಕಥಾ" ನಾಟಕ ಖಂಡಿತಾ ಆಧುನಿಕ ಮನುಷ್ಯನಿಗೆ, ಕುಟುಂಬಗಳಿಗೆ, ಸಮಾಜಗಳಿಗೆ, ದೇಶಗಳಿಗೆ ಅದರ ಅವಶ್ಯಕತೆಯಿರುವುದರಿಂದ 'ನಂಬಿಕೆ' ಎಂಬ ಮೌಲ್ಯವನ್ನು ಕೇಂದ್ರವನ್ನಾಗಿಟ್ಟುಕೊಂಡು ನಾಟಕವನ್ನು ರಚಿಸಲಾಗಿದೆ.

## ೨. ಗೊಲ್ಲಾಳೇಶ್ವರರ ಕುರಿತು ಜನಪದ ಸಾಹಿತ್ಯ :

ಭಾರತ ವಿಶಾಲವಾದ ದೇಶವಾಗಿದ್ದು ಐದು ಸಾವಿರ ವರ್ಷಗಳ ಸಾಂಸ್ಕೃತಿಕ ಇತಿಹಾಸವನ್ನು ಹೊಂದಿದೆ. ಬರವಣಿಗೆಯ ಮತ್ತು ಮೌಖಿಕ ಪರಂಪರೆಗಳನ್ನು ಹೊಂದಿದೆ. ನೂರಕ್ಕೂ ಹೆಚ್ಚು ಭಾಷೆಗಳು, ಹತ್ತು ಪ್ರಮುಖ ಲಿಪಿಗಳು, ನಾಲ್ಕು ಪ್ರಮುಖ ಜನಾಂಗಗಳು, ಅನೇಕ ಜಾತಿಗಳು, ಉಪಜಾತಿಗಳು, ಬುಡಕಟ್ಟುಗಳು ಇವೆಲ್ಲವುಗಳಿಂದ ಕೂಡಿದ ಭಾರತದ ಸಂಸ್ಕೃತಿ ದಿಗ್ಭ್ರಮೆಗೊಳಿಸುವಷ್ಟು ಸಂಕೀರ್ಣವಾಗಿದೆ. ಈ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಮಾನವ ವಿಜ್ಞಾನಿಗಳು, ಸಮಾಜ ವಿಜ್ಞಾನಿಗಳು, ಭಾರತ ಶಾಸ್ತ್ರಜ್ಞರು, ಭಾಷಾವಿಜ್ಞಾನಿಗಳು ಮತ್ತು ಜಾನಪದ ವಿದ್ವಾಂಸರು ಸತತವಾಗಿ ಪ್ರಯತ್ನಿಸಿದ್ದಾರೆ. ಭಾರತದಲ್ಲಿ ಜಾನಪದ ಸಂಗ್ರಹ ಕಾರ್ಯಕ್ಕೆ ಎರಡು ಶತಮಾನದಷ್ಟು ಇತಿಹಾಸವಿದ್ದರೂ ಅದರ ವೈಜ್ಞಾನಿಕ ಅಧ್ಯಯನ ಪ್ರಾರಂಭವಾಗಿದ್ದು ಕೆಲವು ದಶಕಗಳಿಂದ ಈಚೆಗೆ ಮಾತ್ರ ಸಂಶೋಧನಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳೂ ಪ್ರಮುಖ ಆಕರಗಳು ಆಗಿವೆ. ಒಂದು ನಾಡಿನ ಇತಿಹಾಸ ಅದರ, ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಕುರಿತು ಸಾಕಷ್ಟು ಮಾಹಿತಿ ನೀಡುತ್ತದೆ. ಇದಲ್ಲದೆ ಆಯಾ ನಾಡಿನ ಆಯಾ ಜನಾಂಗದ ಪ್ರತಿಷ್ಠಿತ ವ್ಯಕ್ತಿಗಳ ಬಗ್ಗೆಯೂ ದಾಖಲೆಯನ್ನು ಒಳಗೊಂಡಿರುತ್ತದೆ. ಇತ್ತೀಚೆಗೆ 'ಅಣ್ಣೀಗೇರಿಯಲ್ಲಿ ಸಾಲಾಗಿ ದೊರೆತ ತಲೆಬುರುಡೆಗಳ ಕುರಿತು ಯಾವುದೇ ಲಿಖಿತ ದಾಖಲೆಗಳು ದೊರೆಯುತ್ತಿಲ್ಲವೆಂದು ವಿದ್ವಾಂಸರು ಹೇಳುತ್ತಿದ್ದಾರೆ. ಈಗ್ಗೆ ಈ ಕುರಿತು ಜನಪದ ಸಾಹಿತ್ಯದ ಕಥನಕಾವ್ಯ, ಲಾವಣಿಪದಗಳು, ತ್ರಿಪದಿಗಳು ಇತ್ಯಾದಿ ಸಾಹಿತ್ಯದಲ್ಲಿ ಈ ಕುರಿತು ಏನಾದರೂ ಮಾಹಿತಿ ಇದೆಯೇ? ಎಂದು ವಿದ್ವಾಂಸರು ಅನ್ವೇಷಣೆ ನಡೆಸಿದ್ದಾರೆ. ಅಂದರೆ ಜನಪದ ಸಾಹಿತ್ಯವೂ ನಮ್ಮ ಚರಿತ್ರೆಯನ್ನು ಗುರುತಿಸುವಲ್ಲಿ ಎಷ್ಟು ಮಹತ್ವದ ದಾಖಲೆಗಳು ಆಗುತ್ತಿವೆಯೆನ್ನುವುದು ಇದರಿಂದ ತಿಳಿದುಬರುವುದು. "ಮಾರ್ಗಪ್ರವೃತ್ತಿಯ ಸಾಂಸ್ಕೃತಿಕ ವಿಶ್ಲೇಶಕರಿಗೆ, ರಾಜ ವ್ಯವಸ್ಥೆಯ ಪರವಾದ ಆಲೋಚನೆಯಷ್ಟೇ, ವಸಾಹತುಶಾಹೀ ಪ್ರಭಾವದ ವಿರೋಧೀ ಮತ್ತು ಪರವಾದ ಆಲೋಚನೆಗಳು ಸ್ವಾಭಾವಿಕ ಹಾಗೂ ಸಹಜ. ಇವೆರಡೂ ಚಾರಿತ್ರಿಕ ಘಟನಾವಳಿಗಳಾಗಿ ಒಂದಕ್ಕೊಂದು ವಿರುದ್ಧವೆಂದು ತೋರಿದರೂ ಇವೆರಡೂ ತಮ್ಮನ್ನು ಪ್ರಬಲಗೊಳಿಸಿಕೊಂಡ ಗುಣಸ್ವಭಾವವು ಒಂದೇ ಆಗಿದೆ.

ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಇರುವ ವಿಶೇಷತೆಯೆಂದರೆ ಈ ಶಕ್ತಿಗಳು ಬೆಳೆಸಲು ಇಚ್ಛಿಸಿದ ಏಕಮುಖೀ ಆಕೃತಿಯ ಬದುಕನ್ನು. ಇಲ್ಲಿಯ ಸಂಕೀರ್ಣ ದೇಶೀ ಮೂಲದ ಜಗತ್ತು ತನ್ನದೇ ಆದ ರೀತಿಯಲ್ಲಿ ರೂಪಿಸಿಕೊಂಡ ಹೊಸ ಸಂವೇದನೆಗಳ ವಿನ್ಯಾಸವನ್ನು ಅರಿಯುವುದೇ ಸಾಂಸ್ಕೃತಿಕ ಅಧ್ಯಯನದ ಮುಖ್ಯ ಗುರಿಯಾಗಬೇಕಾಗಿದೆ.[೮೯]

ಜಗತ್ತಿನ ಇತಿಹಾಸವು ಕಳೆದುಹೋದ ಮಾನವ ಜನಾಂಗಗಳ ಬದುಕಿನ ಇರುವಿಕೆಯನ್ನು ಸಾಕ್ಷ್ಯಾಧಾರಗಳ ಸಮೇತ ಲಿಖಿತ ರೂಪದಲ್ಲಿ ಪರಿಚಯ ಮಾಡಿಸುವಂತಹುದು. ಇದರರ್ಥ ಅದು ಮಾನವ ಜನಾಂಗದ ನಿಜರೂಪವನ್ನು ನಿರೂಪಿಸುವ ಉದ್ದೇಶ ಹೊಂದಿರುವುದು. ಇದಕ್ಕೆ ಆಕರಗಳಾಗಿ, ಶಾಸನಗಳು, ಪಾಳು ದೇಗುಲಗಳು, ತಾಮ್ರಪಟಗಳು, ಹಸ್ತಪ್ರತಿಗಳು, ನಾಣ್ಯಗಳು. ವಿದೇಶಿ ಬರಹರೂಪದ ಲೇಖನಗಳು, ಕೈಫಿಯತ್ತುಗಳು, ಕವಿ ಬರಹ ಇತ್ಯಾದಿ ಇವುಗಳನ್ನೆಲ್ಲ ಗಮನಿಸುತ್ತದೆ. ಇದೇ ಗತಕಾಲದ ಚಿತ್ರವೆಂದು ಇತಿಹಾಸ ನಿರೂಪಿಸಲು ಪ್ರಯತ್ನಿಸಿದೆ.

ಜಾನಪದ ಸಾಹಿತ್ಯವು ಮಾನವನ ಬದುಕಿನ ಕತೆಯನ್ನೇ ನಿರೂಪಿಸಿದರೂ ಅದರ ಉದ್ದೇಶ ಇತಿಹಾಸಕ್ಕಿಂತ ಭಿನ್ನವಾದುದು. ಆಯಾ ಕಾಲಸಂದರ್ಭದಲ್ಲಿ ಮಾನವನು ನಿಜಜೀವನದಲ್ಲಿ ಕಾಣಿಸಿಕೊಂಡ, ಕೇಳಿಸಿಕೊಂಡ, ತಾನು ಅನುಭವಿಸಿದ ಅನೇಕ ವಿಚಾರಗಳನ್ನು ತನ್ನ ಸುತ್ತಲಿನ ಜನಗಳಿಗೆ, ಮುಂದಿನ ಪೀಳಿಗೆಗೆ, ತಿಳಿಸುವ ಕಾರ್ಯವನ್ನು ಜಾನಪದ ಸಾಹಿತ್ಯ ಮಾಡುತ್ತದೆ. ಇದನ್ನು ತಿಳಿಸುವ ಸಂದರ್ಭದಲ್ಲಿ ಕೇಳುಗನಿಗೆ (ಸಹೃದಯನಿಗೆ) ರಂಜನೀಯ ಶೈಲಿಯನ್ನು ಬಳಸುವದು. ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕ ಮಾಹಿತಿಗಳು ಜನಪದ ಸಾಹಿತ್ಯದಲ್ಲಿವೆ. ಜನಪದ ಸಾಹಿತ್ಯವು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಹರಿದು ಬಂದಿರುವಂತಹದು. ಈ ಸಾಹಿತ್ಯದ ನಿಜವಾದ ಕರ್ತೃ ಯಾರೆಂದು ಗುರುತಿಸುವುದು ಆಗುವುದಿಲ್ಲ. ಇದರಲ್ಲಿ ಆಯಾ ಪ್ರದೇಶದ, ಜನಾಂಗದ ಸಾಮೂಹಿಕ ಭಾವನೆಗಳು, ಸಮೂಹದ ಚಿಂತನೆಗಳು, ಸಮಾಜದ ಒಟ್ಟು ಸಾಮಾನ್ಯ ಅನುಭವಗಳು ಅಡಕವಾಗಿರುತ್ತವೆ.

ಚರಿತ್ರೆಯನ್ನು ಸತ್ಯದ ಚೌಕಟ್ಟಿನಲ್ಲಿ ಹಿಡಿದಿಡಬೇಕೆನ್ನುವುದಾದರೆ ಸಂಶೋಧಕರು ಜನಪದ ಸಾಹಿತ್ಯದತ್ತ ಅತ್ಯಗತ್ಯ ಗಮನ ನೀಡಬೇಕಾಗುತ್ತದೆ. ಚರಿತ್ರೆಗೂ ಸಂಬಂಧಿಸಿದ ಅದೆಷ್ಟೋ ವಿಚಾರಗಳು ಜನಪದಗೀತೆಗಳಲ್ಲಿ, ಕೆಲವು ಬಿಡಿ ಪದ್ಯಗಳ ಗೀತೆಗಳಾಗಿ, ದೀರ್ಘ ಕಥನ ಕಾವ್ಯಗಳಾಗಿ, ಲಾವಣಿಗಳಾಗಿ ನಿರೂಪಿತವಾಗಿರುತ್ತವೆ. ಚರಿತ್ರೆಯಲ್ಲಿ ನಡೆದು ಹೋದ ಘಟನೆಗಳನ್ನು, ಪ್ರಸಂಗಗಳನ್ನು, ಸ್ಥಿತ್ಯಂತರಗಳನ್ನು ಗಮನಿಸಿದ ವ್ಯಕ್ತಿಯೊಬ್ಬನು ಆ ವಿಚಾರದಲ್ಲಿ ತನ್ನ ಅನಿಸಿಕೆಗಳೇನೆಂಬುದನ್ನು ಗೀತೆಗಳ ರೂಪದಲ್ಲಿ ಕಂಡರಿಸುತ್ತಾನೆ. ಆಗ ನಡೆದ ಘಟನೆಯ ಕುರಿತು ಹಾಡಿನಲ್ಲಿ ಅವನೇನು ಮೂಡಿಸಿದ್ದಾನೆಯೋ ಅದೆಲ್ಲವೂ ಸತ್ಯ. ಆದರೆ ಅದು ಅನೇಕ ಬಾಯಿಗಳ ಮೂಲಕ ಹಾಗೂ ಕವಿಯ ನೆನಪಿನ ಶಕ್ತಿಯನ್ನು ದಾಟಿಕೊಂಡು ಬರುವ ಸಂದರ್ಭದಲ್ಲಿ ಏನೇನನ್ನು ಬಿಟ್ಟುಕೊಡುವುದೋ, ಏನೇನನ್ನು ಸೇರಿಸಿಕೊಳ್ಳುತ್ತದೋ ತಿಳಿಯಲಾಗದು. ಒಂದೇ ವಿಷಯ ವಿಚಾರ ಕುರಿತು

ಅನೇಕ ಗೀತೆಗಳ ಬೇರೆ ಬೇರೆಯವರಿಂದ ಹಾಡಿಸಿ ಮೂಲಪಾಠವನ್ನು ಗೊತ್ತು ಹಚ್ಚಬಹುದಾದರೂ ಅದರ ಮೂಲವಾಗಿರುವ ಇನ್ನೊಂದು ಪಾಠವು ಎಲ್ಲಿಯೋ ಇರುವ ಸಾಧ್ಯತೆ ಇದ್ದೇ ಇರುತ್ತದೆ. ಆದರೆ ಮೂಲವನ್ನು ಹುಡುಕುವುದು ಸಾಧ್ಯವೇ ಆಗದಿರಬಹುದು.

ಒಟ್ಟಿನಲ್ಲಿ ಜನಪದ ಸಾಹಿತ್ಯವು ಐತಿಹಾಸಿಕ ವಿವರಗಳನ್ನು ನಿರೂಪಿಸುವಲ್ಲಿ ಆಕರಗಳಾಗಿ ಬಳಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಗೋಲಗೇರಿ ಗೊಲ್ಲಾಳೇಶ್ವರನಿಗೆ ಸಂಬಂಧಿಸಿದ ಲಾವಣಿ, ಕಥನಕವನ, ಹಂತಿ ಪದಗಳು, ಬೀಸುಕಲ್ಲಿನ ಪದಗಳು ಇತ್ಯಾದಿ ಜನಪದ ಸಾಹಿತ್ಯ ಪ್ರಕಾರಗಳನ್ನು ಆಕರಗಳಾಗಿ ಬಳಸಿಕೊಂಡು ಗೊಲ್ಲಾಳೇಶ್ವರ ಚರಿತ್ರೆಯನ್ನು ತಿಳಿಯುವ ಪ್ರಯತ್ನ ಪ್ರಸಕ್ತ ಸಂಶೋಧನ ಪ್ರಬಂಧದಲ್ಲಿ ಮಾಡಲಾಗಿದೆ.

ಗೊಲ್ಲಾಳೇಶ್ವರ, ಗೊಲ್ಲಾಳ, ಲಿಂಗಯ್ಯನೆಂದು ಪೂಜೆಗೊಳ್ಳುತ್ತಿರುವದು ಗೋಲಗೇರಿಯಲ್ಲಿ. ಗೋಲಗೇರಿ ಗ್ರಾಮವು ಕರ್ನಾಟಕ ರಾಜ್ಯದ ವಿಜಾಪೂರ ಜಿಲ್ಲೆಯ, ಸಿಂದಗಿ ತಾಲ್ಲೂಕಿನಲ್ಲಿರುವ ಗ್ರಾಮ ಅದು ಮೊದಮೊದಲು ಗ್ರಾಮವಾಗಿರಲಿಲ್ಲ. ಇಲ್ಲಿ ಗೊಲ್ಲಾಳ ಕುರಿಯ ಹಟ್ಟಿಯನ್ನು ಹಾಕಿಕೊಂಡಿದ್ದನೆಂದು ಪ್ರಸ್ತಾಪಿಸಲಾಗಿದೆ. ಗೊಲ್ಲಾಳ ಹುಟ್ಟಿದ್ದು ಗೋಲಗೇರಿಯಿಂದ ನಾಲ್ಕು ಕಿಲೋಮೀಟರ ದೂರದಲ್ಲಿರುವ 'ಢವಳಾರ' ಎಂಬ ಗ್ರಾಮದಲ್ಲಿ. ಇದೂ ಕೂಡ ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನಲ್ಲಿರುವುದು. ಈತನ ತಂದೆಯ ಹೆಸರು 'ಬಲ್ಲುಗ'ನೆಂದೂ, ತಾಯಿಯ ಹೆಸರು 'ದುಗ್ಗಳೆ'- 'ದ್ಯಾಮವ್ವ' ಎಂದೂ ಇರುವುದು. ಈ ದಂಪತಿಗಳು 'ಕುರುಬ' ಜನಾಂಗಕ್ಕೆ ಸೇರಿದವರಾಗಿದ್ದರು. ಇವರ ಆರಾಧ್ಯ ದೈವ ಬೀರಪ್ಪನಾಗಿದ್ದಾನೆ. ಗೊಲ್ಲಾಳನು ತನ್ನ ವಚನಗಳ ಅಂಕಿತ 'ವೀರಬೀರೇಶ್ವರಲಿಂಗ' ಎಂದಿರುವುದು. (ಕುರುಬ ಜನಾಂಗದ ಆರಾಧ್ಯ ದೈವಗಳಲ್ಲಿ ವೀರಬೀರೇಶ್ವರನು ಒಬ್ಬನಾಗಿದ್ದಾನೆ. ) ಇವರುಗಳ ವೃತ್ತಿ ಕುರಿಕಾಯುವದು. ಈ ಮೇಲಿನ ಸಾಕ್ಷಾಧಾರಗಳಿಂದ ಹಾಗೂ ಗೊಲ್ಲಾಳನು ತನ್ನ ವಚನಗಳಲ್ಲಿ ಕುರಿ, ಹೋತು, ಟಗರು, ಕಂಬಳಿ ಈ ಶಬ್ದಗಳನ್ನು ಪದೇ ಪದೇ ಬಳಸಿರುವುದರಿಂದ ಈತ ಕುರುಬನಾಗಿದ್ದನು ಎಂಬುದಕ್ಕೆ ಮತ್ಯಾವ ಆಧಾರಗಳು ಬೇಕಿಲ್ಲ ಎನಿಸುತ್ತದೆ.

ಬಲ್ಲುಗ- ದುಗ್ಗಳೆಯರ ಕುಟುಂಬವು ಸಾಕಷ್ಟು ಸಂಪತ್ತುಳ್ಳದ್ದಾಗಿತ್ತು. ಇವರದು ಸ್ಥಿತಿವಂತ ಕುಟುಂಬವಾಗಿತ್ತು. ಜನಪದ ಸಾಹಿತ್ಯದಲ್ಲಿ ಉಲ್ಲೇಖಿಸಿದ ಹಾಗೆಯೇ, ಗೋಲಗೇರಿ, ಡಂಬಳ, ಢವಳಾರ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕುರಿ ದೊಡ್ಡಿಗಳು ಇದ್ದವು. ಇವರು ಇವುಗಳ ಒಡೆಯರಾಗಿದ್ದರು ಎಂಬುದು ಜನಪದರ ಹೇಳಿಕೆ. ಇದು ಜನಪದರು ರಚಿಸಿದ ಹಾಡುಗಳಿಂದಲೂ ತಿಳಿದು ಬರುವುದು. (ಆದರೆ ಈ ಕುಟುಂಬವು ನೆಲೆಸಿದ ಗ್ರಾಮವು ನಶಿಸಿಹೋಗಿದೆ. ಅದರ ಪಕ್ಕದಲ್ಲಿಯೇ ಹೊಸ ಗ್ರಾಮ ಕಟ್ಟಲಾಗಿದೆ. ಆದ್ದರಿಂದ ಇವರು ನೆಲೆಸಿದ ಮನೆ, ಹಟ್ಟಿ ಬೆಳೆದ ಬಗೆಗೆ ಪುರಾವೆಗಳಾಗಲೀ, ಅವಶೇಷಗಳಾಗಲೀ ಅಲ್ಲಿರುವುದಿಲ್ಲ.) ಬಲ್ಲುಗ- ದುಗ್ಗಳೆ ಈ ದಂಪತಿಗಳ ಮಗನಾದ ಗೊಲ್ಲಾಳನು ಭಕ್ತಿ ಪಾರಮ್ಯತೆಯಿಂದ ಶಿವನನ್ನು ಒಲಿಸಿಕೊಂಡಿದ್ದು ಹಾಗೂ ನಂಬಿಕೆ, ನಿಷ್ಠೆಯಿಂದ ಗಣಪದವಿಯನ್ನು ಪಡೆದುಕೊಂಡಿದ್ದು, ಈತನ ಜೀವನದ ಮಹತ್ವದ ಕುರುಹುಗಳೆಂದು ಅವನ ಚರಿತ್ರೆಯಿಂದ ತಿಳಿದುಬರುವುದು.

ಕನ್ನಡದ ವೀರಶೈವ ಕಾವ್ಯಗಳಲ್ಲಿ ಗೊಲ್ಲಾಳನ ಭಕ್ತಿಯ ಉತ್ಕಟತೆಯು ನಿರೂಪಿತವಾದ ಹಾಗೆ, ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಾದ

೧. ಲಾವಣಿ

೨. ತತ್ವಪದಗಳು

೩. ಹಂತಿಯ ಪದಗಳು

೪. ಡೊಳ್ಳಿನ ಪದಗಳು

೫. ಜೋಗುಳ ಪದಗಳು

೬. ಬೀಸುವ ಕಲ್ಲಿನ ಪದಗಳು

೭. ಕಂಬೀ ಹಾಡುಗಳು

ಇವುಗಳಲ್ಲಿ ಗೋಲಗೇರಿ ಲಿಂಗಯ್ಯನ (ಗೊಲ್ಲಾಳ) ಕುರಿತಾದ ಮೌಖಿಕ ಸಾಹಿತ್ಯ ಚರಿತ್ರೆ ಹೇಗೆ ನಿರೂಪಿಸಲಾಗಿದೆಂಬುದು, ಬಹುಮುಖ್ಯವೆನ್ನಿಸಿದ್ದರಿಂದ ಸಂಪಾದಿತ ಜನಪದ ಸಾಹಿತ್ಯ ಮತ್ತು ಇನ್ನೂ ಮೌಖಿಕ ಪರಂಪರೆಯಲ್ಲಿಯೇ ಉಳಿದುಕೊಂಡಿರುವ ಸಾಹಿತ್ಯವನ್ನು ಕ್ರೋಢೀಕರಿಸಿ ವಿಶ್ಲೇಷಿಸಲಾಗಿದೆ.

## ೧. ಲಾವಣಿ ಪದಗಳು :

"ಲಾವಣಿಯ ಸಾಹಿತ್ಯಕ್ಕೆ ೨೦೦ ವರ್ಷಗಳಿಗಿಂತ ಹಿಂದಿನ ಚರಿತ್ರೆಯಿಲ್ಲ. ಲಾವಣಿ ಸಾಹಿತ್ಯ ನಮ್ಮ ನಾಡಿನ ಬಡಗು ಗಡಿಯಲ್ಲಿ ಹುಟ್ಟಿ ಬೆಳೆದು ಆಮೇಲೆ ಮೆಲ್ಲಮೆಲ್ಲನೆ ತೆಂಕಣಕ್ಕೆ ಇಳಿಯುತ್ತ ಬಂದಿದೆ. ತೀರ ತೆಂಕಣ ಪ್ರದೇಶದಲ್ಲಿ ಲಾವಣಿ ಸಾಹಿತ್ಯದ ಹೆಚ್ಚಿನ ಪರಿಚಯವೂ ಇಲ್ಲ. ನಿರ್ಮಿತಿಯೂ ಇಲ್ಲ. ನಾಡಿನ ಉತ್ತರ ಭಾಗದಲ್ಲಿ ಲಾವಣಿ ಸಾಹಿತ್ಯ ಹುಲುಸಾಗಿ ಬೆಳೆದಿದೆಯಾದರೂ ಅದರ ಮೂಲ ನಮ್ಮ ನಾಡಿನದಲ್ಲ. ಉತ್ತರದ ನೆರೆನಾಡಾದ ಮಹಾರಾಷ್ಟ್ರದಿಂದ ತಂದು ಹಚ್ಚಿದ ಸಸಿಯ ಬೆಳೆ ಅದು."[೮೪] ಈ ಲಾವಣಿಪದಗಳು ಜನರಲ್ಲಿ ಜಾಗೃತ ಆಂದೋಲನದ ಅಂಗವಾಗಿ ಹುಟ್ಟಿಕೊಂಡಿದ್ದು ಎನ್ನಬಹುದು. ಸ್ವಾತಂತ್ರ್ಯ ಆಂದೋಲನ, ಖಾದಿ ಪ್ರಚಾರ, ಗ್ರಾಮ ಸ್ವರಾಜ್ಯ ಮುಂತಾದ ವಿಷಯಗಳನ್ನೊಳಗೊಂಡು ಸ್ವಾತಂತ್ರ್ಯ ಚಳುವಳಿಗೆ ಇವು ಸ್ಫೂರ್ತಿ ಸೆಲೆಗಳಾಗಿದ್ದವು. ಕರ್ನಾಟಕದ ಉತ್ತರ ಭಾಗದಲ್ಲಿ ಪ್ರಚಲಿತವಿರುವ ಒಂದು ಜನಪದ ಗೀತ ಪ್ರಕಾರ ಬೆಳಗಾವಿ, ಧಾರವಾಡ, ವಿಜಾಪೂರ, ಗುಲಬರ್ಗಾ, ಬೀದರ ಜಿಲ್ಲೆಗಳಲ್ಲಿ ಈ ಗೀತ ಸಾಹಿತ್ಯದ ಹರಹು ಹೆಚ್ಚಿತ್ತು. ಈಗ್ಗೆ ಕಡಿಮೆಯಾಗಿದೆ.

ಗುಣಚಂದ್ರನ "ಛಂದಸ್ಸಾರಂ" ಗ್ರಂಥದಲ್ಲಿ (ಕ್ರಿ.ಶ. ೧೬೫೦) ಲಾವಳಿ (ಣಿ)ಯ ಪ್ರಸ್ತಾಪ ಬಂದಿದೆ. ಅದರಲ್ಲಿ ಲಾವಣಿಯ ಸ್ವರೂಪವನ್ನು ಸೂತ್ರ ರೂಪದಲ್ಲಿ ಈ ರೀತಿ ತಿಳಿಸಿದೆ.

"ಲಘು ಮಿಳಿತವ ಮಾಡಿ। ಕೊನೆಯಲ್ಲಿ ಗುರುಗಳ ಹೂಡಿ ।

ಅರ್ಥದ ಸಾರವ ನೋಡಿ । ಪ್ರಾಸನು ಕೊನೆಯಲ್ಲಿ ಹೂಡಿ ।

ಪಾದ ಮಿತಿಯ ಬೀಸಾಡಿ । ಲಾವಳಿ (ಣಿ) ಕೃತಿಗಳ ಪಾಡಿ ।।"[೮೫]

ಹೀಗೆ ಲಾವಣಿಯ ಛಂದೋ ಶಿಲ್ಪವನ್ನು ಕುರಿತಾಗಿ ಹೇಳಿದೆ. ಗೊಲ್ಲಾಳೇಶ್ವರ ಚರಿತ್ರೆಯನ್ನು ಕುರಿತು ಕವಿ ಲಾವಣಿಕಾರ ರಚಿಸಿದ ಲಾವಣಿಪದ ಪ್ರಕಟವಾಗಿದೆ. ಲಾವಣಿಯಲ್ಲಿ ಗೊಲ್ಲಾಳ ಬದುಕಿ -ಬಾಳಿದ ನೆರೆ-ಹೊರೆಯ ಪ್ರದೇಶದ ಚಿತ್ರಣ ಹಾಗೂ ಆತನ ಲಿಂಗ ನಿಷ್ಠೆಯನ್ನು, ನಿರ್ಮಲವಾದ ಅಂತಃಕರಣ, ಅಚಲವಾದ ನಂಬಿಕೆ, ಮಹೇಶ್ವರನ ಸಾಕ್ಷಾತ್ಕಾರಕ್ಕೆ ಕಾರಣವಾದ ಬಗೆಯನ್ನು ವಿವರಿಸಲಾಗಿದೆ. ಈ ಪದದ ಕವಿ 'ಬಸವಣ್ಣೆಪ್ಪ ಧಂಗಾಪೂರ' ಎಂದು ಸ್ಪಷ್ಟೀಕರಿಸಿದ್ದುಂಟು. "ಇಲ್ಲಿ ಲಾವಣಿಕಾರನು "ಕವಿ ಮಾಡಿ ಭಾಗಣ್ಣ ಇಟ್ಟನಲ್ಲ" ಎಂದು ಹೇಳಿದ್ದಾನೆ. ಆದರೆ ಇದನ್ನು ರಚಿಸಿದ ನಿಜವಾದ ಕವಿ ಬಸವಣ್ಣೆಪ್ಪ ಧಂಗಾಪೂರ. ಆಳಂದ ತಾಲೂಕಿನ (ಗುಲಬರ್ಗಾ ಜಿಲ್ಲೆ) ಧಂಗಾಪುರ ಗ್ರಾಮದ ಕಬ್ಬಲಗೇರಿ ಮನೆತನದ ಬಸವಣ್ಣೆಪ್ಪ ಏಳನೆ ತರಗತಿಯವರೆಗೆ ಕಲಿತವನು. ಈತನು ಬದುಕಿದ್ದುದು ೧೮೭೦-೧೯೭೦, ನೂರು ವರುಷ. ಇನ್ನು "ಭಾಗಣ್ಣ' ಬಸವಣ್ಣೆಪ್ಪನ ಹೆಂಡತಿಯ ಅಣ್ಣ, ಆತ ಭಾರೀ ಪುಢಾರಿ ಇದ್ದನಂತೆ, ಅವನೆಂದರೆ ಜನ ಹೆದರುತ್ತಿದ್ದುದರಿಂದ ಕವಿ ಬಸವಣ್ಣೆಪ್ಪ ತನ್ನ ಹಾಡುಗಳಲ್ಲಿ 'ಭಾಗಣ್ಣ"ನ ಹೆಸರನ್ನು ಸೇರಿಸಿದ್ದಾನೆ ಎಂಬ ವಿವರವು ಡಾ. ಮಲ್ಲಿಕಾರ್ಜುನ ಶಿ. ಲಠ್ಠೆಯವರ ಉತ್ತರ ಕನ್ನಡ ಜನಪದ ಕವಿಚರಿತೆ ಸಂಪುಟ ಒಂದು ಪುಟ ೧೦೬-೧೦೭ ರಲ್ಲಿ ನಮೂದಿತವಾಗಿದೆ. ಹಾಗೆಯೇ ಕವಿ ಬಸವಣ್ಣೆಪ್ಪನ ಹಾಡುಗಳಲ್ಲಿ "ಭಾಗಣ್ಣ"ನ ಅಂಕಿತವಿದ್ದ ಹಾಡುಗಳು ಈ ಬಸವಣ್ಣೆಪ್ಪ ನಾಟಿಕಾರನ ಹಾಡುಗಳಾಗಿವೆ ಎಂದು ಸ್ಪಷ್ಟೀಕರಿಸಿದ್ದಾರೆ."[೮೬] ಜನಪದರು ಅಷ್ಟೇನೂ ಅಕ್ಷರಬಲ್ಲವರಾಗಿರದಿದ್ದರೂ ಅನುಭಾವದ ಅಭಿವ್ಯಕ್ತಿಯ ಸಂದರ್ಭದಲ್ಲಿ ಶಿಷ್ಟಕವಿಗಳಿಗೇನೂ ಕಡಿಮೆ ಇರಲಿಲ್ಲ. ವ್ಯಷ್ಟಿ ಪ್ರಜ್ಞೆಗಿಂತ ಸಮುಸಮಷ್ಟಿ ಪ್ರಜ್ಞೆಯಲ್ಲಿಯೇ ಬದುಕಿದವರು. ಹೀಗಾಗಿ ಅವರ ಅನುಭವ ಸಮಷ್ಟಿ ಬದುಕಿನಲ್ಲಿ ಅನ್ಯೋನ್ಯವಾಗಿ ಬೆರೆತು ಬಾಳಿದುದರಿಂದ ಫಲಿಸಿದ್ದು. ಅನುಭವ ಮತ್ತು ಹಾಡಿನ ಭಾಷೆಯೂ ಜನಸಾಮಾನ್ಯರ ಜೀವನ ಸಂಸ್ಕಾರದಿಂದಲೇ ಮೈಗೂಡಿಸಿಕೊಂಡು ರೂಪತಾಳಿರುವಂತಹದ್ದು. ಇನ್ನು ಯಾವುದೇ ವ್ಯಕ್ತಿಯ ಚರಿತ್ರೆಯನ್ನು ರಚಿಸುವಾಗ ಕಥಾನಾಯಕನೇ ಕೇಂದ್ರಬಿಂದುವಾಗಿರುವನು.

"ಶ್ರೀಶೈಲದಲ್ಲಿ ಇರುವಂಥ ಶ್ರೀ ಸಾಂಬ ಶಿವಹರನು

ಕುರಿ ಹಿಕ್ಕಿದೊಳು ಸೇರಿ ತೋರಿದಾನು ತನ್ನ ಲೀಲಾ

ಮೇಲಾದ ಗೋಲಗೇರಿ ಗೊಲ್ಲಾಳಲಿಂಗ ಮಾಡಿದಂತ ತಪಶೀಲ

ಕುಂತು ಕೇಳಬೇಕರಿ ಸಂತೋಷದಿಂದ ಸರ್ವರೆಲ್ಲ

ವಚ್ಚ ಕುರುಬನ ಹುಚ್ಚ ಭಕ್ತಿಗೆ ಮೆಚ್ಚಿ ಶಂಕರ

ಶಂಕರ ಮುಕ್ತಿಕೊಟ್ಟ ಕೇವಲ

ಉದ್ಧಾರ ಮಾಡಲಾಕ ಸಿದ್ಧ ಆಗಿ ನಿಂತಿದಾನು ಜಗಪಾಲ ॥ ಜೀ ಜೀ ॥"[32]

ಶಿವಲಿಂಗಲೀಲೆ ಕುರಿತು ಅನಂತ ಐತಿಹ್ಯಗಳಿವೆ ಹಾಗೂ ಶಿಷ್ಟ ಜನಪದ ಕವಿಗಳು ಗೀತೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಇದೂ ಸಹ ಒಂದಾಗಿದೆ. 'ಕುರಿಹಿಕ್ಕೆ'ಯನ್ನೇ ಲಿಂಗವೆಂದು ನಂಬಿ ಪೂಜಿಸಿದ ಭಕ್ತನಿಗೆ ಒಲಿದು, ಮುಕ್ತಿ ಮಾರ್ಗವನು ತೋರಿಸಿ ಮುಕ್ತಿ ನೀಡಿದನು ಶಿವ. ಶಿವಭಕ್ತರಲ್ಲಿರುವ ಅಂತರಾತ್ಮದ ಮಿಡಿತವನ್ನು ವರ್ಣಿಸಲಾಗಿದೆ. ದೈವೀ ಉಪಾಸನೆಯ ಮಾರ್ಗಗಳು ಹಲವಾಗಿದ್ದರೂ ಹೋಗಿ ಸೇರುವ ಸ್ಥಳ ಒಂದೇ ಆಗಿದೆ. ಅವನು ಜಾತಿಯಿಂದ ಯಾರಾದರೇನು? ಶಿವಭಕ್ತನಾದರೆ ಸಾಕು, ಎಲ್ಲರೂ ಒಂದೇ ಸಮ. ಹರನು ಭಕ್ತರಿಗೆ ಒಲಿಯುವನು.

ಗ್ವಾಲಗೇರಿ ಸೀಮಿಯೊಳಗ ತೋಲ ಮಂದಿ ಸಾಲ ಹಿಡಿದು, ಶ್ರೀಶೈಲಕ ಹೋಗುವಾಗ ............ ಪಾಪ ಎಲ್ಲ ಲೋಪ ಮಾಡತಾನ ಭೂಪಾಲ, ಸರ್ವ ದೋಷ ನಾಶ ಆಗತಾದ ಅಂಬೊ ಹಂಬಲ. ಆಂಧ್ರ ಪ್ರದೇಶದಲ್ಲಿರುವ ಶ್ರೀಶೈಲ ಮಲ್ಲಿಕಾರ್ಜುನನ ದರ್ಶನಕ್ಕೆ ಸಾವಿರಾರು ಭಕ್ತರು ಫಾಲ್ಗುಣ ಮಾಸದಲ್ಲಿ ಕಂಬಿಯೊಂದಿಗೆ ನಡೆದುಕೊಂಡು ಹೋಗುವರು. (ಕಂಬಿಯನ್ನು ಜಂಗಮನು ಹೊತ್ತಿರುವನು) ಲಾವಣಿಕಾರನು ಸ್ಥಾವರಲಿಂಗದ ವರ್ಣನೆಯನ್ನು ಮಾಡಿದ್ದಾನೆ. ಸ್ಥಾವರಲಿಂಗ ದರ್ಶನಕ್ಕೆ ಜನಗಳು ಹೇಗೆ ಜಯಘೋಷವನ್ನು ಹಾಕುತ್ತಾ ಸಾಗುತ್ತಾರೆಂಬುದನ್ನು ಹೇಳಿದ್ದಾನೆ ಹಾಗೂ ಲಿಂಗ ಮಹಿಮೆಯನ್ನು ವರ್ಣಿಸುವನು. ಜಂಗಮ ಗೊಲ್ಲಾಳನಿಗೆ ಲಿಂಗ ಮಹಿಮೆಯನು ತಿಳಿ ಹೇಳುವನು. ಆಗ ಈತನಿಗೆ ಲಿಂಗದಲ್ಲಿ ಭಕ್ತಿ ನೆಲೆಯೂರಿ ತನಗೊಂದು ಲಿಂಗವನ್ನು ತರಲು ಹೇಳುತ್ತಾನೆ. ಅದಕ್ಕಾಗಿ ತನ್ನ ಹೊನ್ನ ಬಿಂದಿಗೆಯನ್ನು ನೀಡುತ್ತಾನೆ. (ಶರಣ ಕಾಯಕ ಸಿದ್ಧಾಂತದಂತೆ, ಗೊಲ್ಲಾಳ ಕಾಯಕ ನಿರತನಾಗಿ ತನ್ನ ಸಂಪತ್ತನ್ನು ಜಂಗಮನಿಗೆ ಅರ್ಪಿಸಿದ ಎಂಬುದು ಗಮನಾರ್ಹ) ಹರನು "ಜಂಗಮನ ಪಾದ ಅಂಗುಲದಿಂದ ಜನಿಸಿ ಬಂದಾನಲ್ಲ ವಚ್ಚ ಕುರುಬನ ಹುಚ್ಚ ಭಕ್ತಿಗಿ ಮೆಚ್ಚಿ ಶಂಕರ, ಮುಕ್ತಿ ಕೊಟ್ಟಿದಾನ ಕೇವಲ", ಹರನು ಜಂಗಮನ ಪಾದ ಅಂಗುಲದಿಂದ ಜನಿಸಿದ ಎಂಬುದರ ಅರ್ಥ ವಿಶಾಲತೆಯನ್ನು ಅರಿಯುವುದರ ಅವಶ್ಯಕತೆಯಿದೆ. "ಮನುಕುಲದ ಎಲ್ಲ ಜಾತಿ, ಪಂಗಡಗಳಲ್ಲಿ, ಅಂತೆಯೇ ಪ್ರಪಂಚದ ಮೂಲೆ ಮೂಲೆಗಳಲ್ಲಿ, ದೇವರ ಕುರಿತಾದ ನಂಬಿಕೆ, ಆಚಾರ ವಿಚಾರಗಳು ಇಷ್ಟೊಂದು ಪ್ರಬಲವಾಗಿ ಬೇರುಬಿಟ್ಟು ಬೆಳೆದದ್ದು ಹೇಗೆ ? ಕೇವಲ ಒಂದು ಕಲ್ಪನಾಶೀಲ ಸಂಗತಿಗೆ ಕಾಲದ ಪರೀಕ್ಷೆಯನ್ನು ಗೆದ್ದು ನಿಲ್ಲುವ ಶಕ್ತಿ ಬರುವುದಾದರೂ ಸಾಧ್ಯವೇ ? ಅಥವಾ ತಾವು ಮಾತ್ರವೇ ಪುರೋಗಾಮಿಗಳು ಎಂದುಕೊಳ್ಳುವವರು ಹೇಳಿಕೊಳ್ಳುವ ಹಾಗೆ, ಮನುಷ್ಯಸ್ವಭಾವದಲ್ಲಿ ಸಹಜವಾಗಿ ಇರುವ ಶೋಷಣಾ ಮನೋಭಾವವೇ 'ದೇವರ' ಕಲ್ಪನೆಯನ್ನು ಪೋಷಿಸುತ್ತ ಬಂದಿತೇ ? ಅದೇ ವಾದದ ಮುಂದುವರಿದ ಭಾಗವಾಗಿ ಯಾರೋ ನಾಲ್ಕು ಜನ ಪುರೋಹಿತಶಾಹಿಗಳು ಒಂದೆಡೆ ಕೂತು, ದೇವರ ಕಲ್ಪನೆಯನ್ನು ಹುಟ್ಟುಹಾಕಿ ಅದನ್ನೊಂದು ಶೋಷಣಾವಿಧಾನವಾಗಿ ರೂಪಿಸಿದ್ದು ಎಂದೆನ್ನುವುದು ಎಷ್ಟರಮಟ್ಟಿಗೆ ಸ್ವೀಕಾರಾರ್ಹ ?

ಹಾಗಲ್ಲವಾದರೆ ದೇವರೆಂಬುದು ಏನು ?"[೨೨] ಈ ತೆರನಾದ ಪ್ರಶ್ನೆಗಳನ್ನು ಹಾಕಿಕೊಂಡು ವಿವೇಚಿಸಲಾಗಿ, ದೇವರು ಇದ್ದಿದ್ದಾದರೆ ಎಲ್ಲೆಡೆಯೂ ಇದ್ದಾನೆ. ಎಲ್ಲರಲ್ಲಿಯೂ ಇದ್ದಾನೆ. ನಿಸರ್ಗದ ಚರಾಚರ ವಸ್ತುಗಳಲ್ಲಿಯೂ ಎಲ್ಲ ಜೀವಿಗಳಲ್ಲಿಯೂ ದೇವರಿದ್ದಾನೆಂದೇ ಹೇಳಬೇಕಾಗುತ್ತದೆ. ದೇವಲೋಕ, ಮರ್ತ್ಯಲೋಕ ಬೇರಿಲ್ಲ.

'ವಚ್ಚ ಕುರುಬನ ಹುಚ್ಚ ಭಕ್ತಿ" ಎಂದು ಕರೆದಿದ್ದಾನೆ ಲಾವಣಿಕಾರ. ಲೌಕಿಕನ ದೃಷ್ಟಿಯಲ್ಲಿ ಒಂದು ಲಿಂಗಕ್ಕಾಗಿ ಒಂದು ಕುಡಿಕೆ ಹೊನ್ನು ಕೊಟ್ಟವನು ಹುಚ್ಚನೇ ಸರಿ, ಇಲ್ಲಿ ಹುಚ್ಚನೆಂದರೆ ವ್ಯವಹಾರ ಶೂನ್ಯ, ತುಂಬಾ ಬೋಳ್ಯಾ, ಮೋಸ, ವಂಚನೆಯನ್ನು ಅರಿಯದ ಮುಗ್ಧ ಎಂದೇ ಅರ್ಥೈಯಿಸುವುದು ಸಾಮಾನ್ಯ. ಆದರೆ ಅಂಥವರನ್ನು ಪಾರಮಾರ್ಥಿಕ ಚಿಂತಕರು ಗುರುತಿಸುವುದು ಪ್ರಾಪಂಚಿಕ ನಿರ್ಮೋಹಿಯೆಂದು, ಪಾರಮಾರ್ಥಿಕ ಮೋಹಿಯೆಂದು ಸ್ವಭಾವತಃ ಗೊಲ್ಲಾಳನು ತನಗೆ ಬೇಕೆನಿಸಿದ್ದನ್ನು (ಬಯಸಿದ್ದನ್ನು) ಪಟ್ಟುಹಿಡಿದು ಸಾಧಿಸಿ ಪಡೆಯುವ ಛಲವಾದಿಯಾಗಿದ್ದ. ಅವನ ಆ ಗುಣವನ್ನೇ ಕವಿ "ವಚ್ಚಕುರುಬ" ಎಂದಿದ್ದಾನೆ. ಗೊಲ್ಲಾಳನ ಲಿಂಗಪ್ರೇಮ - ಮೋಹ ಎಷ್ಟು ತೀವ್ರ, ಬಲವತ್ತರವಾಗಿತ್ತೆಂದರೆ ಜಂಗಮನ ಮಾತಿನಲ್ಲಿ ಅವನಿಗೆ ಅಪನಂಬಿಕೆ ಹುಟ್ಟಲೇ ಇಲ್ಲ. ಆಗಲೇ ತನ್ನ ತನು-ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಅರ್ಪಿಸಿ ಮಹಾದಾಸೋಹಿಯೆನಿಸಿದನು.'[೨೮]

ಲೋಕದ ಸೃಷ್ಟಿ ಅಂದರೆ ಜೀವ-ಜಗತ್ತು-ದೇವರು ಜೀವಗಳ ಹುಟ್ಟು-ಸಾವು, ಲೋಕದ ಜಂಜಾಟದಿಂದ ಮಾನವನಿಗೆ ಕೊನೆಗೆ ದೊರೆಯುವ ಮುಕ್ತಿ ಇವೇ ಮೊದಲಾದ ತಾತ್ವಿಕ, ಆಧ್ಯಾತ್ಮಿಕ ವಿಚಾರಗಳಲ್ಲಿ ನಾಡಾಡಿಗಳು ವೀರಶೈವ ತತ್ವ ಸಿದ್ಧಾಂತವನ್ನು ಅರಿತಿದ್ದರೂ ಅದರ ಶಾಸ್ತ್ರೀಯ ಭಾಷೆಗೆ ಅಂಟಿಕೊಳ್ಳದೆ ನಾಡಿ -ಮಿಡಿದಂತೆ, ಪರಿಶುದ್ಧತೆಗೆ, ಸದ್ಭಾವನೆಗೆ, ನಂಬಿಕೆಗೆ ಹೆಚ್ಚು ಮಹತ್ವಕೊಟ್ಟಿದ್ದಾರೆ. ಜನಪದರು ನಾಲಿಗೆಯ ಮೇಲೆ ನಂಬಿಕೆಯಿಟ್ಟವರು. ನಂಬಿಕೆಯಿಂದಲೇ ಬಾಳಿ-ಬದುಕುತ್ತಿರುವವರು. ದೇವರನ್ನು ನಂಬಿ ಕೆಟ್ಟವರಿಲ್ಲ ಎಂಬಂತೆ ಇವರಲ್ಲಿ ಭಕ್ತರಿಗೆ ಯಾವ ಅಡ್ಡಗೋಡೆಗಳಿಲ್ಲ. ಮೇಲು - ಕೀಳುಗಳು ಇಲ್ಲ. ಇದನ್ನು ಶರಣರು ಅನುಸರಿಸಿದ್ದುಂಟು. ಹಾಗೆಯೇ ಜನಾಂಗಗಳು ನಂಬಿ ಬದುಕಿದ್ದುಂಟು.

ಕಂಬಿಯನ್ನು ಕೂಡಿಕೊಂಡು ಶ್ರೀಶೈಲದ ಮಲ್ಲಯ್ಯನ ದರ್ಶನ ಪಡೆದುಕೊಂಡು ಅದೇ ದಾರಿಯಿಂದ ಯಾತ್ರಿಕರು ಮರಳಿ ಬರುತ್ತಿರುವರು. ಜಂಗಮನು ಗೊಲ್ಲಾಳನಿಂದ ಸಾಕಷ್ಟು ಹೊನ್ನ ಪಡೆದು ಜಾತ್ರೆಯಲ್ಲಿ ಖರ್ಚುಮಾಡಿ ಅವರೊಂದಿಗೆ ಕೂಡಿಕೊಂಡು ಬರುತ್ತಿದ್ದನು. ಜಂಗಮನ ಆಗಮನವನ್ನೇ ಕಾಯುತ್ತ ದಾರಿಯ ಮಧ್ಯದಲ್ಲಿ ನಿಂತಿದ್ದ ಗೊಲ್ಲಾಳನಿಗೆ ಆ ಸಮೂಹದಲ್ಲಿದ್ದ ಜಂಗಮ ಕಂಡನು. ಆಗ ಜಂಗಮನು ಗೊಲ್ಲಾಳನನ್ನು ನೋಡಿದನು. ಈತ 'ಲಿಂಗ' ತರುವುದನ್ನು ಮರೆತಿದ್ದ. 'ಘಾತಕವಾಯಿತು' ಎಂದು ಮನದಲ್ಲಿ ಅಂದುಕೊಂಡು ಈಗೇನು ಹೇಳಲಿ ಎಂದು ಯೋಚಿಸಿದ. ಈ ಗೊಂದಲದಲ್ಲಿದ್ದ ಜಂಗಮನು ಅಲ್ಲಿಯೇ ಬಿದ್ದಿದ್ದ ಹಿಕ್ಕೆಯನ್ನು

ಕಾಲಬೆರಳಿನಿದ ತೆಗೆದುಕೊಂಡು ಗೊಲ್ಲಾಳನಿಗೆ 'ಲಿಂಗ'ವೆಂದರೆ ಏನೆಂಬುದು ಗೊತ್ತಿಲ್ಲ ಅಂದುಕೊಂಡು ಹಿಕ್ಕೆಯನ್ನೇ ಲಿಂಗವೆಂದು ನೀಡಿದನು. ಜಂಗಮ ನೀಡಿದ ಲಿಂಗ (ಹಿಕ್ಕೆ)ವನ್ನು ಪಡೆದುಕೊಂಡ ಗೊಲ್ಲಾಳ ಸಂತೋಷದಲ್ಲಿ ತೇಲಿದನು. ಲಿಂಗವನ್ನು ಭಕ್ತಿಪೂರ್ವಕವಾಗಿ ಕಣ್ಣಿಗೆ ಒತ್ತಿಕೊಂಡನು. "ಹೊಂಬ ಕುರುಬ ಕೇಳತಾನ ಈ ಸಾಂಬಲಿಂಗದ ಪೂಜೆ ಮಾಡುವುದನ್ನು ತಿಳಿಸಿಕೊಡು" ಎಂದನು. (ಗುರು ಶಿಷ್ಯನಿಗೆ ಲಿಂಗದೀಕ್ಷೆ ನೀಡುವುದು ಎಂದರ್ಥ)

"ಗಟ್ಟಿ ನಂಬಿಗಿ ಇಟ್ಟು ನಡಿಯೋ ಹಾನ ಭಗವಂತ
ಕುರಿ ಹಿಕ್ಕಿ ಡಿಗ್ಗಿ ಹಾಕಿ ಮ್ಯಾಲ ಕೂಡಿಸಿ ಹಾಲ ಎರೆದ
ಲಿಂಗ್ಯಗ ಅಭಿಷೇಕ ಪಂಚಾಮೃತ
ನಿತ್ಯ ಅವನು ಕುಂತಲ್ಲೆ
ಸತ್ಯ ಶಿವನ ಸೇವಾ ಮಾಡುತ."[೮೦]

(ಹಾನ = ಇದ್ದಾನೆ) ಕುರಿಹಿಕ್ಕೆಯನ್ನು ಶ್ರೀಗಿರಿ ಮಲ್ಲಯ್ಯನ ಲಿಂಗವೆಂದು ನಂಬಿಸಿ ಪೂಜಿಸುವ ವಿಧಾನವನ್ನು ಹೇಳಿಕೊಡುವನು. 'ಗಟ್ಟಿ ನಂಬಿಕೆಯಿಟ್ಟು ಭಕ್ತಿಯಿಂದ ಪೂಜಿಸಿದರೆ ಭಗವಂತನು ಮೆಚ್ಚುವನು, ಒಲಿಯುವನು ಎಂದು ಆತ ಬೋಧಿಸಿದ.

ಗೊಲ್ಲಾಳನು ಕುರಿಗಳನ್ನು ಕಾಯುವ ಕುರುಬ, ಈತನಿಗೆ ಕೈಯಲ್ಲಿ ಕುರಿಹಿಕ್ಕೆಯನ್ನು ನೀಡಿದಾಗ ಅವನ ಅರಿವಿಗೆ ಬರಲಿಲ್ಲವೇ ? ಎಂದು ಪ್ರಶ್ನಿಸುವದಕ್ಕಿಂತ ಶರಣರ 'ಲಿಂಗ' ನಿಷ್ಠೆಯ ತತ್ವದ ಪರಿಯಲ್ಲಿ ತಿಳಿಯುವುದು ಉಚಿತವೆನಿಸುತ್ತದೆ. ಶರಣರು ಸ್ಥಾವರಲಿಂಗಕ್ಕೆ ಮನ್ನಣೆ ನೀಡಲಿಲ್ಲ. 'ಉಳ್ಳವರು ಶಿವಾಲಯ ಮಾಡುವರು ........" ಎಂಬಂತೆ ಯಾರಿಗೆ ದೇವಾಲಯದಿಂದ ದೂರವಿಡಲಾಗಿತ್ತೋ ಅಂಥವರ ಪಾಲಿಗೆ ಇಷ್ಟಲಿಂಗದ ಮಹತ್ವವನ್ನು ತಿಳಿಹೇಳಬೇಕಾಗಿತ್ತು. ಹೀಗಾಗಿ ಶರಣರ ದೃಷ್ಟಿಯಲ್ಲಿ 'ಬದನೆಕಾಯಿ'ಯು ಲಿಂಗವಾದದ್ದುಂಟು. ಆದ್ದರಿಂದ ಇಲ್ಲಿ ಗೊಲ್ಲಾಳನ ತತ್ವನಿಷ್ಠೆ, ನಂಬಿಕೆ, ವಿಶ್ವಾಸದಲ್ಲಿ 'ಕುರಿಹಿಕ್ಕೆಯು' ಲಿಂಗವಾಗಿದೆ. ಈ ಭಕ್ತಿ ವೀರಶೈವ ಸಿದ್ಧಾಂತದ ಗುರು-ಲಿಂಗ- ಜಂಗಮ ಇವುಗಳ ಪರಿಕಲ್ಪನೆಗೆ ಒಳಪಟ್ಟ ಭಕ್ತಿಯೇ ಆಗಿದೆ.

ಜಂಗಮಯ್ಯನು ಬೋಧಿಸಿದ ರೀತಿಯಲ್ಲಿ ಗೊಲ್ಲಾಳನು ಕುರಿ ಹಿಕ್ಕೆಯ ತಿಪ್ಪೆಯಲ್ಲಿ ಲಿಂಗವನ್ನಿರಿಸಿ (ಹಿಕ್ಕೆ) ಪ್ರತಿಷ್ಠಾಪಿಸುತ್ತಾನೆ. ದಿನಾಲು ಹಳ್ಳದ ವರತಿಯ ನೀರನ್ನೂ, ಕಾಡಿನ ಎಲೆ, ಹೂಗಳನ್ನು ತೆಗೆದುಕೊಂಡು ಬಂದು ಹಾಲಿನ ಅಭಿಷೇಕ ಎರೆದು ಪೂಜೆಗೈಯುತ್ತಾನೆ. ಶಿವಸ್ತುತಿ ಮಾಡುತ್ತಾ ಧ್ಯಾನಾಸಕ್ತನಾಗುತ್ತಾನೆ. ಇತ್ತ ಮನೆಗೆ ಬರಬೇಕಾದ ಹಾಲು ಬರದೇ ಇರುವುದಕ್ಕೆ ಕಾರಣವನ್ನು ಆತನ ತಂದೆ ಆಳುಗಳಿಂದ ತಿಳಿದುಕೊಳ್ಳುತ್ತಾನೆ. ಆತ ನಿಜ ಸಂಗತಿಯನ್ನು ಕೇಳಿ ಹೌಹಾರುತ್ತಾನೆ. ಕುಪಿತನಾಗಿ ಮಗನಿದ್ದೆಡೆಗೆ ದೌಡಾಯಿಸಿ ಬರುತ್ತಾನೆ. ನನ್ನ ಮಗನಿಗೂ ಲಿಂಗಪೂಜೆಗೂ ಏನು ಸಂಬಂಧ ? (ಶರಣ ಸಮಾಜದಲ್ಲಿ ಆಗಿರುವ ಪರಿವರ್ತನೆ ) ಇದರಿಂದಲೇ

ನನ್ನ ಸಂಪತ್ತೆಲ್ಲ ಹಾಳಾಗಿ ಹೋಯಿತು. ಹೀಗೆ ನಾನಾ ತೆರನಾಗಿ ಬಡಬಡಿಸುತ್ತಾ ಮಗನು ಪೂಜಿಸುವ ಸ್ಥಳಕ್ಕೆ ಬರುವನು. ಅಲ್ಲಿ ಹಾಲು ಹಳ್ಳವಾಗಿ ಹರಿಯುವುದನ್ನು ಕಂಡು ಕುಪಿತನಾಗುತ್ತಾನೆ. (ಹಾಲು ಹಳ್ಳವಾಗಿ ಹರಿಯಿತು ಅಂದರೆ ಸಂಪತ್ತು ಜಂಗಮಕೆ ಅರ್ಪಿತವಾಯಿತು. ಅದೇ ರೋಷಾವೇಶದಿಂದ, ಸಂಪತ್ತಿನ ಮದದಿಂದ ಕೊಬ್ಬಿದ ಈತನು ಪೂಜೆಗಾಗಿ ಅಲಂಕೃತವಾದ ಸ್ಥಳವನ್ನು ಕಾಲಿನಿಂದ ಒದೆಯುವನು. ಇದರಿಂದ, ಲಿಂಗಕ್ಕೆ ಆದ ಅನಮಾನವನ್ನು ಸಹಿಸಲಿಕ್ಕಾಗದೆ, ತಂದೆಯನ್ನು ಗುರುತಿಸದೆ ರೌದ್ರಸ್ವರೂಪಿಯಾಗಿ ಗೊಲ್ಲಾಳನು ಕೊಡಲಿಯಿಂದ ತಂದೆಯ ರುಂಡವನ್ನು ಕತ್ತರಿಸುವನು.

ಚಲ್ಲಾಪಿಲ್ಲಿಯಾದ ಗೊಬ್ಬರದ ತಿಪ್ಪೆಯಲ್ಲಿ ಲಿಂಗವನ್ನು ಹುಡುಕುತ್ತಾನೆ ಗೊಲ್ಲಾಳ. ಲಿಂಗವು ಕಾಣದೇ ಹೋದಾಗ, ಲಿಂಗವಿರದೆ ನಾನು ಬದುಕಿರಲು ಸಾಧ್ಯವಿಲ್ಲ; ನಾನಿನ್ನು ಬದುಕಿರಲೂ ಬಾರದು ಎಂದು ನಿಶ್ಚಯಿಸಿ ಶಿವನಾಮ ಸ್ಮರಣೆಗೈಯುತ್ತಾ ಅದೇ ಕೊಡಲಿಯಿಂದ ತನ್ನ ಕುತ್ತಿಗೆಯನ್ನು ಕತ್ತರಿಸಿಕೊಳ್ಳಲು ಅಣಿಯಾಗುತ್ತಾನೆ, "ಹಿಕ್ಕೆಯೊಳಗೆ ಅಡಗಿ ಕುಳಿತ ದೇವರ ಮಾಯೆ ಯಾರಿಗೂ ತಿಳಿಯುವದಿಲ್ಲ." ಗೊಲ್ಲಾಳನ ಈ ವೀರ ನಿಷ್ಠೆಗೆ ಹರನು ಹಿಕ್ಕೆಯಲ್ಲಿಯೇ ಮೂಡಿಬರುವನು, ಈತನ ಭಕ್ತಿಗೆ ಮೆಚ್ಚಿ ನಿನ್ನಿಷ್ಟ ಏನು ಕೇಳು ಈಡೇರಿಸುತ್ತೇನೆ" ಎಂದು ಶಿವನು ಕೇಳಲು "ಗೊಲ್ಲಾಳಂತಾನ ಲಿಂಗಯ್ಯ ಕಳಿದಾನು ಹ್ಯಾಂಗ ಮಾಡಲಿ ಸಿಕ್ಕರ ಸಾಕು ನನಗ ಏನೂ ಬೇಕಾಗಿಲ್ಲ ಲೋಕದಲ್ಲಿ, ಭಕ್ತರ ನಿರಪೇಕ್ಷ ಲಿಂಗಪ್ರೇಮಕ್ಕೆ, ಮನೋಭಾವಕ್ಕೆ ಶಿವನು ಮೆಚ್ಚಿ ಪ್ರಸನ್ನನಾಗಿ 'ಲಿಂಗ' ತೋರಿಸುವನು.

"ಕುರುಬ ನೋಡ್ಯಾನ ಅಂಗ ಎಂಬೊ ಆತ್ಮದಲ್ಲಿ
ಸಾಕು ಇನ್ನ ನನಗ ಸದಾಕಾಲ
ಇರ್ತೀನಿ ನಿನ್ನ ಹಂತಿಲಿ"[67]

ಗೊಲ್ಲಾಳನು ಸಾಧಿಸಿದ ಲಿಂಗಾಂಗ ಸಾಮರಸ್ಯ, ಲಿಂಗಾಂಗ ಸಂಯೋಗವು ಶರಣರ ತತ್ವಕ್ಕೆ ಅನುಗುಣವಾಗಿದೆ. "ಯಾವ ಜಾತಿ ಆಗಿದರ ಏನ । ನಿರಾಳ ಇಡು ಮನ । ಭಕ್ತಿಗೆ ಕಾರಣ । ಮುಕ್ತ "ಆಗುದಕ ಗುರು ಬೇಕು ಮೋಕ್ಷಕ" ಇದರಂತೆ ಗೊಲ್ಲಾಳನಿಗೆ ಮುಕ್ತಿ ದೊರೆಯುವುದು.

ಜನಪದ ಸಾಹಿತ್ಯದ ಇತರೇ ಪ್ರಕಾರಗಳಾದ ಕಂಬೀ ಹಾಡು, ಹಂತಿಯ ಹಾಡು, ತ್ರಿಪದಿ, ಜೋಗುಳ ಪದ ಹೀಗೆ ಅನೇಕ ಗೀತೆಗಳು ರಚಿತವಾಗಿದ್ದು ಕಥಾವಸ್ತುವಿನಲ್ಲಿ ಸಾಮ್ಯತೆ ಇರುವದು. (ಅನುಬಂಧದಲ್ಲಿ ಗೀತೆಗಳನ್ನು ಕಾಣಿಸಲಾಗಿದೆ) ಈ ಸಾಹಿತ್ಯದಲ್ಲಿ ಗೊಲ್ಲಾಳನ ಭಕ್ತಿಯ ಕಥೆಯನ್ನು ಮನೋಜ್ಞವಾಗಿ ವಿವರಿಸಲಾಗಿದೆ. ಮೇಲ್ಜಾತಿಯವರು ಒಬ್ಬ ಕುರುಬ ಜನಾಂಗದವನನ್ನು ಹೇಗೆ ನೋಡುತ್ತಾರೆ, ಇದನ್ನು ಗೊಲ್ಲಾಳ ಲೆಕ್ಕಿಸದೆ, ಭಕ್ತಿಯಿಂದ ನಂಬಿಕೆ ಇರಿಸಿ ಹರನ ದರ್ಶನ ಪಡೆದು ಮುಕ್ತಿ ಪಡೆದ ಕಥನವಾಗಿದೆ.

"ಸೃಷ್ಟಿಯ ಹುಟ್ಟು -ಸ್ಥಿತಿ-ಲಯಕ್ಕೆ ಕಾರಣವಾದ ನಿರಾಕಾರದ ಸಾಕಾರವೇ ಪರವಸ್ತು ಲಿಂಗ, ಲಿಂಗ ಒಂದು, ಅದರಿಂದ ಹುಟ್ಟಿದುದು ಅಂಗ, ಜೀವಾತ್ಮ. ಅಂಗದ ಹೃದಯ ಲಿಂಗ. ಲಿಂಗದ ನೆಲೆ ಅಂಗ. ಅಂಗನು

ಲಿಂಗವನ್ನು ಅನ್ಯಭಾವವಿಲ್ಲದೆ ಸಾಧನೆಗೈಯುತ್ತ ಹೋದಂತೆ ಲಿಂಗಾಂಗದ ಅವಿನಾಭಾವ ಸಂಬಂಧ ಗಾಢವಾಗುತ್ತ ಹೋಗುತ್ತದೆ. ಇಲ್ಲಿ ಗಾಢವಾಗುವುದೆಂದರೆ ಲಿಂಗವೇ ತನು, ಮನ ಪ್ರಾಣಗಳು ಅಂದ ಬಳಿಕ, ಆಗ ತಾನು ತಾನಲ್ಲ, ಯಾವುದೂ ತನ್ನದಲ್ಲ. ಅವೆಲ್ಲವೂ ಲಿಂಗ, ಲಿಂಗವೇ ತಾನೆಂಬ ಅರಿವು ಅನುಭವವಾಗುವುದು. ಅಂತರಂಗದ ಚೈತನ್ಯ ಲಿಂಗವನ್ನೇ ಕೊಂಡುದಕ್ಕೆ, ನೋಡುವದಕ್ಕೆ ಸಾಕ್ಷಿಯಾಗಬೇಕು. ಅದುವೇ ಇಷ್ಟಲಿಂಗ ಕುರುಹು. "ಭಾವ ಬಲಿದಲ್ಲಿ ಲಿಂಗವೆನಿಸಿತ್ತು. ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು, ಭಾವ ನಿರ್ಭಾವದಲ್ಲಿ ಏನೆಂದೆನಿಸದು ನೋಡಾ" ಎನ್ನುತ್ತಾರೆ ಶರಣ ಸಿದ್ಧರಾಮ. ಭಾವ ನಿರ್ಭಾವವಾಗಿ "ಏನೆಂದೆನಿಸದ" ಸ್ಥಿತಿಯನ್ನು ತಂದುಕೊಡುವುದಕ್ಕೆ 'ಲಿಂಗ" ಸಾಧನವಾಗಿ ಪರಿಣಮಿಸಬೇಕಷ್ಟೆ. ಆದರೆ ಗೊಲ್ಲಾಳ ಆ ಸ್ಥಿತಿಯನ್ನು ಮೀರಿ ಬೆಳೆದಿರುವನೆಂದು ಹೇಳುವ ಶಿವನುಡಿಗಳು "ನೀನಿಗ ಕುರುಹಿನ ಸೆರೆಯಿಂದ ಬಿಡಿಸಿಕೊಂಡು ಲಿಂಗವೇ ಆಗಿರುವೆ. ನನಗೆ ಬೇರೆ ಲಿಂಗದ ಅವಶ್ಯಕತೆಯಿಲ್ಲ. ನಾನು- ನೀನು, ಚಿತ್ತ-ವಸ್ತು ಎಂಬ ಬೇದವಿಲ್ಲ. ನಾನು - ನೀನು ಎಂಬ ದ್ವೈತಭಾವ ಅಳಿದಿದೆ' ಎಂದೆಲ್ಲ ಗೊಲ್ಲಾಳನಿಗೆ ಕ್ರಿಯಾ ಜ್ಞಾನದ (ಅವಿನಾಭಾವ ಸಂಬಂಧದ) ಅರಿವನ್ನುಂಟು ಮಾಡುತ್ತಾನೆ. ಆಗ ಗೊಲ್ಲಾಳನಿಗೆ ಅನ್ನಿಸುತ್ತದೆ - ಶಿವಸಾನಿಧ್ಯಕ್ಕಿಂತ ಮಿಗಿಲಾದುದು ಪ್ರಪಂಚದಲ್ಲಿ ಮತ್ತಾವುದೂ ಇಲ್ಲ. ಅದು ಕಾರಣ ' ಸಾಕು ನನಗ ಸದಾಕಾಲ ಇರ್ತಿನಿ ನಿನ್ನ ಹಂತಿಲಿ" ಅಂತ ತನ್ನ ಇಷ್ಟವನ್ನು ವ್ಯಕ್ತಪಡಿಸುತ್ತಾನೆ.

ಗೊಲ್ಲಾಳನ ಉತ್ಕಟ ಭಕ್ತಿಗೆ, ದೃಢ ವಿಶ್ವಾಸಕ್ಕೆ ಸದ್ಭಾವಕ್ಕೆ ಮೆಚ್ಚಿದ ಶಿವನು ಅವನಿಗೆ ಗೋಲಗೇರಿಯಲ್ಲಿಯೇ ನೆಲೆಸುವಂತೆ ಆಜ್ಞಾಪಿಸುತ್ತಾನೆ. ಹೂವಿನೊಂದಿಗೆ ನಾರೂ ಶಿವನ ಮುಡಿಗೇರುವಂತೆ ಆತನ ತಂದೆ ಭಲ್ಲುಗ, ತಾಯಿ ದುಗ್ಗಳೆಗೂ ಸದ್ಗತಿ ನೀಡುತ್ತಾನೆ. ಶಿವನಿಂದಲೇ ಬೋಧನೆ ಪಡೆದು ಶಿವಜ್ಞಾನಿಯಾದ ಗೊಲ್ಲಾಳನು ಗೊಲ್ಲಾಳೇಶ್ವರ ಲಿಂಗವಾದನು. ಸ್ವಯಂಭು ಆದನು.

ಗೊಲ್ಲಾಳನ ಕುರಿತು ರಚಿತವಾಗಿರತಕ್ಕಂಥ ಸಾಹಿತ್ಯವನ್ನು ಗಮನಿಸಿದರೆ ಈತ ಕೇವಲ ಕುರುಬ ಜನಾಂಗದ ಆರಾಧ್ಯ ದೈವವಾಗಿ ಉಳಿದಿಲ್ಲ. ಅನೇಕ ಜನಾಂಗಗಳಿಗೆ (ಲಿಂಗಾಯತ ಒಳಗಪಂಗಡಗಳ ಆರಾಧ್ಯದೇವರು ಆಗಿದ್ದಾನೆ. ಗೋಲಗೇರಿಯ ಗೊಲ್ಲಾಳನ ಜಾಗೃತ ಪುಣ್ಯಸ್ಥಳ ಎಂಬುದನ್ನು ಮೌಖಿಕ ಸಾಹಿತ್ಯದಿಂದ ಕಂಡುಬರುವದು.

**ಕೊನೆಯ ಟಿಪ್ಪಣಿಗಳು**

೧. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, ಜಯನಗರ, ಬೆಂಗಳೂರು - ೨೦೦೭, ಪುಟ - ೧
೨. ಡಾ. ಹಳ್ಳಿಕೇರಿ ಎಫ್.ಟಿ. ಕಂಠಪತ್ರ, ವಿಕಾಸ ಪ್ರಕಾಶನ, ಎಂ.ಪಿ. ಪ್ರಕಾಶ ನಗರ ಹೊಸಪೇಟೆ, - ೨೦೦೩, ಪುಟ- ೧೨೮
೩. ಡಾ. ಕಲಬುರ್ಗಿ ಎಂ.ಎಂ. (ಸಂ.) ಹರಿಹರನ ರಗಳೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೧೯೯೯, ಪುಟ- ೩೦೭
೪. ಡಾ. ನಾರಾಯಣ ಪಿ.ವ್ಹಿ. (ಅನು) ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ ಪುಟ- ೮೧

೫. ಪಂಡಿತ ಬಸಪ್ಪ ಎಸ್. ಸಂ. ಶಿವತತ್ತ್ವ ಚಿಂತಾಮಣಿ ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು -೧೯೬೦, ಪುಟ-೩೭, ಸಂಧಿ V ಮತ್ತು VI
೬. ಪಂಡಿತ ವಿರುಪಾಕ್ಷ ಕೃತ ಚನ್ನಬಸವ ಪುರಾಣ ಪ್ರಕಾಶಕರು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ, ಧಾರವಾಡ ೧೯೩೪ ಪುಟ - ೬೬೫
೭. ಡಾ. ಹಿರೇಮಠ ಆರ್.ಸಿ. (ಸಂ.) ಶಾಂತಲಿಂಗ ದೇಶೀಕೃತ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ಸಂ. ಸುಂಕಾಪುರ ಎಂ. ಎಸ್. ರತ್ನಾಕರ ಭಾಗ - ೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೮ ಪುಟ - ೭೯
೮. ಡಾ. ಹಿರೇಮಠ ಆರ್.ಸಿ. ಸಂ.ಮಹಾಕವಿ ಷಡಕ್ಷರಿ ದೇವ ವಿರಚಿತ ಬಸವರಾಜ ವಿಜಯಂ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೮ ಪುಟ - ೯೦
೯. ಡಾ. ನಾರಾಯ ಪಿ. ವಿ. ಅನು. ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ ಪ್ರಕಾಶನ ತರಳಬಾಳು ಪ್ರಕಾಶನ ಸಿರಿಗೆರೆ, ೧೯೮೨ ಪುಟ - ೮೮ - ೮೯
೧೦. ಡಾ. ಹಿರೇಮಠ ಆರ್.ಸಿ. ಸಂ. ಭೀಮಕವಿಕೃತ ಬಸವ ಪುರಾಣ ಸಂಪುಟ - ೧, ಸಾಹಿತ್ಯ ಸಮಿತಿ, (ಮೂಲ ಸೋಮನಾಥನ ಬಸವಪುರಾಣ) ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ ೧೯೫೮ - ಪುಟ ೧೪೦
೧೧. ಡಾ. ಹಿರೇಮಠ ಆರ್.ಸಿ. ಭೈರವೇಶ್ವರ ಕಾವ್ಯದ ಕಥಾಮಣಿ, ಸೂತ್ರ ರತ್ನಾಕರ ಭಾಗ - ೨ ಸಂ. ಸುಂಕಾಪುರ ಎಂ. ಎಸ್. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೬೮, ಪುಟ ೩೭೭ - ೩೭೮
೧೨. ಅದೃಶ್ಯ ಕವಿ ಸಂ. ಕಲ್ಲಮಠ ಅನ್ನಪೂರ್ಣಾದೇವಿ ಪ್ರೌಢರಾಯನ ಕಾವ್ಯ ಕಥಾಸಾರ, ಪ್ರಕಶಕರು ಶ್ರೀ. ನಿ. ಪ್ರ. ಸ್ವ.ಹಾಗೂ ಭೂಸನೂರಮಠ ಶ್ರೀ ರಾಜಶೇಖರ ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ ೧೯೫೭, ಪುಟ - ೭೯
೧೩. ಡಾ. ಹಳ್ಳಿಕೇರಿ ಎಫ್.ಟಿ. ಕಂಠಪತ್ರ ವಿಕಾಸ ಪ್ರಕಾಶನ ಎಂ.ಪಿ. ಪ್ರಕಾಶ ನಗರ, ಹೊಸಪೇಟೆ ೨೦೦೩ ಪುಟ ೧೨೯- ೧೩೦
೧೪. ಅದೇ ಪುಟ - ೧೩೨
೧೫. ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, ಜಯನಗರ, ಬೆಂಗಳೂರು - ೨೦೦೭, ಪುಟ - ೧೧
೧೬. ಅದೇ ಪುಟ - ೧೨. ೧೩, ೧೪
೧೭. ಅದೇ ಪುಟ - ೧೪, ೧೫
೧೮. ಡಾ. ಬಸವರಾಜ ಎಲ್. ಬಸವಪೂರ್ವ ವಚನಕಾರರು ಕೆ. ಎಸ್. ಎಸ್. ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ ಹಂಪಿ ನಗರ ಬೆಂಗಳೂರು ೨೦೧೯ ಪುಟ -೧೫೩
೧೯. ಅದೇ. ಪುಟ - ೧೬೨, ೧೬೩
೨೦. ಡಾ. ಪಾಟೀಲ ಎಸ್.ಸಿ. ಕುರುಬ ಜನಪದ, ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ, ಜಿ. ಸಂ. ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್. ಎಸ್. ಪ್ರಸಾದ ವಿಜಾಪೂರ, ೧೯೯೭ ಪುಟ - ೪೩
೨೧. ಅದೇ ಪುಟ - ೩೯
೨೨. ಬಸವಣ್ಣನವರ ವಚನ
೨೩. ಹಂಪಿಯ ಶ್ರೀ ಹರೀಶ್ವರ (ಸಂ.) ಶ್ರೀ ಗೊಲ್ಲಾಳ ಲಿಂಗೇಶ್ವರ ಪುರಾಣವು ಪ್ರಕಾಶನ ಬ್ರ. ಶ್ರೀ. ಶಾಸ್ತ್ರಿಗಳು ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು ಪಾಠಶಾಲಾ ಮಹಾಗಾಂವ, ಜಿಲ್ಲಾ ಗುಲಬರ್ಗಾ ೧೯೭೧ ಪುಟ - ೫೦ ಮೈಸೂರು, ಜಯನಗರ, ಬೆಂಗಳೂರು - ೨೦೦೭, ಪುಟ - ೧೧
೨೪. ಡಾ. ಪಾಟೀಲ ಎಸ್.ಸಿ. ಕುರುಬ ಜನಪದ, ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ, ಜಿ. ಸಂ. ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್. ಎಸ್. ಪ್ರಸಾದ ವಿಜಾಪೂರ, ೧೯೯೭ ಪುಟ - ೪೩
೨೫. ಶ್ರೀಮತಿ ಕೆರೂಡಿ ಶಾಂಭವಿ ತಾಯಿ. ಗ. ಸೆ. ಶ್ರೀ ಗೊಲ್ಲಾಳೇಶ್ವರ ಭಕ್ತಿಗೀತೆಗಳು, ಪ್ರಕಾಶನ ಪುರಾಣ ಮಂಗಲ ಹಾಗೂ ಸುವರ್ಣ ಮಹೋತ್ಸವ ಸಮಿತಿಯ ಸದ್ಭಕ್ತರು ಗೋಲಗೇರಿ ೨೦೦೦, ಪುಟ - ೨೩
೨೬. ಮೋಟಗಾನ ಹಳ್ಳಿ ಸುಬ್ರಮಣ್ಯ ಶಾಸ್ತ್ರಿ, ಭಾರತೀಯ ಸಂಸ್ಕೃತಿ ಜೀವನ ೪೨ (ವಿದ್ವತ್ಪೂರ್ಣ ಲೇಖನಗಳು) ಸಂ. ಅ.ನ.ಕೃ. ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರಕಾರ, ಬೆಂಗಳೂರು ೧೯೬೨, ಪುಟ - ೧೪೮, ೧೨೯
೨೭. ಅದೇ, ಪುಟ- ೧೩೪
೨೮. ಡಾ. ವಿದ್ಯಾ ಶಂಕರ. ಎಸ್. ಗುಬ್ಬಿ ಮಲ್ಲಣಾರ್ಯ ಕವಿಯ ವೀರಶೈವಾಮೃತ ಪುರಾಣ ವಿವೇಚನೆ (ವಿಮರ್ಶಾ ಲೇಖನಗಳು) ಸಂ. ಗುರುಪಾದ ಮರಿಗುದ್ದಿ, ನಿಜಲಿಂಗೇಶ್ವರ ಗ್ರಂಥಮಾಲೆ,ನಿಡಸೋಸಿ, ಹುಕ್ಕೇರಿ, ಜಿ.ಬೆಳಗಾಂವ, ೨೦೦೧, ಪುಟ- ೧
೨೯. ಅದೇ, ಪುಟ- ೩, ೪
೩೦. ಅದೇ, ಪುಟ- ೮, ೯,
೩೧. ಲೇ. ಹಿರೇಮಠ, ಬಿ. ಆರ್. ಗುಬ್ಬಿ ಮಲ್ಲಣಾರ್ಯ ಕವಿಯ ವೀರಶೈವಾಮೃತ ಪುರಾಣ ವಿವೇಚನೆ (ವಿಮರ್ಶಾ ಲೇಖನಗಳು) ಸಂ. ಗುರುಪಾದ ಮರಿಗುದ್ದಿ, ಮೂಲ ದ್ಯಾಂಪುರ ಚೆನ್ನ ಕವಿಗಳು ವಿಜಯಮಹಾಂತೇಶ್ವರ ಪುರಾಣ ೨೦೦೧, ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ, ಹುಕ್ಕೇರಿ, ಜಿ. ಬೆಳಗಾಂವ, ೨೦೦೧, ಪುಟ - ೧೭

೩೨. ಡಾ. ಆರ್.ಸಿ. ಹಿರೇಮಠ, (ಸಂ. ಲೇ.) ಗುಬ್ಬಿ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಪುರಾಣ ಭಾಗ ೧ ಪ್ರ. ಎನ್.ಎಸ್.ಎಸ್. ಕಲ್ಯಾಣ ಕೇಂದ್ರ ಜಯನಗರ, ಬೆಂಗಳೂರು- ೧೯೯೦, ಪುಟ - ೨೨, ೨೩, ೨೪

೩೩. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ.ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- I & II

೩೪. ಅದೇ, ಪುಟ - ೨೧೫

೩೫. ಅದೇ, ಪುಟ - ೫

೩೬. ಡಾ. ಎಸ್.ಸಿ. ಪಾಟೀಲ ಕುರುಬ ಜನಪದ, ಸಂ. ಪ್ರೊ. ಚನ್ನಪ್ಪ ಕಟ್ಟಿ, ಪ್ರೊ. ಆರ್. ಎಸ್. ವಾಡೇದ, ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ, ಪುಟ ೩೮, ೧೯೯೭.

೩೭. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ.ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೮

೩೮. ಅದೇ ಪುಟ -೨೧

೩೯. ಅದೇ ಪುಟ - ೩೬

೪೦. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಗೊಲ್ಲಾಳಯ್ಯನ ಪುರಾಣ, ಸಂ. ಎಂ.ಚಂದ್ರಶೇಖರ, ಎಂ.ಎ. ಹಿ.ಚಿ. ಶಾಂತವೀರಯ್ಯ ಎಂ.ಎ., ಶ್ರೀ ಪ್ರಸಾದ ಪ್ರಕಾಶನ ಮನುವನ ವಿಜಯನಗರ ಬೆಂಗಳೂರು. ೧೯೭೨ ಪುಟ - ೨೩

೪೧. ಅದೇ

೪೨. ಡಾ. ಸಿ.ಕೆ. ನಾವಲಗಿ, ಗುಬ್ಬಿ ಮಲ್ಲಣಾರ್ಯ ಕವಿಯ ವೀರಶೈವಾಮೃತ ಪುರಾಣ ವಿವೇಚನೆ (ವಿಮರ್ಶಾ ಲೇಖನಗಳು) ಸಂ. ಗುರುಪಾದ ಮರಿಗುದ್ದಿ,ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ, ಹುಕ್ಕೇರಿ, ಜಿ. ಬೆಳಗಾಂವ, ೨೦೦೧, ಪುಟ- ೬೯, ೭೦

೪೩. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ. ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೪೧

೪೪. ಅದೇ, ಪುಟ -೪೫, ೪೬

೪೫. ಅದೇ, ಪುಟ -೫೦

೪೬. ಅದೇ, ಪುಟ -೬೨

೪೭. ಅದೇ, ಪುಟ -೭೨

೪೮. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಗೊಲ್ಲಾಳಯ್ಯನ ಪುರಾಣ, ಶ್ರೀ ಪ್ರಸಾದ ಪ್ರಕಾಶನ ಮನುವನ ಸಂ. ಎಂ.ಚಂದ್ರಶೇಖರ, ಎಂ.ಎ. ಹಿ.ಚಿ.ಶಾಂತವೀರಯ್ಯ ಎಂ.ಎ.,ವಿಜಯನಗರ ಬೆಂಗಳೂರು. ೧೯೭೨ ಪುಟ - ೪೨

೪೯. ಅದೇ, ಪುಟ - ೪೨

೫೦. ಈಶ್ವರನ್. ಹಿರೇಮಲ್ಲೂರು. ಬಸವಣ್ಣ ಹಾಗೂ ಲಿಂಗಾಯತ ಧರ್ಮ, ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ, ಭಾಗ - ೨, ಪ್ರಿಯದರ್ಶಿನಿ ಪ್ರಕಾಶನ ವಿಜಯನಗರ, ಬೆಂಗಳೂರು ೧೯೯೭,ಪು. ೧೭೧.

೫೧. ಶ್ರೀನಿವಾಸನ್ ಎಂ. ದೇವರು ಹಾಗೆಂದರೇನು? ದೇವರ ಕುರಿತಾಗೊಂದು ಅಪೂರ್ಣ ಚರ್ಚೆ, ಅಂಕಿತ ಪುಸ್ತಕ ಗಾಂಧಿ ಬಜಾರ, ಮುಖ್ಯ ರಸ್ತೆ, ಬಸವನಗುಡಿ ಬೆಂಗಳೂರು, ೨೦೦೮, ಪುಟ -೨೮

೫೨. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ. ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೯೪

೫೩. ಚಂದ್ರಶೇಖರ ಟಿ. ಆರ್.ಲಿಂಗಾಯತ ತತ್ವ ಪ್ರಣಾಳಿಕೆ, ನೀಲಗಂಗಾ ಪ್ರಕಾಶನ, ನೀಲಗಂಗಾ ಬರಗುಂಡಿಯವರ ಓಣಿ, ಗುಳೇದಗುಡ್ಡ, ಜಿ. ಬಾಗಲಕೋಟ, ೨೦೧೦, ಪುಟ- ೧೩

೫೪. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಗೊಲ್ಲಾಳಯ್ಯನ ಪುರಾಣ, ಶ್ರೀ ಪ್ರಸಾದ ಪ್ರಕಾಶನ ಮನುವನ ಸಂ. ಎಂ.ಚಂದ್ರಶೇಖರ, ಎಂ.ಎ.ವಿಜಯನಗರ ಬೆಂಗಳೂರು. ೧೯೭೨ ಪುಟ -೭೮ ಹಿ.ಚಿ. ಶಾಂತವೀರಯ್ಯ ಎಂ.ಎ.

೫೫. ಡಾ. ಕಲಬುರ್ಗಿ ಎಂ. ಎಂ. ಅವರ ಲೇಖನ ಸಂಪುಟ, ಜಂಗಮದಿಂದ ಸ್ಥಾವರಕ್ಕೆ, ಲಿಂಗಾಯತ ಸಂಸ್ಕೃತಿಯನ್ನು ಕುರಿತ ಸಂ. ಡಾ. ಮೃತ್ಯುಂಜಯ ರುಮಾಲೆ ಸಾಯಿಮನಿ ಪ್ರಕಾಶನ, ಹೊಸಪೇಟೆ, ಜಿ. ಬಳ್ಳಾರಿ ೨೦೦೯,ಪುಟ - ೨೫೪

೫೬. ಸಂ. ಎಂ.ಚಂದ್ರಶೇಖರ, ಎಂ.ಎ. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಗೊಲ್ಲಾಳಯ್ಯನ ಹಿ.ಚಿ. ಶಾಂತವೀರಯ್ಯ ಎಂ.ಎ.,ಪುರಾಣ, ಶ್ರೀ ಪ್ರಸಾದ ಪ್ರಕಾಶನ ಮನುವನ ವಿಜಯನಗರ ಬೆಂಗಳೂರು. ೧೯೭೨ ಪುಟ - ೭೮

೫೭. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ.ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೧೩೮

೫೮. ಸಂ. ಎಂ.ಚಂದ್ರಶೇಖರ, ಎಂ.ಎ.ಗೊಲ್ಲಾಳಯ್ಯನ ಪುರಾಣ, ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಹಿ.ಚಿ. ಶಾಂತವೀರಯ್ಯ ಎಂ.ಎ.,ಕವಿ, ಶ್ರೀ ಪ್ರಸಾದ ಪ್ರಕಾಶನ ಮನುವನ ವಿಜಯನಗರ ಬೆಂಗಳೂರು. ೧೯೭೨ ಪುಟ - ೮೨

೫೯. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು,ಪಾಠಶಾಲಾ, ಮಹಾಗಾಂವ, ಜಿ. ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೧೫೭

೬೦. ಅದೇ, ಪು. ೧೬೨

೬೧. ಅದೇ, ಪುಟ- ೧೬೪

೬೨. ಅದೇ, ಪುಟ-೧೬೯

೬೩. ಡಾ. ಕಲಬುರ್ಗಿ ಎಂ. ಎಂ. ಅವರ ಲೇಖನ ಸಂಪುಟ, ಜಂಗಮದಿಂದ ಸ್ಥಾವರಕ್ಕೆ, ಲಿಂಗಾಯತ ಸಂಸ್ಕೃತಿಯನ್ನು ಕುರಿತ ಸಂ. ಡಾ.ಮೃತ್ಯುಂಜಯ ರುಮಾಲೆ ಸಾಯಿಮನಿ ಪ್ರಕಾಶನ, ಹೊಸಪೇಟೆ, ಜಿ. ಬಳ್ಳಾರಿ ೨೦೦೯, ಪುಟ - ೨೫೯

೬೪. ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ, ಶ್ರೀ ಗೊಲ್ಲಾಳಲಿಂಗೇಶ್ವರ ಪುರಾಣವು, ಬ್ರ. ಶ್ರೀ ಸಿದ್ಧಾಂತಿ ರುದ್ರಾರಾಧ್ಯ ಶಾಸ್ತ್ರಿಗಳು, ಪಾಠಶಾಲಾ, ಮಹಾಗಾಂವ, ಜಿ. ಗುಲ್ಬರ್ಗ - ೧೯೭೧, ಪ್ರೇರಣೆ ಪುಟ- ೧೭೯

೬೫. ಡಾ. ಕಲಬುರ್ಗಿ ಎಂ. ಎಂ. ಅವರ ಲೇಖನ ಸಂಪುಟ, ಜಂಗಮದಿಂದ ಸ್ಥಾವರಕ್ಕೆ, ಲಿಂಗಾಯತ ಸಂಸ್ಕೃತಿಯನ್ನು ಕುರಿತ ಸಂ. ಡಾ. ಮೃತ್ಯುಂಜಯ ರುಮಾಲೆ ಸಾಯಿಮನಿ ಪ್ರಕಾಶನ, ಹೊಸಪೇಟೆ, ಜಿ. ಬಳ್ಳಾರಿ ೨೦೦೯, ಪುಟ - ೩೯

೬೬. ಪ್ರೊ. ಬೋರಲಿಂಗಯ್ಯ ಹಿ.ಚಿ. ಸಂ. ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಕಾಶನ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ೧೯೯೭ ಪುಟ-IX

೬೭. ಅದೇ ಪುಟ-IX, X

೬೮. ಅದೇ, ಪುಟ- ೧೦

೬೯. ಅದೇ, ಪುಟ- ೪

೭೦. ಕೃಷ್ಣರಾಯ ಅ.ನ.ವೀರಶೈವ ಸಾಹಿತ್ಯಸಂಸ್ಕೃತಿ ಪ್ರಕಾಶನ ವಿಕ್ರಮ ಪ್ರಕಾಶನ ಶಿವನಗರ, ರಾಜಾಜಿ ನಗರ, ಬೆಂಗಳೂರು ಪುಟ- ೯೧

೭೧. ದೇವರಮನಿ ಸಿದ್ಧಲಿಂಗ ಸಿದಗೊಂಡಪ್ಪ ಸಂ. ಶ್ರೀ ಗೊಲ್ಲಾಳೇಶ್ವರ ಲೀಲಾಮೃತ ಕಥಾ (ಹಸ್ತಪ್ರತಿ) ಪುಟ- ೫೬

೭೨. ಈಶ್ವರನ್ ಹಿರೇಮಲ್ಲೂರು ಬಸವಣ್ಣ ಹಾಗೂ ಲಿಂಗಾಯತ ಧರ್ಮ, ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ ಭಾಗ ೨ ಪ್ರಿಯದರ್ಶಿನಿ ಪ್ರಕಾಶನ, ವಿಜಯ ನಗರ, ಬೆಂಗಳೂರು, ದ್ವಿ. ಮು. ೨೦೦೮ ಪುಟ- ೨೫೯

೭೩. ಈಶ್ವರನ್ ಹಿರೇಮಲ್ಲೂರು ಲಿಂಗಾಯತ ಜೈನ ಮತ್ತು ಬ್ರಾಹ್ಮಣ ಮಠಗಳ ಒಂದು ತೌಲನಿಕ ಅಧ್ಯಯನ ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ ಭಾಗ ೨ ಪ್ರಿಯದರ್ಶಿನಿ ಪ್ರಕಾಶನ, ವಿಜಯ ನಗರ, ಬೆಂಗಳೂರು ದ್ವಿ. ಮು. ೨೦೦೮ ಪುಟ- ೪೨೬

೭೪. ಅದೇ, ಪುಟ- ೪೨೮, ೪೨೯

೭೫. ಈಶ್ವರನ್ ಹಿರೇಮಲ್ಲೂರು ಬಸವಣ್ಣ ಹಾಗೂ ಲಿಂಗಾಯತ ಧರ್ಮ, ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ ಭಾಗ ೨ ಪ್ರಿಯದರ್ಶಿನಿ ಪ್ರಕಾಶನ, ವಿಜಯ ನಗರ, ಬೆಂಗಳೂರು, ದ್ವಿ. ಮು. ೨೦೦೮ ಪುಟ -೧೧೬, ೧೧೭

೭೬. ದೇವರಮನಿ ಸಿದ್ಧಲಿಂಗ ಸಿದಗೊಂಡಪ್ಪ ಸಂ. ಶ್ರೀ ಗೊಲ್ಲಾಳೇಶ್ವರ ಲೀಲಾಮೃತ ಕಥಾ ನಾಟಕ (ಹಸ್ತಪ್ರತಿ) ಪುಟ-೧೫

೭೭. ಡಾ. ಬಸವರಾಜ. ಎಲ್. ಬಸವ ಪೂರ್ವ ವಚನಕಾರರು ಪ್ರಕಾಶನ ಶ್ರೀ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, ಹಂಪಿನಗರ, ಬೆಂಗಳೂರು ೨೦೦೯, ಪುಟ-೧೫೨

೭೮. ದೇವರಮನಿ ಸಿದ್ಧಲಿಂಗ ಸಿದಗೊಂಡಪ್ಪ ಸಂ. ಶ್ರೀ ಗೊಲ್ಲಾಳೇಶ್ವರ ಲೀಲಾಮೃತ ಕಥಾ ನಾಟಕ (ಹಸ್ತಪ್ರತಿ) ಪುಟ-೧೫

೭೯. ಎಂ. ಶ್ರೀನಿವಾಸ ದೇವರು ಹಾಗೆಂದರೇನು? ದೇವರ ಕುರಿತಾಗೊಂದು ಅಪೂರ್ಣ ಚರ್ಚೆ, ಅಂಕಿತ ಪುಸ್ತಕ ಗಾಂಧಿ ಬಜಾರ, ಮುಖ್ಯ ರಸ್ತೆ, ಬಸವನಗುಡಿ ಬೆಂಗಳೂರು, ೨೦೦೮, ಪುಟ -೭,೮

೮೦. ಡಾ. ರುಮಾಲೆ ಮತ್ಯುಂಜಯ (ಸಂ) ಜಂಗಮದಿಂದ ಸ್ಥಾವರಕ್ಕೆ ಲಿಂಗಾಯತ ಸಂಸ್ಕೃತಿಯನ್ನು ಕುರಿತು ಡಾ. ಎಂ. ಎಂ. ಕಲಬುರ್ಗಿಯವರ ಲೇಖನ ಸಂಪುಟ ಸಾಯಿಮನಿ ಪ್ರಕಾಶನ, ಹೊಸಪೇಟೆ ೨೦೦೯ ಪುಟ -೧೦೪, ೧೦೫

೮೧. ಅದೇ, ಪುಟ- ೯೪, ೯೫

೮೨. ಅದೇ, ಪುಟ- ೯೭, ೯೮

೮೩. ಡಾ. ಕಲ್ಗುಡಿ ಬಸವರಾಜ ಅರುಹು ಕುರುಹು ಸಂಸ್ಕತಿ ಶೋಧ ವಿಶೇಷ ಸಂಚಿಕೆ ಕನ್ನಡ ತ್ರೈಮಾಸಿಕ ಜನವರಿ ಮಾರ್ಚ ೨೦೧೦, ಪುಟ ೧೩೧

೮೪. ಡಾ. ಬೆಟಗೇರಿ ಕೃಷ್ಣಶರ್ಮ, ಕನ್ನಡ ಜನಪದ ಸಾಹಿತ್ಯ ಭಂಡಾರ (ಸಂಪುಟ .೧) ಗೀತೆಗಳು ಸಂ. ಮತ್ತಿಗಟ್ಟಿ ಕೃಷ್ಣಮೂರ್ತಿ, ಗುರುಮೂರ್ತಿ ಪ್ರಕಾಶನ ಕೆಂಪೇಗೌಡ ನಗರ, ಬೆಂಗಳೂರು - ೧೯೭೫, ಪುಟ - ೧೧

೮೫. ಅದೇ, ಪುಟ- ೩೭

೮೬. ಡಾ. ದುರಗಿ ಶಕುಂತಲಾ ಸಿದ್ಧರಾಮು ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, ಜಯನಗರ, ಬೆಂಗಳೂರು, ೨೦೦೯, ಪುಟ- ೮೩

೮೭. ಅದೇ, ಪುಟ- ೭೯

೮೮. ಎಂ. ಶ್ರೀನಿವಾಸ ದೇವರು ಹಾಗೆಂದರೇನು? ದೇವರ ಕುರಿತಾಗೊಂದು ಅಪೂರ್ಣ ಚರ್ಚೆ, ಅಂಕಿತ ಪುಸ್ತಕ ಗಾಂಧಿ ಬಜಾರ, ಮುಖ್ಯ ರಸ್ತೆ, ಬಸವನಗುಡಿ ಬೆಂಗಳೂರು, ೨೦೦೮, ಪುಟ -೨೧

೮೯. ಡಾ. ದುರಗಿ ಶಕುಂತಲಾ ಸಿದ್ಧರಾಮ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, (ವಿಮರ್ಶಾ ಲೇಖನಗಳು) ಜಯನಗರ, ಬೆಂಗಳೂರು, ೨೦೦೯, ಪುಟ- ೪೫

೯೦. ಅದೇ, ಪುಟ- ೮೦

೯೧. ಅದೇ, ಪುಟ- ೮೨

# ಅಧ್ಯಾಯ - ೬

# ಗೊಲ್ಲಾಳೇಶ್ವರ ಕುರಿತು: ನಂಬಿಕೆ, ಆಚರಣೆ, ಸಂಪ್ರದಾಯಗಳು.

ಮಾನವ ತಾನು ಹುಟ್ಟಿಬಂದ ಪರಿಸರದಲ್ಲಿರುವ ಸಂಸ್ಕೃತಿ ಹಾಗೂ ಆತನಲ್ಲಿ ತತ್ಪರಿಣಾಮವಾಗಿ ಮೂಡುವ ನಂಬಿಕೆ, ಸಂಪ್ರದಾಯಗಳ ಮಧ್ಯದಲ್ಲಿ ಬದುಕುತ್ತಾನೆ. ಈತನಲ್ಲಿ ಮೂಡಿಸಲ್ಪಟ್ಟಿರುವ ನಂಬಿಕೆಗಳಿಂದ ಬದುಕು ನಿಯಂತ್ರಿಸಲ್ಪಡುವುದೂ ಉಂಟು. ಅತೀಂದ್ರಿಯ ಶಕ್ತಿಗಳಿವೆಯೆಂದು ನಂಬುವ ಪೂಜೆ, ಜಪಗಳಲ್ಲಿ ತೊಡಗುವ ವಿಜ್ಞಾನಿಗಳು ಅಲ್ಲಲ್ಲಿ ಇದ್ದಾರೆ. ಈ ವಿಶ್ವದ ಅಸ್ತಿತ್ವಕ್ಕೆ ಕಾರಣೀಭೂತನಾದ ಒಬ್ಬ ಸೃಷ್ಟಿಕರ್ತನಿದ್ದಾನೆಂಬ ನಂಬಿಕೆ ಪ್ರಾಚೀನವಾದದ್ದು. ಇದರ ಆಗುಹೋಗುಗಳಿಗೆಲ್ಲ ಅವನೇ ಹೊಣೆ ಎಂಬ ನಂಬಿಕೆ ಸಾರ್ವತ್ರಿಕ. ದೇವರ ಕಲ್ಪನೆಯಲ್ಲಿ ವೈವಿಧ್ಯತೆ ಇದೆ. ಕೆಲವರಿಗೆ ಸಾಕಾರ ಮತ್ತೆ ಕೆಲವರಿಗೆ ನಿರಾಕಾರ; ದೇವರು ಸರ್ವಾಂತರ್ಯಾಮಿ, ಸರ್ವಜ್ಞ, ಸರ್ವಶಕ್ತ, ದೇವರ ಸಹಾಯವಿಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲ್ಲಾಡುವುದಿಲ್ಲ ಎಂಬ ನಂಬಿಕೆ ಹಲವರಿಗೆ. ಪ್ರತಿಯೊಬ್ಬನ ಜೀವನವನ್ನು ದೇವರೇ ನಡೆಸುತ್ತಾನೆ. ಆದ್ದರಿಂದ ದೇವರನ್ನು ಒಲಿಸಿಕೊಳ್ಳಲು ಅನೇಕ ಆಚರಣೆಗೆ ಮನುಷ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. "ಚಿಕ್ಕ ಗುಂಪುಗಳಿಗೇ ಸೇರಿರಲಿ, ವಿಸ್ತೃತ ಸಮಾಜಕ್ಕೆ ಸೇರಿರಲಿ ಆಯಾ ಗುಂಪು ಹಾಗೂ ಸಮುದಾಯಗಳಿಗೆ ಸೇರಿದ ಧರ್ಮಗಳು ಶಿಲ್ಪಕಲೆ, ದೇವಾಲಯ, ಸ್ಮಾರಕ ಮಂದಿರ ಮುಂತಾದವುಗಳ ರಚನೆಯಲ್ಲಿ ಮಾನವನ ನಂಬುಗೆ, ಭಕ್ತಿ,

ಧಾರ್ಮಿಕ ಅನುಭವ, ಮೌಲ್ಯಗಳನ್ನು ಪ್ರಕಟಿಸುವಲ್ಲಿ ಅಪೂರ್ವ ಸಾಧನೆ, ಪ್ರಯೋಗಗಳನ್ನು ಮಾಡಿವೆ"[1] ಈ ದೇವಾಲಯ ನಿರ್ಮಾಣದಿಂದಲೆ ಅವರವರ ಆಚರಣೆ, ನಂಬಿಗೆ, ಸಂಪ್ರದಾಯಗಳು ಮೂಡಿ ಬಂದುದಾಗಿವೆ.

ಮಂಗನಿಂದ ಮಾನವನಾಗಿ, ಅನಾಗರಿಕತೆಯಿಂದ, ನಾಗರಿಕನಾಗಿ ಈ ತೆರನಾದ ಮನುಷ್ಯ ಪ್ರಾಣಿಯು ಅಲ್ಲಿಂದ ಇಲ್ಲಿಯವರೆಗೆ ಸಾಗಿಬರುವಷ್ಟರಲ್ಲಿ ಅನೇಕ ಬದಲಾವಣೆಗಳಾಗಿವೆ. ಪಶುಪಾಲನೆಯಿಂದ ಈಗಿನ ಸಂಸ್ಕೃತಿಯವರೆಗೆ ನಡೆದು ಬಂದಿದ್ದಾನೆ ಆತ. ಮಾನವನಿಗೆ ಯಾವಾಗ ವಿಚಾರ ಮಾಡುವ ಶಕ್ತಿ ಬಂದಿತೋ ಆತನಲ್ಲಿ ಪಾಪ-ಪುಣ್ಯದ ಕಲ್ಪನೆ ಮೂಡಿತು. ಈತ ಆದಿ ಮಾನವನಾಗಿದ್ದಾಗ ಸೃಷ್ಟಿಯ ಅನೇಕ ಅದ್ಭುತ ದೃಶ್ಯಗಳನ್ನು ಕಂಡು ಆತನಲ್ಲಿ ಭಯ ಅಂಕುರಿಸಿತು. ಆಗ ನಿಸರ್ಗದಲ್ಲಿ ಅದ್ಭುತ ಶಕ್ತಿಗಳಿವೆಯೆಂದೂ ಗುರುತಿಸಿದ. ನಿಸರ್ಗದಲ್ಲಿರುವ, ಗುಡುಗು, ಸಿಡಿಲು, ಗಾಳಿ, ನೀರು, ಮರ, ಸೂರ್ಯ, ಚಂದ್ರ ..... ಇತ್ಯಾದಿಗಳು. ದೈವಸ್ವರೂಪವೆಂದು ಆರಾಧಿಸತೊಡಗಿದ. 'ಮನುಷ್ಯನಲ್ಲಿ ವಿಚಾರ ಮಾಡುವ ಶಕ್ತಿ ಬೆಳೆದಂತೆ ಇವೆಲ್ಲ ಒಂದು ಶಕ್ತಿಯಿಂದ ಉಂಟಾಗಿರಬೇಕು ಎಂದು ಭಾವಿಸಿದ. ಆ ಶಕ್ತಿಯೇ ಮುಂದೆ ಅವನ ಪಾಲಿಗೆ ದೇವರು ಆಯಿತು. ಆ ಶಕ್ತಿಯ ಘನವಾದ ಈ ಅದ್ಭುತ ಕಾರ್ಯವನ್ನು ಕಂಡು ಮನುಷ್ಯನಲ್ಲಿ ಭಕ್ತಿ ಹುಟ್ಟಿ, ತಾನು ಆ ಶಕ್ತಿಯ ಅಧೀನದಲ್ಲಿರುವೆನೆಂದು ಭಾವಿಸಿ, ಆ ಶಕ್ತಿಗೆ ಶರಣು ಹೋದನು.'[2] ಹೀಗೆ ಮಾನವನಲ್ಲಿ ದೇವರ ಕುರಿತು ಭಾವನೆ ಮೂಡಿಬಂದಿತು. ದೇವರಿಗೆ ಯಾವ ರೂಪ ಆಕಾರಗಳಿಲ್ಲ. ಆದರೂ ಅವನು ಸರ್ವಶಕ್ತ, ಸರ್ವಕರ್ತ, ಸರ್ವಜ್ಞ, ಆದ್ಯಂತ ರಹಿತ, ಸರ್ವತಂತ್ರ ಸ್ವತಂತ್ರನು, ಶೂನ್ಯ ನಿಶೂನ್ಯನು ಆಗಿದ್ದಾನೆ. ಸೃಷ್ಟಿಯ ಪೂರ್ವದಲ್ಲಿ ಯಾವ ಶೂನ್ಯವು ಇತ್ತೊ, ಅದೇ ಶೂನ್ಯವನ್ನು ದೇವರೆಂದು ಕರೆಯಲಾಗಿದೆ. ಶೂನ್ಯವೆಂದರೆ ಏನೂ ಇಲ್ಲದ್ದು ಎಂದಲ್ಲ. ಅದು ಎಲ್ಲವನ್ನೂ ಒಳಗೊಂಡಿದ್ದು ಎಂದರ್ಥ.

ಲೋಕದ ಎಲ್ಲ ಮಾನವ ಜನಾಂಗಗಳಲ್ಲಿ ಅವರವರ ಭಾವಕ್ಕೆತಕ್ಕಂತೆ ಸೃಷ್ಟಿಕರ್ತನಾದ ದೇವನೆಂಬುವವನು ಉದಯಿಸಿದ. ಈತನ ಕುರಿತು ಪ್ರಾದೇಶಿಕವಾಗಿ ವಾಸಿಸುವ ಬೇರೆ ಬೇರೆ ಜನಾಂಗಗಳು ಬೇರೆ ಬೇರೆಯಾಗಿ ಆರಾಧಿಸುವರು, ಹಾಗೂ ದೇವರ ಕುರಿತಾದ ಅನೇಕ ತತ್ವ ಸಿದ್ಧಾಂತಗಳು ಹುಟ್ಟಿಕೊಂಡವು, ಇವುಗಳಲ್ಲಿ ಪಾಪ -ಪುಣ್ಯ ಎಂಬ ಪ್ರಜ್ಞೆಯೂ ಅಡಕವಾಗಿದೆ. ಇದರಿಂದ ದೇವರ ಹೆಸರಿನಲ್ಲಿ ನ್ಯಾಯ, ನೀತಿ, ಧರ್ಮ ಬೋಧೆಯು ಆರಂಭವಾಯಿತು. ಈ ಭೂಲೋಕ ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಎಲ್ಲೆಲ್ಲಿಯೂ ಸಲ್ಲುವರು. ಈ ಸೃಷ್ಟಿ ಆತ್ಮೋದ್ಧಾರವಾದ ಸೋಪಾನವಾಗಿದೆ. ಸಾಧನ ರಂಗವಾಗಿದೆ. ದೇವ ಮಾನವ ಯಾರಾದರೂ ಇರಲಿ, ಇಲ್ಲಿಗೆ ಬಂದು ಮನುಷ್ಯ ಲೋಕದಲ್ಲಿ ಮನುಷ್ಯರಾಗಿ ಹುಟ್ಟಿ, ಇಲ್ಲಿ ಸಾಧನೆಗೈದು ತನ್ನ ನಿಜವ ತಾನು ಅರಿತು ಮುಕ್ತನಾಗಬೇಕು. ಇದೊಂದು ರೀತಿಯಲ್ಲಿ ಕರ್ಮಭೂಮಿ. **ಈತನು ಕರ್ಮಟನು,** ಆಯಾ ಇಂದ್ರಿಯಗಳ ಕಾರ್ಯಗಳನ್ನು ತಡೆಗಟ್ಟದೆ ವ್ಯಕ್ತಿ ಅವುಗಳನ್ನು ಜಯಿಸಿ, ತನ್ನ ಅಧೀನ ಮಾಡಿಕೊಂಡು ಇದ್ದೂ ಇಲ್ಲದಂತಿದ್ದು, ಮುಕ್ತಿಯನ್ನು ಸಾಧಿಸಬೇಕು.'[3]

ಈ ಹಿನ್ನೆಲೆಯಲ್ಲಿ ಮಾನವ ಸಂಸ್ಕೃತಿ ಬಹುಮುಖಿಯಾಗಿ ಬೆಳೆದು ಬಂದಿತು. ಸಂಸ್ಕೃತಿ ಎಂಬುದು ಒಂದು ಜನಾಂಗದ ಒಟ್ಟು ವರ್ತನೆಗಳೆಂದು ಪರಿಗಣಿಸುವುದಾದರೆ, ಈ ನಡುವಳಿಯಲ್ಲಿ ಅವರ ನಂಬಿಕೆ,

ಆಚರಣೆ, ಸಂಪ್ರದಾಯಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ನಿಯಮ, ವಿಧಿ, ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಹೊಂದಿಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವು. ನಂಬಿಕೆಯು ಸಂಪ್ರದಾಯ, ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದ್ದು, ಆ ಮೂಲಕ ಕ್ರಿಯಾ ರೂಪವನ್ನು ತಾಳುತ್ತದೆ. 'ನಂಬಿಕೆಗಳು ಮಾನವ ಬದುಕಿನ ಬೆನ್ನೆಲುಬುಗಳು, ಅವು ಅವನ ಹುಟ್ಟಿನಿಂದ ಹಿಡಿದು ಅವನು ಮಣ್ಣಿನಲ್ಲಿ ಮಣ್ಣಾಗುವವರೆಗೂ ಒಡಗೂಡಿಯೇ ಬರುತ್ತವೆ. ಈ ನಂಬಿಕೆಗಳು ಒಂದು ಮಾನಸಿಕ ಒಪ್ಪಂದವಾಗಿದ್ದು ಈ ಮಾನಸಿಕ ಒಪ್ಪಂದ ಶ್ರದ್ಧೆಯನ್ನವಲಂಬಿಸಿ ಕ್ರಿಯಾತ್ಮಕವಾಯಿತೆಂದರೆ ಅದು ಆಚರಣೆಯಾಗುತ್ತದೆ."[೪] ನಂಬಿಕೆಗಳಿಗೆ ಈ ಜನಾಂಗದ ಸಮಷ್ಟಿ, ಸಮ್ಮತಿಯು ದೊರೆತಾಗ ಆಚರಣೆ ಆಗಬಹುದಾಗಿದೆ. ಕೆಲವು ಆಚರಣೆಗಳು ಸಂಸ್ಕೃತಿಯನ್ನು ಪೋಷಿಸುವಲ್ಲಿ, ಮಾನವನ ಬದುಕನ್ನು ರೂಪಿಸುವಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಾ ಬಂದಿವೆ. ಆದ್ದರಿಂದ ಅವುಗಳನ್ನು ಧಾರ್ಮಿಕ ನಂಬಿಕೆಗಳು ಎಂದು ಕರೆಯಬಹುದು.

"ಮಾನವ ಮನಸ್ಸಿನ ಭಯ ಆತಂಕಗಳು ಈ ಬಗೆಯ ಧಾರ್ಮಿಕ ನಂಬಿಕೆಗಳಿಗೆ ಮೂಲ. ಇಂತಹ ಸಂದರ್ಭಗಳಲ್ಲಿ ಅವನಿಗೆ ಅವಲಂಬನವಾಗಿ ಹುಟ್ಟಿಕೊಂಡವುಗಳು ದೇವರು, ದೆವ್ವಗಳು."[೫]

ನಂಬಿಕೆ, ಆಚರಣೆ, ಸಂಪ್ರದಾಯಗಳು ಅಂತರ್ ಸಂಬಂಧವನ್ನು ಹೊಂದಿವೆ. ಗೊಲ್ಲಾಳನಿಗೆ ನಡೆದುಕೊಂಡರೆ ಸುಖ ಸಮೃದ್ಧಿಯಾಗುತ್ತದೆ ಎಂಬುದು ಗೊಲ್ಲಾಳ ದೇವರ ಭಕ್ತರ ನಂಬಿಕೆ. ಈ ಕುರಿತು ಗೊಲ್ಲಾಳನ ನಾಟಕ, ಹಾಡುಗಳನ್ನು, ಭಜನೆಯನ್ನು ರಾತ್ರಿಯಿಡೀ ಮಾಡುವುದು ಸಂಪ್ರದಾಯ. ದೇವರ ಕುರಿತಾದ ನಾಟಕ ಭಜನೆ, ಹಾಡುಗಳು ಹೇಗೆ ನಡೆಸಬೇಕೆಂಬುದು ಆಚರಣೆ. 'ಸಂಪ್ರದಾಯದ ಬೀಜರೂಪದಲ್ಲಿ ಒಂದು ನಂಬಿಕೆ ಇದ್ದೇ ಇರುತ್ತದೆ. ಅಂದರೆ ಸಂಪ್ರದಾಯಗಳೆಲ್ಲವೂ ನಂಬಿಕೆಗಳಾಗಿರುತ್ತವೆ. ಆದರೆ ಎಲ್ಲ ನಂಬಿಕೆಗಳು ಸಂಪ್ರದಾಯಗಳಲ್ಲ. ನಂಬಿಕೆಯೊಂದು ಐತಿಹ್ಯ, ಪುರಾಣ, ಧರ್ಮಗಳೊಂದಿಗೆ ಸಂಬಂಧವನ್ನು ಪಡೆದುಕೊಂಡು ಸಮುದಾಯದ ಶ್ರದ್ಧೆಯೊಂದಿಗೆ ರೂಢಿಗಿಳಿದಾಗ ಸಂಪ್ರದಾಯವಾಗುತ್ತದೆ. ಇಂತಹ ಸಂಪ್ರದಾಯದ ಪ್ರಾಯೋಗಿಕ ಅಥವಾ ಕ್ರಿಯಾ ರೂಪಗಳೇ ಆಚರಣೆಗಳು. ನಂಬಿಕೆ ಧರ್ಮದ ಅವಲಂಬನೆಯ ರೂಪ, ಆಚರಣೆ ಅದರ ಕ್ರಿಯಾ ರೂಪ ಎಂದು ಡಾ. ವಿವೇಕ ರೈ ಯವರು ಅಭಿಪ್ರಾಯ ಪಡುತ್ತಾರೆ."[೬] ಹೀಗೆ ವ್ಯಾಪಕವಾದ ಅರ್ಥವನ್ನೊಳಗೊಂಡ ಗೊಲ್ಲಾಳೇಶ್ವರನ ಭಕ್ತ ಜನಾಂಗದ ನಂಬಿಕೆ, ಆಚರಣೆ, ಸಂಪ್ರದಾಯಗಳ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ.

ಗೊಲ್ಲಾಳನು ಬಲ್ಲುಗ, ದುಗ್ಗಳೆಯರ ಮಗನಾಗಿ ಗೋಲಗೇರಿಯಿಂದ ನಾಲ್ಕು (೪ ಕಿ.ಮಿ.) ಕಿ.ಮೀಟರ ಅಂತರದಲ್ಲಿರುವ ಥವಳಾರ ಎಂಬ ಗ್ರಾಮದಲ್ಲಿ ಜನಿಸಿದ. ಗೋಲಗೇರಿ, ಗೊಲ್ಲಾಳನ ಕಾರ್ಯಕ್ಷೇತ್ರದ

ಕರ್ಮಭೂಮಿಯಾಯಿತು. ಪ್ರತಿ ವರ್ಷ ಚೈತ್ರ ವದ್ಯ ಪ್ರತಿಪದೆಯಲ್ಲಿ ಗೊಲ್ಲಾಳ ಲಿಂಗಯ್ಯನ ಜಾತ್ರೆ ನೆರವೇರುತ್ತದೆ. ಈ ಗ್ರಾಮವನ್ನು ೧೪ನೇ ಶತಕದಲ್ಲಿ ಒಬ್ಬ ಕುರುಬನು ತನ್ನ ಕುರಿಗಳ ದಡ್ಡಿ ಇದ್ದ ಸ್ಥಳದಲ್ಲಿ ಕಟ್ಟಿಸಿದನೆಂದು ಹೇಳುತ್ತಾರೆ. ಅವನು ಶ್ರೀಶೈಲದ ಯಾತ್ರೆಗೆ ಹೋಗುವ ಜನರಿಗೆ ಅತ್ತ ಕಡೆಯಿಂದ ಒಂದು ಲಿಂಗವನ್ನು ತಂದು ಕೊಡಿರೆಂದು ಹೇಳಿಕೊಂಡಿದ್ದಕ್ಕೆ ಆ ಜನರು ಚೇಷ್ಟೆಯಿಂದ ಒಂದು ಕುರಿಯ ಹಿಕ್ಕೆಯನ್ನು ತಂದು ಕೊಟ್ಟರಂತೆ. ಕುರುಬನು ಗುಡಿಯನ್ನು ಕಟ್ಟಿಸಿ ಅದರಲ್ಲಿ ಈ ಹಿಕ್ಕೆಯನ್ನು ಲಿಂಗವೆಂದು ಸ್ಥಾಪಿಸಿ ಬಹು ಭಕ್ತಿಯಿಂದ ಅದನ್ನು ಆರಾಧಿಸುತ್ತಿರಲಾಗಿ ಹಿಕ್ಕೆಯು ನಿಜವಾದ ಲಿಂಗವೇ ಆಯಿತು. ಈ ಲಿಂಗನಿಗೆ ಗೊಲ್ಲಾಳೇಶ್ವರ ಎಂದು ಪೂಜಿಸುವರು. ಈಗ ಎಲ್ಲ ಜಾತಿಗಳ ಹಿಂದೂ ಜನರು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಪ್ರತಿ ವರ್ಷ ವದ್ಯ ಪ್ರತಿಪದೆಯಂದು ಜರುಗುವ ಈ ದೇವರ ಜಾತ್ರೆಯಲ್ಲಿ ಸುಮಾರು ೫೦೦೦ (ಐದು ಸಾವಿರ) ಜನ ಕೂಡುತ್ತಾರೆ. ಅದರಲ್ಲಿ ೫೦೦೦ (ಐದು ಸಾವಿರ) ರೂಪಾಯಿಯ ವ್ಯವಹಾರವಾಗುತ್ತದೆ."[೨] ಗೊಲ್ಲಾಳೇಶ್ವರನಿಗೆ ಎಲ್ಲ ಜನಾಂಗದವರು ಆರಾಧಿಸುತ್ತಾರೆಂಬುದು ಅಷ್ಟೇ ಸತ್ಯ.

ಗೋಲಗೇರಿ ಗೊಲ್ಲಾಳನ ಕಾರ್ಯಕ್ಷೇತ್ರವಾಗಿದ್ದರೂ ಈತನ ಕುರಿತು ವಿಸ್ತೃತವಾದ ಕನ್ನಡ ನಾಡಿನಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಲಾಗಿದೆ. ಲಕ್ಷ್ಮೇಶ್ವರ, ಬಂದಾಳ, ಬಂಟನೂರ, ನಾಗರಾಳ, ಖೈನೂರ, ಕುಕನೂರ ಮುಂತಾದ ಊರುಗಳಲ್ಲಿ ಗೊಲ್ಲಾಳನ ದೇವಾಲಯಗಳು ನಿರ್ಮಾಣವಾಗಿ ಇಲ್ಲಿ ಗೊಲ್ಲಾಳನ ಕುರಿತು ನಂಬಿಕೆ, ಆಚರಣೆ, ಸಂಪ್ರದಾಯಗಳು ರೂಢವಾಗಿವೆ. ಆಯಾ ಗ್ರಾಮದ ದೇವಾಲಯಗಳು ಅರ್ಚಕರ ಒಡೆತನಕ್ಕೆ ಸೇರಿದ್ದು. ಕೆಲವು ದೇವಾಲಯಗಳಲ್ಲಿ ಗೊಲ್ಲಾಳೇಶ್ವರನ ಮೂರ್ತಿ ಪೂಜೆಯು ನೆರವೇರುತ್ತದೆ. ಮೂರ್ತಿಗಳನ್ನು ಇತ್ತಿತ್ತಲಾಗಿ ನಿರ್ಮಿಸಲಾಗಿದೆ. ಮೊದಲು 'ಲಿಂಗ'ಕ್ಕೆ ಗೊಲ್ಲಾಳನೆಂದು ಪೂಜಿಸುತ್ತಿದ್ದರು. ಎಲ್ಲ ದೇವಾಲಯಗಳ (ಗೊಲ್ಲಾಳ ಕುರಿತಾದ)ಲ್ಲಿ ಒಂದೇ ತೆರನಾದ ಆಚರಣೆ ಸಂಪ್ರದಾಯಗಳಿವೆ. ಆದ್ದರಿಂದ ಮೊದಲಿಗೆ ಗೋಲಗೇರಿಯಲ್ಲಿರುವ 'ಗೊಲ್ಲಾಳನ' ಕುರಿತಾದ ನಂಬಿಕೆ ಆಚರಣೆ ಸಂಪ್ರದಾಯಗಳನ್ನು ಕುರಿತು ವಿವರಿಸಿದೆ.

ಗೋಲಗೇರಿಯಲ್ಲಿರುವ ದೇವಾಲಯವು 'ದೇವರಮನಿ' ಎಂಬ ಮನೆತನದ ಒಡೆತನದಲ್ಲಿದೆ. ಇವರು ದೇವಾಲಯದ ಧರ್ಮದರ್ಶಿಗಳು ಆಗಿದ್ದಾರೆ. ಆದ್ದರಿಂದ ಇವರು ಗೊಲ್ಲಾಳೇಶ್ವರ' ಕುರಿತು ಆಚರಿಸುವ ಆಚರಣೆಗಳು ಬಹುಮುಖ್ಯವೆನಿಸಿದ್ದರಿಂದ ಮೊದಲಿಗೆ ಈ ಭಕ್ತ ಮನೆತನದ ನಡವಳಿಕೆಗಳನ್ನು ಪ್ರಸ್ತಾಪಿಸಲಾಗಿದೆ. ಗೋಲಗೇರಿಯಲ್ಲಿರುವ ದೇವಾಲಯವನ್ನು 'ಮರಿಯಪ್ಪ ಸಾಹುಕಾರ' ಎಂಬುವವರು ಕಟ್ಟಿಸಿದರೆಂದು ಹೇಳುತ್ತಾರೆ. ಈತ ಒಬ್ಬ ನೀಲಿ ಬಣ್ಣದ ವ್ಯಾಪಾರಿಯಾಗಿದ್ದು, ಹಳೇಸಾಗರ ಗ್ರಾಮದವನಾಗಿದ್ದ. ಸೊಲ್ಲಾಪುರಕ್ಕೆ (ಸೊನ್ನಲಾಪೂರ) ಹೋಗಿ ಬರುವುದು ಮಾಡುತ್ತಿದ್ದ.

"ಸುರಪುರೋತ್ತುಂಗ ಪ್ರದೇಶದ
ನೆರೆಯೊಳಿಹ ಹಳೆಸಾಗರೆಂಬ ।
ಪರಮ ವಿಶ್ವರಾಧ್ಯ ಶಿಷ್ಯಾಚರಣೆಯಿಂದೊಂದು ॥

ಪರಮ ವಿಶಾಲ ಸ್ಥಿತಿಯ ಪಂಚಮ ।

ಶರಣವಂಶದೊಳ್ಳೆ ಭಕ್ತಿಯ ।

ಭದೊಳೇಳ್ಗೆಯ ನಾಳ್ದಿರಲು ಕದರಲ್ಲಿ ಮೇಲವರಿದು"[೮]

ಮರಿಯಪ್ಪನು ಈ ತೆರನಾಗಿ 'ಹಳೆಸಾಗರ"ದವನಾಗಿದ್ದುಕೊಂಡು, ವ್ಯಾಪಾರಿಯಾಗಿದ್ದು ಬರುವ-ಹೋಗುವ ಮಧ್ಯದಲ್ಲಿ 'ಗೊಲ್ಗಿರಿ' ಅಡವಿಯಲ್ಲಿ ವಸತಿ ಮಾಡುತ್ತಿದ್ದ ಈ ಸಂದರ್ಭದಲ್ಲಿ ಎತ್ತುಗಳನ್ನು ಕಟ್ಟಲು ಗೂಟ ನೆಡಲು ಅದನ್ನು ಲಿಂಗದ ಮೇಲೆಯೇ ಜಡಿದಿದ್ದ. ಇದರ ಪರಿಣಾಮ ಎತ್ತುಗಳ ಕಣ್ಣು ಹೋಯಿತು. ಈತನಿಗೆ ಬೇತಾಳ ಹುಣ್ಣು ಬೆನ್ನಲ್ಲಿ ಹುಟ್ಟುಕೊಂಡಿತು. ಮುಂದೆ ಈ ಹುಣ್ಣು ಶಮನವಾಗಲು ಕುರಿಹಿಕ್ಕಿಯ ಪುಡಿಯನ್ನು ಅರೆದು ಹಚ್ಚಲು ಈತ ಆರಾಮನಾಗಿದ್ದ. ಇವನ ಕನಸಿನಲ್ಲಿಯೇ 'ಲಿಂಗಯ್ಯ' ಬಂದು ನನ್ನ ಗುಡಿ ಕಟ್ಟಿಸು ಎಂದದ್ದು. ಇದೆಲ್ಲ ಪವಾಡದ ಕಥೆಯಾಗಿದೆ. ಅದರಂತೆ ಮರಿಯಪ್ಪನು ಅಡವಿಯಲ್ಲಿ ಗುಡಿ ಕಟ್ಟಿಸಿದ ಅದುವೇ 'ಗೋಲಗೇರಿ'ಯಾಯಿತು. ಇಲ್ಲಿಂದ ಆಚರಣೆ, ಸಂಪ್ರದಾಯಗಳು ನಿರಂತರವಾಗಿ ನಡೆದುಬರುತ್ತಿವೆ. ಹೆಳವರ ಹೇಳಿಕೆಯ ಆಧಾರದಲ್ಲಿ 'ದೇವರಮನೆ' ಈ ಮನೆತನದ ಇತಿಹಾಸ ಪ್ರಕಟಿಸಲಾಗಿದೆ. ಹಳಿಸಾಗರದ ಸಾಹುಕಾರ ಮನೆಯವರೆಂದು ಕರೆಯಲ್ಪಡುವ ಮರೆಪ್ಪನವರು ವಂಶಸ್ಥರು ಧರ್ಮದರ್ಶಿಗಳಾಗಿ ದೇವಾಲಯದ ಅಂಗಭೋಗ, ರಂಗಭೋಗದ ಯಾವತ್ತೂ ಜವಾಬ್ದಾರಿಯನ್ನು ಭಕ್ತಸಮೂಹ ಸಹಕಾರದೊಂದಿಗೆ ನಿರ್ವಹಿಸುತ್ತಿದ್ದಾರೆ. ಮರೆಪ್ಪನವರ ವಂಶವಾಳಿ ಹೀಗಿದೆ.

"ಶಾಲಿವಾಹನ ಶಂಕೆ ೧೧೨೬ ರಾಕ್ಷಸನಾಮ ಸಂವಕ್ಸರ ಕಾರ್ತಿಕ ಶು।। ಪಂಚಮಿ ಇವರ ಗುರುಗಳು ಹಳಿಸಾಗರ ಬಿಟ್ಟು ಸಂತಿ ಶಿರೂರ ನಂದೂರ ಹಿರೇಮಠದ ಪಟ್ಟದ ದೇವರು, ಮನಿದೇವರು, ವೀರಭದ್ರದೇವ್ರು, ಗೋಲಯ್ಯಲಿಂಗ ದೇವರು ತಾಳಕಂಚಿ ಕಾಳ ಹಸ್ತಿ ದೇಸಗತ್ತಿಗಳಿಸಿದರು. ಹಿರೇಬಸಪ್ಪ, ಸಣ್ಣಬಸಪ್ಪ ದೇಸಾಯಿಯರು ಆಗ ೭ ಮಂದಿನ ಕಡಿದು ಬಿಟ್ಟು ಬಿದರಕೋಟೆಗೆ ಬಂದರು. ಶೆಟ್ಟಿ ತಾನ ಗಳಿಸಿದರು ಅದನ್ನು ಬಿಟ್ಟು ಹಳಿಸಾಗರಕ್ಕೆ ಬಂದರು. ದೇಶಗತ ಗಳಿಸಿದರು. ಆಗ ಎಡಕಿ ಎತ್ತಿನ ಮೇಲೆ ನೀಲಿ ವ್ಯಾಪಾರ ಸೋಲಾಪುರಕ್ಕೆ ಮಾಡುತ್ತಿದ್ದರು. ಆಗ ಕುರುಬರ ಗೊಲ್ಲಾಳನ ತಲಿಲೆ ಗೋಲಯ್ಯ ಲಿಂಗ ಪರಬುಳಿ ಆಗಿ ಗುಬುತ ಆಗ್ಯಾನ, ಆಗ ಬಿಡಿಕಿ ಎತ್ತ ಬಂದು ಗುಬುತ ಆದ ಮೆಟ್ಟಿಗೆ ವಸ್ತಿ ಮಾಡಿದರು. ಆಗ ಗೂಟಾ ಬಡಿವಾಗ ಗ್ಯಾಲಯ್ಯಲಿಂಗನ ತೆಲಿಮ್ಯಾಲೆ ಬಡೆದರು. ಗೂಟಾ ನಡಿಲಿಲ್ಲಾ. ಮುಂಜಾನೆ ಎದ್ದು ನಡದಾರಿಗೆ ಹೋಗುವಾಗ ಎತ್ತಿನ ಕಣ್ಣುಹೋದವು. ಆಗ ಕುರುಬನ ವೇಶ ತೊಗೊಂಡು ಗೋಲಯ್ಯ ಲಿಂಗನ ಬಳಿ ಹೋಗಿ ಭೇಟಿ ಆದನು. ಆಗ ಎತ್ತಿನ ಕಣ್ಣು ಬಂದವು ಆಗ ಹಳಿಸಾಗರಕ್ಕೆ ಹೋದರು. ಆಗ ಮರೆಪ್ಪ ಸಾಹುಕಾರನ ಬೆನ್ನಿಗೆ ಬೇತಾಳ ಹುಣ್ಣು ಹುಟ್ಟಿತು. ಆಗ ಕುರುಬನ ವೇಷ ತಗೊಂಡು ಹೋಗಿ ಆಗ ನಿಮ್ಮ ಭಕ್ತಿಗೆ ಮೆಚ್ಚಿದ ಗೋಳಯ್ಯಲಿಂಗ ದೇವರು ಇದ್ದೇನು, ನನ್ನ ಒಲಿಸಿಕೊಂಡು ಗುಡಿ ಕಟ್ಟಿಸಿ ನೀವು ನನ್ನ ಬದಿಯಲ್ಲಿ ಬಂದು ಸ್ಥಾಪನಾ ಮಾಡಿಕೋ, ನಿಮಗೆ ವರ ಕುಡಿತಿನಿ ಅಂದನು. ಆಗ ಹಳಿಸಾಗರ ಬಿಟ್ಟು, ಬಂದು ಗೋಲಯ್ಯಲಿಂಗನ ಗುಡಿ ಕಟ್ಟಿಸಿ ಸ್ಥಾಪನಾ ಮಾಡಿದರು."


ಮೂಲ ಪುರುಷರು
ಬಸಪ್ಪ
ಮರೆಪ್ಪ
ನಿಜಪ್ಪ
ಹೊಳೆಪ್ಪ
ನಿಂಗಪ್ಪ
ಕಲ್ಲಪ್ಪ
ಗುರಪ್ಪ
ಮರೆಪ್ಪ
ನಿಜಪ್ಪ
ಮರೆಪ್ಪ
ಮರಲಿಂಗಪ್ಪ
ಹೊಳೆಪ್ಪ
ಮರೆಪ್ಪ
ಹೊಳೆಪ್ಪ
ಮರೆಪ್ಪ
ನಿಂಗಪ್ಪ
ನಿಜಪ್ಪ
ಮರೆಪ್ಪ
ಮರನಿಂಗಪ್ಪ
ಕಲ್ಲಪ್ಪ
ನಿಂಗಪ್ಪ
ಮರೆಪ್ಪ
ಹೊಳೆಪ್ಪ
ನಿಜಪ್ಪ
ಶರಣಪ್ಪ
ಶಿವಶಂಕ್ರಪ್ಪ
ಗೊಲ್ಲಾಳಪ್ಪ
ಹೊಳೆಪ್ಪ
ನಿಜಪ್ಪ
ಶಿದ್ಧರಾಮ
ಬಸವರಾಜ
ವೀರೇಶ
ರವಿರಾಜ
ಪ್ರಸಾದ
ಅರುಣ
ಸುನೀಲ

ಈ ಮನೆತನದವರು ಇತ್ತೀಚೆಗೆ ಅಂದರೆ ಭಾರತ ಸ್ವಾತಂತ್ರ್ಯಾ ನಂತರ ನಮ್ಮಲ್ಲಿ ಆಗಿರತಕ್ಕಂತ ಕಾನೂನಿನ ಅನ್ವಯ ಸದರಿ ದೇವಾಲಯಕ್ಕೆ ಕಮೀಟಿಯನ್ನು ರಚಿಸಿರುವರು. ಈ ದೇವಸ್ಥಾನವು ಮುಂಬಯಿ ಪಬ್ಲಿಕ್ ಟ್ರಸ್ಟ್ ಕಾಯ್ದೆ ಅಡಿಯಲ್ಲಿ ನೋಂದಾಗಿರುತ್ತದೆ. "ಟ್ರಸ್ಟ ನಂ.- ವಿಜಾಪೂರ ಎ.1343 ಅಂತಾ ಇರುತ್ತದೆ." ದೇವಸ್ಥಾನದ ಆಗು-ಹೋಗುಗಳನ್ನು ಟ್ರಸ್ಟಿಗಳು ನೋಡಿಕೊಳ್ಳುತ್ತಾರೆ. ಇಲ್ಲಿ ನೆರವೇರುವ ಯಾವತ್ತೂ ಆಚರಣೆಗಳು ಇವರ ಅಧೀನದಲ್ಲಿಯೇ ಇರುವವು.

**ಆಚರಣೆ - ಸಂಪ್ರದಾಯಗಳು :**

೧. ಪೂಜೆ, ೨. ಜಾತ್ರೆ ೩. ಗೌರಮ್ಮನಬಾವಿ ೪. ಉಚಾಯಿ, ೫. ತೇರು, ೬. ಕಡುಬಿನ ಕಾಳಗ ೭. ಅಗ್ನಿ ಬಸವಣ್ಣ, ೮. ಶ್ರಾವಣಮಾಸ, ೯. ಲಿಂಗದಶಮಿ, ೧೦. ಸೋಮವಾರದ ಪಲಾಕ್ಷೆ ೧೧. ಕಂಬಿಸೇವೆ ಕಾರ್ಯಕ್ರಮಗಳ ಸಂದರ್ಭಗಳಲ್ಲಿ ಅನೇಕ ಆಚರಣೆ ಸಂಪ್ರದಾಯಗಳನ್ನು ಆಚರಿಸಲ್ಪಡುವರು.

ಗೋಲಗೇರಿಯಲ್ಲಿ ಗೊಲ್ಲಾಳನ ಭಕ್ತ ಸಮೂಹ ಅಪಾರವಾಗಿದೆ. ಹಾಗೂ ನೂರಾರು ಮೈಲಿ ದೂರದಲ್ಲಿರುವ ಗ್ರಾಮದವರೂ, ಗೊಲ್ಲಾಳನ ಆರಾಧಕರಾಗಿದ್ದಾರೆ. ಇವರುಗಳು ಆರಾಧಿಸುವ ಆಚರಣೆಗಳು ಶೈವ ಪರಂಪರೆಗೆ ಹತ್ತಿರವಾದದ್ದು ಕಂಡುಬರುತ್ತದೆ. ಲಿಂಗಯ್ಯನ ದರ್ಶನಕ್ಕೆ ನೇಮದಿಂದ ಬರುತ್ತಿದ್ದ ಕಲ್ಲಹಂಗರಗಿಯ "ಲಿಂಗಮ್ಮ'ಳು ತನ್ನ ಗಂಡನ ಮನೆಯಾದ ಎಕ್ಸಂತಿ ದೇಸಾಯರ ಮನೆಗೆ ಹೋಗುವಾಗ ದಾರಿಯುದ್ದಕ್ಕೂ ಗೋಲಗೇರಿ ಲಿಂಗಯ್ಯನನ್ನು ಧ್ಯಾನಿಸುತ್ತಿದ್ದಳು. ಅವಳ ಉಡಿಯಲ್ಲಿ ಕಲ್ಲು ಗುಂಡಾಗಿ ಲಿಂಗಯ್ಯ ಬಂದಿರುವುದನ್ನು ಗಮನಿಸಿ ದಾರಿಯಲ್ಲಿ ಇಟ್ಟು ಬಂದಳು. ಈ ಕ್ರಿಯೆ ಹೀಗೆಯೇ ಮುಂದುವರಿದಾಗ ಮಾರ್ಗದುದ್ದಕ್ಕೂ ಅಲ್ಲಲ್ಲಿ ಲಿಂಗಗಳನ್ನು ಇಡುತ್ತ ಬಂದಳು. ಕಲ್ಲಹಂಗರಗಿ ಸಮೀಪ ಭೂತಾಳ -ಸಿದ್ಧನಾಗಿ, ಮದ್ದರಕಿಯಲ್ಲಿ - ಬಸವಣ್ಣನಾಗಿ, ಮಾವನೂರಲ್ಲಿ - ಹಯ್ಯಾಳಿ ಲಿಂಗವಾಗಿ, ಗೋಲಗೇರಿ ಲಿಂಗಯ್ಯ ನೆಲೆನಿಂತ. ಇವಳು ಗೊಲ್ಲಾಳೇಶ್ವರನಲ್ಲಿ ನಂಬಿಕೆಯಿರಿಸಿ ಭಕ್ತಿಯಿಂದ ನಡೆದುಕೊಂಡಳು. ಅದರ ಫಲವಾಗಿ ಗೊಲ್ಲಾಳನು ದಾರಿಯ ಮದ್ಯದಲ್ಲಿಯೇ ಅಲ್ಲಲ್ಲಿ ಉದ್ಭವಿಸಿ ಆರಾಧಿಸಿಕೊಳ್ಳುತ್ತಿದ್ದಾನೆ.

**ಪೂಜೆ :**

ಗೊಲ್ಲಾಳೇಶ್ವರನು ಅಚಲ ಶ್ರದ್ಧಾಭಕ್ತಿಯುಳ್ಳವರಿಗೆ ಬೇಡಿದ್ದನ್ನೇ ಕೊಡುವ ಪವಾಡ ಪುರುಷನೆಂದು ನಂಬಿಕೆಯಿದೆ. ಆಯುರಾರೋಗ್ಯ, ಸಿರಿಸಂಪತ್ತು ನೀಡುತ್ತಾನೆನ್ನುವ ಭಾವನೆ ಇದೆ. ಲೋಕ ಕಲ್ಯಾಣಕ್ಕಾಗಿ ಶ್ರೀಗಿರಿಯ ಮಲ್ಲಯ್ಯನೆ ಅನಂತ ನಾಮಗಳನ್ನು ಧರಿಸಿ ಭೂಲೋಕಕ್ಕೆ ಬಂದಿರುವನೆಂದು ಈತನನ್ನು ಆರಾಧಿಸುವರು. ದೈವವನ್ನು ಒಲಿಸಿಕೊಳ್ಳುವುದಕ್ಕಾಗಿ ತನು, ಮನ, ಧನವನ್ನು ಅರ್ಪಿಸುವರು. ಈ ತೆರನಾಗಿ ಭಕ್ತರು ಅನೇಕರು. ಈ ಆರಾಧಕರ ಕುರಿತಾದ ಐತಿಹ್ಯಗಳಿವೆ. ಅವರುಗಳು ಸಲ್ಲಿಸುವ ಪೂಜಾ ವಿಧಾನಗಳು ಅನೇಕ.

ಗೊಲ್ಲಾಳೇಶ್ವರ ದೇವಸ್ಥಾನದಲ್ಲಿ ನಿತ್ಯವೂ (ತ್ರಿಕಾಲ) ಪೂಜೆಯನ್ನು ಸ್ನಾನಮಾಡಿ ಮಾಡುವರು. (ದೇವರಮನೆಯವರು) ೧. ಬೆಳಗಿನಜಾವ, ೨. ಮಧ್ಯಾಹ್ನ ೨. ಸಾಯಂಕಾಲ ಈ ಸಮಯದಲ್ಲಿ ಪೂಜೆ ಸಲ್ಲಿಸುವಾಗ ಆ ಗ್ರಾಮದ ಮತ್ತು ಇತರೆ ಗ್ರಾಮಗಳಿಂದ ಬಂದಿರತಕ್ಕಂತ ಭಕ್ತರೂ ಆರಾಧಿಸುವರು. ಪೂಜೆ ಮಾಡುವಾಗ 'ಲಿಂಗಕ್ಕೆ' ಮಜ್ಜನ ಮಾಡಿಸಿ ಹಾಲಿನ ಅಭಿಷೇಕ ಮಾಡುವರು ಹಾಗೂ ಭಸಿತವನು ತೀಡುವರು, ಪೂಜೆಗೆ ಕಡ್ಡಾಯವಾಗಿ ಪತ್ರಿಯನು ಉದ್ಧರಿಸುವರು, ಹೂವು ಕರ್ಪೂರ, ಗಂಧ, ಇತ್ಯಾದಿಗಳನ್ನು ತಂದು ಮಂಗಳಾರತಿ ಮಾಡಲಾಗುವುದು. ಈ ಸಂದರ್ಭದಲ್ಲಿ ಪೂಜಾ ಪದವನ್ನು 'ಆರತಿ' ಪದವೆಂದು ಹಾಡಲಾಗುವದು. ಪೂಜಾ ಸಂದರ್ಭದಲ್ಲಿ ಗಂಡು -ಹೆಣ್ಣು ಎಲ್ಲರೂ ಸೇರಿಯೇ ಪೂಜಿಸಿ ಭಜಿಸುವರು.

"ಪೂಜೆಯ ಮಾಡುವೆನು ಶ್ರೀ ಗೊಲ್ಲಾಳೇಶನ ಪೂಜೆಯ ಮಾಡುವೆನು
ಮೊದಲ ಮಜ್ಜನವ ಮಾಡಿ ದೇವನಿಗೆ ಅಭಿಷೇಕವ ಮಾಡಿ ।
ಭಸಿತ ಗುರುವನು ತೀಡಿ । ಮಿಸುಪ ಪತ್ರಿಯನುಧರಿಸಿ ।
ಪರಿ ಪರಿ ಪುಷ್ಪವ ತಂದು ಈ ದೇವನಿಗೆ ಹಾರಕಟ್ಟಿ ಹಾಡುವೆ ಚಂದ ।
ಕರ್ಪೂರ ಗುಗ್ಗಳ ತಂದು ಮಂಗಳಾರತಿ ಮಾಡುವೆನಿಂದು ।

ಬೆಳಗುವೆನಾರತಿಯೆತ್ತಿ ಗುರು ಲಿಂಗ ಜಂಗಮನಾದವಗೆ ।
ತ್ರಿಕಾಲ ಪೂಜೆ ನಿತ್ಯ ಭಕ್ತರು ಬಂದು ನಿನ್ನ ಚರಣ ಕರಣ ಹರಕೆ ।
ಹೊತ್ತು ಹೋಗುವರು । ಅವರವರ ಭಾವಕ್ಕೆ ಫಲ ನೀಡುತ್ತ ।
ಮೆರೆವ ಜಗದೊಡೆಯನಿಗೆ ಬೆಳಗುವೆನಾ ಕರ್ಪುರದಾರುತಿಯಾ ।

ಶ್ರೀ ಗಿರಿಯನ್ನು ಬಿಟ್ಟು ತರುಳ ಗೊಲ್ಲಾಳನ ಭಕ್ತಿಗೆ ಮೆಚ್ಚಿ
ಗೊಲ್ಲಾಗೇರಿಯಲ್ಲಿ ವಾಸಮಾಡಿದ ಗೊಲ್ಲಾಳ ಲಿಂಗೇಶನಿಗೆ
ಬೆಳಗುವೆನಾರುತಿಯಾ

ಭಕ್ತರ ಬಂಧುವಾದವಗೆ । ಶರಣ ನಂದಯ್ಯಗೆ ಒಲಿದವಗೆ ತುಂಬಿ
ಹರಿಯುವ ಕೃಷ್ಣೆಯೊಳಗೆ ದಾರಿತೋರಿದವಗೆ । ಡಂಬಳ ಗೌರಮ್ಮಗೆ
ಮುಕ್ತಿ ಕೊಟ್ಟವಗೆ । ಸುರಪುರದ ಮರಿಯಪ್ಪಗೊಲಿದು ತಂದವಗೆ ।
ಕಾಲಕಾಲಕ್ಕೆ ಅವನ ವಂಶಜರಿಂದ ಪೂಜೆಗೊಳ್ಳುವನಿಗೆ ಬೆಳಗುವೆನಾ
ಮುತ್ತಿನಾರುತಿಯಾ। "[೧೧]

ನಿತ್ಯ ಭಕ್ತಿ ನಿಷ್ಠೆಯಲ್ಲಿ ಸಾವಿರಾರು ಭಕ್ತರು ಗೊಲ್ಲಾಳನನ್ನು ತಾವಿದ್ದಲ್ಲಿಯೇ ಇಲ್ಲವೇ ಗೋಲಗೇರಿ ದೇವಸ್ಥಾನಕ್ಕೆ ಬಂದಾದರೂ ಪೂಜೆಯನ್ನು ಸಲ್ಲಿಸುತ್ತಾರೆ. ಮೇಲಿನ ಪದದಂತೆ ಲಿಂಗಯ್ಯನಲ್ಲಿ ಭಕ್ತಿಯಿರಿಸಿ ವಿಧಿ ವಿಧಾನಗಳನ್ನು ಆಚರಿಸುವ ಸಂಪ್ರದಾಯವಿರುವದು. ಇದೇ ತೆರನಾಗಿ ಎಲ್ಲೆಲ್ಲಿ ಈತನ ದೇವಾಲಯಗಳನ್ನು ಕಟ್ಟಲಾಗಿದೆಯೋ ಅಲ್ಲಲ್ಲಿ ಇದೇ ಭಾವ ನಂಬಿಕೆಯಿಂದ ಪೂಜಿಸುವರು. ಇದು ನಿತ್ಯದ ಪೂಜಾವಿಧಾನವಾಗಿದೆ. ಹಾಗೆಯೇ ಶ್ರಾವಣಮಾಸದಲ್ಲಿ ಮತ್ತು ಜಾತ್ರಾ ಸಂದರ್ಭದಲ್ಲಿಯೂ ಆರಾಧಿಸಲಾಗುವುದು.

ಗೊಲ್ಲಾಳೇಶ್ವರ 'ಲಿಂಗ' ಪೂಜೆಯನ್ನು ಮಾಡುವ ಭಕ್ತರು ಬಿಳಿಯ ಕಂಬಳಿ ಅಥವಾ ರೇಶಿಮೆ ಸಮ್ಮಿಳಿತವಾಗಿರುವ ಬಟ್ಟೆಯನ್ನು ಹಾಸಿಕೊಂಡು ಪೂಜೆಗೆ ಕೂಡ್ರಬೇಕು. ಲಿಂಗಪೂಜೆ ಗೈಯುವವರು ಯೋಗ್ಯ ಸ್ಥಳದಲ್ಲಿ ಮಂಡಿಸಿದ ಮೇಲೆ ತನ್ನ ಬಲಭಾಗದಲ್ಲಿ ಪೂಜೆಗೆ ಬೇಕಾಗಿರುವ ಸಾಮಗ್ರಿಗಳನ್ನು ಇಟ್ಟುಕೊಳ್ಳಬೇಕು. ಸ್ನಾನಮಾಡಿ ನೀರನ್ನು ತಾಮ್ರದ ತಂಬಿಗೆಯಲ್ಲಿ ತುಂಬಿಕೊಂಡಿರಬೇಕು. ಅಗ್ನಿ ಇರುವ ಧೂಪದ ಪಾತ್ರೆಯನ್ನು ಎಡಬದಿಯಲ್ಲಿ ಇರಿಸಿಕೊಂಡಿರಬೇಕು. ಭಕ್ತನು ಭಸ್ಮವನು ಧರಿಸುವದು ಅತ್ಯವಶ್ಯ. ನಂತರದಲ್ಲಿ ಏಕಾಗ್ರತೆಯ ಮೂಲಕ ವಿಧಾನೋಕ್ತವಾಗಿ ಲಿಂಗಯ್ಯನನ್ನು ಷಡಕ್ಷರಿ ಪಠಣದೊಂದಿಗೆ ಪೂಜೆಗೈಯುತ್ತಾರೆ.

ವಿಧ್ಯುಕ್ತವಾಗಿ ಪೂಜಿಸಿದ ನಂತರ ಲಿಂಗಯ್ಯನಿಗೆ ಅರ್ಪಿಸಿದ ಪ್ರಸಾದ, (ಪತ್ರಿ-ಪುಷ್ಪ, ಅಕ್ಷತಾದಿ)ಗಳನ್ನು ಕೆಳಗಿರುವ ಮಜ್ಜನ ಪಾತ್ರೆಯಲ್ಲಿ ಹಾಕಿ ಪಾದೋದಕ (ಮಜ್ಜನದ ನೀರು) ಸ್ವೀಕರಿಸಿ ಮತ್ತೊಮ್ಮೆ ಲಿಂಗಯ್ಯನಿಗೆ ವಿಭೂತಿ ಧಾರಣ ಮಾಡಿಸಿ ವಂದಿಸಬೇಕು. ಹೀಗೆ ತ್ರಿಕಾಲ(ಬೆಳಿಗ್ಗೆ, ಮಧ್ಯಾಹ್ನ ಸಂಜೆ)ದಲ್ಲಿ ಲಿಂಗಾರ್ಚನೆಯನ್ನು ಮಾಡುವುದರಿಂದ ಭಕ್ತನಿಗೆ ಮೋಕ್ಷ ಸಿಗುವುದು ಎಂಬ ನಂಬಿಕೆಯಿರುವುದು. ಈ ಲಿಂಗಯ್ಯನನ್ನು ಪೂಜಿಸುವವರು ಬೇರೆ ತೀರ್ಥಕ್ಷೇತ್ರಗಳನ್ನು ದೇವತಾದಿ ದೇವಾಲಯದ ದರ್ಶನವನ್ನು ಮಾಡಿಕೊಂಡು ಸ್ವರ್ಗ ಸಾಧಿಸಬೇಕಾದುದಿಲ್ಲ. ಎಲ್ಲ ಪುಣ್ಯಗಳೂ ಈ ಲಿಂಗಯ್ಯನಲ್ಲಿಯೇ ಅಡಗಿವೆ. ಕಂಡ ಕಂಡ ದೇವರಿಗೆ ಕೈಮುಗಿದು, ಶ್ರೇಷ್ಠ ಶಿವನಿಗಿರುವ (ಗುಂಡು-ಗಡಿಗೆ) ಕರಂಡದಿ ಸಮೇತ ಭೂಮಿಗೆರಗಿ ದೀರ್ಘದಂಡ ನಮಸ್ಕರಿಸುವ ಅಗತ್ಯವಿಲ್ಲ. ಅದರಿಂದ ಪುಣ್ಯದಾಗಮನವಿಲ್ಲ, ಒಟ್ಟಾರೆಯಾಗಿ ಲಿಂಗಯ್ಯನ ಪೂಜೆಯಲ್ಲಿ ನಿಷ್ಠೆಯಿರಬೇಕು.

## ಜಾತ್ರೆ :

ಮಾನವನು ಗತಕಾಲದಲ್ಲಿ ಬದುಕಿ ಬಾಳಿದ ಪರಿಸ್ಥಿತಿಯನ್ನು ಇತಿಹಾಸದ ದಾರಿಯಲ್ಲಿ ಹಿನ್ನಡೆದು ಅವಲೋಕಿಸಿದಾಗ, ತಾನು ವಾಸಿಸುವ ಮನೆಯನ್ನು, ಆಹಾರ ಬೆಳೆಯುವ ಭೂಮಿಯನ್ನು, ನೀರನ್ನು ಈ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಹುಡುಕಿಕೊಂಡು ಅಲೆದಾಡುತ್ತ ಕೊನೆಗೊಮ್ಮೆ ಸ್ಥಾಯಿಯಾಗಿ ನೆಲೆನಿಂತ. ಆಯಾ ಪರಿಸರಕ್ಕೆ ಅನುಗುಣವಾದ ಮನೆಗಳನ್ನು ಕಟ್ಟಿಕೊಂಡ. ಇದಕ್ಕೆ ಪೂರಕವಾದ ಆಹಾರವನ್ನು ಸ್ವೀಕರಿಸಿದ. ನಿಸರ್ಗ ದತ್ತವಾಗಿ ಬಂದ ಈ ಬದುಕಿನ ಸಹಜ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಕುಟುಂಬ ಸಂಬಂಧವನ್ನೂ ಬೆಳೆಸಿದ. ತನ್ನ ಬದುಕಿಗೆ ಆಧಾರವಾದ ಪ್ರಕೃತಿಯನ್ನು ಆರಾಧಿಸುತ್ತ ಪ್ರತೀಕಗಳನ್ನು

ಕಲ್ಪಿಸಿಕೊಂಡ. ಅವುಗಳನ್ನು ಪೂಜಿಸುವ ವಿಧಿವಿಧಾನಗಳನ್ನು ತನಗೆ ಅನಿಸಿದ ಹಾಗೆ ಸೃಷ್ಟಿಸಿಕೊಂಡ. ಕಾಲಕ್ರಮೇಣ ತನ್ನ ಅನುಭವದ ಆಧಾರದ ಮೇಲೆ ವಿಧಿ -ವಿಧಾನಗಳನ್ನು ಮಾಡಿಕೊಂಡನು. ಸಮಾನ ಮನಸ್ಸಿನಿಂದ ಕೂಡಿದ ಜನಗಳ ಗುಂಪು ಒಂದೊಂದು ಜನಾಂಗವಾಗಿ ಬೆಳೆಯಿತು. ಈ ಜನಾಂಗಗಳಿಗೆ ಅವರದೇ ನಂಬಿಕೆಗಳು, ಆಚರಣೆಗಳು ಸಂಪ್ರದಾಯಗಳು, ಚಾಲ್ತಿಗೆ ಬಂದವು. "ಹೀಗೆಯೇ ಜೀವನದ ಸಂಕಷ್ಟಗಳನ್ನು ಮರೆಯಲು ಮನಸ್ಸಿಗೆ ಮತ್ತು ಅನುಭವಕ್ಕೆ ಸಹಜವಾದ ಹಾಡು, ಕಥೆ, ಚಿತ್ರ, ಅಲಂಕಾರ ಮುಂತಾದವು ರೂಪುಗೊಂಡವು. ಎಲ್ಲರು ಒಟ್ಟುಗೂಡಿ ಆನಂದಿಸುವಂಥ ಜಾತ್ರೆಗಳು, ಸಂತೆಗಳು, ಹಬ್ಬ ಹರಿದಿನಗಳು ಸಮಾಜಿಕ ಚಿಂತನೆ ಮತ್ತು ಕ್ರಿಯೆಗಳ ಫಲವಾಗಿ ಮೂಡಿಬಂದವು."[೨]

ಜಾತ್ರೆ ಆಯಾ ಜನಾಂಗದ ಸಂಸ್ಕೃತಿಯ ಪ್ರತೀಕಗಳು. ದೇವರಲ್ಲಿ ನಂಬಿಕೆಯಿರಿಸಿ ಒಂದೆಡೆ ಎಲ್ಲ ಜನಗಳು ಸೇರಿಕೊಂಡು ವಿಶಿಷ್ಟ ಪ್ರಕಾರದ ಆಚರಣೆ, ಸಂಪ್ರದಾಯಗಳನ್ನು ನಡೆಸುವದೇ 'ಜಾತ್ರೆ' ಆಗಿದೆ. ಜಾತ್ರೆ, ಪರಿಶೆ, ತೇರು, ರಥೋತ್ಸವ, ಉಚ್ಛಾಯ, ಪಲ್ಲಕ್ಕಿ ಬಂಡಿ , ಇತ್ಯಾದಿ ಯಾವ ಹೆಸರಿನಿಂದ ಕರೆದರೂ ಎಲ್ಲ ಜಾತ್ರೆಗಳ ಹೊರ ಸ್ವರೂಪ ಒಂದೇ. ಈ ಸಂದರ್ಭದಲ್ಲಿ ಎಲ್ಲ ಜಾತಿವರ್ಗಗಳ ಜನರು ಅಪಾರವಾಗಿ ಒಂದೆಡೆ ಸೇರುವರು. ಜನಪದ ಹಾಡುಗಳು, ನೃತ್ಯಗಳು, ಸ್ಪರ್ಧೆಗಳು, (ಭಾರ ಎತ್ತುವದು) ಜನಗಳ-ದನಗಳ ಶಕ್ತಿಪ್ರದರ್ಶನ, ಕಲೆಗಳು (ಆಟ-ನಾಟಕಗಳು) ದೇವರನ್ನು ಮೆರೆಸುವದು, ಭಕ್ತಿ-ಭಾವ ಸಮರ್ಪಣೆ, ಹರಕೆ ಮುಟ್ಟಿಸುವದು, ಇವು ಜಾತ್ರೆಗಳಲ್ಲಿ ಕಂಡುಬರುವ ಸಾಮಾನ್ಯ ನೋಟಗಳು.

ನಮ್ಮದು ಕೃಷಿ ಪ್ರಧಾನವಾದ ನಾಡು, ಜಾತ್ರೆಗಳನ್ನು ನಡೆಸಿಕೊಂಡು ಬರುವವರು ಕೃಷಿಗಾರರೇ ಎಂದು ಹೇಳಬಹುದು. ಆದ್ದರಿಂದ ಕೃಷಿಗೆ ಸಂಬಂಧಿಸಿದ ಕೆಲಸಗಳು ಮುಗಿದು,. ತಾವು ಬೆಳೆದ ಬೆಳೆಗೆ ಫಲ ದೊರೆತು ಕೈಯಲ್ಲಿ ಹಣ ಸೇರುತ್ತದೆ ಎಂದಾಗ ಆ ಸಮಯದಲ್ಲಿ ಜಾತ್ರೆಯನ್ನು ಜೋರಾಗಿಯೇ ಆಚರಿಸುವರು. ತಾವು ಪಡೆದ ಈ ಆದಾಯ ದೇವರ ಕೃಪೆಯಿಂದ ಎಂದು ಭಾವಿಸಿ, ಕಾಳು, ಹಣ, ಹರಕೆಗಳನ್ನು ಅರ್ಪಿಸಿ ಕೃತಜ್ಞತೆ ಸಲ್ಲಿಸುವರು. ವರ್ಷವಿಡೀ ಅಡವಿಯಲ್ಲಿ ದುಡಿದ ಕೃಷಿಕರು, ಜಾತ್ರಾ ಸಂದರ್ಭದಲ್ಲಿಯೇ ತಮಗೆ ಬೇಕಾದ ವಸ್ತುಗಳನ್ನು, ಪ್ರಾಣಿಗಳನ್ನು ಕೊಂಡುಕೊಳ್ಳುವರು. ಹಾಗೂ ಮನಸ್ಸಿನ ಆನಂದಕ್ಕಾಗಿ ಹಾಡು, ನೃತ್ಯಗಳನ್ನು ವೀಕ್ಷಿಸಿ ಸಂತೋಷಪಡುವರು. 'ಜಾತ್ರೆ' ಕೃಷಿಕರ ಬೇಕು-ಬೇಡಿಕೆಗಳನ್ನು ಈಡೇರಿಸುವ ವಿವಿಧ ಪ್ರಕಾರಗಳ ಮನರಂಜನಾ, ವ್ಯಾಪಾರ ವಹಿವಾಟುಗಳು ನಡೆದು, ಕೌಟುಂಬಿಕ ಅಗತ್ಯತೆಗಳನ್ನೂ ಈಡೇರಿಸುವ ಒಂದು ಪ್ರಕ್ರಿಯೆ.

ಉತ್ತರ ಕರ್ನಾಟಕದಲ್ಲಿ ಎಲ್ಲೆಲ್ಲಿ ಗೊಲ್ಲಾಳೇಶ್ವರ ದೇವಸ್ಥಾನಗಳಿವೆಯೋ ಅಲ್ಲಲ್ಲಿ ಜಾತ್ರೆಗಳು ನೆರವೇರುತ್ತವೆ. (ಇತ್ತಿತ್ತಲಾಗಿ ಲಕ್ಷ್ಮೇಶ್ವರದಲ್ಲಿರುವ ದೇವಾಲಯದಲ್ಲಿ ಜಾತ್ರೆ ನೆರವೇರುವುದಿಲ್ಲ) ಇವುಗಳಲ್ಲಿ ಬಹುದೊಡ್ಡ ಜಾತ್ರೆ ಗೋಲಗೇರಿಯಲ್ಲಿ ಆಚರಿಸಲಾಗುವುದು. ಯುಗಾದಿ ಹಬ್ಬದ ಸಂದರ್ಭದಲ್ಲಿ ಪರಸೆಯನ್ನು

(ಕಂಬಿ) ತೆಗೆದುಕೊಂಡು ಶ್ರೀಶೈಲಕ್ಕೆ ಹೋಗಿ ಮರಳಿ ಬರುವ ಸಂಪ್ರದಾಯವಿದೆ. ಯುಗಾದಿ ಹಬ್ಬದ ದಿನದಂದು ಅನೇಕ ಊರುಗಳ ನೂರಾರು ಪರಸೆಗಳು ಶ್ರೀಶೈಲದ ದೇವಸ್ಥಾನದಲ್ಲಿ ಸೇರುತ್ತವೆ. ಯುಗಾದಿ ಹಬ್ಬವನ್ನು ನಮ್ಮ ಸಂಸ್ಕೃತಿಯಲ್ಲಿ ವಿಶೇಷವಾಗಿ ಆಚರಿಸಲಾಗುವುದು. ನಂತರ ಪರಸೆಯು ದವನದ ಹುಣ್ಣಿಮೆಯ ಐದನೇ ದಿನಕ್ಕೆ ತಮ್ಮ ತಮ್ಮ ಸ್ವಊರುಗಳಲ್ಲಿದ್ದುಕೊಂಡು ಕಂಬಿಗೆ 'ಐದೇಶಿ' ಎಂದು ಭಕ್ತರೆಲ್ಲರೂ ಕೂಡಿಕೊಂಡು ಪೂಜಿಸುವ ಸಂಪ್ರದಾಯವಿದೆ. ಇದೇ ಸಂದರ್ಭದಲ್ಲಿಯೇ ಗೊಲ್ಲಾಳೇಶ್ವರನ ಜಾತ್ರೆಯು ನೆರವೇರುವುದು ಆಗ್ಗೆ ಜಾತ್ರೆಯನ್ನು ವಿವಿಧ ಆಚರಣೆಗಳೊಂದಿಗೆ ಆಚರಿಸಲಾಗುವುದು.

ಗೋಲಗೇರಿಯಲ್ಲಿ ಗೊಲ್ಲಾಳೇಶ್ವರ ಜಾತ್ರಾ ನಿಮಿತ್ತ ಪುರಾಣವನ್ನು ಪಠಣಮಾಡಲಾಗುವುದು. ಈ ಸಮಯದಲ್ಲಿ ದೇವರಮನೆ ಸಂಬಂಧಿಕರು ಹಾಜರಿರುವರು. ಪುರಾಣ ವಾಚನವು ದೇವಸ್ಥಾನದ ಆಡಳಿತದ ಹೊಣೆಯನ್ನು ಹೊತ್ತಿರುವ 'ದೇವರಮನಿ' ಇವರ ಮನೆಯಲ್ಲಿ ನಡೆಯುವದು. ಇದನ್ನು ಯುಗಾದಿ ಹಬ್ಬದ ಮರುದಿವಸ ಅಂದರೆ 'ಯುಗಾದಿಪಾಡ್ಯ'ದಂದು ಪ್ರಾರಂಭಿಸುವರು. ಇದಕ್ಕೂ ಮೊದಲು ಪುರಾಣದ ಪುಸ್ತಕವನ್ನು ದೇವರ ಮನೆಯ ಹೆಣ್ಣುಮಕ್ಕಳಾದ ಐದು ಜನ ಮುತ್ತೈದೆಯರು ಕಳಸವನ್ನು ಹಿಡಿದು ಬೆಳಗಿ ಪೂಜಿಸುವರು. ವಾದ್ಯ, ಬಾಜಾ, ಬಜಂತ್ರಿಯೊಂದಿಗೆ, ಪುರಾಣ ಪುಸ್ತಕವನ್ನು 'ಪಲ್ಲಕ್ಕಿಯಲ್ಲಿರಿಸಿ ಮೆರೆಸುತ್ತಾ ದೇವಸ್ಥಾನಕ್ಕೆ ತೆಗೆದುಕೊಂಡು ಬರುವರು. ಇಲ್ಲಿ ದೇವಸ್ಥಾನದ ಸುತ್ತ ಮೂರು ಸಲ ಪ್ರದಕ್ಷಿಣೆ ಹಾಕುವರು. ನಂತರ ಮನೆಗೆ ಬರುವರು. ಅಂದೇ ಮಧ್ಯಾಹ್ನ ಪುರಾಣ ಪಠಣ ಪ್ರಾರಂಭವಾಗುವುದು. ಆಗ್ಗೆ ಗ್ರಾಮದ ಪ್ರಮುಖರು, ಊರಿನ ಗುರುಹಿರಿಯರು ಬಂದಿರುತ್ತಾರೆ. ಮರುದಿವಸ ಮತ್ತೆ ವಾದ್ಯ ವೃಂದದ ಜೊತೆಗೆ ಪುರಾಣ ಪುಸ್ತಕವನ್ನು ಹೊತ್ತುಕೊಂಡು ದೇವಸ್ಥಾನದ ಸುತ್ತ ಪ್ರದಕ್ಷಿಣೆ ಹಾಕುವರು. ಹಾಗೆಯೇ ಪುರಾಣವನ್ನು 'ದೇವರಮನೆ' ಇವರ ಮನೆಗೆ ತೆಗೆದುಕೊಂಡು ಬರುತ್ತಾರೆ. ಅಂದಿನಿಂದ ಈ ಮನೆಯಲ್ಲಿ ಹದಿನೈದು (೧೫) ದಿನಗಳವರೆಗೆ ಪುರಾಣವನ್ನು ಹೇಳುವರು.

## ತೊಟ್ಟಿಲು :

ಈ ಕಾರ್ಯಕ್ರಮ ಸಂದರ್ಭದಲ್ಲಿಯೇ ಐದನೇ ದಿನದಂದು 'ತೊಟ್ಟಿಲ' ಕಟ್ಟುವರು. ತೊಟ್ಟಿಲನ್ನು 'ದೇವರ ಮನೆ' ಇವರ ಮನೆಯ ಪಡಸಾಲೆಯಲ್ಲಿ ಕಟ್ಟಲಾಗುವುದು. (ಪುರಾಣ ಗದ್ದುಗೆ ಮುಂದೆ) ಐದು ಜನ ಮುತ್ತೈದೆಯರು ಕೂಡಿಕೊಂಡು ತೊಟ್ಟಿಲವನ್ನು ಶೃಂಗಾರ ಮಾಡುವರು. ಶೃಂಗಾರಲಂಕಾರಕ್ಕೆ ಪತ್ರಿ, ಹೂ, ಉಪಯೋಗಿಸುವರು ಹಾಗೂ ನಾಲ್ಕು ಹಗ್ಗಗಳಿಗೆ ಕುಂಚಿಗೆಗಳನ್ನು ಕಟ್ಟುವರು ಮತ್ತು ತೊಟ್ಟಿಲಕ್ಕೆ ಛತ್ರ ಕಟ್ಟುವರು. ಕೆಳಗಡೆ ಕಂಬಳಿಯನ್ನು ಹಾಸುವರು. ಇದರಲ್ಲಿ ಗೊಲ್ಲಾಳೇಶ್ವರರ ಮೂರ್ತಿಯನ್ನು ಇರಿಸುವರು. ಪುರುಷ ಭಕ್ತರು ಎದ್ದುನಿಂತು ತೊಟ್ಟಿಲಲ್ಲಿ ಐದು ಜನ ತಲೆಬಾಗಿ ನಿಂಗಯ್ಯ ಕುರ್ರ, ಗೊಲ್ಲಾಳಪ್ಪ ಕುರ್ರ ಕುರ್ರ ಎಂದು ಐದು ಸಲ ಕೂಗಿ ನಾಮಕರಣ ನಾಡುವರು. ನಂತರ ಗುಗ್ಗರಿ (ಕುದಿಸಿದ ಜೋಳ, ನೆಲಗಡಲೆ)ಯನ್ನು

ಎಲ್ಲ ಭಕ್ತಾದಿಗಳಿಗೆ ಹಂಚಲಾಗುವದು. ಈ ಆಚರಣೆಯು ಮೊದಲು 'ಲಿಂಗದಶಮಿ' ದಿನದಂದು ನಡೆಯುತ್ತಿತ್ತು ಹಾಗೂ ಜಾತ್ರೆಯೂ ಇದೇ ಸಂಭರ್ಧದಲ್ಲಿಯೇ ಆಗುತ್ತಿತ್ತು. ಅಂದರೆ ಗೊಲ್ಲಾಳನು ಹುಟ್ಟಿದ್ದು ಲಿಂಗದಶಮಿ ದಿನದಂದು ಎಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿಯೇ ಜಾತ್ರೆಯು ನೆರವೇರುತ್ತಿತ್ತು. ಆದರೆ ಮಳೆಗಾಲ ಇರುವ ನಿಮಿತ್ತ ಬರುವ ಭಕ್ತಾದಿಗಳಿಗೆ ಆಗುವ ತೊಂದರೆ ಮತ್ತು ತೇರನ್ನು ಈ ಸಮಯದಲ್ಲಿ ಎಳೆಯಲು ಕಠಿಣವಾದ್ದರಿಂದ ಈ ಸಮಯ ತಪ್ಪಿಸಲಾಯ್ತು ಎಂದು ಹೇಳುವರು.

## ಉಚಾಯಿ :

ಆರನೇ ದಿನದಂದು ಉಚಾಯಿಗಳನ್ನು ಕಟ್ಟಲಾಗುವುದು. ಅಸ್ತವ್ಯಸ್ತವಾದ ಉಚಾಯಿ ಜೋಡಣೆಯನ್ನು ಈ ದಿನದಂದು ಜೋಡಿಸಲಾಗುವದು. ಉಚಾಯಿ ಜೋಡಣೆ ಸಂದರ್ಭದಲ್ಲಿ ಗೋಲಗೇರಿಯ ಸುತ್ತ ಮುತ್ತಲಿನಲ್ಲಿರುವ ಹದಿನಾಲ್ಕು (೧೪) ಊರುಗಳ ಹಿರಿಯರನ್ನು ಕರೆಯಿಸುವ ಸಂಪ್ರದಾಯವಿದೆ. ೧. ಸಾಸಬಾಳ, ೨. ಡಂಬಳ, ೩. ಚಿಕ್ಕಅಲ್ಲಾಪೂರ, ೪. ಹಿರೇಅಲ್ಲಾಪೂರ, ೫. ಢವಳಾರ, ೬. ಮಾಗಣಗೇರಿ ೭. ಖೈನೂರ, ೮. ಮರಡಿ, ೯. ಕೊಂಡಗೂಳಿ, ೧೦. ಕಣಮೇಶ್ವರ ೧೧. ಸುಂಗಠಾಣ, ೧೨. ಮಳ್ಳಿ, ೧೩. ಕುರಳಗೇರಿ, ೧೪. ನಂದಗೇರಿ ಈ ಎಲ್ಲ ಊರುಗಳ ಹಿರಿಯರು, ಮತ್ತು ಭಕ್ತಾದಿಗಳೂ ಸೇರಿಕೊಂಡು ಉಚಾಯಿಯನ್ನು ಸಿದ್ಧಪಡಿಸುವರು. ಉಚಾಯಿಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ 'ಡಂಭಳ' ಗೌರಮ್ಮನ ಬಾವಿಯಿಂದ ನೀರನ್ನು ಹೊತ್ತು ತರುವರು. ಇದರಿಂದ ಉಚಾಯಿಗೆ ನೀರಿನ ಅಭಿಷೇಕ ಮಾಡುವರು ಹಾಗೂ ನೆರೆದಿರುವ ಭಕ್ತರಿಗೆ ಅನ್ನಸಂತರ್ಪಣೆ (ದಾಸೋಹ) ನಡೆಸಲಾಗುವುದು. ಉಚಾಯಿಯನ್ನು ಒಂಬತ್ತು ದಿನಗಳವರೆಗೆ ಎಳೆಯಲಾಗುವದು. ಮೊದಲು ಐದು ದಿನಕ್ಕೆ ಊರಿನ ಭಕ್ತೆಯರಾದ ಮುತ್ತೈದೆಯರು ಕಳಸ ಹಿಡಿಯುವ ಸಂಪ್ರದಾಯ ಇರುವದು. ಈ ದಿನದ ಉತ್ಸವದಲ್ಲಿ ಪಲ್ಲಕ್ಕಿ ಉತ್ಸವವೂ ನಡೆಯುವದು. ಆಗ್ಗೆ ಪುರವಂತರು ಭಾಗವಹಿಸಿ ವೀರಭದ್ರನ ಒಡಪುಗಳನ್ನು ಹೇಳುವರು. ನಂದಿಕೋಲ ಮೆರವಣಿಗೆಯು ನಡೆಯುತ್ತದೆ. ಇದಕ್ಕೆ ವಾದ್ಯ-ವೃಂದ, ಡೊಳ್ಳು ಬಾರಿಸುವಿಕೆಯೂ ಇರುವದು. ಕಾಯಿಕೋಲನ್ನು (ದೀವಟಿಗೆ) ಹಿಡಿಯುತ್ತಾರೆ. ಕಾಯಿಕೋಲಿಗೆ ಕುಸಬಿ ಎಣ್ಣೆಯನ್ನು ಉಪಯೋಗಿಸುತ್ತಾರೆ. ನಂದಿಕೋಲ ಮೆರವಣಿಗೆಯು ಈ ದಿನದಿಂದ ನೆರವೇರುವದು ಈ ಎಲ್ಲ ಸಾಂಪ್ರದಾಯಿಕ ಆಚರಣೆಗಳೊಂದಿಗೆ ಉಚಾಯಿಯನ್ನು ಎಳೆಯುವರು.

ಉಚಾಯಿ ಅಂದರೆ ಒಂದರ್ಥದಲ್ಲಿ ಸಣ್ಣತೇರು ಈ ತೇರು ಒಂಬತ್ತು ದಿನಗಳವರೆಗೆ ಹೇಗೆ ? ಹೋಗಿ ಬರುವದೋ ಹಾಗೆಯೇ ದೊಡ್ಡತೇರು ಹತ್ತನೆ ದಿನದಂದು ಹೋಗಿಬರುತ್ತದೆ. (ಎಳೆಯುತ್ತದೆ.) ಈ ತೇರು ಸಲೀಸಾಗಿ ಎಳೆದರೆ ಆ ಇಡೀ ವರ್ಷ ಜನಗಳಲ್ಲಿ ಸುಖ ಸಮೃದ್ಧಿ ಲಭಿಸುವದು. ಜಗತ್ತಿಗೆ ಒಳ್ಳೆಯದಾಗುವದು ಎನ್ನುವ ದೈವನಂಬಿಗೆಯಿದೆ. ದಾರಿಯ ಮಧ್ಯದಲ್ಲಿ ಉಚಾಯಿ ಕೆಟ್ಟರೆ ಅದನ್ನು ಸರಿಮಾಡಿಕೊಂಡೇ ಮನೆಗೆ ಮರಳುವ ಸಂಪ್ರದಾಯವಿದೆ.

## ಡೊಳ್ಳಿನ ವಾಲಗ -ಜಾಗರಣೆ :

ಯುಗಾದಿ ಅಮವಾಸೆ ನಂತರ ಎಂಟನೆಯ ದಿನ ಇಡೀ ರಾತ್ರಿ ಜಾಗರಣೆ ಇರುವದು. ಡೊಳ್ಳಿನ ವಾಲಗದ ಮುಖಾಂತರ ಜಾಗರಣೆ ಮಾಡುವರು. ಡೊಳ್ಳಿನ ವಾಲಗ ಮಾಡುವುದಕ್ಕಾಗಿ ಗೋಲಗೇರಿ ಸುತ್ತಮುತ್ತಲಿನ ಊರುಗಳಿಂದ ಡೊಳ್ಳಿನ ಮೇಳದವರು ಬಂದು ಸೇರುತ್ತಾರೆ. ಕುರುಬ ಜನಾಂಗದವರಾದ ಹಾಲುಮತದವರು ಇದರಲ್ಲಿ ಭಾಗವಹಿಸುವರು. ಇವರು ಡೊಳ್ಳನ್ನು ವಾಲಗ ಮಾಡುವರು, ಮಧ್ಯದಲ್ಲಿ ಡೊಳ್ಳಿನ ಹಾಡುಗಳನ್ನು ಹಾಡುವರು ಮತ್ತು ಕೊರವರ ಜನಾಂಗದವರು ಬಾಜಾ-ಭಜಂತ್ರಿ, ವಾಲಗ ಮಾಡುವರು ಹಾಗೂ ಪಾಡೇವಾರ ಜನಾಂಗದಿಂದ ಕಣಿ ಹಲಿಗೆ ಮಜಲು ನಡೆಯುವದು. ಈ ದಿನ ಭಕ್ತಾದಿಗಳಿಂದ ತೇರಿಗೆ ಎಣ್ಣೆ ಹಚ್ಚುವದು, ಕುದರಿ, ಸಿಂಹ, ಏರಿಸುವದು ನಡೆಯುತ್ತದೆ. ಇಂದೇ ತೇರಿಗೆ ಮಿಣಿಯನ್ನು ಹಚ್ಚುವರು.

ಎಂಟನೆಯ ದಿನದಂದು ಉಚಾಯಿ ಉತ್ಸವ ನೆರವೇರುವದು. ಉಚಾಯಿ ಉತ್ಸವದಲ್ಲಿ ಹಲಿಗೆ ಮ್ಯಾಳ (ಹಲಿಗೆ ಮೇಳ)ಗಳು ಕೂಡಿರುವವು ! ಹಾಗೂ ಅನೇಕ ಊರುಗಳಿಂದ ಪುರವಂತರು ಒಡಪ ಹೇಳಿ ಶಸ್ತ್ರವನ್ನು ಚುಚ್ಚಿಕೊಂಡು ಭಕ್ತಿ ಸೇವೆ ಸಲ್ಲಿಸುವರು. ಆ ನಂತರ ಭಕ್ತ ಸಮೂಹದ ಒಡಗೂಡಿ ದೇವಸ್ಥಾನಕ್ಕೆ ಬರುವರು. ಇಲ್ಲಿ ಕೈಚಕಳಿ (ಕಟ್ಟಂಬಲಿ)ಯನ್ನು ದೇವರ ಪ್ರಸಾದವೆಂದು ಭಕ್ತರಿಗೆ ನೀಡಲಾಗುವುದು. ಈ ಕೈಚಕಳಿಯನ್ನು ಬಿಳಿಜೋಳವನ್ನು ಕುಟ್ಟಿ ಇದರಲ್ಲಿ ಮಜ್ಜಿಗೆಯನ್ನು ಬೆರೆಸಿ ಎರಡು ದಿನಗಳವರೆಗೆ ಹುಳಿ ಹಾಕುವರು, ನಂತರ ಹೊರತೆಗೆದು ಕುದಿಸುವರು. ಕುದಿಸಿದ ನಂತರ ಎಣ್ಣೆ (ಕುಸಿಬಿ ಎಣ್ಣೆ) ಹಾಕಿ ಕಲಿಸುವರು. ಇದನ್ನು ಈ ದಿನದಂದು ಪ್ರಸಾದವೆಂದು ಕೊಡುತ್ತಾರೆ. ಈ ಪ್ರಸಾದವನ್ನು ತಿಂದರೆ ಸರ್ವರೋಗಗಳು ನಿವಾರಣೆಯಾಗುತ್ತವೆ. ಬೇಸಿಗೆಯ ಕಾಲಕ್ಕೆ ಈ ಆಹಾರವನ್ನು ಸ್ವೀಕರಿಸಿದರೆ, ದೇಹದ ಉಷ್ಣಾಂಶದಲ್ಲಿ ಸಮತೋಲನ ಕಾಪಾಡುತ್ತದೆ. ಇದನ್ನು ಬೆಳಗಿನ ಜಾವ ಸೇವನೆ ಮಾಡಿದರೆ ಹೆಚ್ಚು ಆರೋಗ್ಯಕಾರಿ ಎನ್ನುವ ನಂಬಿಕೆಯಿದೆ.

## ಬಿಂದಿಗೆ ಉತ್ಸವ :

ಯುಗಾದಿ ಹಬ್ಬದ ಒಂಬತ್ತನೆ ದಿನಕ್ಕೆ ಬಿಂದಿಗೆ ಉತ್ಸವವನ್ನು ಆಚರಿಸುವ ಸಂಪ್ರದಾಯವಿದೆ. ಈ ಉತ್ಸವಕ್ಕೆ ಬೇಕಾದ ಸಕಲ ಸಾಹಿತ್ಯ ಸಿದ್ಧತೆಯನ್ನು ಆಯಗಾರರು ಮಾಡುತ್ತಾರೆ. (ಆಯಗಾರರೆಂದರೆ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ, ಬಡಿಗ, ಕುಂಬಾರ, ಹೂಗಾರ, ನಾವದಿಗರು, ಪಾಡೇವಾರ, ಅಂಬಿಗರು, ತಳವಾರ, ಜಂಗಮರು (ಐನೋರು) ಇತ್ಯಾದಿ ಲಿಂಗಾಯತ ಒಳಪಂಗಡಗಳಿಗೆ ಆಯಗಾರರು ಎಂದು ಕರೆಯುವರು. ಪಾಡೆವಾರರು (ಹರಿಜನರು) ಅಡವಿಗೆ ಹೋಗಿ (ದೀವಟಿಗೆಗೆ ಬೇಕಾದ) ಔಡಲ ಕಟ್ಟಿಗೆಯನ್ನು ತೆಗೆದುಕೊಂಡು ಬರುವರು. ನಂತರ ಅಂಬಿಗ ಸಮಾಜದವರು ಇದಕ್ಕೆ ಬೇಕಾದ ಕೊಬ್ಬರಿ, ಬಟ್ಟೆ, ಎಣ್ಣೆಯನ್ನು ತಮ್ಮ ಹಣದಿಂದಲೇ ತರುವರು, ಆಮೇಲೆ ಔಡಲ ಕಟ್ಟಿಗೆಗೆ ಕೊಬ್ಬರಿಯನ್ನು ಚುಚ್ಚುವರು. ಮೇಲೆ ಅರಿವೆಯನ್ನು ಸುತ್ತುವರು. ಇದಕ್ಕೆ ಎಣ್ಣೆಯನ್ನು ಸುರಿದು ದೀವಟಿಗೆಯನ್ನು ತಯ್ಯಾರಿಸಿಕೊಳ್ಳುವರು. ಇವರುಗಳು

ದೀವಟಿಗೆಯನ್ನು ಹಿಡಿದುಕೊಂಡು ಊರ ಹೊರಗೆ ಹೋಗಿ ನಿಲ್ಲುವರು. ಇತ್ತ ಕಡೆ ದೇವರಮನೆಯವರ ಕುಟುಂಬದಿಂದ, ಬಾಜಾ ಭಜಂತ್ರಿ ಸಮೇತ ಕಳಸವನ್ನು ಹಿಡಿದು ಹೆಣ್ಣುಮಕ್ಕಳೊಂದಿಗೆ, ಖಾಲಿ ಬಿಂದಿಗೆಯನ್ನು ಹೊತ್ತುಕೊಂಡು ದೇವಸ್ಥಾನಕ್ಕೆ ಬರುವರು. ಇಲ್ಲಿಂದ ಪಲ್ಲಕ್ಕಿ ಸಮೇತ ಅಗ್ನಿ (ಆಗ್ನೆ) ಬಸವಣ್ಣನಿಗೆ ಉತ್ಸಾಹದಿಂದ ಓಡುತ್ತಾ ಪಲ್ಲಕ್ಕಿಯನ್ನು ತೆಗೆದುಕೊಂಡು ಹೋಗುವರು. ಆಗ್ನೆ ಬಸವಣ್ಣನ ಸ್ಥಳವು 'ಗೊಲ್ಲಾಳ' ಗುರು "ನಂದಯ್ಯ" ಐಕ್ಯವಾದ ಸ್ಥಳವೆಂದು ಹೇಳುವರು. ಈ ಸ್ಥಳಕ್ಕೆ ವರ್ಷದಲ್ಲಿ ಮೂರು ಸಲ ಹೋಗಿ ಬರುತ್ತಾರೆ. ಶ್ರಾವಣ ಮಾಸ, ದೀಪಾವಳಿ, ಭಾರತ ಹುಣ್ಣಿಮೆ ಈ ದಿನಗಳಂದು ಹೋಗಿಬರುವ ಸಂಪ್ರದಾಯವಿದೆ. ಇದು ಗೊಲ್ಲಾಳನ ದೇವಸ್ಥಾನದಿಂದ ನಾಲ್ಕು ಕಿ.ಮಿ. ಅಂತರದಲ್ಲಿದೆ.

ಇಲ್ಲಿಯೇ ಬಿಂದಿಗೆ ಪೂಜೆ ನಡೆಯುವುದು. (ಪೂಜೆ ನಡೆಯುವ ಸಂದರ್ಭದಲ್ಲಿ ಭೇಟಿ ನೀಡಿ ಛಾಯಾ ಪ್ರತಿಗಳನ್ನು ತೆಗೆಯುವ ಸಂದರ್ಭದಲ್ಲಿ ಹೊಲದ ಒಡ್ಡಿನ ಬದುವಿನಲ್ಲಿ ಬೃಹದಾಕಾರದ ಬಿಂದಿಗೆ ಆಕಾರದ ಕಲ್ಲು ಬಿದ್ದಿತ್ತು. ಅದರ ಛಾಯಾ ಪ್ರತಿಯನ್ನು ಪಡೆಯಲಾಗಿದೆ.) ಪೂಜೆಗಾಗಿ ಬುಟ್ಟಿಯಲ್ಲಿ ಎಲೆ, ಅಡಿಕೆ, ಉತ್ತತ್ತಿ, ಬದಾಮ, ಅರಿಷಿಣ, ಕರ್ಪೂರ ಎಲ್ಲಾ ಪೂಜಾ ಸಾಮಾನುಗಳನ್ನು ಇರಿಸಿ ಪೂಜಿಸಲಾಗುವುದು. ಇದರಿಂದ ದೇವರು ಸುಖ ಸಮೃದ್ಧಿ ನೀಡುವನು ಎಂಬ ನಂಬಿಕೆ ಇರುವುದು. ಪೂಜಾ ನಂತರ ಪುರವಂತರು ಖಡೇ ಖಡೇ ವೀರಭದ್ರನೆಂದು ಒಡಪು ಹೇಳುವರು. ನೀರು ತುಂಬಿದ ಕೊಡವನ್ನು ಜಯಕಾರದೊಂದಿಗೆ ಐದು ಜನ ಭಕ್ತರು 'ದೇವರಮನೆ' ದೇವಸ್ಥಾನದ ಉಸ್ತುವಾರಿ ನೋಡಿಕೊಳ್ಳುವ ಧರ್ಮದರ್ಶಿಗಳ ತಲೆಯಮೇಲೆ ಇರಿಸುತ್ತಾರೆ. (ಗೌರಮ್ಮನ ಗುಡಿಯ ಬದಿಯಲ್ಲಿರುವ ಬಾವಿಯಿಂದ ತುಂಬಿಕೊಂಡು ತಂದ ಕೊಡ (ಬಿಂದಿಗೆ) ಹೊತ್ತುಕೊಂಡು ಪಲ್ಲಕ್ಕಿ ಕಳಸ ಸಮೇತವಾಗಿ ಅಗ್ನಿ ಬಸವಣ್ಣನ ಗದ್ದುಗೆಗೆ ಪ್ರದಕ್ಷಿಣೆ ಹಾಕುವರು. (ಮೂರು ಸಲ) ಆಗ್ಗೆ ಅಲ್ಲಿ ನೆರೆದಿರುವ ಹೆಚ್ಚು ಭಕ್ತರು ಬೋರಲಾಗಿ (ಮುಖಕೆಳಗೆ ಮಾಡಿ) ಅಡ್ಡಬೀಳುವರು. ಭಕ್ತರನ್ನು ದಾಟಿಕೊಂಡು ಪ್ರದಕ್ಷಿಣೆ ಹಾಕಲಾಗುವುದು. ಈ ಸಂಪ್ರದಾಯ ಆಚರಣೆಯಿಂದ ಗೊಲ್ಲಾಳನು ಆಯುಷ್ಯ, ಆರೋಗ್ಯ ನೀಡುವನೆಂಬ ನಂಬಿಕೆಯಿದೆ. ಪ್ರದಕ್ಷಿಣೆ ನಂತರ ದೇವಸ್ಥಾನಕ್ಕೆ ಮರಳಿ ಬರುವರು. (ನಿಧಾನವಾಗಿ-ಏಕೆಂದರೆ ಗೊಲ್ಲಾಳನಿಗೆ ಗುರು ನಂದಯ್ಯನ ಗದ್ದುಗೆಯನ್ನು ಬಿಟ್ಟು ಬರಲು ದುಃಖವಾಗುತ್ತದೆಂದು ಹೇಳುವರು) ದಾರಿಯ ಮಧ್ಯದಲ್ಲಿ ಮುಲ್ಲಾನ ಬಾವಿಯಿದೆ. ಈ ಸ್ಥಳದಲ್ಲಿ ಸ್ವಲ್ಪ ಸಮಯ ತಂಗುವರು. (ಇದಕ್ಕೆ ಮುಲ್ಲಾನ ಬಾವಿ ಎಂದು ಹೆಸರು ಬರಲು ಕಾರಣ ಇದನ್ನು ಕೆಲವು ಇಸ್ಲಾಂ ಧರ್ಮದ ಮುಲ್ಲಾಗಳು ಕೂಡಿಕೊಂಡು ಬಾವಿಯನ್ನು ಅಗೆದಿರುವರು. ಈ ಬಾವಿಯ ನೀರು ಕುಡಿಯಲು ಸಿಹಿಯಾಗಿ ಇರುವದು. ವಿಶ್ರಾಂತಿ ಸಮಯ ಮುಗಿದ ಮೇಲೆ ಗೊಲ್ಲಾಳನ ದೇವಸ್ಥಾನಕ್ಕೆ ಸಾಗುವರು. ಊರ ಸಮೀಪ ಬಂದ ಕೂಡಲೇ 'ದೀವಟಿಗೆಗಳನ್ನು ಹಿಡಿಯಲಾಗುವುದು. ದಾರಿಯಲ್ಲಿ ತೇರಿಗೆ ಮೂರು ಸಲ ಪ್ರದಕ್ಷಿಣೆ ಹಾಕಲಾಗುವುದು. ಆ ಮೇಲೆ ಬಿಂದಿಗೆ ಸಮೇತ ಶಿವನಾಮಘೋಷ್ಯುತ್ತ ದೇವಸ್ಥಾನಕ್ಕೆ ಬರುವರು. ಈ ಸಂದರ್ಭದಲ್ಲಿ ದೇವರಮನೆಯವರಿಂದ ಹಾಗೂ ಮುತ್ತೈದೆಯರು ಮಾತ್ರ ಎರಡು ಸಲ ದೇವಸ್ಥಾನದ ಸುತ್ತ ಪ್ರದಕ್ಷಿಣೆ ಹಾಕುವರು. ಅಂದರೆ ದೇವರ ಮನೆಯ

ವಂಶಸ್ಥರು ಪ್ರತಿಯೊಬ್ಬರು ಆ ಬಿಂದಿಗೆಯನ್ನು ಹೊತ್ತುಕೊಂಡು ಎರಡು ಸಲ ಪ್ರದಕ್ಷಿಣೆ ಹಾಕುವುದು ವಾಡಿಕೆ. ಅನಂತರ ಬಿಂದಿಗೆಯನ್ನು ದೇವಸ್ಥಾನದಲ್ಲಿ ಇರಿಸಲಾಗುವುದು. ಬೆಳಗಿನ ಜಾವ ಆ ನೀರಿನಿಂದ ಲಿಂಗಯ್ಯನ ಅಭಿಷೇಕ ಮಾಡಲಾಗುವುದು. ಈ ಸಂಪ್ರದಾಯವು ಇಂದಿಗೂ ಚಾಚೂ ತಪ್ಪದೇ ನಡೆದುಕೊಂಡು ಬರುತ್ತಿದೆ.

### ಕುಂಭ ಹಾಕುವದು :

ಯುಗಾದಿ ಅಮವಾಸೆಯ ದಿನ ರಾತ್ರಿ ಹನ್ನೆರಡು ಗಂಟೆಯ ನಂತರ 'ಕುಂಭ'ವನ್ನು ತೇರಿಗೆ ಹಾಕಲಾಗುವದು. ಆರು ಮಣ ಕುದಿಸಿದ ಜೋಳ (ಒಂಗು ಮಣ ಎಂದರೆ ನಾಲ್ಕು ಸೊಲಿಗೆ)ವನ್ನು ಆರು ಜನ ಹಾಲುಮತದ ಕುರುಬರು, ಆರು 'ಡೊಳ್ಳಿನ ಹೆಡಗಿ' (ದೊಡ್ಡ ಬಿದಿರಿನ ಬುಟ್ಟಿ)ತುಂಬಿಕೊಂಡು ವಾದ್ಯ-ಮೇಳ, ಡೊಳ್ಳು, ವಾಲಗ ಸಮೇತ ಗೊಲ್ಲಾಳೇಶ್ವರನ ತೇರಿಗೆ ಪ್ರದಕ್ಷಿಣೆ ಹಾಕುವರು. ಈ ತೇರಿಗೆ ಒಟ್ಟು ಆರು ಗಾಲಿಗಳು ಇರುತ್ತವೆ. (ಕಲ್ಲಿನ ಗಾಲಿ) ಆರು ಗಾಲಿಗಳಿಗೆ ಒಂದೊಂದು ಡೊಳ್ಳಿನ ಹೆಡಗಿ ತುಂಬಿದ ಕುಂಬವನ್ನು ಗಾಲಿಗೆ ಹಿಂದು -ಮುಂದು ಹಾಕುವರು. ಈ ಆಚರಣೆಯಲ್ಲಿ ತೇರಿಗೆ ಆಹಾರವನ್ನು ನೀಡದೆವು ಎಂಬುದು ಇದರರ್ಥ. ತೇರು, ಐಕ್ಯತೆಯ ಸಂಕೇತ, ತೇರಿಗೆ ಆಹಾರ ನೀಡವುದೆಂದರೆ ಎಲ್ಲರೂ ಕೂಡಿ ಉಂಡು, ತಿಂದು, ಸುಖವಾಗಿ ಬಾಳೋಣ, ದೇವರು ನಮಗೆ ಕೊಟ್ಟಿದ್ದಾನೆ. ನಾವು ಮರಳಿ ದೇವರಿಗೆ ಅದನ್ನು ಒಪ್ಪಿಸಬೇಕು. ದೇವರು ಎಂದರೆ ಸಮಾಜ ಈ ಸದುದ್ದೇಶದಿಂದ ಆಚರಣೆ ನಡೆಯುತ್ತಿದೆಯೆಂದು (ದೇವರಮನೆಯವರು) ಹೇಳುತ್ತಾರೆ.

ನಾವು ಪಡೆದಿರುವ ಅನ್ನ (ಆಹಾರ) ದೇವರ ಕೃಪೆಯಿಂದಲೇ. ಅದು ಸ್ವಲ್ಪವೂ ಕೆಡದ ಹಾಗೆ ನೋಡಿಕೊಳ್ಳಬೇಕು. ಆದ್ದರಿಂದ ತೇರಿಗೆ ಕುಂಬವೆಂದು ಅರ್ಪಿಸಿದ ಆಹಾರ ಡೊಳ್ಳಿನ ಹೆಡಿಗೆಯಲ್ಲಿ ಒಂದು ಅಗುಳವೂ ಉಳಿಯದಂತೆ ಎಲ್ಲವೂ ತೇರಿನ ಗಾಲಿಗೆ ಹಾಕಲಾಗುವುದು. ಈ ತೆರನಾದ ಸಂಪ್ರದಾಯ ಆಚರಣೆಯ ನಂತರ, ದೇವರ ಮನೆಯವರು, ಅಲ್ಲಿ ಬಳಸಿದ ಡೊಳ್ಳ ಹೆಡಗೆಗಳು ಹಾಗೂ ಸಲಿಕೆ, ಗುದ್ದಲಿ, ಕೋಲುಗಳನ್ನು ತೆಗೆದುಕೊಂಡು ತಮ್ಮ ಮನೆಗೆ ಬರುವರು. ಮನೆಯಲ್ಲಿರುವ ಬಾವಿಯಲ್ಲಿ ಎಲ್ಲರೂ ಕೂಡಿಕೊಂಡು ತೊಳೆದು ಸ್ವಚ್ಛಗೊಳಿಸಿದ ನಂತರವೇ ಮನೆಯ ಒಳಗೆ ಪ್ರವೇಶ ಮಾಡುವರು.

### ರಥೋತ್ಸವ :

ಯುಗಾದಿ ಅಮವಾಸೆಯ ಹತ್ತನೆಯ ದಿನದಂದು ಗೊಲ್ಲಾಳೇಶ್ವರನ ತೇರನ್ನು ಎಳೆಯಲಾಗುವದು. 'ದೇವರಮನೆ'ಯವರ ಕಂಬಿ ಶ್ರೀಶೈಲ ಯಾತ್ರೆಯನ್ನು ಮುಗಿಸಿಕೊಂಡು ದವನದ ಹುಣ್ಣಿಮೆಯ ದಿನದಂದು 'ಡಂಬಳ ಗೌರಮ್ಮ'ಳ ಗುಡಿಗೆ ಬಂದಿರುತ್ತದೆ. ಈ ಗುಡಿಯು ಗೋಲಗೇರಿ ಸೀಮೆಯ ಆಚೆಗೆ ಇರುವದು. ಊರ ಸೀಮೆಯಾಚೆಗೆ ಬಂದಿರುವ ಕಂಬಿಯನ್ನು ದೇವರಮನೆಯವರೆಲ್ಲರೂ ಸೇರಿಕೊಂಡು ಕಂಬಿ ಇರುವ ಸ್ಥಳಕ್ಕೆ ಹೋಗಿ ವಾದ್ಯ ಮೇಳದ ವಾಲಗ ಹಾಗೂ ಈ ಮನೆತನದ ಮುತ್ತೈದೆಯರು ಹಿಡಿದಿರುವ ಕಳಸದೊಂದಿಗೆ

ಅದನ್ನು ಬರಮಾಡಿಕೊಂಡು ಗೊಲ್ಲಾಳೇಶ್ವರನ ದೇವಸ್ಥಾನದಲ್ಲಿ ಇರಿಸಲಾಗುವುದು. ನಂತರ ಶ್ರೀಶೈಲಕ್ಕೆ ಹೋಗಿಬಂದ ಜಂಗಮನು ದೇವರಮನೆಯವರ ಮನೆಗೆ ಬರುತ್ತಾನೆ. ಇವನು ಬರುವಾಗ ಶ್ರೀಶೈಲದ ಪಾತಾಳ ಗಂಗೆಯ ನೀರು, ಹಿರಿಉಂಡಿ, ಹಿಪ್ಪಿ ಹೂ, ದವನ, ಬೆಲ್ಲದ ಅಚ್ಚು, ಕುಂಕುಮ, ಮರ, ಬಿದಿರಿನ ಕೋಲು ಹೀಗೆ ತಂದಿರುತ್ತಾನೆ. ಎಲ್ಲ ಸಾಮಾನು ಪೂಜಾ ಸಾಮಗ್ರಿಗಳನ್ನು ದೇವರಮನೆಯವರಿಗೆ ಒಪ್ಪಿಸುವನು.

ಜಂಗಮಯ್ಯನು (ಐನೋರು) ಶ್ರೀಶೈಲದಿಂದ ತೆಗೆದುಕೊಂಡುಬಂದ ಸಾಮಾನುಗಳನ್ನು ದೇವರಮನೆಯವರು ಒಂದು ತಟ್ಟೆಯಲ್ಲಿ ಹಾಕಿಕೊಳ್ಳುವರು. ಅದರ ಜೊತೆಗೆ ಕಬ್ಬು, ನಿಶಾನೆ, ಟೆಂಗಿನ ಪರಕಿ, ಬಾಳೆದಿಂಡು, ಮಾವಿನ ತೊಳಲು, ಮಡಿಯಿಂದ ಮಾಡಿದ ತರಹ (ಹಪ್ಪಳ) ಸಂಡಿಗೆ, ಕೊಬ್ರಿ, ಅಡಿಕೆ, ಲಿಂಬಿಕಾಯಿ, ಉತ್ತತ್ತಿ, ಬದಾಮಿ, ಅರಿಷಿಣ, ಕುಂಕುಮ, ಹಣ್ಣುಗಳು ಇಷ್ಟೆಲ್ಲಾ ಸಾಮಾನುಗಳನ್ನು ಬಾಜಾ-ಭಜಂತ್ರಿಯೊಂದಿಗೆ ತೇರಿನ ಪೂಜೆ ಮಾಡಲು ಸಾಗುವರು. ಮೊದಲು ದೇವಸ್ಥಾನಕ್ಕೆ ಹೋಗಿ ಅಲ್ಲಿ ರುದ್ರಾಭಿಷೇಕದೊಂದಿಗೆ ಪೂಜೆ ಮಾಡುವರು. ಶ್ರೀಶೈಲದಿಂದ ತಂದಿರುವ ಪೂಜಾ ಸಾಮಾನುಗಳನ್ನು ಹಿರೋಡೆ (ಹಿರಿಯ ಒಡೆಯ)ನಿಗೆ ಅರ್ಪಿಸಿ ಪೂಜೆ ಮಾಡುವರು. ತದನಂತರ ಪೂಜಾ ಸಾಮಾನುಗಳೊಂದಿಗೆ ತೇರಿನೆಡೆಗೆ ವೈಭವದಿಂದ ಬರುವರು. ತೇರಿಗೆ ಮೂರು ಸಲ ಪ್ರದಕ್ಷಿಣೆ ಹಾಕಿ ಪೂಜೆ ಮಾಡುವರು. ಈ ಸಂದರ್ಭದಲ್ಲಿ ಕಳಸಗಿತ್ತಿಯರು, ಭಕ್ತರು ಗ್ರಾಮದ ಆಯಗಾರರು ಎಲ್ಲರೂ ಹಾಜರಿರುತ್ತಾರೆ. ಎಲ್ಲರೂ ಕೂಡಿಕೊಂಡು ತೇರನ್ನು ತಳಿರು ತೋರಣದಿಂದ ಶೃಂಗಾರ ಮಾಡಿ, ಮಂಗಳಾರತಿ ಮಾಡಿ, ಗೊಲ್ಲಾಳೇಶ್ವರ ಜೈಕಾರದೊಂದಿಗೆ ನಾಗರಕಟ್ಟೆಗೆ ಬರುತ್ತಾರೆ. (ನಾಗರಕಟ್ಟೆ ಎಂದರೆ ಇದು ದೇವಾಲಯದೆದುರು ಇದೆ. ದೇವರಮನೆಯವರು, ಪುರುಷರು ಯಾರೇ ಮರಣ ಹೊಂದಿದರೂ ಅವರನ್ನು ಇಲ್ಲಿಯೇ ಅಂತ್ಯ ಸಂಸ್ಕಾರ ಮಾಡಲಾಗುವುದು.)ಇಲ್ಲಿ ಪೂಜೆಯನ್ನು ಸಲ್ಲಿಸಿ ಹಿರಿಯರ ಒಪ್ಪಿಗೆಯನ್ನು ಪಡೆದು ಉದಯ ಬಾಗಿಲಿಗೆ ಬರುವರು. ದೇವಸ್ಥಾನದ ಉದಯ ಬಾಗಿಲಲ್ಲಿ ಪೂಜಿಸಿ ದೇವರ ಮನೆಯವರ ಮನೆಗೆ ಮರಳುವರು.

ಇವರ ಮನೆಯಲ್ಲಿ ಗೊಲ್ಲಾಳೇಶ್ವರ ಪ್ರಸಾದವನ್ನು ನೀಡಲಾಗುವುದು. ಇಲ್ಲಿ ನೀಡುವ ಪ್ರಸಾದವೆಂದರೆ ಟೆಂಗಿನಕಾಯಿ ಹೊಳಕ, ಗೊಲ್ಲಾಳೇಶ್ವರನ ಭಕ್ತರು ಅನೇಕ ಸಾವಿರಾರು ಟೆಂಗಿನಕಾಯಿಗಳನ್ನು ಒಡೆದಿರುತ್ತಾರೆ. ಆ ಎಲ್ಲ ಒಡೆದ ಟೆಂಗಿನಕಾಯಿ ಹೊಳಕನ್ನು ನಿಯಮಿತ ಭಕ್ತರಿಗೆ ನೀಡಲಾಗುವುದು. (ಇದಕ್ಕೆ ಚಾಜ್ ಎಂದು ಕರೆಯುವರು) ಚಾಜದವರೆಂದರೆ ೧. ಪೂಜಾರಿಗಳು (ಕುರುಬರು) ೨. ತಳವಾರರು, ೩. ವಾಲೀಕಾರರು, ಕೊರವರು, (ಭಜಂತ್ರಿ ಪಾಡೇವಾರರು (ಹರಿಜನರು) ೬. ಸಮಗಾರರು (ಮಾದಿಗರು) ಇವರು ಮಾತ್ರ ಒಡೆದ ಎಲ್ಲ ಕಾಯಿ ಹೊಳಕಗಳನ್ನು ಸಮನಾಗಿ ಹಂಚಿಕೊಳ್ಳುವರು.

ಈ ಸಂಪ್ರದಾಯಗಳನ್ನು ಆಚರಿಸಿದ ಮೇಲೆ ದೇವರ ಮನೆಯಲ್ಲಿರುವ, ಭೂಚಕ್ರದ ಛತ್ರಿ (ಕೊಡೆ)ಯನ್ನು ಇವರ ಮನೆಯ ಮುಂದೆ ಏರಿಸಿಕೊಂಡು ನಿಲ್ಲುವರು. ದೇವರಮನೆಯವರು ದೇವಾಲಯಕ್ಕೆ ಒಂದು ಪ್ರದಕ್ಷಿಣೆ ಹಾಕುವರು. ಅಪ್ಪಮ್ಮ -ಮಲಕಮ್ಮರ ಗುಡಿಯಲ್ಲಿ ಕಳಸವನ್ನು ತೆಗೆದುಕೊಂಡು) ಅಲಂಕಾರ ಮಾಡುವರು.

ಕಳಸ -ಪಲ್ಲಕ್ಕಿ ಸಜ್ಜುಗೊಳಿಸಿಕೊಂಡು ಗುಡಿಗೆ ಮತ್ತೆ ಮೂರು ಪ್ರದಕ್ಷಿಣೆ ಹಾಕುವರು, ಹಾಗೆಯೇ ವಾದ್ಯ - ಮೇಳದವರೊಂದಿಗೆ, ಭೂಚಕ್ರ, ಛತ್ರಿ, ಪಲ್ಲಕ್ಕಿ, ಕಳಸ ಇವುಗಳು ಒಂದೆಡೆ ಸೇರುವವು. ಇವುಗಳ ಸಮೇತ ದೇವಸ್ಥಾನದ ಮುಖ್ಯದ್ವಾರದಲ್ಲಿ ಬಂದು ನಿಲ್ಲುವರು. ಇಲ್ಲಿಂದ ತೇರಿನೆಡೆಗೆ ಬಂದು ಬಹು ವಿಜೃಂಭಣೆಯಿಂದ ಕೇರಿಗೆ ಮೂರು ಸಲ ಪ್ರದಕ್ಷಿಣೆ ಹಾಕುವರು.

ಪಲ್ಲಕ್ಕಿಯಲ್ಲಿ ಗೊಲ್ಲಾಳೇಶ್ವರನ ಎರಡೂ ಮೂರ್ತಿಗಳನ್ನು ತಂದಿರುತ್ತಾರೆ ೧. ಪಂಚಲೋಹದಿಂದ ಮಾಡಿದ್ದೂ ಇರುತ್ತದೆ. ೨. ತಾಮ್ರದ ಮೂರ್ತಿ, ಮೂರ್ತಿಯೂ ಇರುತ್ತದೆ. ಪಂಚಲೋಹದ ಮೂರ್ತಿಯನ್ನು ಹಾಗೂ ಕಳಸವನ್ನು ತೇರಿನಲ್ಲಿ ಏರಿಸುವರು. ತಾಮ್ರದ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಇರಿಸುವರು. ನಂತರ ಭೂಚಕ್ರದ ಛತ್ರಿಯನ್ನು ತೇರಿನ ಮೇಲೆ ಏರಿಸುವರು. ಈ ಛತ್ರಿ ಏರಿಸಿದ ಮೇಲೆ ಮೂರು ಭೃಂಗಿಗಳು ಬರುತ್ತವೆ. (ಮೂರು ಭಂಗಿಗಳೆಂದರೆ ಬ್ರಹ್ಮ, ವಿಷ್ಣು, ಮಹೇಶ್ವರ) ಈ ತ್ರಿಮೂರ್ತಿಗಳು ದೇವರುಗಳ ಸಂಕೇತವೆಂದು ಭಕ್ತರು ನಂಬಿದ್ದಾರೆ. ಇವುಗಳೂ ತೇರಿನ ಸುತ್ತ ಪ್ರದಕ್ಷಿಣೆ ಹಾಕುತ್ತವೆ. ಅಂದರೆ ತೇರು ಎಳೆಯಲು ದೇವರು ಸಮ್ಮತಿ ನೀಡಿದ್ದಾನೆ ಎಂದು ನಂಬುತ್ತಾರೆ.

ದೇವರಮನೆಯವರು ತಮ್ಮ ಮನೆಯಿಂದ ಐದು ಕಾಯಿಗಳನ್ನು ತಂದಿರುವರು. ಈ ಐದು ಕಾಯಿಗಳನ್ನು ಸಿಡಿಗಾಯಿಯೆಂದು ತೇರಿನ ಗಾಲಿಗೆ ಒಂದೊಂದಾಗಿ ಒಡೆಯುವರು. (ಐದುಗಾಯಿಗಳೆಂದರೆ, ಇಂದ್ರಿಯಗಳಿಂದ ದೂರಾಗಿದ್ದೇವೆ ಎಂದು ಒಡೆಯುವುದು) ಇವರು ತೇರು ಸಾಗಲಿ ಎಂದು ಅನುಮತಿ ನೀಡಿದಾಗ ತೇರು ಎಳೆಯುವದು. ಈ ಆರುಗಾಲಿಯ ತೇರನ್ನು ಎಳೆಯಲು ಸುಮಾರು ಒಂದೂವರೆ ಲಕ್ಷ ಜನ ಕೂಡಿರುತ್ತದೆ. ದೇವರ ಹೆಸರಿನಲ್ಲಿ ಜಯಕಾರ ಹಾಕುತ್ತಾ ಕೈಯಲ್ಲಿ ತೇರಹಗ್ಗವನ್ನು ಹಿಡಿದು ಉತ್ಸಾಹ, ಕೇಕೆ, ಸಿಳ್ಳೆಗಳಿಂದ ತೇರು ಎಳೆಯುತ್ತಾರೆ. ಜನರ ಜಯಕಾರ ಮುಗಿಲು ಮುಟ್ಟುವಂತಿದ್ದು, ಭಕ್ತಾದಿಗಳು ಉತ್ಸಾಹದಿಂದ ಜಾತಿ, ಧರ್ಮ, ಲಿಂಗ, ಭೇದವಿಲ್ಲದೆ ಗೊಲ್ಲಾಳೇಶ್ವರನ ಸೇವಾಕಾರ್ಯದಲ್ಲಿ ಕಾರ್ಯೋನ್ಮುಖರಾಗಿ. ಜನಪದರು ತೇರ ಎಳೆಯುವರು, ಸೇರಿದ ಭಕ್ತರಲ್ಲಿ ಮುಂದಿನ ವರ್ಷದ ತನಕ ಆಯುಸ್ಸು ಗಟ್ಟಿಯಾಗಿರಲೆಂದು ಬಯಕೆ, ಮತ್ತು ಆಶಯವಾಗಿರುತ್ತದೆ. ಎಷ್ಟೋ ಭಕ್ತಾದಿಗಳು ಇಂದು ನಿರಾಹಾರಿಗಳಾಗಿರುತ್ತಾರೆ. ಕಾರಣ ಮಕ್ಕಳ ಫಲ, ಕುರಿ, ದನಗಳಿಗೆ ಬರುವ ಮೊದಲಾದ ಜೀವನದ ಸಂಕಷ್ಟದಿಂದ ಪಾರು ಮಾಡಿದ್ದಕ್ಕಾಗಿ ಅಥವಾ ಪಾರು ಮಾಡುವ ಕೃಪೆಗಾಗಿ ಈ ಹರಕೆಯನ್ನು ಒಪ್ಪಿಸಲಾಗುವುದು. ಜಾತ್ರೆ ರಥೋತ್ಸವದ ಪ್ರಮುಖ ಲಕ್ಷಣ ಎಲ್ಲರೂ ತಮ್ಮ ತಮ್ಮ ನೆಲೆಯಲ್ಲಿ ಸೌಹಾರ್ದಯುತವಾಗಿ ಬೆರೆಯುವಂತೆ ಮಾಡುವುದೇ ಇದರ ಉದ್ದೇಶವೆಂದು ತೋರುತ್ತದೆ.

ತೇರು ಎಳೆಯುವಾಗ ಇದರ ಬೆನ್ನ ಹಿಂದೆ ಪಲ್ಲಕ್ಕಿಯೂ ಓಡುತ್ತದೆ. ಈ ಸಮಯದಲ್ಲಿ ನೆರೆದ ಭಕ್ತಾದಿಗಳು ತಮ್ಮ ಮನದ ಬಯಕೆಗಳು ಈಡೇರಲೆಂದು ಪೂಜಾ ಭಾವದಿಂದ, ಉತ್ತತ್ತಿ, ಬಾಳೆಹಣ್ಣು,

ಚುರುಮುರಿ, ಶೇಂಗಾಕಾಯಿಗಳನ್ನು ತೇರಿಗೆ ಎಸೆಯುತ್ತಾರೆ. ನೆರೆದ ಭಕ್ತರು ದೇವರ ಪ್ರಸಾದವೆಂದು ಶ್ರೀಮಂತ -ಬಡವ, ಮೇಲು-ಕೀಳು ಎನ್ನದೆ ಆಯ್ದುಕೊಳ್ಳುತ್ತಾರೆ. ಈ ಪ್ರಸಾದವನ್ನು ಮಕ್ಕಳಿಗೆ ತಿನ್ನಿಸಿ, ತಾವು ಸೇವಿಸಿದರೆ ಯಾವ ರೋಗಗಳೂ ಬರುವುದಿಲ್ಲ ಎಂಬ ನಂಬಿಕೆಯಿದೆ.

ತೇರು ಪಾದಗಟ್ಟೆವರೆಗೆ ಎಳೆಯಲ್ಪಡುವದು. ಪಾದಗಟ್ಟೆಯನ್ನು ಪಲ್ಲಕ್ಕಿ ಸಮೇತ ಮೂರು ಸಲ ಪ್ರದಕ್ಷಿಣೆ ಹಾಕುವರು. ಇಲ್ಲಿಯೂ ಐದು ಸಿಡಿಗಾಯಿಗಳನ್ನು ಒಡೆಯಲಾಗುವದು. ಅಷ್ಟರಲ್ಲಿ ತೇರು ಎಳೆಯುವ ಮಿಣಿಹಗ್ಗವನ್ನು ಬದಲಾಯಿಸಲಾಗುತ್ತದೆ. ಮತ್ತೇ ಅದೇ ಜಯಕಾರದೊಂದಿಗೆ ಮರಳಿ ತೇರನ್ನು ಎಳೆಯುವರು. ತೇರೆಳೆಯುವ ಮಿಣಿ ಹಗ್ಗವನ್ನು 'ದೇವರಮನೆ' ಇವರ ಮನೆಯಲ್ಲಿರುವ ದೇವರ ಗದ್ದುಗೆಯವರೆಗೆ ಮುಟ್ಟಿಸುತ್ತಾರೆ. ಆಗ್ಗೆ ತೇರು ಸ್ವಸ್ಥಾನಕ್ಕೆ ಬಂದು ಸೇರಿತು ಎಂದರ್ಥ.

ಈ ದಿನದಂದು ತೇರು ಸ್ವಸ್ಥಳಕ್ಕೆ ಬಂದು ಸೇರುವ ಸಮಯದವರೆಗೂ ದೇವರ ಮನೆಯವರು ಉಪವಾಸವಿರುತ್ತಾರೆ. ಒಂದು ವೇಳೆ ತೇರು ಎಳೆಯುವಾಗ ಏನಾದರೂ ಅಡಚಣೆಯಾದರೆ ತೇರು ದಾರಿಯ ಮಧ್ಯದಲ್ಲಿಯೇ ನಿಂತರೆ, ಈ ಮನೆಯವರೆಲ್ಲರೂ ಅಲ್ಲಿಯೇ ಇರುತ್ತಾರೆ. (ಉಪವಾಸ ಆಚರಣೆಯೊಂದಿಗೆ) ಅಲ್ಲಿಯವರೆಗೆ ದೇವಸ್ಥಾನದ ಬಾಗಿಲು ಮುಚ್ಚುವದಿಲ್ಲ, ಮತ್ತು ಇವರ ಮನೆಯ ಬಾಗಿಲು ತೆರೆದೇ ಇರುತ್ತದೆ. ಇನ್ನೂ ವಿಶೇಷವೆಂದರೆ ಈ ಮನೆಯವರು ಸಣ್ಣ ಮಗುವಿಗೂ ತಾಯಿ ತನ್ನ ಮೊಲೆಹಾಲನ್ನು ಕೊಡುವುದಿಲ್ಲ.

ತೇರು ಎಳೆದಾದ ಮೇಲೆ ಪಲ್ಲಕ್ಕಿ ಸಂಭ್ರಮ ಉತ್ಸಾಹದಿಂದ. ವಾದ್ಯ ಮೇಳದೊಡಗೂಡಿ ದೇವಸ್ಥಾನಕ್ಕೆ ಬರುವರು. ದೇವಸ್ಥಾನದ ಸುತ್ತು ಮೂರು ಸಲ ಪ್ರದಕ್ಷಿಣೆ ಹಾಕಿ, ಮಂಗಳಾರತಿ ಮಾಡಿ ಎಲ್ಲರೂ ಮನೆಗೆ ಮರಳುವರು.

ದೇವರ ಮನೆಯವರು ಮನೆ ಪ್ರವೇಶಮಾಡುವಾಗ ಒಂದೊಂದು ಸಿಡಿಗಾಯಿಯನ್ನು ಒಡೆಯುತ್ತ ಪ್ರವೇಶ ಮಾಡುವರು. ತೇರು ಎಳೆದು ಬಂದ ಭಕ್ತಾದಿಗಳಿಗೆ ಉತ್ತತ್ತಿ ಹಣ್ಣು ಇತರೆ ಫಲಗಳನ್ನು ಪ್ರಸಾದವೆಂದು ನೀಡುವರು. ಆಮೇಲೆ ಇವರು ಆಹಾರವನ್ನು ಸೇವಿಸುವರು.

**ಕಡುಬಿನ ಕಾಳಗ :**

ಕಡುಬಿನ ಕಾಳಗ ತೇರು ಎಳೆದಾದ ಮೂರನೇ ದಿನಕ್ಕೆ ನಡೆಯುವದು. ಜೋಳವನ್ನು ಕುದಿಸಿ ಗುಗ್ಗರಿಯನ್ನು ಕಲಿಸಿ ಉಂಡಿಯನ್ನಾಗಿ ಮಾಡುವರು. ಉಂಡಿಯನ್ನು ಅಗ್ನಿ ಬಸವಣ್ಣನಿಗೆ ಹಾಗೂ ಪಾದಗಟ್ಟಿಗೆ ನೈವೇದ್ಯ ಹಿಡಿಯುವರು. ಇಲ್ಲಿ ಕ್ರಮವಾಗಿ ಐದು ಐದು ಉಂಡಿಗಳನ್ನು ಇರಿಸುವರು. ಈ ಸಂದರ್ಭದಲ್ಲಿ ಕಾಯಿ - ಕರ್ಪೂರ, ಮಂಗಳಾರತಿಯಾಗಿ ಪೂಜೆ ಮಾಡಲಾಗುವುದು. ಆಗ್ಗೆ ಪುರವಂತರು ಒಡಪು ಹೇಳುವರು. ಪಾದಗಟ್ಟಿಗೆ ಮೂರು ಸಲ ಪ್ರದಕ್ಷಿಣೆ ಹಾಕುವರು. ಎಲ್ಲರಿಗೂ ನಾಲ್ಕು ಸಲ ಗುಗ್ಗರಿಯನ್ನು ಹಂಚಲಾಗುವುದು. ಇದನ್ನು

ದಶ ದಿಕ್ಕುಗಳಿಗೆ ಚಲ್ಲುತ್ತ ತೇರಿನೆಡೆಗೆ ಬರುವರು. ತೇರಿಗೂ ಎಲ್ಲ ಮನೆಗಳಿಗೂ ಎರಚಲಾಗುವುದು. ಇದರಿಂದ ಮಳೆಯು ಸಕಾಲಕ್ಕೆ ಸರಿಯಾಗಿ ಸುರಿಯುವುದೆಂದು ಜನರು ನಂಬುತ್ತಾರೆ. ಇದರಲ್ಲಿ ಬಹುಮುಖ್ಯವಾದ ವಿಷಯವೊಂದು ಅಡಕವಾಗಿರುವಂತೆ ಕಂಡುಬರುವುದು. ಶರಣರು ಹೇಳಿದಂತೆ 'ಸಕಲ ಪ್ರಾಣಿಗಳಲ್ಲಿ ಲೇಸನು ಬಯಸುವಾತನೆ ಜೀವಾತ್ಮನು' ಎಂಬಂತೆ ಎಲ್ಲ ಪ್ರಾಣಿ ಪಕ್ಷಿಗಳು ಆಹಾರವನ್ನು ಸ್ವೀಕರಿಸಲಿ ಅವು ನಮ್ಮಂತೆ ಬದುಕಲಿ ಎಂಬ ಸದಾಶಯವೂ ಇದ್ದಂತಿದೆ.

ಈ ತೆರನಾಗಿ ಎಲ್ಲೆಡೆಯೂ ಗುಗ್ಗರಿಯನ್ನು ಎರಚುತ್ತಾ ಸಂತೋಷದಿಂದ ಜಯಕಾರ ಹಾಕುತ್ತಾ ದೇವಾಲಯಕ್ಕೆ ಬರುವರು. ದೇವಸ್ಥಾನದ ಯಾವ ಭಾಗವನ್ನೂ ಬಿಡದೆ ಎಲ್ಲೆಡೆಯೂ ಗುಗ್ಗರಿಯನ್ನು ಎರಚಲಾಗುವುದು. ಮಂಗಳಾರತಿ ಜೊತೆಗೆ ಕಡುಬಿನ ಕಾಳಗ ಆಚರಣೆ ಮುಗಿಯುವುದು.

### ಕಳಸ ಇಳಿಸುವದು :

ಸಾಮಾನ್ಯವಾಗಿ ತೇರು ಎಳೆದ ಐದನೇ ದಿನಕ್ಕೆ ಕಳಸ ಇಳಿಸುವ ಸಂಪ್ರದಾಯವಿದೆ. ಇಲ್ಲಿ ಆರನೇ ದಿನಕ್ಕೆ ಕಳಸ ಇಳಿಸುವರು. ಕಳಸ ಇಳಿಸುವ ದಿನದಂದು ಹತ್ತಾರು ಊರುಗಳ ಭಕ್ತಾಧಿಗಳಿಗೆ ಅನ್ನ ದಾಸೋಹವಿರುತ್ತದೆ. ಐದನೆ ದಿನಕ್ಕೆ ಕಟ್ಟಿದ ಕಳಸದ ಬಿಗಿಯನ್ನು ಸಡಿಲು ಮಾಡುವರು. ಮರುದಿನ ಬೆಳಿಗ್ಗೆ ಎಲ್ಲ ಭಕ್ತಾದಿಗಳು ಕೂಡಿ ವಾದ್ಯ, ವಾಲಗ ಸಮೇತ ತೇರಿನ ಕಳಸ ಮತ್ತು ಭೂಚಕ್ರ ಛತ್ರಿಯನ್ನು ಇಳಿಸಲಾಗುವುದು. ಇದೇ ಜಾಗರಣೆಯೊಂದಿಗೆ ದೇವರ ಗುಡಿಗೆ ಪ್ರದಕ್ಷಿಣೆ ಹಾಕಿ, ದೇವಸ್ಥಾನದ ಮುಖ್ಯ ದ್ವಾರದ ಮೂಲಕ ದೇವಸ್ಥಾನವನ್ನು ಪ್ರವೇಶಿಸುವರು. ಇಲ್ಲಿಗೆ ಗೊಲ್ಲಾಳೇಶ್ವರನ ಜಾತ್ರೆಯು ಕೊನೆಯ ಘಟ್ಟಕ್ಕೆ ಮುಟ್ಟುವುದು.

ಶ್ರೀಶೈಲಕ್ಕೆ ಪರಸೆ (ಕಂಬಿ)ಯನ್ನು ತೆಗೆದುಕೊಂಡು ಹೋಗಿ ಬಂದಿರುವ ಜಂಗಮಯ್ಯ (ಐನೋರ)ನಿಗೆ ಬಟ್ಟೆ ಉಡುಗೊರೆ ಕೊಡುವ ಸಂಪ್ರದಾಯವಿದೆ. ಈ ಉಡುಗೊರೆಯನ್ನು ದೇವಸ್ಥಾನದಲ್ಲಿ ನೀಡಲಾಗುವುದು. ಇದರ ಜೊತೆ ದವಸ -ಧಾನ್ಯಗಳನ್ನು ನೀಡುವರು. (ಧಾರ್ಮಿಕ ಆಚರಣೆಯ ನೆಪದಲ್ಲಿ ಉಳ್ಳವರು ಇಲ್ಲದವರಿಗೆ ದಾನ ಕೊಡುವರು. ಇದರಿಂದ ಅವರು ಸಂತುಷ್ಟರಾಗಿ ಜೀವನ ನಡೆಸುತ್ತಾರೆ) ದೇವರಮನೆಯವರ ಮನೆಯಿಂದ ತಂದಿರುವ ಕಳಸ, ಭೂಚಕ್ರದ ಛತ್ರಿಯನ್ನು ವಾದ್ಯ ಮೇಳದೊಂದಿಗೆ ಹಿರೋಡೆನ ದರ್ಶನವನ್ನೂ (ಆಶೀರ್ವಾದ) ತೆಗೆದುಕೊಂಡು ಮನೆಯನ್ನು ಸೇರುವರು.

### ಬುತ್ತಿ - ಬಾನ ನೈವೇದ್ಯ :

ಅಕ್ಷತ್ತದಿಗೆ ಅಮವಾಸ್ಯೆ ದಿನದಂದು ದೇವಸ್ಥಾನವನ್ನು ತೊಳೆಯಲಾಗುವದು. ಲಕ್ಷಾಂತರ ಭಕ್ತಾಧಿಗಳಿಂದ ಧೂಳೆದ್ದಿರುವ ಗುಡಿಯನ್ನು ನೀರಿನಿಂದ ಸ್ವಚ್ಛವಾಗಿ ಶುಚಿಗೊಳಿಸುವರು, ಜಾತ್ರಾ ಸಂದರ್ಭದಲ್ಲಿ ಭಕ್ತಾದಿಗಳು ಹೋಳಿಗೆ, ಕಡಬು, ಇತ್ಯಾದಿ ಸಿಹಿ ಆಹಾರವನ್ನು ಸೇವಿಸಿರುವರು. ಆರೋಗ್ಯ ದೃಷ್ಟಿಯಿಂದಲೂ ಅತಿಯಾದ

ಸಿಹಿ ಸೇವನೆ ಸರಿಯಲ್ಲ. ಅದಕ್ಕಾಗಿ ಈ ಅಮವಾಸ್ಯೆ ಆದ ಐದನೇ ದಿನಕ್ಕೆ ಗೊಲ್ಲಾಳೇಶ್ವರನಿಗೆ ಬುತ್ತಿ-ಬಾನ ನೈವೇದ್ಯ ಮಾಡುವರು. ಬುತ್ತಿ -ಬಾನಕ್ಕೆ ಜೋಳದ ರೊಟ್ಟಿ ಎಳ್ಳು ಹಚ್ಚಿದ ಸಜ್ಜೆಯ ರೊಟ್ಟಿ, ಪುಂಡಿ ಪಲ್ಲೆ, ಮಡಕಿಕಾಳು ಪಲ್ಲೆ, ತೊಗರಿಬೇಳೆ ಪಲ್ಲೆ ಹಾಗೂ ಮೊಸರನ್ನ ಇತ್ಯಾದಿ ಆಹಾರ ಪದಾರ್ಥಗಳನ್ನು ಗೊಲ್ಲಾಳೇಶ್ವರನಿಗೆ ನೈವೇದ್ಯ ನೀಡುವರು. (ಗೊಲ್ಲಾಳನಿಗೆ ಜಾತ್ರೆಯಿಂದ ಇಲ್ಲಿಯವರೆಗೆ ಸಿಹಿ ತಿಂದು ಬಾಯಿ ಕೆಟ್ಟಿರುತ್ತದೆ. ಅದಕ್ಕಾಗಿ ಈ ನೈವೇದ್ಯ ನೀಡುತ್ತೇವೆ ಎಂದು ಹೇಳುವರು.) ನಂತರ ಭಕ್ತಾದಿಗಳು ಈ ಆಹಾರವನ್ನು ದೇವರ ಪ್ರಸಾದವೆಂದು ತಾವೂ ಸ್ವೀಕರಿಸುವರು.

**ಪುರಾಣ ಪಠಣ :**

ಗೊಲ್ಲಾಳೇಶ್ವರನ ಪುರಾಣವನ್ನು ವರ್ಷದಲ್ಲಿ ಎರಡು ಬಾರಿ ಓದಲಾಗುವದು. ೧. ಯುಗಾದಿ ಪಾಡ್ಯ ದಿನದಂದು 'ದೇವರಮನೆ' ಇವರ ಸ್ವಂತ ಮನೆಯಲ್ಲಿ ಓದುತ್ತಾರೆ. ೨. ಶ್ರಾವಣ ಮಾಸದಲ್ಲಿ ಶುಕ್ಲಪಕ್ಷ ಪ್ರತಿಪದೆಯಂದು ಗೊಲ್ಲಾಳೇಶ್ವರ ಪುರಾಣವನ್ನು ಎಲ್ಲಾ ಭಕ್ತಾಧಿಗಳ ಸಮ್ಮುಖದಲ್ಲಿ ಓದಲಾಗುವದು. ಗೊಲ್ಲಾಳೇಶ್ವರ ಜಾತ್ರೆಯು ಮೊದಲು ಶ್ರಾವಣಮಾಸದಲ್ಲಿಯೇ ನಡೆಯುತ್ತಿತ್ತು. ಅಂದರೆ 'ಗೊಲ್ಲಾಳ'ನು ಹುಟ್ಟಿದ್ದು ಶುಕ್ಲಪಕ್ಷ ಪ್ರತಿಪದೆಯೆಂದು ಹೇಳುವರು. ಆದರೆ ಈ ಕುರಿತು ಯಾವ ದಾಖಲೆಗಳು ಇರುವುದಿಲ್ಲ. ಪುರಾಣವನ್ನು ಓದುವ ಸಂದರ್ಭದಲ್ಲಿ ಕೆಲ ಸಂಪ್ರದಾಯಗಳನ್ನು ಆಚರಿಸುವರು. ಗೊಲ್ಲಾಳೇಶ್ವರನು ತಂದೆ 'ಬಲ್ಲುಗ'ನ ಶಿರಚ್ಛೇಧನ ಮಾಡಿ, ಶಿವನ ಸಾಕ್ಷಾತ್ಕಾರವಾಗಿ ಶಿವನು ಗೊಲ್ಲಾಳೇಶ್ವರನನ್ನು ಕೈಲಾಸಕ್ಕೆ ಕರೆದುಕೊಂಡು ಹೋದ ಪ್ರಸಂಗವನ್ನು ಬಹು ವಿಜೃಂಭಣೆಯಿಂದ ಆಚರಿಸುವರು. ಇದರಿಂದ ಭಕ್ತರಲ್ಲಿ ಶಿವಧ್ಯಾನ ಗಟ್ಟಿಯಾಗಿ ನೆಲೆಯೂರುವುದು. ಐಕ್ಯಭಾವ ಬರುವುದೆಂಬ ಭಾವನೆಯಿದೆ. ಗೊಲ್ಲಾಳೇಶ್ವರನ ಹಾಗೆ ಲಿಂಗವನ್ನು ಭಕ್ತಿಯಿಂದ ಪೂಜಿಸಿ ತನು, ಮನ, ಧನವನ್ನು ಲಿಂಗಕ್ಕೆ ಅರ್ಪಿಸಿ, ನಾವು ಉಪಾಸನೆಯಿಂದ ಮುಕ್ತಿ (ಮೋಕ್ಷ) ಹೊಂದಬೇಕೆಂಬ ಸದಾಶಯವು ಆಚರಣೆಯಲ್ಲಿದೆಯೆಂದು ಕಂಡುಬರುವುದು.

ಶ್ರಾವಣಮಾಸದ ಕೊನೆಯ ಸೋಮವಾರ ಗೊಲ್ಲಾಳೇಶ್ವರನ ವಿಶೇಷ ಪಲ್ಲಕ್ಕಿ ಉತ್ಸವ ನಡೆಯುವದು. ಎಲ್ಲ ಭಕ್ತಾದಿಗಳೂ ಸೇರಿಕೊಂಡು ಪಲ್ಲಕ್ಕಿಯನ್ನು ಹೊತ್ತು ದೇವಸ್ಥಾನದ ಸುತ್ತಲೂ ಮೂರು ಸಲ ಪ್ರದಕ್ಷಿಣೆ ಹಾಕುವರು. ಭಕ್ತರು ಈ ಸಂದರ್ಭದಲ್ಲಿ ತಮ್ಮ ಅನೇಕ ಹರಕೆಗಳನ್ನು ತೀರಿಸುವರು ಹಾಗೂ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳಲು ಈ ಪ್ರದಕ್ಷಿಣೆ ಮುಖಾಂತರ ಬೇಡಿಕೊಳ್ಳುವರು.

**ಸಪ್ತ ಭಜನೆ** : ಗೊಲ್ಲಾಳೇಶ್ವರನ ಪುರಾಣದ ಮುಕ್ತಾಯ ಕಾಲಕ್ಕೆ ಈ ಸಂಪ್ರದಾಯ ಆಚರಣೆ ನಡೆದುಕೊಂಡು ಬಂದಿದೆ. ಸಪ್ತಭಜನೆ ಎಂದರೆ ದೇವಸ್ಥಾನದ ಗರ್ಭಗುಡಿಯ ಎದುರುಗಡೆ ಏಳು ಮಣೆಗಳನ್ನು ಹಾಕಲಾಗುವದು. ನೂರಾರು ಭಕ್ತರು ಒದ್ದೆ ಮೈಯಿಂದ ಒಬ್ಬೊಬ್ಬರಾಗಿ ಮಣೆ ಏರುವರು. ಬೆಳಗಿನ ಜಾವ ಐದು ಗಂಟೆಯಿಂದ ಮರುದಿನ ಬೆಳಗಿನ ಜಾವ ಐದು ಗಂಟೆಯವರೆಗೆ ಗೊಲ್ಲಾಳೇಶ್ವರನ ನಾಮಸ್ಮರಣೆ ಮಾಡುತ್ತಾ ಭಜನೆ

ಮಾಡುವರು. ಹಾಗೂ ಶಿವನಾಮಾವಳಿಗಳನ್ನೂ ಹೇಳುವರು. ಈ ಭಜನೆಯಿಂದ ಗೊಲ್ಲಾಳೇಶ್ವರನನ್ನು ನಮ್ಮಲ್ಲಿ ಆವಾಹಿಸಿಕೊಳ್ಳುವುದು, ಶಿವತತ್ವದಲ್ಲಿ ಜಾಗೃತರಾಗಿ ಬದುಕಿ, ಮುಕ್ತಿಯನ್ನು ಪಡೆಯುವದು. ಹೀಗೆ ಭಜನೆ ಮಾಡುವುದರಿಂದ ದೇವರು ನಮಗೆ ಆಯುಷ್ಯ, ಆರೋಗ್ಯ, ಸಂಪತ್ತು, ಸುಖ- ಶಾಂತಿ ನೀಡುವನು ಎಂಬ ನಂಬಿಕೆಯಿದೆ.

## ದೀಪೋತ್ಸವ :

ದೀಪಾವಳಿಯ ಪಾಡ್ಯ ದಿನದಂದು ಭಕ್ತರು ಅಗ್ನಿ ಬಸವಣ್ಣನಿಗೆ ಹೋಗುತ್ತಾರೆ. ಬಿಂದಿಗೆ ಉತ್ಸವದಲ್ಲಿ ಹೇಗೆ ಅಗ್ನಿ ಬಸವಣ್ಣನಿಗೆ ಹೋಗಲು ಆಚರಣೆಗಳನ್ನು ಆಚರಿಸುವರೋ ಈ ಸಂದರ್ಭದಲ್ಲಿಯೂ ಹಾಗೆಯೇ ಆಚರಿಸುವರು. ಇದು ಬೆಳಕಿನ ಹಬ್ಬ. ಎಲ್ಲರೂ ಜ್ಞಾನವಂತರಾಗಿ, ಬದುಕಿ, ಮತ್ತೊಬ್ಬರಿಗೆ ಬೆಳಕಾಗಿ ಬದುಕಲು ಹಬ್ಬವನ್ನು ದೀಪ ಹಚ್ಚುವುದರ ಮುಖಾಂತರ ನಡೆದುಕೊಂಡು ಬಂದಿದೆಯೆಂದು ಹೇಳುವರು. ಮತ್ತು ಕಾರ್ತಿಕ ಮಾಸದ ಉತ್ಸವದಲ್ಲಿಯೂ ದೇವಾಲಯದ ಸುತ್ತಲೂ ದೀಪಗಳನ್ನು (ಕಡೇ ಕಾರ್ತಿಕೋತ್ಸವ ದಿನದಂದು) ಹಚ್ಚುವರು. ಗೊಲ್ಲಾಳೇಶ್ವರನ ಭಕ್ತರಲ್ಲಿ ಕೃಷಿಕರು  ಹೆಚ್ಚಾಗಿದ್ದಾರೆ. ಈ ಸಮಯದಲ್ಲಿ ಬೆಳೆಗಳಿಗೆ ದೀಪದ ಹುಳುಗಳ ಬಾಧೆಯು ಬಹಳವಿರುತ್ತದೆ. ಹೀಗೆ ದೀಪಗಳನ್ನು ಬೆಳಗಿಸುವುದರಿಂದ ಹುಳುಗಳು ನಾಶವಾಗುತ್ತವೆ. ಇದು ವೈಜ್ಞಾನಿಕವಾಗಿಯೂ ಸತ್ಯವಾಗಿದೆ. ಕೃಷಿ ಇಲಾಖೆಯವರು ಹೊಲಗಳಲ್ಲಿ ವಿದ್ಯುತ್ ದೀಪಗಳನ್ನು ಹಚ್ಚಲು ಇತ್ತಿತ್ತಲಾಗಿ ಹೇಳುತ್ತಾರೆ. ಅಂದರೆ ಹಿಂದಿನಿಂದ ನಡೆದುಬಂದ ಸಂಪ್ರದಾಯಗಳಲ್ಲಿ ವೈಜ್ಞಾನಿಕ ಅಂಶಗಳು ಅಡಕವಾಗಿಯೆಂದು ಕಂಡುಬರುತ್ತದೆ. ಆದರೆ ಭಕ್ತರ ನಂಬಿಕೆಯೇ ಬೇರೆ ಆಗಿದೆ. ದೇವರಿಗೆ ದೀಪ ಹಚ್ಚಿದರೆ ನಮ್ಮ ಬದುಕು ದೀಪದ ಹಾಗೆ ಬೆಳಗುತ್ತದೆ ಎಂದು ನಂಬುತ್ತಾರೆ.

## ನಂದಿಕೋಲ ಮೆರವಣಿಗೆ :

ಮಕರ ಸಂಕ್ರಮಣ, ಸೂರ್ಯನ ದಿಕ್ಕೂ ಬದಲಾಗುವ ದಿನ. ಅಂದು ಆಗ್ನೇಯ ಬಸವಣ್ಣನಿಗೆ ಹೋಗಿ ಬರುವರು. (ಬಿಂದಿಗೆ ಉತ್ಸವದಲ್ಲಿಯ ಹಾಗೆ) ಈ ದಿನದಂದು ನಂದಿಕೋಲ ಸಮೇತವಾಗಿ ಗೊಲ್ಲಾಳೇಶ್ವರನ ಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿ ಬಹು ವಿಜೃಂಭಣೆಯಿಂದ ಬಾಜಾ-ಭಜಂತ್ರಿಯೊಂದಿಗೆ ಮೆರವಣಿಗೆ ಮಾಡುತ್ತಾರೆ. ಮುತ್ತೈದೆಯರು ಕಳಸವನ್ನು ಹಿಡಿದುಕೊಂಡು ಬರುವರು. ಇಂದು ಪುರವಂತರ ಸೇವೆಯೂ ಇರುವುದು. ನಂದಿಕೋಲನ್ನು ದೇವಸ್ಥಾನದಿಂದ ನಾಲ್ಕು ಕಿ.ಮಿ. ಅಂತರದಲ್ಲಿರುವ ಅಗ್ನಿ ಬಸವಣ್ಣನವರೆಗೆ (ಗದ್ದುಗೆ) ಮೆರೆಸಲಾಗುವುದು. ಈ ದಿನದಂದು ನಂದಿಕೋಲ ಹಿಡಿದ ಭಕ್ತರಿಗೆ ಹಾಗೂ ವಾದ್ಯ ಮೇಳದವರಿಗೆ ಟೆಂಗಿನಕಾಯಿ ಹೋಳಕನ್ನು ದೇವರ ಪ್ರಸಾದ ಆಶೀರ್ವಾದವೆಂದು ನೀಡಲಾಗುವುದು. ಇಲ್ಲಿ ಈ ದಿನದಂದು ಜಂಗಮಮೂರ್ತಿ (ಐನೋರು) ಇವರೂ ಪ್ರಸಾದವನ್ನು ತೆಗೆದುಕೊಂಡು ಹೋಗುವರು. ಮತ್ತು ಎಲ್ಲ ಭಕ್ತರಿಗೂ ದಾಸೋಹ ಮಾಡುತ್ತಾರೆ. ಈ ದಾಸೋಹದ ಪ್ರಸಾದವನ್ನು ಸ್ವೀಕರಿಸಿದರೆ ಗೊಲ್ಲಾಳೇಶ್ವರನು ಬದುಕಿನಲ್ಲಿ

ಅನ್ನದ ಕೊರತೆ ಆಗದ ಹಾಗೆ ನಮ್ಮನ್ನು ಬದುಕಿಸುತ್ತಾನೆ. ಜೀವನದಲ್ಲಿ ಸುಖ ಸಂಪತ್ತು, ಸಮೃದ್ಧಿ ನೀಡುವನು ಎಂಬ ನಂಬಿಕೆ ಇರುವುದು. ಇದಾದ ಮೇಲೆ ಪಲ್ಲಕ್ಕಿಯಿಂದ ಅಗ್ನಿ ಬಸವಣ್ಣನ ಗದ್ದುಗೆಗೆ ಮೂರು ಸಲ ಪ್ರದಕ್ಷಿಣೆ ಹಾಕಿಸಿ ಮತ್ತೆ ಪುರವಂತರ ಸೇವೆ ಮಾಡಿ ನಂದಿಕೋಲನ್ನು ಮೆರೆಸುತ್ತಾ ಸಾವಕಾಶವಾಗಿ ಬರುವರು.

ಬರುವ ದಾರಿಯ ಮಧ್ಯದಲ್ಲಿ ಮುಲ್ಲಾನ ಬಾವಿ ಇರುವುದು. ಇಲ್ಲಿ ವಿಶ್ರಾಂತಿ ಪಡೆಯುವರು. ನಂದಿಕೋಲ ಹೊತ್ತವರಿಗೆ ಆಕಳ ಹಾಲನ್ನು ಪ್ರಸಾದವೆಂದು ನೀಡುವರು. ಈ ಹಾಲನ್ನು ನಂದಿಕೋಲ ಹಿಡಿದಿರುವ ಆಯಾ ಓಣಿಯ ಜನರು ಭಕ್ತರಿಗೆ ನೀಡುತ್ತಾರೆ. (ನಂದಿಕೋಲನ್ನು ಪುರುಷರು ಹಿಡಿದಿರುತ್ತಾರೆ) ತದನಂತರ ದಣಿವಾರಿಸಿಕೊಂಡು ದೇವಸ್ಥಾನಕ್ಕೆ ಬರುವರು. ದೇವಸ್ಥಾನದ ದ್ವಾರದಲ್ಲಿ ಸಿಡಿಗಾಯಿಯನ್ನು ಒಡೆಯುವರು. ಇಲ್ಲಿ ಪುರವಂತರ ಸೇವೆ ಮಾಡಲಾಗಿ ಭೂತ -ಪಿಶಾಚಿಗಳು ಓಡಿಹೋಗುತ್ತವೆ ಎಂಬ ನಂಬಿಕೆಯಿರುವುದು. ಐವತ್ತಮೂರು ಬಹುಪರಾಕಗಳನ್ನು ಹೇಳುವರು. ಬಿರುದಾವಳಿಗಳನ್ನು ಹೇಳಿದ ನಂತರ ಕರ್ಪೂರದ ಆರತಿ, ಮಂಗಳಾರತಿ ಪದ ಹೇಳುವುದರೊಂದಿಗೆ ನಂದಿಕೋಲ ಉತ್ಸವ ಮುಗಿಯುವುದು. ನಂದಿಕೋಲವೆಂದರೆ ಶಿವನ ವಾಹನ ನಂದಿ ಎಂದರ್ಥ, ಇದನ್ನು ಎತ್ತರವಾದ ಒಂದು ಕಂಬಕ್ಕೆ ಬಣ್ಣ ಬಣ್ಣದ ಬಟ್ಟೆಯನ್ನು ಸುತ್ತಿ ತಯಾರಿಸುತ್ತಾರೆ. ಅಡಿಯಲ್ಲಿ ನಂದಿ ಅಥವಾ ಬಸವನ ವಿಗ್ರಹವನ್ನು ಸೊಂಟಕ್ಕೆ ಕಟ್ಟಿಕೊಂಡು ಒಂದು ಚೀಲವನ್ನು ಕಟ್ಟಿಕೊಂಡು ಅದರ ಆಧಾರದಲ್ಲಿ ನಂದಿಕೋಲನ್ನು ಇಟ್ಟುಕೊಂಡು; ಕುಣಿಯುವಂತಹ ಒಂದು ಪ್ರದರ್ಶನಾತ್ಮಕ ಕಲೆ ನಂದಿಕೋಲ ಕುಣಿತ.

## ಗಂಗಾಸ್ನಾನ :

ಭಾರತ ಹುಣ್ಣಿಮೆ ದಿನದಂದು ದೇವರಮನೆಯವರು, ಮನೆಯಲ್ಲಿರುವ ಗೊಲ್ಲಾಳೇಶ್ವರನ ಪಂಚಲೋಹದ ಮೂರ್ತಿಯನ್ನು ಹಾಗೂ ತಾಮ್ರದ ಮೂರ್ತಿಯನ್ನು ಬೆಳಗಿನ ಜಾವ ಪಲ್ಲಕ್ಕಿಯಲ್ಲಿರಿಸಿಕೊಂಡು ಮುತ್ತೈದೆಯರ ಕಳಸ ಹಾಗೂ ಬಾಜಾ ಭಜಂತ್ರಿಯೊಂದಿಗೆ ಗಂಗಾಸ್ನಾನಕ್ಕೆ ಹೊರಡುವರು, ಹೊರಡುವಾಗ "ಹೊರಗಿನ ದೇವರು ಒಳಗ, ಒಳಗಿನ ದೇವರು ಹೊರಗೆ" ಎನ್ನುತ್ತಾ ಜಯಕಾರ ಹಾಕುತ್ತಾ ಮುಲ್ಲಾನ ಬಾವಿಗೆ ಗಂಗಾಸ್ನಾನಕ್ಕೆ ಬರುವರು. ಪಲ್ಲಕ್ಕಿಯಲ್ಲಿ ದೇವರ ಮೂರ್ತಿಯ ಜೊತೆಗೆ, ಪಾದರಕ್ಷೆ, ದರ್ಪಣ, ಶಂಖ, ನಗಾರಿ, ಜಾಗಟೆ, ಗಂಟೆ, ಚೌರ ಇವೆಲ್ಲವುಗಳನ್ನು ಇರಿಸಿರುತ್ತಾರೆ. ಇವುಗಳನ್ನು ಬಾವಿಯಲ್ಲಿ ಮಡಿ ಮೈಲಿಗೆಯೆಂದು ತೊಳೆಯುತ್ತಾರೆ. ಹೀಗೆ ತೊಳೆದ ಮೂರ್ತಿಯನ್ನು ಮತ್ತೆ ಪಲ್ಲಕ್ಕಿಯಲ್ಲಿರಿಸಿಕೊಂಡು ಉತ್ಸಾಹದಿಂದ ದೇವಸ್ಥಾನಕ್ಕೆ ಬರುವರು. ಇಲ್ಲಿ ಗುಡಿಗೆ ಮೂರು ಸಲ ಪ್ರದಕ್ಷಿಣೆ ಹಾಕಿ, ಪುರವಂತರ ಸೇವೆ ಮಾಡಿ ಪ್ರಸಾದವನ್ನು ಸ್ವೀಕರಿಸುತ್ತಾರೆ. ಇಲ್ಲಿ ಗಮನಿಸಬೇಕಾದದ್ದು ಹೊರಗಿನ "ದೇವರು ಒಳಗ, ಒಳಗಿನ ದೇವರು ಹೊರಗ" ಅಂದರೆ ದೇವರ ಮೂರ್ತಿಗಳು ಎರಡು, ಒಂದು ಪಂಚಲೋಹದಲ್ಲಿ ಮಾಡಿದ್ದು, ಇನ್ನೊಂದು ತಾಮ್ರ ಅಥವಾ ಹಿತ್ತಾಳೆಯಿಂದ ಮಾಡಿದ್ದು ತಾಮ್ರದ ಮೂರ್ತಿಯನ್ನು ಹೊರಗಿನ ಭಕ್ತರು ದಿನಾಲು ಪೂಜಿಸಿದರೆ,

ಪಂಚಲೋಹದ ಮೂರ್ತಿಯನ್ನು ದೇವರಮನೆಯವರು ನಿತ್ಯವೂ ಮನೆಯಲ್ಲಿ ಪೂಜಿಸುವರು. ಇವರಲ್ಲಿ ಸಂಪತ್ತು ಹಾಗೂ ಗೌಪ್ಯತೆ ಅಡಗಿದೆ. ಪುರಾಣ ಪಠಣ ವಿಷಯದಲ್ಲಿಯೂ ವ್ಯತ್ಯಾಸವಿದೆ. ಇದರಿಂದ ಗೊಲ್ಲಾಳೇಶ್ವರನ ಜೀವನಕ್ಕೆ ಸಂಬಂಧಿಸಿದ ಅದೆಷ್ಟೋ ವಿಷಯಗಳು ದೇವರಮನೆಯವರಲ್ಲಿಯೇ ಗುಪ್ತವಾಗಿ ಉಳಿದಿವೆ. ಶರಣ ಗೊಲ್ಲಾಳ ಜಂಗಮಕ್ಕೆ ಒಲಿದವನು.

'ಒಳಗಿನ ದೇವರು ಹೊರಗೆ, ಹೊರಗಿನ ದೇವರು ಒಳಗೆ' ಈ ಸಂಪ್ರದಾಯವು ಈ ಭಾಗದ ಅನೇಕ ಜನಾಂಗಗಳ ಮನೆಗಳಲ್ಲಿ ಇಂದಿಗೂ ಆಚರಣೆಯಲ್ಲಿದೆ. ಈ ಆಚರಣೆಯಲ್ಲಿ ಚಾರಿತ್ರಿಕ ಅಂಶ ಇದ್ದಿರುವುದು ಕಂಡುಬರುತ್ತದೆ. ಉದಾ: ಗೊಲ್ಲಾಳನು ಕುರುಬ ಜನಾಂಗದವನು, ಈತನ ಬಹುತೇಕ ಭಕ್ತರು ಬಣಜಿಗ, ಗಾಣಿಗ, ಪಂಚಮಸಾಲಿ, ಕುಡು ಒಕ್ಕಲಿಗ, ರಡ್ಡಿ ಜನಾಂಗದವರಾಗಿದ್ದಾರೆ. ಇವರುಗಳು ಕುರುಬ ಜನಾಂಗದ ಒಬ್ಬ ಶ್ರೇಷ್ಠ ಶಿವಭಕ್ತನನ್ನು ದೈವವೆಂದು ಸ್ವೀಕರಿಸುವಾಗ, ತಮ್ಮ ಮೂಲ ದೈವವನ್ನು ಹೊರಹಾಕಿ, ಈ ಗೊಲ್ಲಾಳನೆಂಬ ದೈವವನ್ನು ಒಳಗೆ ಕರೆತಂದದ್ದು ಆಗಿದೆ. ಇದು ಧಾರ್ಮಿಕ ಪರಿವರ್ತನೆಯ ಕುರುಹು. ನಮ್ಮಲ್ಲಿ ಹೀಗೆ ಧಾರ್ಮಿಕ ಭಾವನೆಯ ಪರಿವರ್ತನೆಯಿಂದ ಮತಾಂತರಗೊಂಡ ಸಾಕ್ಷ್ಯಗಳು ಇತಿಹಾಸದ ಪುಟಗಳಲ್ಲಿವೆ. ಈ ಕುರಿತು ಸಂಶೋಧನಾ ಅಧ್ಯಯನದ ಅವಶ್ಯಕತೆಯಿದೆ.

## ದೊಡ್ಡ ಪಲ್ಲಕ್ಕಿ ಉತ್ಸವ :

ಇಲ್ಲಿಯೂ ಮೇಲಿನಂತೆ ಗೊಲ್ಲಾಳೇಶ್ವರ ದೇವಸ್ಥಾನದಲ್ಲಿ ದೊಡ್ಡಪಲ್ಲಕ್ಕಿ ಮತ್ತು ಸಣ್ಣ ಪಲ್ಲಕ್ಕಿ ಎಂದು ಎರಡು ಪಲ್ಲಕ್ಕಿಗಳು ಇರುವವು. ಸಣ್ಣ ಪಲ್ಲಕ್ಕಿಯನ್ನು ಪ್ರತಿ ಸೋಮವಾರ ಗುಡಿಯೊಳಗಿನ ಮೂರ್ತಿಯನ್ನಿರಿಸಿ ಮೆರವಣಿಗೆ ಪೂಜೆ ಸಲ್ಲಿಸಿ ಮೆರವಣಿಗೆ ಮಾಡುತ್ತಾರೆ. ದೊಡ್ಡ ಪಲ್ಲಕ್ಕಿಯನ್ನು ಶಿವರಾತ್ರಿ ಅಮವಾಸ್ಯೆ ದಿನದಂದು ಮೆರೆಯಿಸುವರು. ಶಿವರಾತ್ರಿ ದಿನದಂದು ರಾತ್ರಿ ಗೊಲ್ಲಾಳನಿಗೆ ಪೂಜೆಯನ್ನು ಮಾಡಿ ಆ ರಾತ್ರಿ ಜಾಗರಣೆಯನ್ನು ಮಾಡುವರು. ಈ ಪಲ್ಲಕ್ಕಿ ಉತ್ಸವವನ್ನು ನಡೆಸಿಕೊಡುವವರು. 'ಶೈವ ಬ್ರಾಹ್ಮಣರು, ಶೈವ ಬ್ರಾಹ್ಮಣ ಭಕ್ತರು ಗೊಲ್ಲಾಳೇಶ್ವರನಿಗೆ ಭಕ್ತಿಯಿಂದ ಪೂಜಿಸುವರು. 'ಗೊಲ್ಲಾಳ'ನು ಜಾತ್ಯಾತೀತ ತತ್ವದಿಂದ ಬದುಕಿದ್ದನು ಎನ್ನುವುದಕ್ಕೆ ಇದೊಂದು ನಿದರ್ಶನವಾಗಿದೆ.

## ಕಂಬಿ ಸೇವೆ :

ದೇವರು ಒಬ್ಬನೆ ಆದರೂ ಆತನನ್ನು ಪೂಜಿಸುವ ಆರಾಧಿಸುವ, ಆಚರಿಸುವ ರೀತಿಗಳು ಅನೇಕಾನೇಕ. "ಮಾನವ ಸೃಷ್ಟಿ, ಸೃಷ್ಟಿಕರ್ತ ಇವುಗಳು ಚಿರಂತನವಾದ ತತ್ವಗಳಾಗಿದ್ದು, ಇವುಗಳ ಬಗೆಗೆ ಜಿಜ್ಞಾಸೆಯಿ ಎಂದಿನಿಂದಲೂ ಇದೆ. ಅಂತರಾತ್ಮ (ಪಿಂಡಾಂಡ) ವಿಶ್ವ (ಬ್ರಹ್ಮಾಂಡ) ವಿಶ್ವತೀರ್ಥ (ಪರಮಾತ್ಮ) ಇವುಗಳನ್ನು ಕುರಿತ ಪ್ರತಿಪಾದನೆಯು ಬಹುಶಃ ಎಲ್ಲ ದರ್ಶನಗಳಲ್ಲಿ ಬರುವುದುಂಟು. ಅಲ್ಲದೆ ಮಾನವನ ದೇಹ, ಮನ, ಆತ್ಮ ಇಹಲೋಕ, ಪರಲೋಕಗಳನ್ನು ಕುರಿತ ಚರ್ಚೆಯೂ ಪುರಾತನವಾದುದು. ಮಾನವ ಜೀವನದ ಗುರಿ

ಏನು ? ಸೃಷ್ಟಿಯ ರಹಸ್ಯವೇನು? ಅದರ ಆದಿ ಅಂತ್ಯದಿಂದ ಈ ಪ್ರಶ್ನೆಗಳ ಬಗೆಗೆ ಕಂಡುಕೊಂಡ ಖಂಡ ಸತ್ಯಗಳು ನಮ್ಮ ದರ್ಶನಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿ ಪರಿಣಮಿಸಿವೆ. ನಾಲ್ಕು ಜನ ಕುರುಡರು ಒಂದೇ ಆನೆಯನ್ನು ಬಗೆಬಗೆಯಾಗಿ ಅರಿತುಕೊಂಡಂತೆ ಇದರಂತೆ ನಮ್ಮಲ್ಲಿ ಅನೇಕ ಆಚರಣೆಗಳು ಜಾರಿಯಲ್ಲಿವೆ."[೧೩] ಇದರಲ್ಲಿ ಪರಸೆ ಹೋಗುವದೂ ಒಂದಾಗಿದೆ.

ಶ್ರೀಶೈಲ ಮಲ್ಲಯ್ಯನಿಗೆ ಗೋಲಗೇರಿಯಿಂದಲೂ ಪರಸೆ (ಕಂಬಿ) ಹೋಗುವದು. ಹೋಳಿಹುಣ್ಣಿಮೆ ಮರುದಿವಸ ಬೂದಿ ಚಲ್ಲುವ ದಿವಸ ಗೋಲಗೇರಿ ಕಂಬಿಯು ಪ್ರಯಾಣ ಬೆಳೆಸುವುದು. ಕರ್ನಾಟಕದ ಪಕ್ಕದ ಮಹಾರಾಷ್ಟ್ರ ಹಾಗೂ ಸುತ್ತಲಿನ ಊರುಗಳ ನೂರಾರು ಕಂಬಿಗಳು ಗೊಲ್ಲಾಳೇಶ್ವರ ದೇವಸ್ಥಾನದಲ್ಲಿ ಒಂದು ದಿನ ಮುಂಚಿತವಾಗಿಯೇ ಬಂದು ಸೇರಿರುತ್ತವೆ. ಶ್ರೀಶೈಲಕ್ಕೆ ಅಂದು ರಾತ್ರಿ ಎಲ್ಲ ಕಂಬಿಗಳಿಗೂ ಭಕ್ತಾದಿಗಳು ಭಾವುಕರಾಗಿ ಪೂಜಿಸುತ್ತಾರೆ. ಮಲ್ಲಯ್ಯನ ಕುರಿತು ಹಾಡು, ಗೀತೆಗಳನ್ನು ಹಾಡುವರು. ಗೋಲಗೇರಿ ದೇವಸ್ಥಾನದಲ್ಲಿ ಯಾತ್ರಾರ್ಥಿಗಳಿಗೆ ಭಕ್ತರು ದಾಸೋಹವನ್ನು ಏರ್ಪಡಿಸುವರು. ಗೋಲಗೇರಿ ಕಂಬಿಯು ಸಿಂದಗಿ ಚೌಕಿ ಕಂಬಿ ಎರಡೂ ಸೇರಿಕೊಂಡು ಹೋಗುವವು. ಆದರೆ ದೇವರ ಮನೆಯವರು ಕಂಬಿಯ ಜೊತೆ ಶ್ರೀಶೈಲಕ್ಕೆ ಹೋಗುವುದಿಲ್ಲ. ಕಾರಣ ಅವರ ಮನೆತನದವರು ಶ್ರೀಶೈಲಕ್ಕೆ ಹೋದವರು ಯಾರೂ ಮರಳಿ ಬಂದಿಲ್ಲವೆಂದು ಅವರು ಹೇಳುವರು. ಶ್ರೀಶೈಲ ಮಲ್ಲಯ್ಯನು ಇಲ್ಲಿಯೇ ನೆಲೆಸಿರುವನು ಎನ್ನುವರು. ಶರಣರು ಸ್ಥಾವರ ಲಿಂಗವಿರೋಧಿಯಾಗಿದ್ದರು ಎಂಬ ತತ್ತ್ವ ಇದರಲ್ಲಿ ಅಡಗಿದೆ."

ಎಲ್ಲ ಸಾಂಪ್ರದಾಯಿಕ ಆಚರಣೆಗಳನ್ನು ಆಚರಿಸುವುದರೊಂದಿಗೆ ದೇವಸ್ಥಾನದಲ್ಲಿ ಪ್ರತಿದಿನವೂ ರುದ್ರಾಭಿಷೇಕ ಮಾಡಲಾಗುತ್ತದೆ. ಭಕ್ತರು, ಧರ್ಮದರ್ಶಿಗಳು, ಅರ್ಚಕರು ಕೂಡಿಕೊಂಡು ಪೂಜಿಸುವರು. ರುದ್ರಾಭಿಷೇಕಕ್ಕೆ ಪಾದ್ಯ, ಅರ್ಗ್ಯ, ಆಚಮನ, ಹಾಲು. ಮೊಸರು, ತುಪ್ಪ, ಜೇನುತುಪ್ಪ, ಸಕ್ರಿ, ಮಂತ್ರೋದಕ, ಹಣ್ಣುಗಳನ್ನು ರುದ್ರಾಭಿಷೇಕಕ್ಕೆ ಬಳಸುವರು. ಬಂದ ಭಕ್ತರಿಗೆ ಅಭಿಷೇಕವನ್ನು ತೀರ್ಥ ಎಂದು ನೀಡುವರು. ಪಡೆದ ಭಕ್ತರೂ ಪ್ರಸಾದವೆಂದು ಸ್ವೀಕರಿಸುವರು.

ಗೊಲ್ಲಾಳನು ಜಂಗಮಕ್ಕೆ ಅನುಗುಣವಾಗಿ ಭಕ್ತಿಯಿಂದ ಬಾಳಿ ಬದುಕಿದವನು. ಈತನು ಬಾಳಿ ಬದುಕಿದ ಜೀವನದಲ್ಲಿ ಚಾರಿತ್ರಿಕ ಅಂಶಗಳಿಂದ ಕೂಡಿದ ಅಘಟಿತ ಘಟನೆಗಳು ನಡೆದಿರುವುದು ಆತನ ಆಧ್ಯಾತ್ಮಿಕ ಶಕ್ತಿಗೆ ನಿದರ್ಶನವಾಗಿದೆ. ಇವುಗಳನ್ನೆ ಭೂತಾಯಿಯನ್ನು ನಂಬಿ ಬದುಕುವ ಭಕ್ತರು ಪವಾಡಗಳೆಂದು ಕರೆಯುತ್ತಾರೆ. ಪವಾಡವೆಂದರೆ ಮಾನವನಿಂದ ಆಗದ ಅಸಾಧ್ಯವಾದುದನ್ನು ದೈವೀ ಬಲದಿಂದ ಸಾಧ್ಯವಾಗಿಸಿದರೆ ಅದನ್ನು ಪವಾಡವೆಂದು ಹೇಳುವರು. ಈ ಕಾರ್ಯವನ್ನು ಯಾವುದೇ ಮನುಷ್ಯನು ಮಾಡಿದರೆ ಅವನನ್ನು ಪವಾಡ ಪುರುಷನೆಂದು ಕರೆಯುವರು. ಹೀಗೆಯೇ 'ಪ್ರಾಸಂಗಿಕವಾಗಿ ಶರಣರು ಪವಾಡಗಳನ್ನು ಮಾಡಿ ಲೋಕದಲ್ಲಿ ಮಹಾನುಭಾವಿಗಳೆಂದೂ, ಕಾರಣಿಕ ಪುರುಷರೆಂದೂ ಪ್ರಸಿದ್ಧರಾಗಿದ್ದಾರೆ. ಮನುಷ್ಯ ಮಾತ್ರರಿಗೆ ಸಾಧ್ಯವಾಗದ

ಅತಿಮಾನುಷ ಕಾರ್ಯಗಳು, ಅವತಾರೀ ಪುರುಷರಿಗೆ ಅನಿವಾರ್ಯವಾಗಿ ಒದಗಿಬರುತ್ತವೆ. ಚರಿತ್ರಕಾರರು ಒಪ್ಪಲಿ ಒಪ್ಪದಿರಲಿ, ಅವರೆಡೆಗೆ ಜನಸಾಮಾನ್ಯರ ಲಕ್ಷ್ಯವಿರುವುದಿಲ್ಲ. ಪವಾಡಗಳ ಪ್ರಭಾವಕ್ಕೊಳಗಾಗಿ ಅವರಿಗೆ ತುಂಬಾ ವಿಶ್ವಾಸ ಹುಟ್ಟಿ ಅಂಥ ಪೂಜ್ಯರನ್ನು ಪೂಜಿಸುವದು, ಆರಾಧಿಸುವದು ಸ್ವಾಭಾವಿಕ. ಇದು ಎಲ್ಲ ಕಾಲಗಳಲ್ಲಿ, ದೇಶಗಳಲ್ಲಿ ಕಂಡುಬರುವ ಪ್ರಚಲಿತ ವಿಷಯವಾಗಿರುತ್ತದೆ. ಪವಾಡಗಳನ್ನು ಮೆರೆದು ಪ್ರಸಿದ್ಧರಾದವರು ಶರಣರು ಎಂಬುದು ನಮಗೆ ಅವರ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ."[...] ಈ ಹಿನ್ನೆಲೆಯಲ್ಲಿ ಶರಣರು ಅಲೌಕಿಕ ಜ್ಞಾನಿಗಳಾಗಿ ಬದುಕಿ ಸಾಧಿಸಿದ ಘಟನೆಗಳು ಶರಣರ ಆಧ್ಯಾತ್ಮಿಕ ಬಲಕ್ಕೆ ಒರೆಗಲ್ಲಾಗಿವೆ.

ಶರಣ ಗೊಲ್ಲಾಳನ ಕುರಿತಾದ ಸ್ಥಳಮಹಿಮೆಯು ಆತನ ಕುರಿತು ರಚಿತವಾದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಉಲ್ಲೇಖಿತವಾಗಿದೆ. ಈ ಸಾಹಿತ್ಯ ರಚನೆಯೂ ಚಾರಿತ್ರಿಕವಾಗಿ ನೈಜವಾದವು ಎಂಬುದನ್ನು ಸಿದ್ಧಮಾಡಲು ಈತನ ಕುರಿತಾದ ರೂಢಿಯಲ್ಲಿರುವ ಸಂಪ್ರದಾಯ, ಆಚರಣೆಗಳು ಪ್ರಮುಖ ಆಕರಗಳಾಗುತ್ತವೆ. ಅವುಗಳಲ್ಲಿ 'ಉಕ್ಕಲಿ' ಗೌಡರ ಮನೆತನದ ಹೆಣ್ಣುಮಕ್ಕಳಾದ ಅವ್ವಮ್ಮ -ಮಲಕಮ್ಮ ಗೊಲ್ಲಾಳೇಶ್ವರನ ಪರಮಭಕ್ತರಾಗಿ ಬಾಳಿ -ಬದುಕಿದುದು ಪ್ರಮುಖ ಘಟನೆಯಾಗಿದೆ.

"ಮೂಲತಃ ಕೊಪ್ಪಳ ಜಿಲ್ಲೆಯ ಕುಕನೂರ ಊರಿನವರಾದ ಉಕ್ಕಲಿ ಗೌಡರ ಮನೆತನವು ಕಾಲಕ್ರಮೇಣ ವಿಜಾಪೂರ ಜಿಲ್ಲೆಯ, ಬಸವನ ಬಾಗೇವಾಡಿ ತಾಲ್ಲೂಕಿನ ಉಕ್ಕಲಿ ಗ್ರಾಮದಲ್ಲಿ ಬಂದು ನೆಲೆಸಿದರು. ಇವರ ಉದ್ಯೋಗ ಒಕ್ಕಲುತನ. ಜನಾಂಗದಿಂದ ಕುಡ ಒಕ್ಕಲಿಗರು, ಇವರು ಈ ಊರಿನ ಗೌಡಕಿಯನ್ನು ಸಂಪಾದಿಸಿ ಒಡೆಯರಾಗಿ ಬದುಕಿದವರು, ಇವರ ಒಟ್ಟು ಜಮೀನು ೧೧೦೦ (ಹನ್ನೊಂದುನೂರು) ಎಕರೆ ಇರುತ್ತದೆ. ಈಗ್ಗೆ ಸರಕಾರಿ ನಿಯಮದ ಪ್ರಕಾರ ಹಂಚಿಕೊಂಡಿರುವರು. ಇಂದಿಗೂ ಈ ಮನೆತನವು ಗೌರವಸ್ಥ ಕುಟುಂಬವಾಗಿ ಶರಣ ತತ್ವಕ್ಕನುಗುಣವಾಗಿ, ಲಿಂಗಪ್ರೇಮಿಗಳಾಗಿ, ಜಂಗಮಕ್ಕೆ ಪ್ರಾಮುಖ್ಯತೆ ನೀಡಿ ಬದುಕುತ್ತಿದೆ. "ದಯವೇ ಧರ್ಮದ ಮೂಲ" ಎನ್ನುವಂತೆ ಎಲ್ಲರಲ್ಲೂ ಒಳ್ಳೆಯದನ್ನು ಕಂಡು ಎಲ್ಲರಿಗೂ ಒಳಿತನ್ನು ಬಯಸುವ ಕುಟುಂಬ ಇದಾಗಿದೆ ಎಂದೆನ್ನಬಹುದು. ಇವರು ಸಂಘಜೀವಿಗಳಾಗಿ, ನೆರೆಹೊರೆಯವರೊಂದಿಗೆ ಹಿತಮಿತವಾದ ಸಂಪರ್ಕವನ್ನು ಇಟ್ಟುಕೊಂಡು ಕೂಡಿ ಬಾಳುತ್ತಿರುವ ಮನೆತನ. ಸಮಾಜವನ್ನು ಅಣ್ಣ-ತಮ್ಮಂದಿರಂತೆ ಸಮಭಾವ ದೃಷ್ಟಿಯಿಂದ ಕಾಣುವ ಇವರು ಸಮಾಜಮುಖಿಯಾಗಿರುವರು. ಇಂತಹ ಕುಟುಂಬ ಗೊಲ್ಲಾಳನ ಪರಮ ಭಕ್ತೆಯರಾದ ಅವ್ವಮ್ಮ ಮತ್ತು ಮಲಕವ್ವ ಇವರುಗಳ ಸಂಸ್ಕಾರ ಪಡೆದಿದೆ.

ಅವ್ವಮ್ಮ, ಮಲಕವ್ವ, ಸಾತ್ವಿಕ ಜೀವನವನ್ನು ನಡೆಸಿದವರು. ಇವರು ಗೊಲ್ಲಾಳನ ಪರಮ ಭಕ್ತರೂ ಹೌದು, ಗೊಲ್ಲಾಳನ ಸಮಾಜ ಮುಖಿ ಜೀವನಕ್ಕೆ ಮಾರುಹೋದವರು. ಅದಕ್ಕಾಗಿ ಸಂಸಾರದ ಆಶೆ ದೋಷವ ಕಳೆದು, ಕ್ಲೇಶ ಪಂಚಕವ ಅಳಿದು, ಗೊಲ್ಲಾಳನ ಒಲುಮೆಗೆ ಪಾತ್ರರಾಗಿ, ಸಂಸಾರದ ಬಂಧನವನ್ನು ಕಿತ್ತು

ಹಾಕಿದ, ಶರಣ ಗೊಲ್ಲಾಳನಿಗೆ ಶರಣು ಬಂದವರು. ಈ ಈರ್ವರೂ ಅಕ್ಕ-ತಂಗಿಯರ ಕುರಿತಾದ ಐತಿಹ್ಯವೂ ಇರುವದು. ತಮ್ಮ ಮನೆಯ ಹೊಲಗೆಲಸದ ಆಳುಗಳನ್ನು ನೋಡಿಕೊಳ್ಳಲು ಹೊಲಕ್ಕೆ ಹೋಗಿದ್ದರು. ಹೊಲದಲ್ಲಿ ಹತ್ತಿ ಬಿಡಿಸುವ ಕೆಲಸದಲ್ಲಿ ಮಗ್ನರಾಗಿದ್ದರು. ಅದೇ ದಾರಿಯಲ್ಲಿ ಶ್ರೀಶೈಲಕ್ಕೆ ಹೋಗಿದ್ದ ಗೊಲ್ಲಾಳ ಕಂಟೆತ್ತಿನ ಮೇಲೆ ಕುಳಿತು ತನ್ನ ಸಂಗಡಿಗರೊಂದಿಗೆ ಅದೇ ಹೊಲದಲ್ಲಿ ಹಾದಿ ಹಿಡಿದು ಮರಳಿ ಬರುತ್ತಿದ್ದ ಅವರೆಲ್ಲ "ಪರ್ವತ ಮಲ್ಲಯ್ಯ ಉಘೇ ಉಘೇ" ಎಂದು ಭಕ್ತಿ ಪರವಶತೆಯಿಂದ ಉಗ್ಗಡಿಸುತ್ತ ಬರುತ್ತಿದ್ದರು. ಆ ಧ್ವನಿ ಕೇಳಿ ಅಲ್ಲಿದ್ದವರೆಲ್ಲ ಎದ್ದು ನಿಂತರು. ಅವ್ವಮ್ಮ-ಮಲಕವ್ವ ಕಂಟೆತ್ತಿನ ಮೇಲೆ ಕುಳಿತಿದ್ದವನನ್ನು ನೋಡಿ ಪುಳಕಿತರಾದರು. 'ಲಿಂಗದಲ್ಲಿ ಮನವಾಗಿ । ಲಿಂಗದಲ್ಲಿ ನೆನಹಾಗಿ । ಲಿಂಗದಲಿ ನೋಟ ನುಡಿ ಕೂಟವಾದವನು ಶಂಭುವಿನಂತಿರುವವನನ್ನು' ಕಂಡು ಒಂದು ಕ್ಷಣವೂ ನಿಲ್ಲದೆ ಅವನಿಗೆ ಸಾಷ್ಟಾಂಗವೆರಗಿದರು. "ನಮಗೆ ಪ್ರಪಂಚದ ವ್ಯಾಮೋಹದಿಂದ ಮುಕ್ತರನ್ನಾಗಿ ಮಾಡು, ನಾವು ನೀನಿದ್ದಲ್ಲಿಯೇ ಬಂದು ಸೇವೆಗೈಯುವುದಕ್ಕೆ ಅಪ್ಪಣೆ ನೀಡು" ಎಂದು ವಿನಮ್ರವಾಗಿ ಕೇಳಿಕೊಂಡು ಗೋಲಗೇರಿಗೆ ಹೋಗಿ ನೆಲೆಸಿದರೆಂದು ಇವರ ಮನೆತನದವರು ಹೇಳುತ್ತಾರೆ. ಈ ಕುರಿತು ಜಾನಪದರೂ ಅವರ ಮುಗ್ಧ ಭಕ್ತಿಯನ್ನು ಮುಕ್ತಕಂಠದಿಂದ ಹೊಗಳುತ್ತಾರೆ. ಅವಾಗಿನಿಂದ ಗೋಲಗೇರಿಯಲ್ಲಿಯೇ ಇದ್ದು ಶಿವಭಕ್ತಿಯನ್ನಾಚರಿಸಿ ಅಲ್ಲಿಯೇ ಲಿಂಗೈಕ್ಯರಾಗಿದ್ದಾರೆ. ಈ ಅಕ್ಕತಂಗಿಯರು. ಗೊಲ್ಲಾಳೇಶ್ವರನ ಗುಡಿಯ ಎದುರುಗಡೆ ಅವರ ಸಮಾಧಿಯಿದೆ. ಆ ಸಮಾಧಿಯ ಮೇಲೆ ಶಿವ ಪಾರ್ವತಿಯರ ಮೂರ್ತಿಯಿದೆ. ಅವರಿಗೆ ನಿತ್ಯಪೂಜೆ ನಡೆಯುತ್ತದೆ. ಇನ್ನು ಗೊಲ್ಲಾಳೇಶ್ವರನ ಗುಡಿಯ ಹಿಂದುಗಡೆ ಅವ್ವಮ್ಮ - ಮಲಕವ್ವರ ಹೆಸರಿನ ಗುಡಿ ಇದೆ. ಅದರಲ್ಲಿ ಅವರ ಮೂರ್ತಿಗಳಿಲ್ಲ. ಅವರ ನಿವಾಸಸ್ಥಾನ ಅದಾಗಿತ್ತೆಂಬುದರ ಸೂಚಕವಾಗಿ ಒಂದು ಮಂಚವಿದೆ. ಅಲ್ಲಿ ಗೊಲ್ಲಾಳೇಶ್ವರನ ಹಲವಾರು ಕಂಚಿನ ಮುಖವಾಡಗಳನ್ನು ಸಂಗ್ರಿಹಿಸಿಡಲಾಗಿದೆ.

"ಮತ್ತೊಂದು ವಿಶೇಷವೆಂದರೆ, ಶಿವಭಕ್ತರಾಗಿ, ಸತ್ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಮುಕ್ತಿಹೊಂದಿದ ತಮ್ಮ ಮನೆತನದ ಗೌರವ ಪ್ರತಿಷ್ಠೆಗೆ ಕಾರಣೀಭೂತರಾದ ಅವ್ವಮ್ಮ -ಮಲಕವ್ವರ ಹೆಸರಿನಲ್ಲಿ ಉಕ್ಕಲಿ ಗೌಡರ ಮನೆಯಿಂದ ಬಂದ ಅಕ್ಕಿಯಿಂದಲೇ ನಿತ್ಯ ನೈವೇದ್ಯ ನಡೆಯುತ್ತದೆ. ಪ್ರತಿವರ್ಷ ಸಂಕ್ರಮಣಕ್ಕೆ ಉಕ್ಕಲಿ ಗೌಡರ ಹೊಲದಲ್ಲಿ ಬೆಳೆದ ಹೊಸ ಬೆಳೆ, ಧಾನ್ಯಗಳಾದ ಗೋಧಿ, ಉಮಗಿ, ಸೀತನಿ, ಕಡಲೆ, ಗಾಣಾ ಆಡಿದ ಬೆಲ್ಲ ಇತ್ಯಾದಿಗಳನ್ನು ಕಂಟೆತ್ತಿನ ಮೇಲೆ ಹೇರಿಸಿಕೊಂಡು ತಂದುಕೊಡುತ್ತಾರೆ. ಉಕ್ಕಲಿ ಗೌಡರ ಮನೆತನದವರು. ಅದರಂತೆ ಪ್ರತಿ ವರ್ಷ ದವನದ ಹುಣ್ಣಿಮೆಗೆ ಜರುಗುವ ಗೊಲ್ಲಾಳನ ಜಾತ್ರೆಗೆ ಅವ್ವಮ್ಮ - ಮಲಕವ್ವರಿಗೆ ಸೀರೆ, ಬಳೆ, ಕುಂಕುಮ ಮೊದಲಾದ ಮಂಗಳದ್ರವ್ಯಗಳನ್ನು ಮುಡಿಸುವರು."[೧೫] ಮೊದಲಿನಿಂದಲೂ ನಡೆದುಕೊಂಡು ಬಂದಿರುವ ಈ ಸಂಪ್ರದಾಯವನ್ನು ಸದ್ಯದಲ್ಲಿರುವ ಉಕ್ಕಲಿಯ ಮೇಳಪ್ಪಗೌಡ ಪಾಟೀಲರು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ದೇವರ ಕಾರ್ಯದ ಜವಾಬ್ದಾರಿ ನಿರ್ವಹಿಸುತ್ತಿರುವ ಗೊಲ್ಲಾಳಪ್ಪ ದೇವರಮನಿಯವರು ಮನದೆರೆದು ಈ ಸತ್ಯಸಂಗತಿಯನ್ನು ನಿರೂಪಿಸಿದರು.

ಈ ಮನೆತನದವರು 'ಉಕ್ಕಲಿ' ಗ್ರಾಮದಲ್ಲಿರುವ ಹಾಗೂ ಗೋಲಗೇರಿಯಲ್ಲಿರುವ ದೇವಸ್ಥಾನಗಳಿಗೆ ಕೆಳಕಾಣಿಸಿದ ಸಂಪ್ರದಾಯವನ್ನು ಆಚರಿಸುತ್ತಾರೆ.

ಶಿವರಾತ್ರಿ ಶಿವಯೋಗ ದಿವಸ ಇವರ ಮನೆಯ ದೇವರಾದ 'ಗೊಲ್ಲಾಳೇಶ್ವರ'ನಿಗೆ ತಮ್ಮ ಮನೆಯ ದೇವರ ಕೋಣೆಯಲ್ಲಿ ರುದ್ರಾಭಿಷೇಕ ಮಾಡುವರು. ಈ ಪೂಜೆಗೆ ಬಸವನಬಾಗೇವಾಡಿ ತಾಲ್ಲೂಕಿನ, ಇಂಗಳೇಶ್ವರ ಗ್ರಾಮದ ವಿರಕ್ತ ಮಠದ ಪೀಠಾಧಿಪತಿಗಳು ಹಾಗೂ ಇದೇ ತಾಲ್ಲೂಕಿನ ಯರನಾಳ ಗ್ರಾಮದ ವಿರಕ್ತಮಠದ ಪೀಠಾಧಿಪತಿಗಳು ಪಾದಗಳನ್ನು ನೀಡುವರು. ಇವರ ಪಾದಪೂಜೆಯನ್ನು ಶ್ರೀ ದಾದಾಗೌಡ, ಬಾಪೂಗೌಡ ಪಾಟೀಲರು (ಇಲ್ಲವೇ ಇವರ ಮನೆತನದವರು) ಮಾಡುತ್ತಾರೆ. ವಿರಕ್ತಮಠದ ಪೀಠಾಧಿಪತಿಯು ಅಂದು ಗೊಲ್ಲಾಳ ಶರಣರು ಕಂಡಂತಹ ಜಂಗಮನಂತೆ ಬಂದಿರುತ್ತಾರೆ. ಇವರ ಪಾದಗಳಿಗೆ ಮೂರು ಸಾವಿರದ ಐದುನೂರು ತ್ರಿದಳ ಏರಿಸಿ ಪೂಜಿಸಲಾಗುವುದು. ಪೂಜಾ ನಂತರ ಗ್ರಾಮದಲ್ಲಿರುವ ಗೊಲ್ಲಾಳೇಶ್ವರನ ದೇವಸ್ಥಾನಕ್ಕೆ ಹೋಗಿ ಭಕ್ತಾಧಿಗಳೊಂದಿಗೆ ಪೂಜೆ ಸಲ್ಲಿಸುವರು. ಈ ದಿನದಂದು ಗೌಡರ ಮನೆಯಲ್ಲಿ ಎಲ್ಲರೂ ಉಪವಾಸವಿರುವರು. ಮರುದಿವಸ ಇವರ ಮನೆಯಲ್ಲಿ 'ಕರ್ಮಪ್ರಸಾದ'ವೆಂದು ಎಲ್ಲ ಭಕ್ತಾದಿಗಳಿಗೆ ಅನ್ನ ದಾಸೋಹ ಮಾಡುವರು. ಎಲ್ಲ ದಾನಕ್ಕಿಂತಲೂ ಅನ್ನದಾನವೇ ಶ್ರೇಷ್ಠ ಎಂದು ಜಂಗಮರಿಗೆ (ಭಕ್ತ ಸಮಾಜಕ್ಕೆ) ದಾಸೋಹ ಮಾಡಲಾಗುವುದು. ಇದಾದ ನಂತರವೇ ಈ ಮನೆಯವರು ಊಟವನ್ನು ಮಾಡುವ ಸಂಪ್ರಾದಯವಿದೆ.

ಗೊಲ್ಲಾಳನ ಕರ್ಮಭೂಮಿ ಹಾಗೂ ಐಕ್ಯಸ್ಥಳ ಗೋಲಗೇರಿ ಎಂದು ಹೇಳುವ ಇವರು, ದವನದ ಹುಣ್ಣಿಮೆಗೆ ಗೋಧಿ ಹಿಟ್ಟು, ಜೋಳದ ಹಿಟ್ಟು, ಕಾಯಿ, ಕರ್ಪೂರ ಇತ್ಯಾದಿ ವಿವಿಧ ಪೂಜಾ ಸಾಮಗ್ರಿಗಳನ್ನು ತಪ್ಪದೇ ಇಂದಿಗೂ ತೆಗೆದುಕೊಂಡು ಹೋಗುತ್ತಾರೆ. (ಪಾದಯಾತ್ರೆಯ ಮುಖಾಂತರ) ನಿತ್ಯವೂ ಈ ಮನೆತನದವರು ನೀಡಿದ ಅಕ್ಕಿ, ಗೋದಿ, ಜೋಳ ಇತ್ಯಾದಿ ಧಾನ್ಯಗಳಿಂದಲೇ ಗೊಲ್ಲಾಳೇಶ್ವರನಿಗೆ ನೈವೇದ್ಯ ಮಾಡಿ ಭಕ್ತರಿಗೆ ಪ್ರಸಾದವೆಂದು ಹಂಚಲಾಗುತ್ತದೆ. (ಮರುದಿವಸ ನೀಡುವ ಅನ್ನ ದಾಸೋಹಕ್ಕೆ ಮರಿಬಾನವೆಂದು ಕರೆಯುವರು.) ಗೋಲಗೇರಿಯ ದೇವಸ್ಥಾನದಲ್ಲಿ ಮುನ್ನೂರಾ ಅರವತ್ತೈದೂ ದಿವಸ ನಂದಾದೀಪ ಬೆಳಗುವದು. ಈ ದೀರ್ಘಕಾಲದ ದೀಪ ಬೆಳಗುವಿಕೆಗೆ ಬೇಕಾಗುವ ಸಂಪೂರ್ಣ ಎಣ್ಣೆಯ ಖರ್ಚನ್ನು ಈ ಮನೆತನದವರು ನೀಡುವರು. ಇದಲ್ಲದೇ ಇದಕ್ಕೆ ಬೇಕಾಗುವ ಕಾಯಿ, ಕರ್ಪೂರ, ಇನ್ನಿತರ ಖರ್ಚನ್ನು ಇವರೇ ಕೊಡುವರು. ಉಕ್ಕಲಿ ಗೌಡರ ಮನೆತನವು ನೀಡಿದ ಹಣದಲ್ಲಿ ಈ ಸತ್ಕಾರ್ಯವನ್ನು ನಿರ್ವಹಿಸಿಕೊಂಡು (ಉಸ್ತುವಾರಿ) ಹೋಗುವವರು ಗೋಲಗೇರಿ ದೇವರಮನೆಯವರು.

ಶರಣರ ಕಾಯಕ ಸಿದ್ಧಾಂತದಂತೆ ಮಾನವ ಸಾಮಾಜಿಕ ಜೀವನದಲ್ಲಿ ಹಾಗೂ ಸಂಪತ್ತಿನ ಉತ್ಪಾದನೆಯಲ್ಲಿ ಭಾಗಿಯಾಗುವಂತೆ ಯಾವುದಾದರೊಂದು ವೃತ್ತಿಯನ್ನು ಅನುಸರಿಸಬೇಕು. ಹಾಗೆ ಮಾಡುವ

ವೃತ್ತಿಯಿಂದ ಬಂದ ವರಮಾನದಲ್ಲಿ ತನಗೆ ಬೇಕಾದಷ್ಟನ್ನು ಬಳಸಿಕೊಂಡು ಮಿಕ್ಕಿದ್ದನ್ನು ದಾಸೋಹದಲ್ಲಿ ವಿನಿಯೋಗಿಸಬೇಕು ಎಂಬುದು ಕಾಯಕದ ಎರಡು ಮುಖಗಳು. ಸಮಾಜದ ಆರ್ಥಿಕ ಸುಸ್ಥಿತಿಗೆ ದುಡಿಮೆಯೇ ಅತ್ಯಂತ ಪ್ರಧಾನವೆಂದು ಮನಗಂಡ ಶಿವಶರಣರು, ಅದನ್ನು ಪೂಜೆಯ ಮಟ್ಟಕ್ಕೆ ಏರಿಸಿದರು. "ಗುರುವಾದರೂ ಕಾಯಕದಿಂದಲೆ ಜೀವನ್ಮುಕ್ತಿ, ಲಿಂಗವಾದರೂ ಕಾಯಕದಿಂದಲೆ ತನ್ನ ಶಿಲೆಯ ಕುಜುಹು ಹಱಿವುದು, ಜಂಗಮವಾದರೂ ಕಾಯಕದಿಂದಲೆ ತನ್ನ ವೇಷದ ಪಾಶ ಹಱಿವುದು", ಎಂಬ ನುಲಿಯ ಚಂದಯ್ಯನ ಮಾತು ಈ ಮನೋಭಾವವನ್ನು ತೋರಿಸುತ್ತದೆ."[೧೬] ಇಲ್ಲಿ ಬರುವ ಉಕ್ಕಲಿ ಗೌಡರ ಮನೆತನವು ಇದಕ್ಕೆ ಹೊರತಾಗಿಲ್ಲ. ಇವರದು ಕೃಷಿಕ ಕುಟುಂಬವಾಗಿದ್ದು, ಅದರಿಂದ ಬರುವ ಉತ್ಪಾದನೆಯನ್ನು ಪೂಜೆಗೆ, ದಾಸೋಹಕ್ಕೆ ಇಂದಿಗೂ ಬಳಸುವುದನ್ನು ಗಮನಿಸಿದರೆ ಇದೊಂದು ಜಂಗಮಮುಖಿ, ಶರಣ ಕುಟುಂಬ ಎಂದು ಹೇಳಬಹುದು.

ಈ ಮನೆತನವು ದೇವರ ಪೂಜಾ ಸೇವೆಗೆ ಮತ್ತು ದಾಸೋಹಕ್ಕೆಂದು, ಭೂಮಿಯನ್ನು ಮೀಸಲಿರಿಸಿದೆ. ಇದರಲ್ಲಿ ಬೆಳೆದ (ಉತ್ಪಾದಿಸಿದ) ಫಲದಿಂದಲೇ ಮೇಲಿನ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದೆ. ಇದಲ್ಲದೆ ದೇವರ ಕೆಲಸ ಕಾರ್ಯವನ್ನು ನಿರ್ವಹಿಸುವ ವಿವಿಧ ಜನಾಂಗದ ಕುಟುಂಬಗಳಿಗೂ ಭೂಮಿಯನ್ನು ಮೀಸಲಿರಿಸುವುದನ್ನು ಗಮನಿಸಬಹುದು. ದೇವರ ಪೂಜೆಗೆ ಪತ್ರಿಗಳನ್ನು ರುದ್ರ ಹಿಡಿಯುವವರು ಪುರಾಣ ಓದುವವರು, ಕಂಬಿಯವರು ಸೇವೆ, ನಿತ್ಯ ಪೂಜೆ ಮಾಡುವವರು, ಇವರೆಲ್ಲರಿಗೂ ಭೂಮಿಯನ್ನು ನೀಡಲಾಗಿದೆ. ಇವರುಗಳು ತಮ್ಮ ತಮ್ಮ ಕಾರ್ಯವನ್ನು ನಿರ್ವಹಿಸುತ್ತ ಬಂದಿದ್ದಾರೆ.

೧. ಶ್ರೀ ವೀರಭದ್ರಯ್ಯ ಸದಯ್ಯ ಸಾಲಿಮಠ ಇವರಿಗೆ ಉಕ್ಕಲಿ ಗ್ರಾಮದಲ್ಲಿ ಹದಿನಾಲ್ಕು ಎಕರೆ (೧೪) ಜಮೀನನ್ನು ನೀಡಲಾಗಿದೆ. ಇವರು ಶ್ರಾವಣ ಮಾಸದಲ್ಲಿ ಗೊಲ್ಲಾಳೇಶ್ವರನ ಪುರಾಣವನ್ನು ಓದುವರು. ಈ ಕುಟುಂಬಕ್ಕೆ ಗ್ರಾಮದಲ್ಲಿ ಒಂದು ಮನೆಯನ್ನು ನೀಡಲಾಗಿದೆ. ಇಲ್ಲಿಯೇ ಇದ್ದುಕೊಂಡು ದೇವರ ಸೇವೆಯನ್ನು ಇಂದಿಗೂ ಮಾಡುತ್ತಿದ್ದಾರೆ.

೨. ಶ್ರೀ ಬಸಯ್ಯ ಸಿದ್ರಾಮಯ್ಯ ಕಂಬಿ ಈ ಕುಟುಂಬವು ಪ್ರತಿವರ್ಷ ಈ ಗೌಡರ ಮನೆಯ ಕಂಬಿ (ಪರಶೆ)ಯನ್ನು ಶ್ರೀಶೈಲಕ್ಕೆ ತೆಗೆದುಕೊಂಡು ಹೋಗಿ ಬರುವರು. ಶ್ರೀಶೈಲ ಮಲ್ಲಿಕಾರ್ಜುನನ ದರ್ಶನ ಮಾಡಿಕೊಂಡು ವಿವಿಧ ಪೂಜಾ ಸಾಮಗ್ರಿಗಳನ್ನು ಕೊಳ್ಳುವರು. (ಪಾತಾಳಗಂಗಿಯ ನೀರು, ಗಿರಿಉಂಡಿ, ಹಿಪ್ಪಿ ಹೂ, ದವನ, ಬೆಲ್ಲದ ಅಚ್ಚು, ಕುಂಕುಮ, ಮರ) ತಂದು ಒಪ್ಪಿಸುವದು ಹಾಗೂ ದಿನಾಲು ಗೊಲ್ಲಾಳೇಶ್ವರರ ಪೂಜೆಯನ್ನು ಮಾಡುವದು ಈ ಕೆಲಸಗಳಿಗಾಗಿ ಇವರಿಗೆ ಒಂಬತ್ತು (೯) ಎಕರೆ ಜಮೀನು ಒಂದು ಮನೆಯನ್ನು ನೀಡಲಾಗಿದೆ.

೩) ಶ್ರೀ ಶರಣಯ್ಯ ಕಂಬಿ ಈ ಕುಟುಂಬವು ಗೊಲ್ಲಾಳೇಶ್ವರನ ಪೂಜೆಯ ಜೊತೆಗೆ, ಪೂಜೆಗೆ ಬೇಕಾಗಿರುವ ಪೂಜಾ ಸಾಮಗ್ರಿಗಳನ್ನು ಸಿದ್ಧಗೊಳಿಸುವರು. ಇವರಿಗೂ ಐದು ಎಕರೆ ಜಮೀನನ್ನು, ಒಂದು ಮನೆಯನ್ನೂ ನೀಡಲಾಗಿದೆ.

೪) ಶ್ರೀ ರಾಚಯ್ಯ ಕಂಬಿ ಈ ಕುಟುಂಬವು ಉಕ್ಕಲಿ ಗೌಡರ ಮನೆಯಲ್ಲಿರುವ ದೇವರನ್ನು ಹಾಗೂ ಗ್ರಾಮದಲ್ಲಿರುವ ದೇವಾಲಯದ ಪೂಜಾ ಉಸ್ತುವಾರಿಯನ್ನು ನೋಡಿಕೊಂಡು ಹೋಗುವರು. ಇವರಿಗೂ ಒಂಬತ್ತು ಎಕರೆ ಜಮೀನು, ಹಾಗೂ ಒಂದು ಮನೆಯನ್ನು ನೀಡಲಾಗಿದೆ.

೫) ಶ್ರೀ ದಯಾನಂದ. ರೇವಣಸಿದ್ದಯ್ಯ. ಪತ್ರಿ. ಈ ಕುಟುಂಬವು ಪೂಜೆಗೆ ಬೇಕಾಗುವ ಪತ್ರಿಯನ್ನು ನೀಡುವರು. ಇವರಿಗೆ ಒಂಬತ್ತು ಎಕರೆ (೯) ಜಮೀನನ್ನು ಒಂದು ಮನೆಯನ್ನೂ ನೀಡಿದ್ದಾರೆ.

ಇಷ್ಟೊಂದು ಭೂಮಿಯನ್ನು ದಾನವನ್ನಾಗಿ ನೀಡಿ ಎಲ್ಲರೂ ಏಕ ದೈವೀ ಉಪಾಸನೆಯಲ್ಲಿ ಸಮಪಾಲದ ಸಹಬಾಳ್ವೆಯನ್ನು ನಡೆಸಿಕೊಂಡು ಬದುಕುವುದೊಂದು ವಿಶೇಷವಾಗಿದೆ. ಒಂದು ಸುಂದರ ಸಮಾಜ ನಿರ್ಮಾಣವಾಗಲು, ಮುಖ್ಯವಾಗಿ ಐಕ್ಯತೆ ಬೇಕು. ಒಂದಾಗಿ ಬದುಕಲು ಭಕ್ತಿ ಪಕ್ಷ ಬೇಕು. ಭಕ್ತಿ ಮಾಡುವ ವಿವೇಕ ಮನುಷ್ಯನಿಗೆ ಮಾತ್ರ ಇದೆ. ಹಾಗೆಯೇ ಉಕ್ಕಲಿ ಗೌಡರ ಮನೆಯಲ್ಲಿ ಭಕ್ತಿ ಪೂಜೆಗಳು, ಶರಣರಂತೆ ಬದುಕುವುದಕ್ಕಾಗಿ, ಸಮೂಹ ಬಾಳುವೆಯಲ್ಲಿ ಬೇಕಾದ ದಯೆ, ಕರುಣೆ, ಪ್ರೀತಿ, ಔದಾರ್ಯಗಳು, ಇತರರನ್ನು ಅಪರಿಚಿತರನ್ನೂ ಅಪ್ಪಿಕೊಳ್ಳುವ ಹೃದಯವಂತಿಕೆ ಇವೆಲ್ಲ ಮೇಳೈಸಿವೆ. ಉಳ್ಳವರು ನಂಬಿಕೆ, ಸಂಪ್ರದಾಯ, ಆಚಾರ ವಿಚಾರಗಳಲ್ಲಿ ಸಮಾಜಮುಖಿಯಾಗಿ ಬಾಳಿದರೆ, ದೇವಲೋಕವೆಂಬುದು ಬೇರಿಲ್ಲ ಮರ್ತ್ಯಲೋಕವೆಂಬುದು ಬೇರಿಲ್ಲ, ಎಲ್ಲವೂ, ಎಲ್ಲರೂ ಒಂದೇ.

ಶ್ರಾವಣ ಮಾಸದಲ್ಲಿ ಉಕ್ಕಲಿ ಗೌಡರ ಮನೆಯಲ್ಲಿಯೂ ಪುರಾಣವನ್ನು ಓದುತ್ತಾರೆ. ಇವರ ಮನೆಯಲ್ಲಿರುವ ಹಸ್ತಪ್ರತಿಯೂ ಹಾಗೂ ಗೋಲಗೇರಿಯಲ್ಲಿರುವ ದೇವರಮನೆಯವರ ಮನೆಯಲ್ಲಿರುವ ಹಸ್ತಪ್ರತಿಗಳ ಲೇಖಕರ ವಸ್ತು-ವಿಷಯ ಒಂದೇ ಆಗಿದೆ. ಇವರ ಮನೆಯಲ್ಲಿ ಎರಡು ಹಸ್ತಪ್ರತಿಗಳಿದ್ದು ಒಂದರಲ್ಲಿ ಹಸ್ತಪ್ರತಿ ಮಾಡಿದವರಾರು? ಕಾಲಮಾನ ಯಾವುದು? ಎಂಬುದರ ಕುರಿತು ಮಾಹಿತಿ ಇರುವುದಿಲ್ಲ. ಆದರೆ ಇನ್ನೊಂದರಲ್ಲಿ ಶ್ರೀ ಗೋಲಪ್ಪ ಪಾಟೀಲ ಉಕ್ಕಲಿ ಇವರು ಕ್ರಿ. ಶ. ೧೮೫೬ರಲ್ಲಿ ಹಸ್ತಪ್ರತಿ ಮಾಡಿದ್ದೇವೆಂದು ಹೇಳಿಕೊಂಡಿದ್ದಾರೆ. ಇವೆರಡೂ ಪುರಾಣ ಪ್ರತಿಗಳನ್ನು ದೇವರ ಜಗುಲಿಯ ಮೇಲಿಟ್ಟು ಉಕ್ಕಲಿ ಗೌಡರ ಮನೆತನದವರು ಪೂಜಿಸುವರು. (ಶ್ರಾವಣ ಮಾಸದಲ್ಲಿ ಓದುವರು) ಓದುವ ಸಂದರ್ಭದಲ್ಲಿ, ಅಂದರೆ ಮೂವತ್ತಮೂರು ದಿನಗಳವರೆಗೆ ರುದ್ರಾಭಿಷೇಕ ನಡೆಯುತ್ತದೆ. ಪ್ರತಿ ದಿನವೂ ಮೂರು ಸಾವಿರದ ಐದು ನೂರು ತ್ರಿದಳ ಪತ್ರಿಗಳನ್ನು ಏರಿಸುತ್ತಾರೆ. ವಿರಕ್ತಮಠದ ಸ್ವಾಮಿಗಳು ಪ್ರತಿದಿನವೂ ಪಾದಗಳನ್ನು ನೀಡುವರು. ಪುರಾಣವನ್ನು ಓದಿ ಮುಗಿಸಿದ ಮೇಲೆ ಅಂದು ದೇವರಿಗೆ ನೈವೇದ್ಯವಾದ ನಂತರ ಸಾವಿರಾರು ಭಕ್ತರಿಗೆ ಅನ್ನ ಸಂತರ್ಪಣೆ ಮಾಡಲಾಗುತ್ತದೆ.

ಕಾರ್ತಿಕ ಮಾಸದಲ್ಲಿ ಪ್ರತಿ ಸೋಮವಾರ ಇಲ್ಲಿಯೂ ಪಲ್ಲಕ್ಕಿ ಪೂಜೆ ನಡೆಯುವದು. ಪ್ರತಿದಿನ ದೇವಸ್ಥಾನದಲ್ಲಿ ನೂರಾರು ಒಳ್ಳೆಣ್ಣೆಯ ದೀಪವನ್ನು ಉರಿಸುವರು ಹಾಗೂ ಗೌಡರ ಮನೆಯಿಂದ ಪೂಜಾ ತಾಟ(ತಟ್ಟೆ)ವನ್ನು ಮೂವತ್ತು ಮೂರನೇ ದಿನಕ್ಕೆ ಒಯ್ಯಲಾಗುವುದು. ಈ ತಾಟನ್ನು ಜಂಗಮಯ್ಯನು

ವಿಶೇಷವಾಗಿ ಪೂಜೆ ಸಾಮಗ್ರಿಗಳನ್ನು (ಪತ್ರಿ, ಹೂ, ತುಪ್ಪದ ದೀಪ, ತಾಂಬೂಲ, ಕರ್ಪೂರ, ನೈವೇದ್ಯ, ಅಕ್ಕಿ, ಗೋಧಿ, ಜೋಳ ಇತ್ಯಾದಿ) ಹಾಕಿ ಸಿದ್ಧಗೊಳಿಸುವರು. ಇದನ್ನು ಇವರ ಮನೆಯಿಂದ ಗುಡಿಗೆ ತೆಗೆದುಕೊಂಡು ಹೋಗಿ ಪೂಜೆ ಮಾಡಲಾಗುತ್ತದೆ.

ಗೌಡರ ಮನೆಯಲ್ಲಿ ಮದುವೆ ಬಂದಾಗ ಅವ್ವಮ್ಮ ಮಲಕವ್ವರ ಪೂಜೆ ಮಾಡಿ ಅವರಿಗೆ ಉಡಿ ತುಂಬಿಯಾದ ಮೇಲೆಯೇ ಹೆಣ್ಣಿನ ಅಥವಾ ಗಂಡಿನ ಮದುವೆ ಮಾಡುವರು. ಈ ವಂಶಸ್ಥರ ಜವಳವನ್ನು ಗೋಲಗೇರಿಯ ದೇವಸ್ಥಾನದಲ್ಲಿಯೇ ತೆಗೆಯುವರು. ಈ ಸಂಪ್ರದಾಯ ಇಂದಿಗೂ ಆಚರಣೆಯಲ್ಲಿದೆ. ಇವರ ಮನೆಯಲ್ಲಿ ಸಂಪತ್ತಿನ ಒಡತಿಯಾದ ಲಕ್ಷ್ಮೀಯೂ ಇರುತ್ತಾಳೆ, ಎನ್ನುವ ದೃಢವಾದ ನಂಬಿಕೆ ಇರುವುದು.

ಎಳ್ಳ ಅಮವಾಸ್ಯೆಯ ಭೋಗಿ ದಿನದಂದು ಈ ಮನೆತನದವರು, ತಮ್ಮ ಹೊಲಗಳಲ್ಲಿ ಬೆಳೆದಿರುವ ಸೀತನಿ (ಬೆಳಸಿ) ಗೋಧಿ ಉಮ್ಮಿಗೆ (ಬೆಳಸಿ) ಸುಲಗಾಯಿ (ಹಸಿ ಕಡಲೆ) ಪುಟ್ಟಿಕಾಯಿ, ಸೌತೆಕಾಯಿ, ಕಬ್ಬು ಸಾಕಷ್ಟು ತಿನಿಸುಗಳನ್ನು ಕಂಟ್ಲಿ ಎತ್ತಿನ ಮೇಲೆ ಹೇರಿಕೊಂಡು ಗೋಲಗೇರಿಗೆ ಹೋಗಿ ಪೂಜೆಯೊಂದಿಗೆ ಗೊಲ್ಲಾಳೇಶ್ವರನಿಗೆ ಅರ್ಪಿಸಿ ಬರುತ್ತಾರೆ. ಆಮೇಲೆಯೇ ಇವರು ತಿನ್ನಲು ಪ್ರಾರಂಭಿಸುತ್ತಾರೆ. ಮೊದಲು ದೇವರಿಗೆ ಅರ್ಪಿತವಾದರೆ, ಇನ್ನೂ ನಮ್ಮ ಹೊಲಗಳು ಹುಲುಸಾಗಿ ಬೆಳೆಯುತ್ತವೆ, ಎನ್ನುವ ಬಲವಾದ ನಂಬಿಕೆಯಿದೆ. ಹಾಗೆಯೇ ಹೊಲಗಳ ರಾಶಿಯನ್ನು ಮಾಡುವ ಸಂದರ್ಭದಲ್ಲಿ ಯಾವುದೇ ಧಾನ್ಯದ ರಾಶಿ ತುಂಬಿದರೆ ಮೊದಲನೇ ಚೀಲ ಗೊಲ್ಲಾಳನಿಗೆ ಅರ್ಪಿಸುತ್ತಾರೆ. ಈ ಧಾನ್ಯಗಳನ್ನು ದಾಸೋಹ ಸಂದರ್ಭದಲ್ಲಿ ಬಳಸುವರು. ಕಡಿಮೆ ಬಿದ್ದರೆ ತಮ್ಮ ಮನೆಯಲ್ಲಿಯ ಧಾನ್ಯಗಳನ್ನು ನೀಡುವರು. ಹೀಗೆ ನಾವು ದೇವರಿಗೆ ನೀಡಿದಷ್ಟು ನಮಗೆ ದೇವರು ಅದಕ್ಕಿಂತ ಹೆಚ್ಚಿಗೆ ನೀಡುತ್ತಲೇ, ಬಂದಿರುವನೆಂದು ಇವರು ಹೇಳುತ್ತಾರೆ.

ಉಕ್ಕಲಿಯಲ್ಲಿಯ ದೇವಸ್ಥಾನದಲ್ಲಿ ಪ್ರತಿ ಸೋಮವಾರ ದಿನದಂದು ಅಡ್ಡಪಲ್ಲಕ್ಕಿ ಉತ್ಸವ ನಡೆಯುವುದು. ಪಲ್ಲಕ್ಕಿಯಲ್ಲಿ ಗೊಲ್ಲಾಳೇಶ್ವರರ ಮೂರ್ತಿಯನ್ನು ಇರಿಸಿ ಉತ್ಸವವನ್ನು ಆಚರಿಸುವರು. ಹಾಗೂ ಪ್ರತಿ ಸೋಮವಾರ ಇವರ ಮನೆಯವರು ಉಕ್ಕಲಿಯಲ್ಲಿರುವ ದೇವರ ಗುಡಿಗೆ ಹೋಗಿ ರುದ್ರಾಭಿಷೇಕ ಮಾಡುವರು.

ಒಟ್ಟಾರೆ ಈ ಎಲ್ಲ ನಂಬಿಕೆ, ಆಚರಣೆ, ಸಂಪ್ರದಾಯಗಳಿಂದ ಗೊಲ್ಲಾಳೇಶ್ವರನು ನಮ್ಮನ್ನು ಸುಖ, ಸಮೃದ್ಧಿಯಲ್ಲಿರಿಸಿದ್ದಾನೆಂದು ಹೇಳುವರು. ಬಹುತೇಕ ಗೊಲ್ಲಾಳೇಶ್ವರನ ಭಕ್ತರು ಇಂದಿಗೂ ಸಿರಿವಂತಿಕೆಯಲ್ಲಿ ಸ್ಥಿತಿವಂತರಾಗಿದ್ದಾರೆ. ಕೃಷಿ ಆಧಾರಿತ ಕುಟುಂಬಿಗಳಾಗಿದ್ದು ಸಸ್ಯಾಹಾರಿಗಳಾಗಿದ್ದಾರೆ. ದೇವರಿಗೆ ನೈವೇದ್ಯವೂ ಸಸ್ಯಾಹಾರಿಯಾಗಿದೆ. ಯಾವುದೇ ಪ್ರಾಣಿ ಬಲಿಯನ್ನು ದೇವರ ಹೆಸರಿನಲ್ಲಿ ಮಾಡುವುದಿಲ್ಲ.

ಧರ್ಮಕ್ಕೆ ಎರಡು ಸ್ವರೂಪಗಳಿವೆ. ೧. ಸ್ಥಾವರ, ೨. ಜಂಗಮ. ಜಂಗಮವು ಚನಲಶೀಲ ಸ್ವರೂಪ. ಸ್ಥಾವರವು ಸಂಸ್ಥೀಕರಣಗೊಂಡ ಸ್ವರೂಪ. ಇದರಲ್ಲಿ ರಾಜ ಮತ್ತು ಗುರು ವ್ಯವಸ್ಥೆಯಾಗಿರಿಸಿಕೊಂಡು ಭಕ್ತರನ್ನು ಆಳುತ್ತಾರೆ. ಜಂಗಮ (ಚಲನಶೀಲ) ಸ್ವರೂಪವು ಮನುಷ್ಯತ್ವದ ತಳಹದಿಯ ಮೇಲೆ ಬೆಳೆಯುತ್ತಾ ಚಲನಶೀಲತೆಯನ್ನು ಪಡೆದ ಧರ್ಮ ಭಕ್ತರನ್ನು ಮುಖ್ಯವಾಗಿ ದೃಷ್ಟಿಯಲ್ಲಿರಿಸಿಕೊಂಡ ಸರ್ವೋದಯದ

ಮಾನವೀಯತೆಯ ಧರ್ಮ. ಇದರಿಂದ ಮಾನವ ಸಂಸ್ಕತಿ, ಆಚಾರ, ವಿಚಾರಗಳು ಬೆಳೆಯುತ್ತವೆ. ಸಾಮಾನ್ಯ ಜನರ ನಡುವೆ ಈ ಭಕ್ತಿ ಪರಂಪರೆಯು ಸಂಪ್ರದಾಯವಾಗಿ, ರೂಢಿಯಾಗಿ ವಿಶ್ವಾಸ ನಂಬಿಕೆ, ಆಚರಣಾ ಪ್ರಧಾನವಾಗಿ ಬೆಳೆಯುತ್ತ ಬಂದಿದೆ. ಈ ಆಚಾರ, ಸಂಸ್ಕಾರ, ಸಂಸ್ಕೃತಿ, ಚಿಂತನೆಗಳು ಹಬ್ಬ, ಉತ್ಸವ, ಜಾತ್ರೆ ಮುಂತಾದ ಕ್ರಿಯೆಗಳು ಒಟ್ಟಾಗಿ ಬದುಕುವ ಐಕ್ಯತೆಯ ಗುಣಗಳನ್ನು ಬೆಳೆಸಲು ಸಹಕಾರಿಯಾಗಿವೆ. ಶರಣ ತತ್ವದ ನೆಲೆಯಲ್ಲಿ ಗೊಲ್ಲಾಳೇಶ್ವರನ ಬದುಕು, ಜೀವನಧಾರೆ, ಚಿಂತನೆಗಳು, ವಿಶಾಲ ತತ್ವಸಿದ್ಧಾಂತಗಳನ್ನು ಒಳಗೊಂಡಿದೆ, ಇವನದೂ ಮಹಾ ಮಾನವತಾವಾದದ ಧರ್ಮ. ಈ ಧರ್ಮಕ್ಕೆ ಮನಸೋತವರು ಅನೇಕರು, ಅದರಲ್ಲಿ ಲಕ್ಷ್ಮೇಶ್ವರ ನಂದಯ್ಯ, ಡಂಬಳದ ಗೌರಮ್ಮ ಗಂಗನಳ್ಳಿ, ಮಲ್ಲಪ್ಪ ಗೋಲಗೇರಿ, ಮರಿಯಪ್ಪ ಸಾಹುಕಾರ, ಉಕ್ಕಲಿಯ ಅವ್ವಮ್ಮ -ಮಲಕವ್ವ ಅಕ್ಕತಂಗಿಯರು ಪ್ರಮುಖರಾಗಿದ್ದಾರೆ.

**ಕೊನೆಯ ಟಿಪ್ಪಣಿಗಳು**

೧. ಈಶ್ವರನ್ ಹಿರೇಮಲ್ಲೂರು ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು ಮತಗಳ ಒಂದು ತೌಲನಿಕ ೧ ಅಧ್ಯಯನ ಲಿಂಗಾಯತ, ಧರ್ಮ ಸಂಸ್ಕೃತಿ ಮತ್ತು ಸಮಾಜ ಭಾಗ ೩ ಪ್ರಿಯದರ್ಶಿನಿ ಪ್ರಕಾಶನ ವಿಜಯನಗರ, ಬೆಂಗಳೂರು ೧೯೯೭, -ಪುಟ ೧೬೩

೨. ಸಂ. ಡಾ. ಶಿರೂರ ಬಿ.ವ್ಹಿ. ಡಾ. ಎಸ್.ಸಿ. ನಂದಿಮಠರ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು, ೨೦೦೭, ಪುಟ- ೭೩೪

೩. ಪ್ರೊ. ಉಮಾಪತಿ ಎಸ್. ಶಿವಯೋಗಿ ಸಿದ್ಧರಾಮೇಶ್ವರರು, ಜೀವನ ಪರಿಚಯ ಸಾಹಿತ್ಯ ಸಿರಿ ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ, ಚಿತ್ರದುರ್ಗ ಜಿಲ್ಲೆ, ೨೦೦೬ ಪುಟ- ೧

೪. ಡಾ. ರಾಜಶೇಖರ ಪಿ.ಕೆ. ಜಾನಪದ ಸಂಭ್ರಮ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜ ಪೇಟೆ, ಬೆಂಗಳೂರು ೨೦೦೩, ಪುಟ- ೪೮

೫. ಡಾ. ಬಿರಾದಾರ ಮ.ಗು. ಜನಪದ ಸಾಹಿತ್ಯ ದರ್ಶನ ಭಾಗ ೨೩, ಜನಪದ ನಂಬಿಕೆಗಳು ನಿರ್ದೇಶಕರು ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೯ ಪುಟ -೧೬

೬. ಅದೇ, ಪುಟ- ೨೦

೭. ಕಟ್ಟಿ ವೆಂಕಟ ರಂಗೋ ವಿಜಾಪೂರ ಗೆಜೆಟೀಯರ್ ಭಾಗ ೧೪ ಗ್ರಾಮಗಳು ಗೆಜೆಟೀಯರ್, ಕನ್ನಡದಲ್ಲಿ ಭಾಷಾಂತರ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು. ಗವರ್ನಮೆಂಟ ಸೆಂಟ್ರಲ್‌ಬುಕ್ ಡೀಪೊ ೧೮೯೩ ಪುಟ- ೫೪೪

೮. ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, ಜಯನಗರ, ಬೆಂಗಳೂರು ೨೦೦೯, ಪುಟ- ೩೫

೯. ಅದೇ, ಪುಟ- ೪೨೮, ೪೨೯

೧೦. ಜಂಬಗಿ ಶರಣಪ್ಪ ಶಿವಪ್ಪ ಶ್ರೀ ಗೊಲ್ಲಾಳೇಶ್ವರ ಚರಿತ್ರೆ, ಪ್ರಕಾಶನ ಶ್ರೀ ಬಸವರಾಜ ಶಂಕರಪ್ಪ ಗಣಪೂರ ವ್ಹಿ. ಎಸ್. ಮಠ ಗೋಲಗೇರಿ ೨೦೦೨ ಪುಟ- ೪೧

೧೧. ಅದೇ, ಪುಟ-

೧೨. ಡಾ. ಎಣ್ಣೆಕಟ್ಟೆ ಚಿಕ್ಕಣ್ಣ ಗ್ರಾಮ ಸಂಸ್ಕೃತಿ ಮಾಲೆ - ೭ ತುಮಕೂರು ಜಿಲ್ಲಾ ಜಾತ್ರೆಗಳು, ಆಡಳಿತಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜ ಪೇಟ, ಬೆಂಗಳೂರು ೨೦೦೩, ಪುಟ-IV

೧೩. ಲೇ. ಮಾಳವಾಡ ಸ.ಸ. ಸಂ ಯು ಆರ್. ಅನಂತಮೂರ್ತಿ ವೀರಶೈವ ಧರ್ಮ - ದರ್ಶನ ಸಂ-ಪ್ರಕಾಶನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು ೨೦೦೩, ಪುಟ ೨೪೨

೧೪. ಡಾ. ದುರಗಿ ಶಕುಂತಲಾ ಸಿದ್ಧರಾಮ ಶರಣ ಗೊಲ್ಲಾಳ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಮೈಸೂರು, ಜಯನಗರ, ಬೆಂಗಳೂರು ೨೦೦೯, ಪುಟ- ೫೧, ೫೨

೧೫. ಅದೇ, ಪುಟ ೫೭

೧೬. ಲೇ.ನಾರಾಯಣ ಪಿ.ವ್ಹಿ. ಸಂ. ಎಸ್.ಕೆ. ಕೊಪ್ಪ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರ ೨೦೦೪, ಪುಟ- ೧೦೩

# ಅಧ್ಯಾಯ - ೭
# ಶರಣ ಪರಂಪರೆಯಲ್ಲಿ : ಗೊಲ್ಲಾಳೇಶ್ವರ ಸ್ಥಾನ

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಸ್ಥೂಲವಾಗಿ ನೋಡಿದಾಗ ಅನೇಕ ಶರಣರು, ಮಹಾನುಭಾವಿಗಳು, ಸಂತರು, ಯೋಗಿಗಳು, ಮುನಿಗಳು, ಆಗಿಹೋಗಿದ್ದನ್ನು ಈ ನಾಡಿನ ಚರಿತ್ರೆಯ ಪುಟಗಳಲ್ಲಿ ದಾಖಲಿಸಲಾಗಿದೆ. ಸಮಷ್ಟಿ ಕಲ್ಯಾಣದಲ್ಲಿಯೇ ಆತ್ಮೋನ್ನತಿಯನ್ನು ಕಂಡುಕೊಂಡ ಸುಸಂಸ್ಕೃತ ಮನಸ್ಸಿನಿಂದ ಬಾಳಿ-ಬದುಕಿದ ಇವರು ಕೆರೆ-ಬಾವಿ, ಕೊಳ್ಳ-ಕಾಲುವೆ, ಮುಂತಾದವುಗಳನ್ನು ನಿರ್ಮಿಸುವಲ್ಲಿ ತಮ್ಮನ್ನು ತಾವು ಸಮಷ್ಟಿಯೊಂದಿಗೆ ತಾದ್ಯಾತ್ಮಭಾವದೊಂದಿಗೆ ಸಮರ್ಪಿಸಿಕೊಂಡಿದ್ದಾರೆ. ಹಾಗೆಯೇ ತಲ್ಲನತೆಯ ಭಾವದಿಂದ ಬೆರತುಕೊಂಡಿದ್ದಾರೆ. ರಾಜನನ್ನಾಶ್ರಯಿಸಿ ಧರ್ಮ ಉಸಿರಾಡುತ್ತಿದ್ದರೆ, ಧರ್ಮವನ್ನು ಅವಲಂಬಿಸಿ ಜನ ಬದುಕುತ್ತಿದ್ದರು. ಧಾರ್ಮಿಕ ಮತಾಚರಣೆಯ ವಿಷಯದಲ್ಲಿ ಕರ್ನಾಟಕದ ಜನತೆ ಹೃದಯ ವೈಶಾಲ್ಯತೆಯನ್ನು ತೋರಿಸಿಕೊಟ್ಟವರು. ಹಲವು ಬಗೆಯ ಜಾತಿ, ಮತ, ಧರ್ಮಗಳು ಇದ್ದಾಗ್ಯೂ ವೈವಿಧ್ಯತೆಯಲ್ಲಿ ಏಕತೆಯನ್ನು ಕಂಡುಕೊಳ್ಳುವುದರ ಮೂಲಕ ಹಲವು ಬಗೆಯ ಚಿಂತನೆಗಳನ್ನು ಜಗತ್ತಿಗೆ ನೀಡಿದವರಾಗಿದ್ದಾರೆ. ಬಸವಾದಿಯಾಗಿ ಶರಣರು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಚಿರಸ್ಮರಣೀಯರಾಗಿದ್ದಾರೆ. ಇವರುಗಳ ಚಿಂತನೆಯ

ಘಲದಿಂದ ಮೂಡಿಬಂದ ವಚನಗಳು ಸಾರ್ವಕಾಲಿಕ ಮೌಲ್ಯಗಳನ್ನು ಪರಿಣಾಮಕಾರಿಯಾಗಿ ಚಿತ್ತರಿಸುತ್ತಿವೆ. ಇವರು ಪ್ರಚುರಪಡಿಸಿದ ಮಾನವೀಯತೆ, ಅರಿವು, ಜನಸಾಮಾನ್ಯರನ್ನು ಹಾಗೂ ವಿದ್ವಾಂಸರನ್ನು ಇಂದಿಗೂ ಆಕರ್ಷಿಸುತ್ತಲಿವೆ. "ಶರಣರ ಬದುಕು -ಬರಹಗಳೆರಡೂ ಒಂದು ನಾಣ್ಯದ ಎರಡು ಮುಖಗಳಂತೆ. ಉದಯಿಸಿಬಂದಂಥವುಗಳು. ಈ ಕಾರಣದಿಂದ ಶರಣ ಸಾಹಿತ್ಯಕ್ಕೆ ನೈತಿಕ ಮನ್ನಣೆ ಮತ್ತು ಸಾರ್ವತ್ರಿಕ ಆದರಣೆಯ ಮೌಲ್ಯವಿದೆ. 'ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮನೆಂತು ಒಲಿವನು"[೧] ಹೀಗೆ ಆತ್ಮಸಾಕ್ಷಿಗೆ ಮಹತ್ವವನ್ನು ನೀಡಿ ಶರಣ ಪರಂಪರೆಯಲ್ಲಿ ಬಾಳಿ -ಬದುಕಿದ ಅನೇಕ ಶರಣರು ಮನುಕುಲದಲ್ಲಿ ವಿಶಿಷ್ಟವಾಗಿದ್ದಾರೆ. ಈ ಸಮಾಜದಲ್ಲಿ ಗೊಲ್ಲಾಳನು ಆತ್ಮಸಾಕ್ಷಿಗೆ ಕಟಿಬದ್ಧನಾಗಿ 'ಕುರಿಹಿಕ್ಕೆಯೇ' ದೈವವೆಂದು ನಂಬಿ ಪೂಜಿಸಿದವನು. ಭಕ್ತ ಸಮೂಹದಲ್ಲಿ ಭಕ್ತಿಯ ಸಂಚಲನ ಮಾಡಿಸಿದವನಾಗಿದ್ದಾನೆ.

ಗೊಲ್ಲಾಳೇಶ್ವರನು ಬಸವಪೂರ್ವ ಕಾಲದಲ್ಲಿ ಬದುಕಿ-ಬಾಳಿದವನು. ಈತನು ರಚಿಸಿದ ವಚನಗಳಲ್ಲಿ ಶರಣರ ಪ್ರಸ್ತಾಪವಿದೆ. (ಸಂ.ವ.ಸಂ.೯ ಜ.ಆ.ಪು.-೨೯)

ಕೊರಡು ಕೊನರುವಲ್ಲಿ
ಬರಡು ಕರೆವಲ್ಲಿ
ಕಲ್ಲಿನ ಶಿಲೆಯೊಡೆದು ರೂಪುದೋರುವಲ್ಲಿ
ಬಳ್ಳವಲ್ಲಾಡದೆ ಲಿಂಗವಾಹಲ್ಲಿ
ಇಂತವರಲ್ಲಿಯ ಗುಣವೋ ?
ಇಂತವೆಲ್ಲವನರಿವ ಕಲ್ಲೆದೆಯವನ ಗುಣವೋ ?
ಇಂತಿವ ಬಲ್ಲಡೆ
ವಿಶ್ವಾಸದಲ್ಲಿಯೇ
ವೀರ ಬೀರೇಶ್ವರ ಲಿಂಗವು ತಾನಾಗಿಪ್ಪ.

ಗೊಲ್ಲಾಳನು ಬಳ್ಳವು ಲಿಂಗವಾದ ಪವಾಡವನ್ನು ಮೆರೆದವನು. 'ಬಳ್ಳೇಶ ಮಲ್ಲಯ್ಯ ಎಂಬುದಕ್ಕೆ ಅದರ ಪ್ರಸ್ತಾಪ ಗೊಲ್ಲಾಳನು ತನ್ನ ವಚನದಲ್ಲಿ ಪ್ರಶ್ನಿಸಿದ್ದು ಗಮನಾರ್ಹವಾಗಿದೆ. ಈತನೇ ತನ್ನ ಒಂದು ವಚನದಲ್ಲಿ ಹಿಕ್ಕೆ ಲಿಂಗವಾದುದನ್ನು ಪ್ರಸ್ತಾಪಿಸಿದ್ದಾನೆ. ಅಂದರೆ ಶಿವನು ತನ್ನ ಭಕ್ತಿಗೆ ಮೆಚ್ಚಿ ಹಿಕ್ಕೆಯಲ್ಲಿ ತನ್ನ ನಿಜರೂಪವನ್ನು ತೋರಿದ್ದು ಆಶ್ಚರ್ಯವೇನಲ್ಲ ಎಂದಿರುವನು. "ಮತ್ತು ಈ ವಚನದಲ್ಲಿ ಕೋಳೂರು ಕೊಡಗೂಸಿನ ಮತ್ತು ಬಳ್ಳೇಶ ಮಲ್ಲಯ್ಯನ ಪ್ರಸ್ತಾಪವನ್ನೂ ವೀರಗೊಲ್ಲಾಳನು ಮಾಡಿರುವುದಂತೂ ಈತನು ಅವರೆಲ್ಲರಿಗೂ ಪ್ರಾಚೀನನೆಂಬುದು ಸ್ವಯಂ ಘೋಷಿತವಾಗುತ್ತದೆ."[೨]

ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿಯವರು, ಪಾಲ್ಕುರುಕೆ ಸೋಮಾರಾಧ್ಯನು 'ಗಣಸಹಸ್ರ'ದಲ್ಲಿ ಸೂಚಿಸಿರುವ ಶಿವಶರಣರನ್ನು '೭೭೦ ಅಮರ ಗಣಾಧೀಶ್ವರರ ಚರಿತ್ರೆಗಳು' ಎಂದು ಪ್ರಕಟಿಸಿದ್ದಾರೆ. ಇದರಲ್ಲಿ ಗೊಲ್ಲಾಳೇಶ್ವರನ ಚರಿತ್ರೆಯನ್ನು ತಿಳಿಸಿದ್ದಾರೆ. ಈಗಾಗಲೇ ಅವನ ಕುರಿತಾದ ವಿಷಯದಂತೆ, ಕುರಿಹಿಕ್ಕೆಯನ್ನೇ ಲಿಂಗವೆಂದು ಪೂಜಿಸಿ ಗೊಲ್ಲಾಳನು ಶಿವಾನುಭವದಂತೆ ಬಾಳಿ -ಬದುಕಿ ವಚನಕಾರನಾದನು. "ಇವನ ಮುದ್ರಿಕೆಯೂ ವೀರಬೀರೇಶ್ವರ ಎಂದಿದೆ."[೩] ಈ ಚಾರಿತ್ರಿಕ ವಿಷಯ ಇಂದಿಗೂ ಜನಮನದಲ್ಲಿ ಅಚ್ಚಳಿಯದೆ ಇರುವುದು. ಈತ ಬಸವಪೂರ್ವದವನೆಂದೂ ಹಾಗೂ ಶರಣರ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದನು ಎಂಬುದಕ್ಕೆ ಬಸವಣ್ಣನು, ಚನ್ನಬಸವಣ್ಣನಿಗೆ ಬಾಲ್ಯದಲ್ಲಿ ಅನೇಕ ಶರಣರ ಕಥೆಗಳನ್ನು ಹೇಳುವಂತಹ ಸಂದರ್ಭದಲ್ಲಿ ಕುರಿಹಿಕ್ಕೆಯನ್ನು ಲಿಂಗವನ್ನಾಗಿ ಪೂಜಿಸಿ ಮಹಾಭಕ್ತನೆನಿಸಿದವನು ಎನ್ನುವ ಕಥೆಯನ್ನು ಹೇಳುತ್ತಾನೆ. (ಗುಬ್ಬಿಯ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಪುರಾಣ ತಾತ್ಪರ್ಯ ಚಂದ್ರಿಕೆ ಎಂಟನೆಯ ಕಾಂಡ, ಮೊದಲ ಸಂಧಿ ಪುಟ ೩) "ಬದನೆಯ ಕಾಯ್ಗಳ ಲಿಂಗಗಳಂ ಮಾಡಿ ಚೋರರನ್ನು ಭಕ್ತನೆನಿಸಿದಲ್ಲಿ ಬಳ್ಳ ಹಿಕ್ಕೆಗಳನ್ನು ಲಿಂಗಗಳಂ ಮಾಡಿದ ಬಳ್ಳೇಶ ಮಲ್ಲೆಯ ಕಾಟಕೂಟರ ಕಥೆಯನ್ನು ಬಿಜ್ಜಳನ ಸತಿಯರನ್ನು ಜಂಗಮಾಕಾರವಂ ಮಾಡಿದುದನ್ನು ಜೋಳದ ರಾಶಿಯಂ ಮುತ್ತಿನ ರಾಶಿಯಂ ಮಾಡಲು ಹೊರಟ ಬಮ್ಮಯ್ಯನ ಕಥೆಯನ್ನು ಹೇಳಿದರು."[೪] ಚನ್ನಬಸವಣ್ಣನವರು ಈತನನ್ನು ಸ್ಮರಿಸಿದ್ದಾರೆ. ಚನ್ನಬಸವಣ್ಣನು ಗೊಲ್ಲಾಳನ ಕಥೆಯನ್ನು ಸಿದ್ಧರಾಮೇಶ್ವರನಿಗೆ ಹೇಳುವ ಸಂದರ್ಭವೊಂದು ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿ ಬಂದಿದೆ. (ಎಂ. ಚಂದ್ರಶೇಖರ (ಸಂ)ವಿರೂಪಾಕ್ಷ ಪಂಡಿತ ಕೃತ ಚನ್ನಬಸವ ಪುರಾಣ ಐವತ್ತೇಳನೆಯ ಸಂಧಿ ಪದ್ಯ - ೩೯, ಪುಟ ೩೨೯)

"ಕೋಳೂರ ಕೊಡಗೂಸು ಹಾಲನೀಶಂಗೆರೆದಳೊಲವಿನಿಂ ಬಲುಹೇನನು
ಗೂಳಿಯೆಂದಿರಿದಾತನೊಡಲನಿಬ್ಬಗಿ ಮಾಡಿ
ಸೀಳಿದಂ ರಾಮನಾಥಂ ಗೊಲ್ಲಾಳಂ ತಂದೆ
ಕಾಲಿಂದೆ ಲಿಂಗಮಂ ನೂಂಕೆ ಸಿರಿವರಿದನೆಲೆ ರಾಮೇಶ ಕೇಳೆಂದನು."[೫]

ಈ ಮೇಲಿನ ಮಾತುಗಳಿಂದ ಗೊಲ್ಲಾಳನು ಬಸವಪೂರ್ವ ಕಾಲದಲ್ಲಿದ್ದನು. ಶರಣರ ಒಡನಾಡಿಯಾಗಿದ್ದನು ಎಂದು ತಿಳಿದುಬರುವುದು. ಚನ್ನಬಸವಣ್ಣ ಗೊಲ್ಲಾಳನನ್ನು ಸ್ಮರಿಸುತ್ತಿರುವುದರಿಂದ ಅವನಿಗಿಂತಲೂ ಹಿರಿಯನಿರಬೇಕು. ಹಾಗೂ ಇಳಿಹಾಳ ಬೊಮ್ಮಯ್ಯನ ಜೊತೆ ಜೊತೆಯಲ್ಲಿ ಗೊಲ್ಲಾಳನ ಹೆಸರು ಅನೇಕ ವೀರಶೈವ ಪುರಾಣಗಳಲ್ಲಿ ಬರುವದು. ಹಾಗೂ ಇಳಿಹಾಳ ಬೊಮ್ಮಯ್ಯನ ಜಾತ್ರೆಯ ವಿಧಿ ವಿಧಾನಗಳು ಗೋಲಗೇರಿ ಗೊಲ್ಲಾಳನ ಜಾತ್ರೆಯ ವಿಧಿವಿಧಾನಗಳು ಒಂದೇ ರೀತಿಯಾಗಿರುವುದು ಕಂಡುಬರುತ್ತದೆ. ಇವೆಲ್ಲವುಗಳಿಂದ ಗೊಲ್ಲಾಳ ಮತ್ತು ಇಳಿಹಾಳ ಬೊಮ್ಮಯ್ಯ ಸಮಕಾಲೀನರೆಂದು

ಹೇಳಬಹುದಾಗಿದೆ."[1] ಹೀಗೆ ಬಸವಪೂರ್ವ ಕಾಲದಲ್ಲಿದ್ದ ಕೊಂಡಗೂಳಿ ಕೇಶಿರಾಜ, ಕೆಂಭಾವಿ ಭೋಗಣ್ಣ, ರಾಗದ ಸಂಕಣ್ಣ, ಇಳಿಹಾಳ ಬೊಮ್ಮಯ್ಯರ ಸಮಕಾಲೀನ ವ್ಯಕ್ತಿಯಾಗಿರಬೇಕು. ಶರಣ ಚಳುವಳಿಗೆ ಗಟ್ಟಿಯಾದ ತಳಪಾಯ ಹಾಕಿರುವ ಇನ್ನೂ ಅನೇಕ ಶರಣರು ಅಜ್ಞಾತವಾಗಿರುವರು. ಆದ್ದರಿಂದ ಬಸವಪೂರ್ವಕಾಲದ ಅಧ್ಯಯನದ ಅವಶ್ಯಕತೆಯಿದೆ. "ಕರ್ನಾಟಕದ ಇತಿಹಾಸದಲ್ಲಿ ೧೦-೧೧ನೆಯ ಶತಮಾನಗಳಲ್ಲಿ ಕಂಡುಬರುವಷ್ಟು ಧಾರ್ಮಿಕ ಮತಾಚರಣೆಯ ವ್ಯತ್ಯಾಸಗಳನ್ನು ಮುಂದೆಂದೂ ಕಾಣುವುದಿಲ್ಲ. ಜೈನ-ವೈಷ್ಣವ-ಶೈವ ಹಾಗೂ ಇತರ ಮತಾಚರಣೆಗಳು ಪರಸ್ಪರ ಪೈಪೋಟಿ ನಡೆಸಿದ ಈ ಕಾಲಘಟ್ಟದಲ್ಲಿ ಪ್ರಮುಖವಾಗಿ ಹೆಸರಿಸಬೇಕಾದವರೆಂದರೆ ಏಕಾಂತರಾಮಯ್ಯ, ಆದಯ್ಯ, ಸಿದ್ಧರಾಮ, ಗೋಲಗೇರಿಯ ಗೊಲ್ಲಾಳ ಮುಂತಾದವರು"[2] ಈ ಪೈಪೋಟಿಯಲ್ಲಿ ಬೇರೆ ಮತದವರಿಂದ ವಿರೋಧವನ್ನು ಎದುರಿಸಿದವರಲ್ಲಿ ಏಕಾಂತರಾಮಯ್ಯ, ಆದಯ್ಯನಂಥವರು, ಆದರೆ ಗೊಲ್ಲಾಳನಿಗೆ ಸ್ವತಃ ತಂದೆಯೇ ವಿರೋಧ ವ್ಯಕ್ತಪಡಿಸಿದ. ಇದಕ್ಕೆ ಧರ್ಮವೇ ಪ್ರಮುಖ ಕಾರಣವಾಗಿರಬಹುದು. ಹೀಗಾಗಿ ಗೊಲ್ಲಾಳನನ್ನು ಉಳಿದ ಜನಾಂಗದವರು ಅಪ್ಪಿಕೊಳ್ಳುವಂತಾಯಿತು.

ಶಿವಶರಣರೆಲ್ಲರೂ ಒಟ್ಟುಗೂಡಿ ನಡೆಸಿದ ವೈಚಾರಿಕ ಚಳುವಳಿ, ಕರ್ನಾಟಕದ ಅಪೂರ್ವಘಟನೆ, ಜಡವಾಗಿದ್ದ ಧರ್ಮ, ಸಮಾಜ, ಸಂಸ್ಕೃತಿಯನ್ನು ಚಲನಶೀಲಗೊಳಿಸಲು ಇವರುಗಳು ಮಾಡಿದ ಪ್ರಯತ್ನ ಅನನ್ಯವಾದುದು. ಈ ನಡೆಯಲ್ಲಿ ನಾಡಿನ ಮೂಲೆ -ಮೂಲೆಯಿಂದ ಮತ್ತು ಆಂಧ್ರ, ಮಹಾರಾಷ್ಟ್ರ, ತಮಿಳುನಾಡಿನಿಂದ, ಅಸಂಖ್ಯಾತ ಶಿವಶರಣರು ಬಂದು ಪಾಲ್ಗೊಂಡರು. ಇವರೆಲ್ಲರ ಆಶಯ ಮುಕ್ತ ಸಮಾಜವನ್ನು ನಿರ್ಮಾಣಮಾಡುವುದಾಗಿತ್ತು. ಈ ಉದ್ದೇಶಕ್ಕಾಗಿ ಕೈಜೋಡಿಸಿದ ಶಿವಶರಣರಲ್ಲಿ ಗೊಲ್ಲಾಳೇಶ್ವರನೂ ಒಬ್ಬ. ಶರಣರೆಲ್ಲ ಕಾಯಕ ವರ್ಣನೆಯ ಮುಖೇನ ಭಗವಂತನ ಪಾರಮ್ಯವನ್ನು ಧ್ವನಿಸುತ್ತಾ ಕಾಯಕದಲ್ಲಿ ಕೈಲಾಸ ಕಂಡ ಸ್ಥಿತಿಯ ರೀತಿಯೂ ಕಾಣಿಸುತ್ತದೆ. 'ಕಾಯಕವೇ ಕೈಲಾಸ' ಎಂದು ನುಡಿದು ನುಡಿಯೊಳಗಾಗಿ ನಡೆದರು, ನಡೆಯೊಳಗಾಗಿ ನುಡಿದರು. ಈ ಜೀವಿಗಳು ಸಂಘಟಿತರಾಗಿ ಸಮಾಜದಲ್ಲಿರುವ ಹೊಲಸನ್ನು ತೊಳೆಯಲು ಕಂಕಣಬದ್ಧರಾಗಿ ಹೋರಾಡಿದರು. ಸಾಮಾನ್ಯ ಆಡು ನುಡಿಯ ಮಾತಿನಲ್ಲಿಯೂ ಅನೇಕರು ಮಾತಾಡಿದರು. ಬಸವಣ್ಣನವರ ನೇತೃತ್ವದಲ್ಲಿ ಅವರ ಸಂಘಟನೆ ಹೆಮ್ಮರವಾಗಿ ಬೆಳೆದು ಹೋರಾಟದ ದಿಕ್ಕನ್ನು ಕಂಡುಕೊಂಡಿತು. ಇದಕ್ಕೆ ಬಸವಾದಿಯಾಗಿ ಶರಣರು ರಚಿಸಿದ ವಚನಗಳೇ ಪ್ರಬಲ ಸಾಕ್ಷಿಯಾಗಿವೆ. "ವಚನಗಳು ಬರೆಯಬೇಕೆಂಬ ಸಾಹಿತ್ಯಿಕ ಉಮೇದಿನಲ್ಲಿ ಬರೆದವುಗಳಲ್ಲ. ಬರೆಯಲೇ ಬೇಕಾದ ಚಳುವಳಿಯ ಅನಿವಾರ್ಯತೆಯಲ್ಲಿ ರೂಪು ತಳೆದಂಥವು. ಹೀಗಾಗಿ ಅವು ವಿಶೇಷವಾಗಿ ಮತ್ತೊಬ್ಬರ ಕೂಡ ಸಂಭಾಷಿಸಿದ ಶೈಲಿಯಲ್ಲಿ ಇರುತ್ತವೆ. ಆ ಸಂಭಾಷಣೆಯಲ್ಲಿ ಬದುಕಿಗೆ ಸಂಬಂಧಿಸಿದ ವಿಚಾರ ಚರ್ಚಿತವಾಗಿ

ವಚನಕಾರನ ಭಾವನೆ ಆಲೋಚನೆಗಳ ಮೂಲದ ಅನುಭಾವ ದ್ರವ್ಯ ಆಕೃತಿಗೊಂಡಿರುತ್ತದೆ. ಇದು ಎಲ್ಲ ಶ್ರಮ ಮೂಲದ ವಚನಕಾರರ ವಿಶೇಷತೆ ಹಾಗೂ ಅಸ್ಮಿತೆ."[೮]

ಗೊಲ್ಲಾಳನು ಕುರುಬ ಕುಲದವನಾಗಿದ್ದು, ಕುರಿಗಳನ್ನು ಕಾಯುವ (ಸಾಕಿ) ಕಾಯಕದಲ್ಲಿದ್ದುಕೊಂಡು ಹನ್ನೆರಡನೇ ಶತಮಾನದ ಸಾಮಾಜಿಕ ಚಳುವಳಿಗೆ ಪೂರಕವಾಗಿ ದುಡಿದವನು. ಕುರಿಕಾಯುವ ಗೊಲ್ಲಾಳನಿಗೆ ಅಕ್ಷರ ಜ್ಞಾನವಿತ್ತೇ? ಇಂಥ ಪ್ರಶ್ನೆ ಗೊಲ್ಲಾಳನೊಬ್ಬನಿಗೆ ಸಂಬಂಧಿಸಿದಂತೆ ಹುಟ್ಟುವ ಪ್ರಶ್ನೆ ಅಲ್ಲ. ಇದು ಎಲ್ಲ ಶ್ರಮಜೀವಿ ವಚನಕಾರರನ್ನು ಸುತ್ತುವರಿದಂತೆ ಬೆಳೆಯುವ ಪ್ರಶ್ನೆ. ಉತ್ತರ ಏನಾದರೂ ಇರಬಹುದು, ಇವರು ಬರೆದದ್ದಕ್ಕಿಂತ ವೈಚಾರಿಕ ಚಿಂತನೆಯಲ್ಲಿ ಮಾನವ ಕುಲಕೋಟಿಯನ್ನು ಒಂದೇ ಧಾರ್ಮಿಕ ನೆಲೆಗೆ ತರಬಯಸಿದ್ದೇ ಗಮನಾರ್ಹವಾದುದು. ಇವರು ಮಾತಾಡಿದ ಮಾತುಗಳು ಇಂಥವನೇ ರಚಿಸಿದನು ಎಂಬುದಕ್ಕೆ ಅವನ ಇಷ್ಟದೈವದ ಪ್ರಮಾಣು ಅಂಕಿತ ರೂಪಿಯಾಗಿ ಮೂಡುತ್ತಿತ್ತು. ಈ ರೀತಿಯಾಗಿ ಬರೆಯಲ್ಪಟ್ಟ ವಚನಗಳು ಜನರ ಬಾಯಲ್ಲಿ, ಅವರವರ ಆಚಾರ-ವಿಚಾರಗಳ ಮೂಲಕ ಹರಡುತ್ತಿದ್ದರೂ ಇಂದಿಗೂ ವಚನಗಳು ಮಾತಿನ ಸಂದರ್ಭಕ್ಕೆ ತಕ್ಕಂತೆ ಬಳಕೆಯಾಗುತ್ತಿವೆ. ಕಾಯಕಜೀವಿಗಳ ಬಗ್ಗೆ ಸಿಕ್ಕಿರುವ ವಚನಗಳು ಕಡಿಮೆ ಪ್ರಮಾಣದಲ್ಲಿದ್ದರೂ ಅವರು ಬಾಳಿ -ಬದುಕಿದ ಜೀವನ ಸಾವಿರ ವರ್ಷಗಳವರೆಗೆ ಜನರ ನೆನಪಿನಂಗಳದಲ್ಲಿ ಬತ್ತದ ನದಿಯಾಗಿ ಪ್ರವಹಿಸುತ್ತಲೇ ಇದೆ. "ಸೂಳೆ ಸಂಕವ್ವೆಯ ವಚನ ನಮಗೆ ಸಿಕ್ಕಿರುವದು ಒಂದೇ ಒಂದು. ವರದ ಸಂಕಣ್ಣಗಳ ವಚನ ಕೂಡ ಒಂದೇ ಒಂದು ಅದೇ ರೀತಿ ವೀರಗೊಲ್ಲಾಳನ ವಚನಗಳ ಸಂಖ್ಯೆ ಕೇವಲ ಹತ್ತು"[೯] ಗೊಲ್ಲಾಳನನ್ನು ಕುರಿತಂತೆ ಅನೇಕ ಕಾವ್ಯಗಳಲ್ಲಿ ಈತನ ಪ್ರಸ್ತಾಪ ಬಂದಿದೆ. ವೀರಶೈವ ಕವಿಗಳಾದ ಪಾಲ್ಕುರಿಕೆ ಸೋಮನಾಥನು ಬರೆದ ಗಣಸಹಸ್ರ, ಹರಿಹರನ ಲಿಂಗಾರ್ಚನೆ ರಗಳೆ, ರಾಘುವಾಂಕನ ಸಿದ್ಧರಾಮ ಚಾರಿತ್ರ, ಭೀಮಕವಿಯ ಬಸವಪುರಾಣ, ಲಕ್ಕಣ ದಂಡೇಶನ ಶಿವತತ್ವ ಚಿಂತಾಮಣಿ ಮುಂತಾದ ಕಾವ್ಯಗಳಲ್ಲಿ ಈತನ ಕುರಿತು ಪ್ರಾಸಂಗಿಕವಾಗಿ ಪ್ರಸ್ತಾಪಿಸಲಾಗಿದೆ. ಅದರಲ್ಲೂ ಗೊಲ್ಲಾಳನು ಬದುಕಿದ ಪ್ರದೇಶದಲ್ಲಿ ಇಂದಿಗೂ ಈತನ ಕುರಿತಾದ ಮೌಖಿಕ ಸಾಹಿತ್ಯ ಹೇರಳವಾಗಿದೆ. ಹೀಗಾಗಿ "ಗೊಲ್ಲಾಳ ಶರಣ ಸಮುದಾಯದಲ್ಲಿ ಒಬ್ಬ ಪ್ರಭಾವೀ ವ್ಯಕ್ತಿಯಾಗಿದ್ದನೆಂಬುದು ನಿರ್ವಿವಾದ ಸಂಗತಿ. ಅವನ ಬದುಕಿನ ವಿವರಗಳನ್ನು ನೋಡಲಾಗಿ ಅವನೊಬ್ಬ ಹೋರಾಟಗಾರನಾಗಿದ್ದನೆಂಬುದು ವಿಶೇಷವಾಗಿ ಗಮನಿಸಬೇಕಾದ ವಿಚಾರ. ವಚನ ಚಳುವಳಿಯೇ ಸಾಮಾಜಿಕ ನ್ಯಾಯಕ್ಕಾಗಿ ಸಂಘಟಿತವಾದ ಹೋರಾಟದ ಚಳುವಳಿ. ಆ ಚಳುವಳಿಯ ಉಪ ಉತ್ಪನ್ನಗಳಾಗಿರುವ ವಚನಗಳು ಆ ಹೋರಾಟದ ಆಶಯಗಳು ನೇರವಾಗಿ ಕಾವ್ಯಾತ್ಮಕವಾಗಿ ಪ್ರಕಟವಾಗಿರುವುದು ವಿದಿತ ಸತ್ಯ."[೧೦]

ಗೊಲ್ಲಾಳನು ಅನೇಕ ಜನಾಂಗಗಳ ಮನೆಯ ದೇವರಾಗಿ ಪೂಜಿಸಿಕೊಳ್ಳುತ್ತಿದ್ದಾನೆ. ಕುರಿಪಿಚಿಕೆಯಲ್ಲೇ ಶಿವನನ್ನು ಸಾಕ್ಷಾತ್ಕಾರಮಾಡಿಕೊಂಡಿರುವ ಆತನ ಕಥೆ ಜನಮನದಲ್ಲಿದೆ. ಈತನ ಕುರಿತಾದ ಪವಾಡಗಳು

ಇಂದಿಗೂ ಹಬ್ಬುತ್ತಲೇ ಇರುವವು. ಇವುಗಳೆಲ್ಲದರ ಹಿಂದೆ ಕೆಲವು ಚಾರಿತ್ರಿಕ ವಸ್ತು ಸಂಗತಿಗಳನ್ನು ಪುರಾಣ ಕೃತಿಗಳು ಹಿಡಿದಿಟ್ಟುಕೊಂಡಿವೆ. ಗೊಲ್ಲಾಳನ ನಂಬಿಕೆ, ಭಕ್ತಿ, ಅಚಲವಾದದ್ದು. ಪೂಜಾರಿ ದಾರಿ ತಪ್ಪಿಸಿರಬಹುದು, ನಂಬಿದ ದೇವರು ದಾರಿ ತಪ್ಪಿಸಲಿಲ್ಲ. ನಂದಯ್ಯ ಕುರಿಪಿಚಿಕೆ ನೀಡಿರಬಹುದು, ಅಥವಾ ಶ್ರೀಶೈಲದಿಂದ ತಂದ ಲಿಂಗವನ್ನಾದರೂ ನೀಡಿರಬಹುದು, ಇದು ಮುಖ್ಯವಲ್ಲ. ಶಿವನನ್ನು ನಂಬಿದ ಆತನು ಸಾಕ್ಷಾತ್ಕಾರದ ಸಾಫಲ್ಯದಲ್ಲಿ ನಿಜವಾದ ಸಿದ್ಧಪುರುಷನಾಗಿ ಹೊರಹೊಮ್ಮಿದುದು ದೊಡ್ಡದು.

ಮಾನವನ ನೆಮ್ಮದಿಯ ಬದುಕಿಗೆ ಅವನು ಅನುಸರಿಸಬೇಕಾದ ಮಾರ್ಗಗಳಾವುವು, ಎಂಬುದನ್ನು ಕಂಡುಕೊಂಡ ಶರಣರೆಲ್ಲರೂ ಉಚ್ಚ ವರ್ಣಿಯರೇ ಆಗಿರಲಿಲ್ಲ. ಅವರಲ್ಲಿ ಹಲವಾರು ಜನ ಕೆಳವರ್ಗದಿಂದ ಬಂದವರಿದ್ದರು. ಅವರು ತಮ್ಮ ಹೆಸರುಗಳ ಹಿಂದೆ ತಮ್ಮ ತಮ್ಮ ಕಾಯಕವನ್ನೇ ವಿಶೇಷಣದಂತೆ ಸೇರಿಸಿಕೊಂಡಿದ್ದಾರೆ. ಕಾಯಕ ಮೂಲದಿಂದ ಬಂದ ಶರಣರ ವಚನ "ರಚನೆಗಳಲ್ಲಿ ಅವರ ವೃತ್ತಿಧರ್ಮ ಹಾಗೂ ವೃತ್ತಿ ಧರ್ಮದ ಪರಿಭಾಷೆ, ಅವರ ಆಧ್ಯಾತ್ಮಿಕ ಚಿಂತನೆಗೆ ಪರಿಕರ ವಸ್ತುವಾಗಿ ಬಳಕೆಯಾಗಿದೆ. ಆದರೆ ಕಾಯಕಜೀವಿಗಳಲ್ಲದವರ ವಚನದ ಭಾಷೆ ಪರಿಭಾಷೆ ಸಾಮಾನ್ಯತಾ ಪ್ರಮಾಣುವಿನಲ್ಲಿ ಪರಿಚಲನೆಗೊಂಡಿರುವುದಿದೆ. ಅದರಲ್ಲೂ ಬಸವಣ್ಣ, ಅಕ್ಕ, ಅಲ್ಲಮ, ನೀಲಾಂಬಿಕೆ, ಗಂಗಾಂಬಿಕೆ ಮುಂತಾದ ಮೇಲುಸ್ತರದ ವಚನಕಾರರಲ್ಲಿ ವೀರಶೈವ ಧರ್ಮದ ಗುರುಲಿಂಗಜಂಗಮ ಪಾದೋದಕ ಪ್ರಸಾದ ಇತ್ಯಾದಿ, ಯಾವುದೇ ಸಿದ್ಧಾಂತಗಳ ಜಿಜ್ಞಾಸೆಯೆಂಬುದು ಆಗದೆ ಬದುಕಿನ ನಡಾವಳಿಯ ವ್ಯಾಪ್ತಿಯಲ್ಲಿ ಸಾಮಾನ್ಯೀಕರಣಗೊಂಡ ಚಿಂತನೆಯಾಗಿದೆ. ಈ ಕಾರಣದಿಂದಲೇ ಅವರ ವಚನಗಳಲ್ಲಿ ಧರ್ಮ, ಕಾಯಕಧರ್ಮ, ಎರಡಾಗದೆ ಒಂದೇ ಆಗಿ ವಿಶ್ವಮಾನ್ಯವಾಗುವ ನಿಲುವಳಿಯಲ್ಲಿ ಸಾರ್ವಕಾಲಿಕವಾಗಿದೆ. ಆದರೆ ಚನ್ನಬಸವಣ್ಣ, ಸಿದ್ಧರಾಮಯ್ಯ ಮೊದಲಾದವರ ವಿಧಾನಗಳಿಗೆ ಈ ವ್ಯಾಪ್ತಿಯ ಬಹುಮುಖತೆ ಸಾಧ್ಯವಾಗುವುದಿಲ್ಲ. ಅವು ಧರ್ಮದ ಚೌಕಟ್ಟಿನಲ್ಲಿ ಶಾಸ್ತ್ರ ಸಮ್ಮತ ಜಿಜ್ಞಾಸೆಯಲ್ಲಿ ಅರ್ಥವಿವಕ್ಷೆಗೆ ಸೀಮಿತಗೊಳಿಸಿಕೊಂಡ ರಚನೆಗಳಾಗಿವೆ. ಕಾಯಕಜೀವಿ ವಚನಕಾರರ ರಚನೆಗಳು ಈ ಎರಡೂ ನೆಲೆಗಳಿಗಿಂತ ಭಿನ್ನ ರೀತಿಯಲ್ಲಿ ಹರಿದ ಆಲೋಚನೆಗಳು ಇಲ್ಲಿ ವೃತ್ತಿ ಮತ್ತು ಸಲಕರಣೆಗಳ ಸಂಬಂಧ ಹೇಗೆ ಪರಸ್ಪರ ಅವಿನಾಭಾವದ ಅನುಕೂಲತ್ವದಲ್ಲಿ ಆಗುವ ಕ್ರಿಯೆಯೋ ಅದೇ ರೀತಿ ಇಲ್ಲಿನ ಚಿಂತನ ಮತ್ತು ವೃತ್ತಿ ಧರ್ಮದ ಪರಿಭಾಷೆಗೆ ಇವು ಪದ ಮೈತ್ರಿಯ ಸಂಬಂಧ. ಇವರ ವೃತ್ತಿಧರ್ಮದ ಅನುಭವ ಸಾಮಾನ್ಯತೆ ಧಾರ್ಮಿಕ ಜಿಜ್ಞಾಸೆಯ ಅನುಭವ ವಿಶೇಷತೆಯನ್ನು ವ್ಯಂಜಿಸುವುದಕ್ಕೆ ವಾಹಕ ವಸ್ತುರೂಪವಾಗಿ ಒದಗಿಬರುತ್ತದೆ. ಕಾಯ-ಕಾಯಕದಂತೆ ಪದ-ಪದಾರ್ಥಗಳ ಸಂಬಂಧದಂತೆ. ಗೊಲ್ಲಾಳನ ವಚನಗಳಲ್ಲಿ ಪದ -ಪದಾರ್ಥಗಳೆಂಬ ಎರಡೂ ರೀತಿಯ ರಚನೆಗಳನ್ನು ಕಾಣಬಹುದು"[?] ಬಹುತೇಕ ವಚನಕಾರರಿಗೆ ಧಾರ್ಮಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಯಾವ ನೆಲೆಯಲ್ಲಿಯೂ ನೆಲೆಯೆಂಬುದು ಇರಲಿಲ್ಲ. ಹಾಗಾಗಿ ಇದು ಎಲ್ಲ ಕಾಯಕಜೀವಿ ವಚನಕಾರರಿಗೆ ಅನ್ವಯಿಸುವ ಮಾತಾಗಿದೆ.

ಕಾಯಕ ಜೀವಿ ಗೊಲ್ಲಾಳನಿಗೆ ಬರೀ ತನ್ನ ವಿಚಾರಗಳನ್ನು ಹೇಳಿ ಬಿಡುವುದಷ್ಟೇ ಆಗಿರಲಿಲ್ಲ. ಆ ವಿಚಾರಗಳನ್ನು ಕಾರ್ಯಗತಗೊಳಿಸುವುದರಲ್ಲಿ ಈತನ ಸಾಧನೆಯಿದೆ; ಸಿದ್ಧಿಯಿದೆ. ದೇವರು -ಧರ್ಮದ ಹೆಸರಿನಲ್ಲಿ ಸ್ಥಾಪಿತ ಪುರೋಹಿತಶಾಹಿಯನ್ನು ಧಿಕ್ಕರಿಸುವುದು ವಚನಕಾರರ ಉದ್ದಿಶ್ಯವಾಗಿತ್ತು. ಆದ್ದರಿಂದ ಎಲ್ಲ ಶರಣರ ಅನುಭವ ವಾಣಿಯೂ 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬುದನ್ನು ಸಾರಿ ಸಾರಿ ಹೇಳಿತು. ಸ್ಥಾಪನೆಗೊಂಡ ಸ್ಥಾಯಿಯಾದ ದೇವರುಗಳನ್ನು ಸ್ಥಾಪಿತ ವ್ಯವಸ್ಥೆಯನ್ನವರು ಉಚ್ಚಾಟಿಸಿದರು. (ಗೊಲ್ಲಾಳೇಶ್ವರನು ಶ್ರೀಶೈಲದಲ್ಲಿ ಸ್ಥಾಪಿತ ಲಿಂಗವನ್ನು ತಿರಸ್ಕರಿಸಿ ಚಲನಶೀಲ ಲಿಂಗವನ್ನು ಸ್ವೀಕರಿಸಿದನು) ಶರಣರ ಪೂರ್ವದಲ್ಲಿ ಅಗ್ರಹಾರ-ಮಠ-ದೇವಾಲಯಗಳಲ್ಲಿ ದೊರೆಯುವ ವಿದ್ಯೆಯು ಮೋಕ್ಷ ಸಾಧನೆಯ ಸೋಪಾನವಾಗಿತ್ತಲ್ಲದೆ, ಅದು ಕೆಲವರಿಗೆ ಮಾತ್ರ ಸೀಮಿತವಾಗಿತ್ತು. ವೈದಿಕರು ಮಾತ್ರ ಅಲ್ಲಿ ಅಧ್ಯಯನ ಮಾಡಲು ಅವಕಾಶ ಹೊಂದಿದ್ದರು. ಅರಸರೂ ಕೂಡ ಇಂಥ ಅಗ್ರಹಾರಗಳಿಗೆ ಸಾಕಷ್ಟು ದಾನದತ್ತಿಗಳನ್ನು ಕೊಡುತ್ತಿದ್ದರೆಂಬುದಕ್ಕೆ ೯-೧೦ನೆಯ ಶತಮಾನದಲ್ಲಿಯ ಶಾಸನಗಳು ಸಾಕ್ಷಿಯಾಗಿವೆ. ಹೀಗೆ ವೈದಿಕರನ್ನು ಪೋಷಿಸಿಕೊಂಡು ಮಠಗಳೂ, ಅಗ್ರಹಾರಗಳೂ ಬೆಳೆದರೆ ಅಗ್ರಹಾರಗಳನ್ನೂ, ಮಠಗಳನ್ನೂ ಹಿಡಿದುಕೊಂಡು ಅರಸರು ಬೆಳೆಯತೊಡಗಿದರು. ಈ ಇಬ್ಬಗೆಯ ಮಾರಕ ಬೆಳವಣಿಗೆಗೆ ಭದ್ರಕೋಟೆ ಧರ್ಮವಾಗಿತ್ತು. ಆದ್ದರಿಂದ ಆ ಧರ್ಮದ ಕೋಟೆಯನ್ನೇ ಶರಣರು ಭೇದಿಸಿದರು. ಗುಡಿ ಗುಂಡಾರಗಳಲ್ಲಿ ದೇವತಾ ಪ್ರತಿಮೆಗಳನ್ನು ಸ್ಥಾಪಿಸಿ ಅದನ್ನು ಅರ್ಚನೆ ಮಾಡುತ್ತ ಅರ್ಚಕರೇ ಮೇಲು ಕೀಳು ಎಂಬ ಭಾವವನ್ನು ಹುಟ್ಟುಹಾಕಿ ಕೆಲವರಿಗೆ ದೇವಾಲಯದ ಒಳಗೆ ಪ್ರವೇಶ ಮಾಡುವುದನ್ನು ಇವರು ನಿರ್ಬಂಧಿಸಿದರು. ದೇವಾಲಯಗಳು ಸ್ಥಾವರ, ಇದಕ್ಕೆ ಅಳಿವುಂಟು. ಇದು ಜಂಗಮವಾಗಬೇಕು. ಈ ಸಂಸ್ಕೃತಿ ನಿರ್ಮಾಣನಾಗಬೇಕೆಂದು ಗೊಲ್ಲಾಳ ಕುರಿಹಿಕ್ಕೆಯಲ್ಲಿ ಮಹೇಶ್ವರನ ನಿಜ ರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡು ಮುಕ್ತಿ ಪಡೆದನು. ನಂಬಿ ಕರೆದರೆ ಆತ ಓಗೊಡುತ್ತಾನೆ. ಜಾತಿ ಮತ -ಪಂಥ ಭೇದವಿಲ್ಲದೆ ಗಂಡು-ಹೆಣ್ಣೆಂಬ ಲಿಂಗ ಭೇದವಿಲ್ಲದೆ ಯಾರೂ ಬೇಕಾದರೂ ಆತನನ್ನು ಎಲ್ಲಿ ಬೇಕೆಂದರಲ್ಲಿ (ಕುರಿಯ ಸಗಣಿಯಲ್ಲಿಯೂ) ಪೂಜಿಸುವ ಅರ್ಹತೆಯನ್ನು ಪಡೆದಿದ್ದಾರೆಂದು, ಗೊಲ್ಲಾಳನು ಲಿಂಗವನ್ನು (ಕುರಿಪಿಚಿಕೆ)ಗಳ ರಾಶಿಯಲ್ಲಿರಿಸಿ ಪೂಜಿಸುತ್ತಾ ಲೋಕಕ್ಕೆ ಸಾರಿ ಹೇಳಿದನು. ಗೊಲ್ಲಾಳನದು ಅದ್ವೈತ ಸಿದ್ಧಾಂತದಂತೆ ಶಿವನನ್ನು (ದೇವರನ್ನು) ತನ್ನಿಂದ ಇತರರಿಂದ ದೂರವಿಟ್ಟವನಲ್ಲ. ತನ್ನ ಅಂತರಂಗದ ಅರಿವಿನ ಇರುವಿನಲ್ಲಿ ಅವನು ನೆಲೆಗೊಳ್ಳುವಂಥವನೆಂದು ಸಾಧಿಸಿ ತೋರಿಸಿದವನು. ಕುರುಬ ಕುಲದವನೊಬ್ಬ ಭಗವತ್ ಚಿಂತನದಲ್ಲಿ ಸಾಧಿಸಿದ ಸಾಧನೆ, ಸಂಸ್ಕಾರಗಳು ವ್ಯಕ್ತಿಯ ಉನ್ನತಿಗೆ ಜಾತಿ ಮುಖ್ಯವಲ್ಲವೆಂಬುದನ್ನು ತೋರಿಸಿಕೊಟ್ಟನು. ದೇವರನ್ನು ಗುಡಿ ಗುಂಡಾರಗಳಲ್ಲಿ ಕಾಣದೆ ತನ್ನ ಭಕ್ತಿಯನ್ನು ಹೃದಯದಲ್ಲಿರಿಸಿಕೊಂಡು, ಉಪಾಸನೆಗೈದು ಕಾಯಕದಲ್ಲಿಯೇ ಕೈಲಾಸವನ್ನು ಕಂಡುಕೊಂಡ.

ನಾವು ಮಾಡುವ ಕಾಯಕ-ನಿಷ್ಠೆ ಸತ್ಯವೂ ಶುದ್ಧವೂ ಆಗಿರಬೇಕು. ಈ ಕಾರ್ಯದಲ್ಲಿ ಶರಣನು ತನ್ನನ್ನು ತಾನು ಸಂಪೂರ್ಣ ಸಮರ್ಪಿಸಿಕೊಳ್ಳಬೇಕು. ಇದರಿಂದ ಬಂದ ಆದಾಯದ 'ಮಿಗತಾಯ'ವನ್ನು ದಾಸೋಹಕ್ಕೆ

ಹಂಚಬೇಕು. ತಾನೂ ಬದುಕಬೇಕು. ತನ್ನ ನೆರೆಯವರು ಬದುಕಬೇಕು. ಹೀಗೆ ಗೊಲ್ಲಾಳನು ಕುರಿ ಹಾಲನ್ನು ಲಿಂಗಕ್ಕೆ ಅಭಿಷೇಕ ಮಾಡಿದನು. ಆದಾಯವನ್ನು ಜಂಗಮನಿಗೆ ಅರ್ಪಿಸಿದನು. ಶರಣನಿಗೆ ನನ್ನದು ಎನ್ನುವ ಯಾವ ವ್ಯಾಮೋಹವು ಇರಬಾರದು. ಭಕ್ತ 'ಸಿರಿಯಾಳ'ನಂಥವರು ಹೆತ್ತ ಮಗನನ್ನೇ ಶಿವನಿಗೆ ಅರ್ಪಿಸಿದನು. ಭಕ್ತರು ತಲ್ಲೀನತೆಯಲ್ಲಿ ಇರುವಾಗ ಯಾರೇ ಬಂದರೂ ತಮ್ಮ ಭಕ್ತಿಗೆ ಚ್ಯುತಿ ತಂದುಕೊಂಡವರಲ್ಲ. ಅಂಥ ಮಗ್ನತೆ, ತನ್ಮಯತೆ ಈತನಲ್ಲಿದೆ. ಈತನ ಕಡುಭಕ್ತಿಯನ್ನು ಕಂಡು ಓರ್ವ ಜಾನಪದ ಕವಿಯು

"ಆಡಿsನ ಹಿಕ್ಕಿಯ ತಂದು ತೀಡಿಲಿಂಗವ ಮಾಡಿ
ನೋಡಿರೋ ಶಿವನ ಮಹಿಮವ । ಶಿವತಾನು
ಆಡಿನ ಹಿಕ್ಕ್ಯಾಗ ನೆಲಿಸ್ಯಾನ॥"[೧೨]

ಈ ತೆರನಾಗಿ ಗೊಲ್ಲಾಳನ ಭಕ್ತಿನಿಷ್ಠೆಯನ್ನು ಹಾಡಿ ಹೊಗಳಿದ್ದಾನೆ. ಹೀಗೆ 'ಉರಿಲಿಂಗ ಪೆದ್ದಿಗೆ' ಗುಂಡಗಲ್ಲಿನಲ್ಲಿ, ಬಳ್ಳೇಶ ಮಲ್ಲಯ್ಯನಿಗೆ ಬಳ್ಳದಲ್ಲಿ ಪ್ರತ್ಯಕ್ಷನಾದ ಪರಶಿವನು.

ಶಿವಭಕ್ತಿಯಲ್ಲಿ ಪಾರಮ್ಯವನ್ನು ಮೆರೆದ ಅನೇಕ ಶರಣರನ್ನು ಕವಿಗಳು ತಮ್ಮ ಕಾವ್ಯಗಳಲ್ಲಿ ಹಾಡಿಹೊಗಳಿದ್ದಾರೆ. ವರಕವಿ, ಶಿವಕವಿ ಎಂದೇ ಪ್ರಸಿದ್ಧಿ ಪಡೆದ ಹರಿಹರನು ತನ್ನ ಲಿಂಗಾರ್ಚನೆ ರಗಳೆಯಲ್ಲಿ ಅರುವತ್ತುಮೂವರು ಶಿವಶರಣರಲ್ಲಿ ಗೊಲ್ಲಾಳನನ್ನು ಹೆಸರಿಸಿದ್ದಾನೆ.

"-------------------------
ದೇವ ಹರಹರ ಮನ್ಮನೋಹರ ವಿರೂಪಾಕ್ಷ
ದೇವ ಶಿವಶಿವ ಸದಾಶಿವ ಶಿವ ವಿರೂಪಾಕ್ಷ
ಎಂದು ಪೊಗಳುತ್ತೆ ತಣಿವೆಯ್ದುಸದೆ ಬಾಯ್ಬಿಟ್ಟು
ನಿಂದೊಮ್ಮೆ ಹಾಡಿ ನೋಡುವೆನೆಂದು .........
..............................................
ಜಂಬುರೊಳೆಸೆವ ಸತ್ಯಕ್ಕನಮ್ಮವ್ವೆಯಂ
ಚೋಳ ಚಾರಮನ ಗೊಲ್ಲಳನುದ್ಭಟಯ್ಯನಂ
ಕೋಳೂರ ಗೊಡಗೂಸು ಸಿದ್ಧರಾಮಯ್ಯನಾ
ನಚ್ಚಿನರುವತ್ತು ಮೂವರನಸಂಖ್ಯಾತರಂ"[೧೩]

ಹರಿಹರನು ಶರಣ ಸಮೂಹದಲ್ಲಿ ಗೊಲ್ಲಾಳನನ್ನು ವರ್ಣಿಸಿದ್ದಾನೆ ಹಾಗೂ 'ಶರಣಸ್ತುತಿಯ ಸ್ವರವಚನಗಳಲ್ಲಿ ಮಧುವರಸ, ಬಾಚರಸ, ಬಿಂಕದಮಾರಯ್ಯ, ನುಲಿಯ ಚಂದಯ್ಯ ಇನ್ನಿತರರ ಜೊತೆ ಗೊಲ್ಲಾಳನನ್ನು ನೆನೆಯಲಾಗಿದೆ.

"ಮೊಲ್ಲೆಬೊಮ್ಮಗಳು ಮಧುವರಸ ಬಾಚರಸ
ಬಿಲ್ಲ ಬಿಂಕದ ಮಾರೈಗೆ ಗೊಲ್ಲಾಳ
ಬಲ್ಲಾಳ ಕನ್ನಪ್ಪ ಕಲಿಕಾಮ
ನುಲಿಯ ಚಂದಯ್ಯ ಮೋಳಿಗೆಯ ಮಾರಯ್ಯಗೆ"[೨೪]

ಹೀಗೆ ಶರಣರ ಪಾದಕ್ಕೆ ನಮನ ಮಾಡಲಾಗಿದೆ. ಮತ್ತು 'ಪಾಲ್ಕುರಿಕೆಯ ಸೋಮನಾಥನು ತನ್ನ ಬಸವ ಪುರಾಣದಲ್ಲಿ (ಬಂಡಾರು ತಮ್ಮಯ್ಯನವರ ತೆಲುಗು ಬಸವ ಪುರಾಣ ಪುಟ. ೯೬-೧೦೦) ಈತನ (ಗೊಲ್ಲಾಳನ) ಕಥೆಯನ್ನು ಬಸವಣ್ಣನವರೂ ಹೇಳಿರುವರು. ಬದನೇಕಾಯಿಗಳು ಲಿಂಗಗಳಾದ ಪವಾಡ ಮೆರೆದರೆಂಬಾಗ ಪೂರ್ವ ಕಥೆಯಾಗಿ ಈ ಗೊಲ್ಲಾಳನ ಕಥೆಯೂ ಬಸವಪುರಾಣದಲ್ಲಿ ಬಂದಿದೆ.

"ಕಾಟಕೋಟನೆನುವ ಗೊಲ್ಲನು ಒಬ್ಬ
ಆಡಿನ ಹಿಕ್ಕಿಯನೀಶ್ವರನೆನುತ
ಹಾಲೆಲ್ಲವನು ಹಿಕ್ಕೆಗೆರೆಯಲು ತಂದೆ
ಗೇಲಿ ಮಾಡುತ ಬಂದು ಕಾಲಿಂದಲೊದೆಯೆ
ಖ್ಯಾತಸದ್ಭಕ್ತಿಯಿಂದಲಿ ಕಾಟಕೋಟ
ನಾತಗೆ ಮುಳಿಯುತ ಕೈಗೊಡಲಿಯಲಿ
ಭೂತಲದಲಿ ಬಿದ್ದು ಅತ್ತಿತ್ತ ಹೊರಳೆ
ದುಷ್ಟನ ಹಿಂದುಮುಂದಿನಿಲೆಲ್ಲದಂತೆ
ತಲೆ ತೆಗೆದೆಸೆದನು ತಾ ಶಿವನಂದು
ಹುಲಿದಲೆ ತೆಗೆದೆಸೆದುದ ಹೋಲುತಿರಲು
ಈ ಕಡೆಯಿವನು ತಾನಿಂತ ಹಾಕುತ್ತ
ಲಿರಲತ್ತ ಕೈಲಾಸಹರ್ಮ್ಯಕವಾಟ
ಜಾಲಗಳೊಡನೆ ಜರ್ಜರಿತದಿ ಬೀಳೆ
ಕೀಲಲ್ಲವೇ ಕೊಡಲಿಯು ಕೈಲಾಸಕ್ಕೆ
ಕಡುಚೋದ್ಯವೆಂದೆಲ್ಲ ಸಡಗರಗೊಳಲು
ಆಗ ಹಿಕ್ಕೆಯು ಲಿಂಗವಾಯ್ತನಿತರಲಿ
ಅಧಿಕದ ಬಾಪೂರ ಬ್ರಹ್ಮಯ್ಯಭಾವ
ನಂಬಿರಲಾಗದೆ ಚೋಳವೆ ಲಿಂಗ

ವದರಿಂದ ಭಕ್ತರಭಾವವು ಲಿಂಗ
ದೇವನಿಗೂ ಜನ್ಮದೇಶವೆನಿಸದೆ ?
ಬಸವನ ಭಕ್ತಿಸೌಭಾಗ್ಯ ಪ್ರಭಾತಿ
ಯೆಸಕದಿ ತಲೆಹೋದುದರಲೇನು ಹಿರಿದು ?"

ಗೊಲ್ಲಾಳನ ಭಕ್ತಿನಿಷ್ಠೆಯನು ವರ್ಣಿಸಲಾಗಿದೆ. ದೇವರನ್ನು (ಲಿಂಗವನ್ನು) ಪೂಜಿಸಲು ಯಾವ ಕುಲದಲ್ಲಿ ಜನ್ಮಪಡೆದರೇನು? ಯಾವ ದೇಶದವನಾದರೇನು? ಅಚಲ ಭಕ್ತಿಯೊಂದಿದ್ದರೆ ಸಾಕು ಅವನೇ ಕುಲಜ, ಶ್ರೇಷ್ಠ ಎಂದು ಹೇಳಲಾಗಿದೆ. ಲಕ್ಕಣ್ಣ ವಿರಚಿತ ಶಿವತತ್ತ್ವ ಚಿಂತಾಮಣಿಯ ಕಾವ್ಯದಲ್ಲಿಯೂ ಗೊಲ್ಲಾಳನನ್ನು ಸ್ಮರಿಸಲಾಗಿದೆ.

"ಗೊಲ್ಲ ಕಾಟಂಕೋಟನೆನಿಪೋರ್ವಭಕ್ತನತಿ
ಬಲ್ಲಿದನು ಪೂಜಿಪಾಡಿನ ಹಿಕ್ಕೆ ಲಿಂಗಮಂ
ಖುಲ್ಲನವರಯ್ಯ ಹಲದಿವಸವದ ಕಾಣುತಂ ಕೋಪದಿಂ ಕಾಲಲೊಡೆಯೇ
ಮಲ್ಲಿಕಾರ್ಜುನನ ನೀಕರಿಸಿದವ ತಂದೆಯೇ
ಕೊಲ್ಲಬೇಕೆನುತತಲಾತನ ವಧಿಸಲುಂ ಲೋಕ
ವಲ್ಲಭಂ ಬಂದು ನಿಜರೂಪದೋಱುದನಮಲಚರಣಾಂಬುಜಕ್ಕೆ ಶರಣು

ಹರನ ಕಾಣುತ ಕಾಟಕೋಟ ಮೈಯಿಕ್ಕಲಾ
ಪುರಹರಂ ಭಾಪುರೇ ಭಕ್ತಗಣನಿಧಿಯೆನಲು
ಸುರರು ಹೂಮಳೆಗಜೇದು ದುಂದುಭಿಗಳೊಸಗೆಯಿಂ ದಿವ್ಯಪುಷ್ಪಕದೊಳಿರಿಸಿ
ಮೆಜೆಸಿ ಶಿವಲೋಕದೊಳು ಪಿತಸಹಿತಲಿಬ್ಬರಿಗೆ
ಪರಮಸಾಯುಜ್ಯಮಂ ಕೊಟ್ಟನಾ ಭಕ್ತರಿಗೆ
ಗುರುಕರುಣವುಳ್ಳರಿದನಱಿದು ಪೇಳ್ವರ ವಿಮಲಚರಣಾಂಬುಜಕ್ಕೆ ಶರಣು."

ಮೇಲಿನ ಕಾವ್ಯದಲ್ಲಿ ಗೊಲ್ಲಾಳನು ಭಕ್ತಿಯಲಿ ಮೆರೆದನು ಎಂದು ವರ್ಣಿಸಲಾಗಿದೆ. ಗೊಲ್ಲಾಳನ ಭಕ್ತಿಗೆ ಮಲ್ಲಿಕಾರ್ಜುನನು ತನ್ನ ನಿಜರೂಪವನ್ನು ತೋರಿದನು. ಲೋಕದ ಜನವೆಲ್ಲ ಮೆಚ್ಚಿದರು. ಮಲ್ಲಿಕಾರ್ಜುನನ ದರ್ಶನದಿಂದ ತಂದೆ-ಮಗನಿಗೆ ಮುಕ್ತಿ ದೊರೆಯಿತು ಎಂಬ ಸಾರಾಂಶವಿರುವುದು. 'ಶಾಂತಲಿಂಗದೇಶಿ' ಕೃತ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಕಾವ್ಯದಲ್ಲಿ ಗೊಲ್ಲಾಳನು ಇಷ್ಟಲಿಂಗದಲ್ಲಿ ಮುಕ್ತನಾದ ಕಥೆಯನ್ನು ವಿವರಿಸಲಾಗಿದೆ.

"ಕಾಟಕೋಟನೆಂಬ ಗೊಲ್ಲನ ಮಗ ಗೊಲ್ಲಾಳನು ಕುರಿಯ ಕಾವಲ್ಲಿ, ಪರ್ವತದ ಪರಿಸೆಯವರಂ ಕಂಡು "ನೀವೆಲ್ಲಿಗೆ ಪೋಗಿ ಬಂದಿರಿ" "ಮಲ್ಲೇಶಲಿಂಗವ ನೋಡಿಬಂದೆವೆ"ನಲು "ಲಿಂಗವ ನನಗೆ ತೋರಿ" ಎನಲು ಗುಡಿಯ ಲಿಂಗದಂತೆ ಎನಲೊಬ್ಬನು ಹಾಸ್ಯದಿಂದ ಹೀಗೆಂದು ಕುರಿಯ ಹಿಕ್ಕೆಯಂ ತೋರಲು ಏನ ಮಾಡಲಿಯೆನಲು ಪೂಜೆಯ ಮಾಡುವಂದವಂ ಪೇಳಲು, ಕೇಳಿ ಕುರಿಯ, ಕರೆದು ಹಾಲನೆರೆದು, ಎಕ್ಕೆಕಕ್ಕೆಯ ಹೂವನೇರಿಸಿ ಪೂಜಿಸುತ್ತಿರಲು, ತಂದೆ ಕಂಡು ಕಾಲಿಲೊದೆಯಲು ಶಿರವಂ ಕಡಿದು ಶಿವನ ಪ್ರಸನ್ನವಂ ಹಡದು, ತಂದೆಗೆಯೂ ಮೋಕ್ಷವನಿತ್ತು, 'ವೀರಬೀರೇಶ್ವರ'ನೆಂಬ ತಮ್ಮಿಷ್ಟಲಿಂಗದಲ್ಲಿ ಗೊಲ್ಲಾಳಯ್ಯನು ನಿಜ ಮುಕ್ತರಾದರು."[೧೨] ಗೊಲ್ಲಾಳನು ಇಷ್ಟಲಿಂಗವನ್ನು ಪಡೆದು ಮೋಕ್ಷವನ್ನು ಪಡೆದನೆಂದು ವರ್ಣಿಸಲಾಗಿದೆ. ಇಷ್ಟಲಿಂಗ ಅವನಿಗೆ ದಾರಿಯನ್ನು ತೋರಿಸಿತು. ಅವನನ್ನು ಜ್ಞಾನಿಯನ್ನಾಗಿ ಮಾಡಲಿಲ್ಲ. ಜ್ಞಾನವೆನ್ನುವುದು ವ್ಯಕ್ತಿಯ ಸಾಧನೆಯ ಫಲ. ಮೋಕ್ಷ ಎಂಬ ಸಾಧನೆಯತ್ತ ಗೊಲ್ಲಾಳನ ಮನಸ್ಸು ಹರಿಯಲು ಇಷ್ಟಲಿಂಗ ಒಂದು ಮಾಧ್ಯಮವಾಯಿತು.

ಗೊಲ್ಲಾಳನು ಕೈಗೊಂಡ ಸಾಧನೆಯ ವಿವರಗಳು ನಮಗೆ ದೊರಕುವುದಿಲ್ಲವಾದರೂ, ಜನ-ಮನಗಳಲ್ಲಿ ನಂಬಿಕೆ, ನಿಷ್ಠೆ ಭಕ್ತಿಯಲ್ಲಿ ಈತನನ್ನು ಮೀರಿಸುವವರು ಯಾರೂ ಇಲ್ಲ ಎನ್ನುವಂತೆ ಛಾಪು ಮೂಡಿಸಿದ್ದು ಬದುಕಿನ ಮಹತ್ತರ ಸಾಧನೆ ಎನ್ನಬಹುದು. ಸುತ್ತಲಿನ ಪ್ರದೇಶದಲ್ಲಿ ಭಕ್ತಿ ಬೆಳಕನ್ನು ಚೆಲ್ಲಿ ಮಾರ್ಗದರ್ಶನ ಮಾಡಿದ. ಅವನು ಯಾವ ಯಾವ ಸನ್ನಿವೇಶಗಳಲ್ಲಿ ಯಾರ್‍ಯಾರಿಗೆ ಹೇಗೆ ಮಾರ್ಗದರ್ಶನ ಮಾಡಿದನು. ಅವನು ಸಾಧಿಸಿದ್ದೇನು ಇತರರೊಡನೆ ನಡೆದುಕೊಂಡ ರೀತಿ ಯಾವುದು, ಇತರರಿಂದ ಅವನಿಂದ ಎಷ್ಟರಮಟ್ಟಿಗೆ ಪ್ರಯೋಜನವಾಯಿತು. ಇವು ಮುಖ್ಯವಾದ ಅಂಶಗಳು. ಈ ಹಿನ್ನೆಲೆಯಲ್ಲಿ ಗೊಲ್ಲಾಳನ ಬದುಕು ಯಾವ ರೀತಿ ಇದ್ದಿರಬಹುದು, ಅವನಿಗೂ ಅವನ ಸಮಕಾಲೀನರಿಗೂ ಇದ್ದ ಸಂಬಂಧ ಎಂಥದು, ಜೀವನದ ವಿಷಯದಲ್ಲಿ ಅವನು ತಾಳಿದ ನಿಲುವು ಯಾವುದು, ಎಂಬುದನ್ನು ಪರಿಶೀಲಿಸಲು ನಮಗೆ ಇರುವ ಆಧಾರಗಳು ಗೊಲ್ಲಾಳನ ವಚನಗಳೇ ಸಾಕ್ಷಿಯಾಗಿವೆ. ಹಾಗೂ ವೀರಶೈವ ಕವಿಗಳೂ ತಮ್ಮ ಕೃತಿಯಲ್ಲಿ ಈತನ ಕುರಿತು ಉಲ್ಲೇಖಿಸಿದ ಉಲ್ಲೇಖಗಳು "ಕುರುಬ ಜನಾಂಗದವರು ಪ್ರಾಚೀನ ಕಾಲದಿಂದಲೂ ಶಿವನನ್ನು ಆರಾಧ್ಯದೈವವೆಂದು ಆರಾಧಿಸುತ್ತ ಬಂದವರಾಗಿರುವುದರಿಂದ ಅವರು ಶೈವ ಪಂಥದವರೆಂಬುದು ಸ್ಪಷ್ಟವಾಗುತ್ತದೆ. ಕುರುಬರ ಮೂಲವನ್ನು ಹೇಳುವ ಪೌರಾಣಿಕ ಕಥೆಗಳನ್ನು ಗಮನಿಸಿದಾಗಲೂ, ಶಿವಪಾರ್ವತಿಯರಿಂದಲೇ ಕುರುಬ ಜನಾಂಗದ ಮೂಲ ಪುರುಷರಾದ ಮುದ್ದಪ್ಪ- ಮುದ್ದವ್ವರ ಜನನವಾಗಿರುವುದು ಕಂಡುಬರುತ್ತದೆ. ಅದೇ ರೀತಿಯಲ್ಲಿ ಕುರುಬ ಜನಾಂಗದ ಧಾರ್ಮಿಕ ಮಹಾಪುರುಷರಾದ ರೇವಣಸಿದ್ಧ, ಸಿದ್ಧರಾಮ, ಬೀರಲಿಂಗೇಶ್ವರ, ಮಹಾಳಿಂಗ ರಾಯ, ಅಮೋಘ ಸಿದ್ಧೇಶ್ವರ, ವೀರಗೊಲ್ಲಾಳೇಶ್ವರ ......... ಶೈವ ಮತಾವಲಂಬಿಗಳು ಶಿವಾರಾಧಕರು ಎಂಬುದು ಗೋಚರವಾಗುತ್ತದೆ"[೧೮] ಗೊಲ್ಲಾಳನು ಶೈವ ಸಂಪ್ರದಾಯನಾಗಿದ್ದನು ಎಂಬುದಕ್ಕೆ, ಮಲ್ಲಿಕಾರ್ಜುನನ ಸೇವೆಗೆ ಶತ-ಶತಮಾನಗಳಿಂದ ಶ್ರೀಶೈಲಕ್ಕೆ ಕಂಬಿ ಒಯ್ಯುವ ವ್ರತವಿರುವುದು. "ಶ್ರೀಶೈಲ ಮಲ್ಲಯ್ಯನಿಗೆ ಮೀಸಲು ನೀರು ಒಯ್ಯುವ ಸೇವೆಯ ಪ್ರತೀಕವಾದ

ಕಾವಡಿ ಇಂದು ಕಂಬಿಯಾಗಿ ರೂಪ ತಳೆದಿದೆ. ಕಾವಡಿ ಮೀಸಲು ನೀರು ಒಯ್ಯುವುದನ್ನು ಸೂಚಿಸಿದರೆ ಕಂಬಿ ವೃಷಭ (ಬಸವಣ್ಣ)ನನ್ನು ಪ್ರತಿನಿಧಿಸುತ್ತದೆ. ಶೈವ ಸಂಪ್ರದಾಯ ಹಾಗೂ ಮಲ್ಲಯ್ಯನ ಗೊರವ ಸಂಪ್ರದಾಯ ಇಲ್ಲಿ ಮೇಳೈಸಿಕೊಂಡಿದೆ."[೧೯] ಕಂಬಿ ಮತ್ತು ಕಾವಡಿ ಇವೆರಡು ಬೇರೆ ಬೇರೆಯಾಗಿವೆ. ಈಗಾಗಲೇ ತಿಳಿದಿರುವ ಶ್ರೀಶೈಲದ ಜಾತ್ರೆ ಪ್ರತಿ ಶಿವರಾತ್ರಿ ಮತ್ತು ಯುಗಾದಿಗಳಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ವಿಪರೀತ ಬಿಸಿಲು ಇರುತ್ತದೆ. (ಬೇಸಿಗೆಕಾಲ) ಜನರು ಜಾತ್ರೆಗೆ ಕಾಲ್ನಡಿಗೆಯಿಂದ ಹೋಗುವ ಸಂಪ್ರದಾಯವಿದೆ. ಯಾತ್ರಿಕರಿಗೆ ಬೇಸಿಗೆಯ ಬಿಸಿಲಿನಿಂದ ಬಾಯಾರಿಕೆಯಾಗಿ ಪ್ರಯಾಣದಲ್ಲಿ ನೀರಿನ ತೃಷೆಯಿಂದ ತುಂಬಾ ತೊಂದರೆಯಾಗುವುದು. ಇದನ್ನು ಹೋಗಲಾಡಿಸುವುದರ ಸಲುವಾಗಿ ಆಯಾ ಊರಿನ ಶ್ರೀಮಂತರು, (ಶಿವಭಕ್ತರು) ಕಂಬಿಯನ್ನು ಮಾಡಿಸಿ, ಅದರ ಕಾವಡಿಯಲ್ಲಿ ಎರಡು ನೀರಿನ ಬಿಂದಿಗೆ ಇಡುವಂತೆ ಮಾಡಿ, ತಮ್ಮ ಹೆಸರಿನಿಂದ ಈ ಕಂಬಿಗಳನ್ನು ಊರಲ್ಲಿಯ ಜಂಗಮರಿಗೆ ಒಪ್ಪಿಸಿ ಎಲ್ಲ ರೀತಿಯ ವ್ಯವಸ್ಥೆ ಮಾಡುತ್ತಿದ್ದರು. (ಮಾಡುತ್ತಿದ್ದಾರೆ). ಈ ಆಚರಣೆ ಜಂಗಮಯ್ಯನು ಕಂಬಿಯನ್ನು ಹೊತ್ತು ಶ್ರೀಶೈಲಕ್ಕೆ ಹೋಗುವ ಭಕ್ತಾದಿಗಳಿಗೆ ಪ್ರಯಾಣದ ಮಧ್ಯದಲ್ಲಿ ನೀರು ಕೊಡುತ್ತಾ ಶ್ರೀಗಿರಿ ಮಲ್ಲಿಕಾರ್ಜುನನ ಗುಡಿಯವರೆಗೆ ಹೋಗಿ ದೇವರ ದರ್ಶನ ಪಡೆದು ಮತ್ತೆ ಭಕ್ತರು ಮರಳಿ ಬರುವಾಗ ದಾರಿಯ ಮಧ್ಯದಲ್ಲಿ ನೀರು ಕೊಡುವ ಕಾಯಕ ಮಾಡುತ್ತಿದ್ದರು. ಈ ಸೇವೆ ಮಾಡಿ ಬಂದದ್ದಕ್ಕಾಗಿ ಕಂಬಿಯ ಕುರಿತು ಪೂಜ್ಯಭಾವನೆ ಮೂಡಿತು. ಅದಕ್ಕಾಗಿ ಊರಲ್ಲಿ ಕಂಬಿಯನ್ನು ಸಂಭ್ರಮದಿಂದ ಬರಮಾಡಿಕೊಳ್ಳುವ ಆಚರಣೆ ಕಂಬಿಯ ಸಂಪ್ರದಾಯವಾಗಿದೆ.

ಗೊಲ್ಲಾಳ ಈ ಆಚರಣೆ ಕುರಿತು ತಳೆದಿರುವ ನಿಲುವಿನ ವಿಶ್ಲೇಷಣೆಯು ಬಹು ಮುಖ್ಯವಾಗಿದೆ. ಶರಣರ ಕಾಲಮಾನ ಈ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿದ ಕಾಲ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಇತರೇ ವಿವಿಧ ಕ್ಷೇತ್ರಗಳಲ್ಲಿ ಹೊಸ ವ್ಯವಸ್ಥೆ ಹಾಗೂ ಆಲೋಚನೆ ಚಿಂತನೆಗಳು ಮಾನವನ ಅಭ್ಯುದಯಕ್ಕಾಗಿ ಮೂಡಿ ಬಂದದ್ದು ಐತಿಹಾಸಿಕ ಸತ್ಯ.

ಶಾಶ್ವತವಾಗಿ "ಒಂದು ಕಡೆ ಸ್ಥಾಪಿಸಲ್ಪಟ್ಟ ಪಾರಂಪರಿಕ ಸ್ಥಾವರ ಲಿಂಗಪೂಜೆ ಶರಣರಲ್ಲಿ ಇಷ್ಟಲಿಂಗ ಪೂಜೆಯಾಗಿ, ಅನ್ನ ಛತ್ರದಾಸೋಹ ಕಾಯಕವಾಗಿ, ಅರವಟ್ಟಿಗೆ ಕಂಬಿಕಾವಡಿಯ ಕಾಯಕವಾಗಿ ಪರಿವರ್ತನೆಗೊಂಡವು ಅರವಟ್ಟಿಗೆಗಿಂತ ಈ ಅಗ್ಗವಣಿಯ (ಕಂಬಿ-ಕಾವಡಿಯ)ಯ ಸೇವೆಯು ಶಿವಶರಣರಲ್ಲಿ ಹೆಚ್ಚು ಸಾರ್ಥಕವಾಗಿ ಕಾಣಿಸಿಕೊಂಡಿತು. ಅಗ್ಗವಣಿಯ ಹೊನ್ನಯ್ಯ ಈ ಕಾಯಕಕ್ಕೊಂದು ಉತ್ತಮ ನಿದರ್ಶನನಾಗಿದ್ದಾನೆ."[೨೦] (ವಿದ್ವಾಂಸರಾದ ಡಾ. ಎಸ್.ಸಿ. ಪಾಟೀಲ ಬಸವಪಥ ಪತ್ರಿಕೆಯಲ್ಲಿ ಈ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.) ಗೊಲ್ಲಾಳನು ಇಷ್ಟಲಿಂಗ ಸ್ವೀಕರಿಸಿ ಗೋಲಗೇರಿಯಲ್ಲಿ 'ಲಿಂಗಯ್ಯ'ನ ಗುಡಿ ನಿರ್ಮಾಣಕ್ಕೆ ಕಾರಣನಾಗಿದ್ದನ್ನು ಗಮನಿಸಬಹುದಾಗಿದೆ.ಗೊಲ್ಲಾಳನು ತಾನು ರಚಿಸಿದ ವಚನಗಳಲ್ಲಿ ನಾನೇನೂ ಅರಿಯದವನೆಂದು ಹೇಳಿಕೊಂಡಿದ್ದಾನೆ. ಆದರೆ ಷಟ್‌ಸ್ಥಲಗಳಲ್ಲಿರುವ ತೊಡಕಿನ ರೀತಿಗಳನ್ನು ಚೆನ್ನಾಗಿ

ಅರಿತವನಾಗಿದ್ದು ಅವುಗಳನ್ನು ಸಾಧಿಸುವುದು ತನ್ನಿಂದಾಗದ್ದರಿಂದ ಭಕ್ತಿ - ವಿಶ್ವಾಸಗಳು ತನ್ನಲ್ಲಿ ಉಂಟಾಗಲೆಂದು ಪರಮಾತ್ಮನನ್ನು ಕುರಿತು ವಚನದಲ್ಲಿ ಬೇಡಿಕೊಂಡಿದ್ದಾನೆ ಹಾಗೂ ಸಂಸಾರದಲ್ಲಿ ಮಗ್ನನಾಗಿರದೆ ಪರಮಾತ್ಮನನ್ನು ಅರಿಯಬೇಕೆಂಬ ಹಂಬಲವಿದೆ ಆತನಲ್ಲಿ ತನ್ನ ಕಾಯಕಕ್ಕೆ ತಾತ್ವಿಕಾರ್ಥವನ್ನು ಕೊಟ್ಟಿದ್ದಾನೆ. "ಗೊಲ್ಲಾಳನು ಇಷ್ಟಲಿಂಗಧಾರಕನೂ, ಷಟಸ್ಥಲಜ್ಞಾನಿಯೂ, ಲಿಂಗಾಂಗ ಸಾಮರಸ್ಯದ ರೀತಿಯನ್ನು ಅರಿತವನೂ ಆಗಿದ್ದನೆಂದು ತೋರುತ್ತದೆ. ಕೆಲ ವಚನಗಳಲ್ಲಿ ಕುರಿ, ಹೋತು, ಆಡುಗಳ ಉಲ್ಲೇಖಗಳಿಂದಲೂ ಗೊಲ್ಲಾಳನು ಗೊಲ್ಲರ ಜಾತಿವನಿರದೆ ಕುರಿ ಕಾಯುವ ಕಾಯಕವನ್ನು ಮಾಡುತ್ತಿದ್ದ ಕುರುಬನಾಗಿದ್ದನೆಂದು ನಮಗೆ ತೋರುತ್ತದೆ. ಆದರೆ ಎಲ್ಲ ವಚನಗಳು ಎಷ್ಟು ಆಳವಾದ ವಿಚಾರಗಳುಳ್ಳವೂ ಗಂಭೀರವಾದವುಗಳೂ ಇರುತ್ತವೆಂಬುದನ್ನು ವಾಚಕರು ಲಕ್ಷಿಸತಕ್ಕದ್ದು. ಇವುಗಳಿಂದ ಗೊಲ್ಲಾಳನು ಅರಿಯದ ತೀರ ಕುರುಬನಾಗಿರದೆ, ಜ್ಞಾನಿಯಾಗಿದ್ದನೆಂಬುದು ಗೊತ್ತಾಗುತ್ತದೆ."[೨೧] ಆದರೆ ಕರ್ನಾಟಕ ಸ್ಥರ ದುರ್ದೈವದಿಂದ ಅವರ ಚರಿತ್ರೆಗಳು ಈಗ ಮಾಸಿಹೋಗಿವೆ. ಅವರು ಮಾಡಿದ ಮಹತ್ಕಾರ್ಯಗಳ ಅರಿವು ಸಹ ಹೊರಟು ಹೋಗಿರುತ್ತದೆ"[೨೨] ಅದೆಷ್ಟೋ ಶರಣರು ಕಂಡುಕೊಂಡ ಅನುಭವ ಅವರು ಅಭಿವ್ಯಕ್ತಿಸಿದ ತತ್ವಸಿದ್ಧಾಂತಗಳು ಇಡಿಯಾಗಿ ಇಂದಿಗೂ ಲಭ್ಯವಿಲ್ಲ. ಆದರೆ ಶರಣರು ನೀಡಿದ ವಚನಸಾಹಿತ್ಯದಲ್ಲಿ ದೊರೆತಿರುವ ಮಾಹಿತಿಯನ್ನಾಧರಿಸಿ, ಗೊಲ್ಲಾಳೇಶ್ವರನಂತಹ ಶರಣನ ಧರ್ಮ, ಸಮಾಜ ಕುರಿತಾದ ನಡವಳಿಯು ಏನಿತ್ತು ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ದೇವರು ಒಬ್ಬನೇ ಇದ್ದಾನೆ. ಅವನು ವಿಶ್ವವ್ಯಾಪಿಯಾಗಿದ್ದಾನೆ. ದೇವರಿಗೆ ಯಾವುದೇ ನಿರ್ದಿಷ್ಟ ಸ್ಥಳ, ರೂಪ, ಆಕಾರಗಳು ಇಲ್ಲ ಎಂಬುದನ್ನು ಪ್ರತಿಪಾದಿಸಿದರು. ಇಂತಹ ವಿಚಾರಗಳಿಂದ ದೇವರು ಧರ್ಮದ ಹೆಸರಿನಲ್ಲಿ ಜಗಳವಾಡುವದು ಕಡಿಮೆಯಾಯಿತು ಎಂದು ಹೇಳಬಹುದು. ಇದರಿಂದ ಸಮಾಜದಲ್ಲಿ ಐಕ್ಯತೆಯ ಭಾವ ಹುಟ್ಟಲು ಕಾರಣವಾಯಿತು.

ಗೊಲ್ಲಾಳನು ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದಬೇಕಾದರೆ ಆಚರಣೆಯ ಪ್ರಕಾರ ಅನೇಕ ಜನ್ಮಗಳು ಹೋಗಬಹುದು. ಆದರೆ ತನ್ನ ಸುತ್ತಣ ಶಿವಶರಣರ ಉಕ್ತಿಗಳ ಪ್ರಕಾರ ನಡೆದುಕೊಂಡು ಒಂದೇ ಜನ್ಮದಲ್ಲಿಯೇ ಮೋಕ್ಷವನ್ನು ಪಡೆದವನು. ಲಿಂಗಾಂಗ ಸಾಮರಸ್ಯವನ್ನು ಹೊಂದುವ ಬಗ್ಗೆ ಶಿವಶರಣರು ಬೋಧಿಸುವ ಕ್ರಮಗಳು ಷಟ್‌ಸ್ಥಲ ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಈ ಮುಖಾಂತರ ಲಿಂಗಧಾರಿಗಳಾಗಿ, ಲಿಂಗಾಗ ಸಾಮರಸ್ಯವನ್ನು ಹೊಂದುವದೇ ಅವರ ಧ್ಯೇಯವಾಗಿರುತ್ತದೆ. ಹೀಗಾಗಿ ಗೊಲ್ಲಾಳನು ಲಿಂಗಸಾಮರಸ್ಯಕ್ಕೆ ಲಿಂಗಧಾರಣ ಮಾಡಿಕೊಂಡವನಾಗಿದ್ದಾನೆ. (ಲಿಂಗಧಾರಣವಿಲ್ಲದೇ ಶಿವಶರಣರಿಲ್ಲ) "ಇವರಿಗೆ ಲಿಂಗವೆಂಬುದು ಪರಶಕ್ತಿಯುತವಾದ ಪರಶಿವನ ನಿರತಿಶಯಾನಂದ ಸುಖವು, ಲಿಂಗವೆಂಬುದು ಪರಶಿವನ ಪರಮಜ್ಞಾನ, ಲಿಂಗವೆಂಬುದು ಅಖಂಡಿತವೇದ, ಪಂಚಸಂಜ್ಞೆ, ಲಿಂಗವೆಂಬುದು ಹರಿಬ್ರಹ್ಮರ ನಡುಮನೆಗಳ ಜ್ಯೋತಿರ್ಲಿಂಗ ಎಂದು ಪ್ರಸಿದ್ಧ ವಚನಕಾರನಾದ ಉರಿಲಿಂಗಪೆದ್ದಿಯು ತನ್ನ ಒಂದು ವಚನದಲ್ಲಿ ವಿವರಿಸಿದ್ದಾನೆ."[೨೩] ಗೊಲ್ಲಾಳನು ಲಿಂಗದಲ್ಲಿ ಬೆರೆತು ಪೂಜಿಸಿ ಶಿವನ ಸಾಕ್ಷಾತ್ಕಾರ ಮಾಡಿಕೊಂಡು ಶಿವಲೋಕದಲ್ಲಿ ಗಣಪದವಿ

ಪಡೆಯುವುದರೊಂದಿಗೆ ಮೋಕ್ಷವನ್ನು ಹೊಂದಿದನು ಎಂಬುದನ್ನು ಚರಿತೆ ಹೇಳುವುದು. ಈತ ಪರಮಾತ್ಮ ಸಾಧನೆಗೋಸ್ಕರ ಆರು ಮೆಟ್ಟಿಲುಗಳನ್ನು ಏರಿದವನು. ಇವುಗಳಿಗೆ ಷಟ್‌ಸ್ಥಲಗಳೆಂದು ಹೆಸರು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದಿವೆ. "ಷಟಸ್ಥಲಗಳೆಂದರೆ ಮನುಷ್ಯನ ಪ್ರಗತಿಯ ಮೆಟ್ಟಿಲುಗಳು ಎಂದು ಹೇಳಲಾಗಿದೆ. ಮನುಷ್ಯನು ಇಹಲೋಕಕ್ಕೆ ಬಂದಂದಿನಿಂದ ಪರಮಾತ್ಮನಲ್ಲಿ ಐಕ್ಯಸ್ಥಿತಿಯನ್ನು ಹೊಂದುವವರೆಗೆ ಅವನ ದೇಹ, ಮನಸ್ಸು, ಚಿತ್ತು, ಶಕ್ತಿ ಮೊದಲಾದವುಗಳು ಹೇಗೆ ಮಾರ್ಪಡುತ್ತ ಹೋಗುತ್ತವೆಂಬುದರ ವಿವರಣೆಯು ಈ ಷಟ್‌ಸ್ಥಲಶಾಸ್ತ್ರದಲ್ಲಿ ಇರುತ್ತದೆ."[೨೪] ಗೊಲ್ಲಾಳನು ಕೈಕೊಂಡ ಕ್ರಿಯೆಗಳು ಶಾಸ್ತ್ರ ಪ್ರಕಾರವಿದ್ದವೇ ? ಶಿವಶರಣರ ತತ್ವ ವಿಚಾರಗಳಲ್ಲಿ ಇದು ಬಹು ಮಹತ್ವದ ಭಾಗವಾಗಿರುವುದರಿಂದ ಶರಣ ಗೊಲ್ಲಾಳನು ಷಟಸ್ಥಲಗಳನ್ನು ಸೂತ್ರೀಕರಿಸಿ ಅವುಗಳಿಂದ ಹೇಗೆ? ವಿಕಾಸ ಹೊಂದಿದನು ಎಂಬುದನ್ನು ವಿವರಿಸಿದೆ.

## ಭಕ್ತ ಸ್ಥಲ :

ಭಕ್ತಸ್ಥಲವು ಮಾನವನ ಆಂತರಂಗಿಕ ಬೆಳವಣಿಗೆಯಲ್ಲಿ ಮೊದಲನೆಯದಾಗಿವೆ. ತಾನು ನಂಬಿದಲ್ಲಿ ಭಕ್ತಿಯನ್ನು ದೃಢಪಡಿಸುವುದರಿಂದಲೇ ಅವನ ಭವಿಷತ್ ಪ್ರಗತಿ ಸ್ಥಿರಪಡುತ್ತದೆ. ಅಚಲ ವಿಶ್ವಾಸವೇ (Faith) ಮುಖ್ಯ ಲಕ್ಷಣ. ಇದರಿಂದ ನಂಬಿದ ದೈವದಲ್ಲಿ ನಂಬುಗೆಯ ಅರಿವು ಮೂಡುವುದು. ಈಗಾಗಲೇ ಹಲವರು ಕಂಡುಕೊಂಡ ಅನುಭವಗಳ ಮೇಲೆ ತನ್ನ ಗುರಿಯನ್ನು ವಿಶ್ವಾಸದಿಂದ ಈಡೇರಿಸಿಕೊಳ್ಳಬೇಕಾಗುತ್ತದೆ. ನಂಬುಗೆ ದೃಢವಾಗಬೇಕಾದರೆ ಭಕ್ತಿಯ ಸಾಧನ ಅವಶ್ಯವಾದುದು. ಭಕ್ತನು ಇಷ್ಟಲಿಂಗದಲ್ಲಿ ವಿಶ್ವಾಸ-ಪ್ರೀತಿವುಳ್ಳನಾದರೆ ಆತನಲ್ಲಿ ಸ್ಥಿರವಾಗಿ ನೆಲೆ ನಿಲ್ಲಲು ಸಾಧ್ಯವಾಗುವದು. ಭಕ್ತಿ ಆಚರಣೆಯಲ್ಲಿ ಸದಾಚಾರವು ಮುಖ್ಯವಾದುದು. ತನ್ನಂತೆ ಪರರೆಂದು ಬಗೆದು ನಡೆಯಬೇಕು. ಒಟ್ಟು ಸಮಾಜದ ಪ್ರೀತಿಯನ್ನು ಸಂಪಾದಿಸಬೇಕು. ಸದಾಚಾರದಿಂದ ಬಾಳುವುದೇ ಭಕ್ತನ ಶ್ರೇಷ್ಠತೆ. ಗೊಲ್ಲಾಳನು ಭಕ್ತನಾಗಿ ಹಿಕ್ಕೆಗೆ ಹಾಲನ್ನೆರೆದು ಸದ್‌ವಿಚಾರದಿಂದ ತನ್ನಿಂದ ತಾನೇ ಬೆಳೆದವನು. ಕಮ್ಮಿ ಕುಲದಲ್ಲಿ ಜನಿಸಿದರೂ, ಉಚ್ಛ ಕುಲದವರು ತನ್ನನ್ನು ಹಿಂಬಾಲಿಸುವಂತೆ ಬೆಳೆದು ನಿಂತವನು. "ಶಿವಶರಣರ ಭಕ್ತಿಯ ವಿಚಾರಗಳು ಮನುಷ್ಯನ ಮನಸ್ಸನ್ನು ಮೇಲ್ಮಟ್ಟಕ್ಕೆ ಒಯ್ಯುವಂಥವು ಇರುತ್ತವೆ. ಅವು ಅತ್ಯಂತ ಹೃದಯಸ್ಪರ್ಶಿಯಾಗಿರುತ್ತವೆ. ಈ ಪ್ರಕಾರ ವರ್ತಿಸುವವನು ಭಕ್ತನೆಂದು ಹೇಳಲ್ಪಡುತ್ತಾನೆ."[೨೫]

## ಮಹೇಶ್ವರ ಸ್ಥಲ :

ಈ ಸ್ಥಲದಲ್ಲಿ ನಿಷ್ಠೆಯು ಬಹಳ ಅವಶ್ಯವಾದುದು. ಲಿಂಗಕ್ಕೆ ಕಟಿಬದ್ಧನಾಗಿ ಧೈರ್ಯದಿಂದ ಲೋಕದಲ್ಲಿ ವ್ಯವಹರಿಸುವವನು. ಒಳ್ಳೆಯದನ್ನೇ ನೋಡುವನು, ಒಳ್ಳೆಯದನ್ನೇ ಮಾತಾಡುವನು. ಗೊಲ್ಲಾಳ ಈ ಮಾತುಗಳಿಗೆ ಅನುಗುಣವಾಗಿ ಬಾಳಿ-ಬದುಕಿದವನು. ಲಿಂಗ ನಿಷ್ಠೆಯನ್ನು ಪ್ರತಿನಿತ್ಯದ ತಪಸ್ಸಿನಂತೆ ತಪ್ಪದೆ ನಡೆಸಿದವನು.

ಈ ಆಚರಣೆ ತಾನಿರುವವರೆಗೂ ಪೂರೈಸಿದವನು. ಇದರಿಂದ ತನ್ನ ಶಕ್ತಿಯನ್ನು ಬೆಳೆಸಿಕೊಂಡನು. ಸ್ಥಿರ ಬುದ್ಧಿಯುಳ್ಳವನಾಗಿ, ಧೈರ್ಯಗುಂದದೆ, ತಂದೆ ಎದುರಾದರೂ ಎದುರಿಸಿ ಎಲ್ಲ ಸಂಕಟಗಳಿಂದ ದೂರಾಗಿ ಕಾರ್ಯಸಾಧನೆಯನ್ನು ಮಾಡಿ ಮಹೇಶ್ವರನಾದನು. ಲಿಂಗದಲ್ಲಿ ನಿಷ್ಠೆಯುಳ್ಳವನಾಗಿ, ಕಂಡ ಕಂಡ ದೈವಗಳಿಗೆ ಬಾಗದೆ, ಅಂತರಂಗ, ಬಹಿರಂಗ ಎರಡರಲ್ಲಿಯೂ ಒಂದೇ ತೆರನಾಗಿದ್ದು ನುಡಿದಂತೆ ನಡೆದುಕೊಂಡನು. ಎಂದಿಗೂ ತನ್ನ ವೃತವನ್ನು ಭಂಗ ಮಾಡಿಕೊಳ್ಳದೆ ಲಿಂಗದಲ್ಲಿ ಒಂದಾಗಿದ್ದನು. ವೃತ ಭಂಗ ಮಾಡಿದ ತಂದೆ ಬಲ್ಲುಗನ ಶಿರವನ್ನು ಕತ್ತರಿಸಿ ಲಿಂಗನಿಷ್ಠೆಯಿಂದ ಮೆಗೆದನು. "ಭಕ್ತ ಮಹೇಶ್ವರರ ಆಚರಣೆಗಳಲ್ಲಿ ಕೆಲವು ವ್ಯತ್ಯಾಸಗಳಿರುತ್ತವೆ. ಭಕ್ತನಿಗೆ ನೇಮ ವೃತಗಳ ಪ್ರತಿಬಂಧವು ಅಷ್ಟಿರುವುದಿಲ್ಲ. ಆದರೆ ಮಹೇಶನು ಅವುಗಳನ್ನು ಅವಶ್ಯವಾಗಿ ಪಾಲಿಸಬೇಕು. ಮಹೇಶನಿಗೆ ಎಷ್ಟೇ ವಿಘ್ನಗಳು ಬಂದರೂ ಅವನು ತಾನು ಮುಂದೆ ಇಟ್ಟ ಹೆಜ್ಜೆಯನ್ನು ಹಿಂದೆ ಎಂದಿಗೂ ಇಡಲಾರನು. ಈ ಪ್ರಕಾರ ಭಕ್ತ ಮಹೇಶ್ವರರ ಆಚರಣೆಗಳು ಇರುತ್ತವೆ. ಉಭಯತರು, ಕ್ರಿಯಾಬದ್ಧರು ಇರುತ್ತಾರೆ. ಆದರೆ ಅವರಲ್ಲಿ ಮಹೇಶ್ವರನಾದವನು ದೃಢಬುದ್ಧಿಯುಳ್ಳವನಾಗಿ ಕೈಕೊಂಡ ಕಾರ್ಯವನ್ನು ಎಂದಿಗೂ ಬಿಡುವುದಿಲ್ಲ."[೨೬]

## ಪ್ರಸಾದಿ ಸ್ಥಲ :

ಪ್ರಸಾದಿಯು ಏನು ಮಾಡಿದರೂ ಲಿಂಗ ತೃಪ್ತಿಗಾಗಿ ಮಾಡುತ್ತಾನೆ. ಗೊಲ್ಲಾಳನು ಲಿಂಗಕ್ಕೆ ತನ್ನ ಕುರಿಗಳ ಹಾಲನ್ನೆರದು ಹಾಲ ಹೊಳೆಹರಿಸಿ ಲಿಂಗವನ್ನು ತೃಪ್ತಿಪಡಿಸಿದನು. ಈತ ಪ್ರಸಾದಿಯಾಗಿ ಉನ್ನತ ಸ್ಥಾನಕ್ಕೇರಿದನು. "ಪ್ರಸಾದಿಯು ತಾನು ಮಾಡುವಂಥ ಪ್ರತಿಯೊಂದು ಕೆಲಸವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡುತ್ತಾನೆ. ಅವನಲ್ಲಿ ಅಹಂಭಾವವು ಎಳ್ಳಷ್ಟೂ ಇರುವುದಿಲ್ಲ. ಅವನು ಎಲ್ಲವನ್ನು ಲಿಂಗತೃಪ್ತಿಗಾಗಿಯೇ ಮಾಡುತ್ತಾನೆ. ತಮಗಾಗಿ ಮಾಡುವವರು ಬಹುಶಃ ಸಂಕಟ ಬಂದಾಗ ವ್ಯಥೆಪಡುವುದುಂಟು. ಆದರೆ ಪ್ರಸಾದಿಸ್ಥಲದವರು ಪರಮಾತ್ಮನಿಗಾಗಿ ಎಲ್ಲ ಕಾರ್ಯಗಳನ್ನು ಮಾಡುವುದರಿಂದ ಅವರು ಸುಖಿಗಳಾಗಿರುತ್ತಾರೆ."[೨೭]

## ಪ್ರಾಣಲಿಂಗಿ ಸ್ಥಲ :

"ಸ್ವಾನುಭಾವವುಳ್ಳಾತನೇ ಪ್ರಾಣಲಿಂಗಿಯು. ಷಟ್‌ಸ್ಥಲ ಶಾಸ್ತ್ರದಲ್ಲಿ ಅನುಭಾವವು ಪ್ರಾಣಲಿಂಗಿಯ ಲಕ್ಷಣವೆಂದು ಹೇಳಲ್ಪಡುತ್ತದೆ. ಪ್ರತಿಯೊಬ್ಬನು ತನ್ನ ಜೀವವನ್ನು ಮೋಹಿಸುವುದನ್ನು ನೋಡುತ್ತೇವೆ. ಪ್ರಾಣಲಿಂಗಿಯು ತನ್ನ ಜೀವದ ಮೇಲಿದ್ದಂತೆಯೇ ಇತರ ಜೀವಿಗಳನ್ನು ಸಹ ಪ್ರೀತಿಸುತ್ತಾನೆ. ಪ್ರಾಣಲಿಂಗಿಯು ತನ್ನ ಜೀವಿತದ ಮೇಲಿನ ಮೋಹವನ್ನು ತೊರೆದು ಸರ್ವಪ್ರಾಣಿಗಳನ್ನು ಪರವಸ್ತು ಅಂದರೆ ಪರಮಾತ್ಮನೋಪಾದಿಯಲ್ಲಿ ನೋಡುತ್ತಿರುವದರಿಂದ ಆತನಿಗೆ ಪ್ರಾಣಲಿಂಗಿ ಎಂಬ ಹೆಸರು ಗುಣಗಳಿರುತ್ತವೆ."[೨೮] ಗೊಲ್ಲಾಳನು ಲಿಂಗಯ್ಯನಿಂದ ಹಿಕ್ಕೆಯನು ಲಿಂಗವೆಂದು ಸ್ವೀಕರಿಸಿ, ಸ್ವಾನುಭವವುಳ್ಳವನಾಗಿ, ಸಕಲ ಜೀವರಾಶಿಗಳಿಗೆ ದಯಾಪರನಾಗಿ, ತನ್ನ ದಯಾರ್ದ್ರ ಹೃದಯದಿಂದ ಅನ್ಯ ಸಮಾಜದವರನ್ನು ತನ್ನ

ಪ್ರೇಮಪಾಶದಲ್ಲಿ ಅಪ್ಪಿಕೊಂಡನು. ಇಂದಿಗೂ ಗೊಲ್ಲಾಳನ ಭಕ್ತರು, ನಾಡಿನಾದ್ಯಂತ ಅನ್ಯ ಸಮಾಜದವರೂ, ಲಿಂಗಯ್ಯ(ಲಿಂಗಪ್ಪ)ನೆಂದು ಪೂಜಿಸುವುದನ್ನು ಕಾಣುತ್ತೇವೆ. ಪ್ರಾಣಲಿಂಗಿಯು ತನ್ನ ಲಿಂಗವನ್ನು ಪ್ರಾಣದ ಸ್ವರೂಪವಾಗಿ ಮಾಡಿಕೊಂಡಿರುತ್ತಾನೆ. ಈತ ಪ್ರಾಣಲಿಂಗಿಯಾಗಿ ಜಗತ್ತಿನಲ್ಲಿ ವ್ಯವಹರಿಸಿದ್ದಾನೆ.

## ಶರಣಸ್ಥಲ :

"ಅರಿವುಳ್ಳಾತನೇ ಶರಣನು. ಅರಿವೆಂದರೆ ನಾನು ಯಾರು, ಎಲ್ಲಿಂದ ಬಂದೆ, ಯಾಕೆ ಬಂದೆ, ನನ್ನ ಮುಂದಿನ ಧ್ಯೇಯವೇನು, ಇದನ್ನು ಸಾರಾಸಾರ ವಿಚಾರಿಸುವ ವಿವೇಕವು. ಈ ವಿವೇಕದಿಂದ ಆತನಿಗೆ ಐಹಿಕ ಸುಖದ ಅಪಾರತೆಯೂ, ಪಾರಮಾರ್ಥ ಸುಖದ ಸತ್ಯತೆಯೂ ದೃಗ್ಗೋಚರವಾಗುತ್ತವೆ. ಆಗ ಅವನಿಗೆ ಶಿವಶರಣರು 'ಜ್ಞಾನಿ' ಎಂದು ಕರೆಯುತ್ತಾರೆ. ಶರಣನು ಸದ್ವಿವೇಕ ಬುದ್ಧಿಯುಳ್ಳವನಾಗಿರುತ್ತಾನೆ. ಶರಣನು ಮಾನವ ಪ್ರಾಣಿಗಳಿಗೆ ಹಿತವಾಗುವಂಥ ಅನುಭವದ ವಚನಾಮೃತವನ್ನು ರಚಿಸಿ ಹರಡುವನು. ಅವನು ತನ್ನ ಅನುಭವದಂತೆ ಆಚರಿಸುತ್ತಾನೆ. ಶರಣನಿಗೆ ಸುಖ - ದುಃಖ ಸ್ತುತಿನಿಂದೆ ಇವುಗಳ ಬಾಧೆಯಾಗುವುದಿಲ್ಲ. ಅವನು ಚಿನ್ನವನ್ನು ಮಣ್ಣಿಗಿಂತ ಕಡೆ ಎಂದು ಕಾಣುತ್ತಾನೆ. ಆದ್ದರಿಂದ ಅವನು ನಿರಾಸೆ ನಿರ್ಭಯವುಳ್ಳವನಾಗಿರುತ್ತಾನೆ. ಅವನ ಆಚಾರ ವಿಚಾರಗಳೆಲ್ಲವೂ ಪರಮಾತ್ಮನಲ್ಲಿ ಲೀನವಾಗಿರುತ್ತವೆ. ಶರಣನು ಲಿಂಗದಲ್ಲಿಯೇ ಮಗ್ನನಾಗಿ ತಾನು ಸಾಕ್ಷಾತ್ ಲಿಂಗವೇ ಆಗುವ ಹವಣಿಕೆಯಲ್ಲಿರುತ್ತಾನೆ. ಅವನು ಯಾವಾಗಲೂ ಪರವಸ್ತುವಿನ ಸಂಸರ್ಗವನ್ನು ವಿಶೇಷವಾಗಿ ಹಂಬಲಿಸುತ್ತಾನೆ. ಹೀಗೆ ಶರಣನು ಪರಮಾತ್ಮನೊಡನೆ ಬೆಳೆದು ಸತಿಪತಿಭಾವವುಳ್ಳವನಾಗಿರುತ್ತಾನೆ. ಅವನು ಪರಮಾತ್ಮನನ್ನು ಆಶ್ರಯಿಸುವ ಹವಣಿಕೆಯಲ್ಲಿರುತ್ತಾನೆ. ಈ ಪ್ರಕಾರ ಶರಣನ ಶ್ರೇಷ್ಠ ಆಚರಣೆಯು ಇರುತ್ತದೆ. ಬಸವಾದಿ ಪ್ರಮಥರ ಕಾಲದಲ್ಲಿ ಆಗಿಹೋದ ಮಹಾಪುರುಷರು ಇಂಥ ಶರಣಸ್ಥಲದವರೆಂದು ಪ್ರಸಿದ್ಧಿಯನ್ನು ಹೊಂದಿದ್ದಾರೆ. ಇವರೇ ವಚನ ವಾಙ್ಮಯವನ್ನು ಉಂಟುಮಾಡಿದ್ದಾರೆ. ಇವರನ್ನು ಬಹು ಜನ ಸಮಾಜವು ಅಮರ ಗಣಾಧೀಶ್ವರರೆಂದು ಕರೆದು ಮನ್ನಿಸುತ್ತ ಬಂದಿರುತ್ತದೆ."[೨೯] ಗೊಲ್ಲಾಳನನ್ನು ೭೭೦ ಅಮರ ಗಣಾಧೀಶ್ವರರಲ್ಲಿ ೧೨೭ ಯವನೆಂದು ಗುರುತಿಸಿದ್ದಾರೆ.

## ಐಕ್ಯಸ್ಥಲ :

"ಅರಿವು ಪರಮಾತ್ಮನಲ್ಲಿ ಸಮರಸ ಭಾವವನ್ನು ಹೊಂದಿ ನಿರ್ಭಾವ ಹೊಂದಲು ಅದು ಐಕ್ಯಸ್ಥಲವು. ಅರಿವಿನಿಂದ ಅಂಗ ಮತ್ತು ಲಿಂಗ ಇವು ಬೇರೆ ಬೇರೆ ಎಂಬ ಭಾವವನ್ನು ಅಳಿದು ಅವೆರಡೂ ಒಂದೇ ಎಂಬುದು ಉಂಟಾಗಬೇಕು. ಅಂಗವು ಮನದಲ್ಲಿ ಬೆರೆದು ಲಿಂಗವೇ ಆದ ಬಳಿಕ ಅಂಗದ ಯಾವ ವಾಸನೆಯೂ ಉಳಿಯುವುದಿಲ್ಲ. ಅಂಗದ ವಾಸನೆ ಇದ್ದವರು ಲಿಂಗೈಕ್ಯರಾಗಲಾರರು. ಅವರು ಪುನಃ ಪುನಃ ಭವದಲ್ಲಿ ಹುಟ್ಟಬರಬೇಕಾಗುತ್ತದೆ. ಲಿಂಗೈಕ್ಯನಿಗೆ ಪುನರ್ಜನ್ಮವಿಲ್ಲ. ಆತ ಪರಮಾತ್ಮನಲ್ಲಿಯೇ ಲೀನ ಹೊಂದತಕ್ಕದ್ದು.

ಅಂಗವು ಲಿಂಗದಲ್ಲಿ ಬೆರೆದಾಗ ಉಂಟಾದ ಸ್ಥಿತಿಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. 'ನಾವು ಅರಿತೆವು' ಎಂದು ಅನ್ನುವವರು ಶರಣರು. ಆದರೆ ಐಕ್ಯರಲ್ಲ. ಸತ್ತಂಥ ಮನುಷ್ಯನು 'ನಾನು ಸತ್ತಿದ್ದೇನೆ'

ಎಂದು ಹೇಳುವುದು ಎಷ್ಟು ಅಸಂಗತವಾದದ್ದೋ ಅಷ್ಟೇ ಲಿಂಗೈಕ್ಯವಾದವನು 'ನಾನು ಲಿಂಗದೊಳಗೆ ಬೆರದೆ'ನೆಂದು ಹೇಳುವದು ಅಸಂಗತವಾದದ್ದು.

ಶಿವಶರಣರು ಲಿಂಗೈಕ್ಯದ ರೀತಿಯನ್ನು ಹೇಳುವಲ್ಲಿ ಉಪಮೆಗಳಿಂದ ತಿಳಿಸುವುದುಂಟು. ನೀರಿನಲ್ಲಿ ಲವಣ ಬೆರೆತಂತೆಯೂ, ಕ್ಷೀರದಲ್ಲಿ ಸವಿಯು ಕೂಡಿದಂತೆಯೂ, ದೀಪದಲ್ಲಿ ಜ್ಯೋತಿಯು ಅಡಗಿರುವಂತೆಯೂ ಅಂಗನು ಲಿಂಗದಲ್ಲಿ ಬೆರೆಯುವನೆಂದು ಅವರು ಹೇಳುವುದುಂಟು"[೩೦] ಗೊಲ್ಲಾಳನು ಹಾಗೂ ಆತನ ತಂದೆ ತಾಯಿ ಇವರುಗಳಿಗೆ ಮಹೇಶ್ವರನ ರೂಪ ದರ್ಶನವಾದ ನಂತರದಲ್ಲಿ, ಶಿವನು ಕೈಲಾಸಕ್ಕೆ ಎಲ್ಲರನ್ನೂ (ಗೊಲ್ಲಾಳ+ಬಲ್ಲುಗ+ದುಗ್ಗಳೆ) ಕರೆದುಕೊಂಡು ಹೋದನೆಂದು ಚರಿತ್ರೆ ಹೇಳುವದು. ಅಂದರೆ ಇವರು ಲಿಂಗದಲ್ಲಿ ಲೀನರಾದರೆಂದು ಹೇಳಬೇಕಾಗುವದು.

ಹೀಗೆ ಗೊಲ್ಲಾಳನು ಅನೇಕ ಶರಣರಂತೆ ಆರು ಸ್ಥಲಗಳ ಆಚರಣೆಗಳ ಮೂಲಕ ಶಿವಶರಣನಾಗಿ ವಿಕಾಸ ಹೊಂದಿದನು.

**ಪಂಚಾಚಾರ :**

ವೀರಶೈವ ಧರ್ಮದಲ್ಲಿ ಪಂಚಾಚಾರಗಳಿಗೆ ಮಹತ್ವ ಇದೆ. ಶಿವಶರಣನಾದವನು ಈ ಆಚರಣೆಗಳಿಗೆ ಅನ್ವಯವಾಗಿಯೇ ಇರಬೇಕಾಗುವದು. ಗೊಲ್ಲಾಳನು ಶರಣನಾಗಿ ಇವುಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡನೇ ಎಂಬುದು ಕೇಳಬೇಕಾದ ಪ್ರಶ್ನೆ. ಹೆಸರೇ ಸೂಚಿಸುವಂತೆ ಒಟ್ಟು ಐದು ಆಚಾರಗಳು ಪಂಚಾಚಾರಗಳು, ೧. ಲಿಂಗಾಚಾರ, ೨. ಸದಾಚಾರ, ೩. ಶಿವಾಚಾರ, ೪. ಭೃತ್ಯಾಚಾರ, ೫. ಗಣಾಚಾರ ಇವುಗಳೇ ಪಂಚಾಚಾರಗಳು. ಇವುಗಳು ತಮಗೆ ಪ್ರಾಣವೆಂದು ವೀರಶೈವರು ಅರಿತಿರುವರು. ಇದರಂತೆ ನಡೆದುಕೊಳ್ಳಬೇಕೆಂದು ಹೇಳುವುದಿದೆ. "ಅನ್ಯ ದೇವರ ಪೂಜೆ ಇಲ್ಲದಿರುವುದೇ ಲಿಂಗಾಚಾರವಾಗಿದೆ. ಎಲ್ಲ ಜನರು ಹೌದೆನ್ನುವಂತೆ ನಡೆದುಕೊಳ್ಳವುದೇ ಸದಾಚಾರವು. ಶಿವಭಕ್ತರಲ್ಲಿ ಜಾತಿಭೇದವನ್ನು ಎಣಿಸದಿರುವುದೇ ಶಿವಾಚಾರವು. ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವದೇ ಭೃತ್ಯಾಚಾರವು. ಶಿವನಿಂದಕರನ್ನು ಶಿವಧರ್ಮ ದೂಷಕರನ್ನು ಶಾಸನ ಮಾಡುವುದೇ ಗಣಾಚಾರವು. ಈ ಪ್ರಕಾರ ಪಂಚಾಚಾರಗಳ ಲಕ್ಷಣಗಳಿರುತ್ತವೆ."[೩೧] ಗೊಲ್ಲಾಳನು ಶಿವಾನುಭವಿಯಾಗಿ ಪಂಚಾಚಾರಗಳನ್ನು ಆಚರಿಸಿದವನಾಗಿದ್ದಾನೆ. ಲಿಂಗವನ್ನು (ಶಿವ) ಪೂಜಿಸಿ, ಇಷ್ಟಲಿಂಗವೇ ದೇವರೆಂದು ಭಾವಿಸಿ, ಅನ್ಯದೇವರನ್ನು ಪೂಜಿಸಲಿಲ್ಲ. ಎಲ್ಲ ಸಮಾಜದ ಜನಗಳಿಗೆ ಹೌದೆನಿಸಿಕೊಂಡು ಎಲ್ಲರ ಪ್ರೇಮವನ್ನು ಪಡೆದಿದ್ದಾನೆ. ಯಾರಲ್ಲಿಯೂ ಜಾತಿಭೇದಗಳನ್ನು ಮಾಡಿರುವುದಿಲ್ಲ. ಶಿವಭಕ್ತರೇ ಬಂಧುಗಳೆಂದು, ಶಿವಕುಲವೇ ಶ್ರೇಷ್ಠಕುಲವೆಂದು ಸಾರಿದನು. ದುಷ್ಟರಿಗೆ (ಶಿವನಿಂದಕರಿಗೆ) ಸನ್ಮಾರ್ಗದಲ್ಲಿ ನಡೆಸಲು ಪ್ರಯತ್ನಿಸಿದನು.

ಶರಣರು ಮನುಕುಲವನ್ನು ಜಾತ್ಯತೀತ ನೆಲೆಗೆ ತರಲು ಹಗಲಿರುಳು ಶ್ರಮಿಸಿದ್ದಾರೆ. ಪ್ರಜಾಪ್ರಭುತ್ವದ ಆಶಯ ಏನಿದೆಯೋ ಅಂಥಹ ಸಮಾಜವನ್ನು ರೂಪಿಸಲು ಸಾವಿರ ವರುಷಗಳ ಹಿಂದೆಯೇ ಇವರು ಅದನ್ನು ಸಾಧಿಸಲು ಹೆಣಗಿದರು. ಶಿವಾಚಾರದ ಅರ್ಥವು ಜಾತ್ಯತೀತವಾಗಿ ವರ್ತಿಸುವದೇ ಇರುತ್ತದೆ. ಇವರದು ಧಾರ್ಮಿಕ ವರ್ಗ, ಯಾವ ಒಂದು ಪಂಗಡಕ್ಕೆ ಸಂಬಂಧ ಪಡದವರು. ಆದ್ದರಿಂದ ತಾವು ಜಾತಿವಾಚಕ ವರ್ಗವೆಂದು ಎಲ್ಲಿಯೂ ಹೇಳಿರುವುದಿಲ್ಲ. ಗೊಲ್ಲಾಳನು ಈ ಪರಂಪರೆಯಲ್ಲಿಯೇ ಬೆಳೆದವನು.

ಶರಣರು ಕಾಯಕಕ್ಕೆ ಒಂದು ಉಚ್ಚ ಸ್ಥಾನವನ್ನು ತಂದುಕೊಟ್ಟಿದ್ದಾರೆ. ಮನುಷ್ಯನ ಧಾರ್ಮಿಕ ಹಾಗೂ ಸಾಮಾಜಿಕ ಬೆಳವಣಿಗೆಯೊಂದಿಗೆ ಆರ್ಥಿಕ ಬೆಳವಣಿಗೆಯೂ ಅಷ್ಟೇ ಮುಖ್ಯವಾಗಿರುತ್ತದೆ. ನಾವು ಮಾಡುವ ಕಾಯಕಗಳಲ್ಲಿ ಮೇಲು ಕೀಳು ಎಂಬುದು ಇಲ್ಲ. ಪ್ರತಿಯೊಬ್ಬನು ಉದ್ಯೋಗ ಮಾಡಿಕೊಂಡೇ ಬದುಕಬೇಕೆಂಬ ನಿಯಮವಿದೆ. ಕಾಯಕಗಳನ್ನು ಮಾಡುವಲ್ಲಿ ದಾಸೋಹ ಭಾವವಿರಬೇಕೆಂದು ಹೇಳಿದ್ದಾರೆ. ತಾವು ಸಂಪಾದಿಸುವ ಹಣದಿಂದ ಸನ್ಮಾರ್ಗವನ್ನು ತಿಳಿಯಬೇಕು. ಮಾನವ ಸಮಾಜವು ಸ್ವಾವಲಂಬಿಯಾಗಿ ಬದುಕಬೇಕು. ಮನುಕುಲದಲ್ಲಿ ಶ್ರೀಮಂತ -ಬಡವ ಎಂಬ ತಾರತಮ್ಯ ಇರಕೂಡದು. ಗೊಲ್ಲಾಳನು ಕುರಿಕಾಯುವ (ಪಶುಪಾಲನೆ) ಕಾಯಕದಲ್ಲಿ ನಿರತನಾಗಿ, ಸಮಾಜಕ್ಕೆ ಉಪಕಾರಿಯಾಗಿ, ಎಲ್ಲರೂ ಒಂದೇ ಎಂದು ಬಾಳಿ ಬದುಕಿದವನು. ಈತನಲ್ಲಿ ಸ್ತ್ರೀ ಪುರುಷ ಎಂಬ ಭೇದವಿಲ್ಲ. ಅಹಿಂಸಾ ಧರ್ಮವನ್ನು ಪಾಲಿಸಿದವನು. ಶಿವಯೋಗದಲ್ಲಿ ಸಾಧನೆಗೈದವನು, ಬಸವಪೂರ್ವಯುಗದಲ್ಲಿ ಜನಿಸಿ ಈ ಕಾರ್ಯಗಳನ್ನು ಮಾಡಿರುವನು. ಆದರೆ ಅನೇಕ ಶರಣರ ವಿಚಾರಗಳು ಜನಮಾನಸದಲ್ಲಿ ಮಸಳಿಸಿ ಹೋದಂತೆ ಈತನು ವಿಚಾರಗಳೂ ಮಸಳಿಸಿ ಹೋಗಿದ್ದುಂಟು. ಆದರೆ ಇಂದು ಬಹುಶಿಸ್ತೀಯ ಅಧ್ಯಯನದಿಂದ ಗೊಲ್ಲಾಳನಂತಹ ಶರಣರ ತತ್ವಗಳು ಪುನಃ ತಲೆ ಎತ್ತಹತ್ತಿವೆ. ಅವರು ಮಾಡಿದ ಮಹತ್ಕಾರ್ಯಗಳ ಅರಿವು ಎಲ್ಲರಿಗೂ ಆಗಹತ್ತಿವೆ.

**ಕೊನೆಯ ಟಿಪ್ಪಣಿಗಳು**

೧. ಡಾ. ರಡ್ಡೇರ. ರಾಮರೆಡ್ಡಿ ಎಸ್. ದೇವರ ದಾಸಿಮಯ್ಯನ ಜೀವನ ಮತ್ತು ಸಾಹಿತ್ಯ, ವೆಂಕಾಮಣಿ ಪ್ರಕಾಶನ ಉಮಾಶಂಕರ ನಗರ ರಾಣೇಬೆನ್ನೂರು -೨೦೦೫ ಪುಟii

೨. ಡಾ. ಬಸವರಾಜು ಎಲ್. ಬಸವಪೂರ್ವ ವಚನಕಾರರು,ಡಾ ಎಂ ಭೈರೇಗೌಡ ಮುದ್ದುಶ್ರೀ ಗ್ರಂಥಮಾಲೆ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಕೃಷ್ಣಾಪುರದೊಡ್ಡಿ, ಹಂಪಿ ನಗರ, ಬೆಂಗಳೂರು ೨೦೦೯ಪು. ೧೬೩

೩. ಹಳಕಟ್ಟಿ ಫ. ಗು. ೭೭೦ ಅಮರಗಣಾಧೀಶ್ವರರ ಚರಿತ್ರೆಗಳು ಶಿವಾನುಭವ -೧೯೫೪ ಪು. ೧೪೭-೧೪೮

೪. ಡಾ. ಪಾಟೀಲ ಎಸ್.ಸಿ. (ಸಂ) ಪ್ರೊ. ಚನ್ನಪ್ಪ ಕಟ್ಟಿ. ಪ್ರೊ. ಆರ್.ಎಸ್. ವಾಡೇದ, ಕುರುಬ ಜನಪದ ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ, ಜಿ. ವಿಜಾಪುರ - ೧೯೯೭ ಪು. ೪೧

೫. ಅದೇ ಪುಟ ೪೩

೬. ಅದೇ ಪುಟ ೪೩

೭. ಲೇ. ವಸ್ತ್ರದ ವಿ. ಡಿ. - ಹಾಲಕೆನೆ ಸಂ. ಡಾ. ಶ್ರೀರಾಮ ಇಟ್ಟಣ್ಣವರ ಅಧ್ಯಕ್ಷರು ಕಾಳಿದಾಸ ಶಿಕ್ಷಣ ಸಂಸ್ಥೆ ವಿಜಾಪೂರ - ೨೦೦೨ ಪು.೧೨೮

೮. ಪ್ರೊ. ಸಿದ್ಧರಾಮಯ್ಯ ಎಸ್. ಜಿ. - ಬಸವ ಪಥ, ಕುರುಬ ಗೊಲ್ಲಾಳ ವಿಶೇಷಾಂಕ ಜುಲೈ ೨೦೦೬,ಪು. ೧೨
೯. ಅದೇ ಪು. ೧೨
೧೦. ಅದೇ ಪು. ೧೩
೧೧. ಅದೇ ಪು. ೧೯
೧೨. ಡಾ. ಮುದ್ದೇಬಿಹಾಳ ಆರ್. ಸಿ. - ಕುರುಬ ಗೊಲ್ಲಾಳೇಶ್ವರ, ಗೊಲ್ಲಾಳೇಶ್ವರ ಪ್ರಕಾಶನ, ವಿಜಾಪೂರ-೨೦೦೧, ಪು.೩
೧೩. ಡಾ. ಕಲಬುರ್ಗಿ ಎಂ.ಎಂ. (ಸಂ) ಹರಿಹರನ ರಗಳೆಗಳು- ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ, ಪು. ೫೦೭
೧೪. ಭಾನುಮತಿ ವೈ.ಸಿ. (ಸಂ) ಸ್ವರ ವಚನ ಸಂಪುಟ -೪: ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರು- ಪು. ೨೧೬
೧೫. ಪಾಲ್ಕುರಿಕೆ ಸೋಮನಾಥ (ಸಂ.) (ಸಂ.)ಡಾ. ಪಿ.ವಿ. ನಾರಾಯಣ, ಬಸವಪುರಾಣ ತರಳಬಾಳು ಪ್ರಕಾಶನ, ಅಣ್ಣನ ಬಳಗ- ಸಿರಿಗೆರೆ, ಪು. ೮೧
೧೬. ಲಕ್ಕಣ್ಣ ದಂಡೇಶ (ಸಂ.) ಎಚ್. ದೇವೀರಪ್ಪ, ಶಿವತತ್ತ್ವ ಚಿಂತಾಮಣಿ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೬೦-ಪು. ೩೩೯
೧೭. ಶಾಂತಲಿಂಗ ದೇಶಿಕ (ಸಂ) ಡಾ. ಆರ್.ಸಿ. ಹಿರೇಮಠ - ಡಾ. ಎಂ.ಎಸ್. ಸುಂಕಾಪುರ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಭಾಗ-೨ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೧೯೬೮ ಪು. ೭೯, ೮೦
೧೮. ಡಾ. ಬಿರಾದಾರ ಬಿ.ಜಿ. -ಕುರುಬರ ಗುರು ಒಡೆಯರು -ಸಾಂಸ್ಕೃತಿಕ ಅಧ್ಯಯನ ವಿಕಾಸ ಶೋಧನೆ ಶಿಕ್ಷಕರ ಬಡಾವಣೆ, ಹೊಸಪೇಟೆ- ೨೦೧೦ ಪು. ೨೬, ೨೭
೧೯. ಬಿಜ್ಜರಗಿ ಚಂದ್ರಕಾಂತ - ಕುರುಬರ ಹೆಜ್ಜೆಗಳು - ಒಂದು ಅಧ್ಯಯನ- ಪ್ರಕಾಶನ ಶೈಲಚಂದ್ರ ಪ್ರಕಾಶನ, ವಿಜಾಪೂರ - ೨೦೦೬ ಪು. ೮೨
೨೦. ಡಾ. ಪಾಟೀಲ ಎಸ್.ಸಿ. (ಲೇಖನ) ಬಸವಪಥ ಪತ್ರಿಕೆ, ಕಂಬಿ-ಕಾವಡಿ ಸಂ. ೯, ಸಂ. , ಪುಟ ೧೯೮೬
೨೧. ಡಾ. ಹಳಕಟ್ಟಿ ಫ.ಗು.(ಸಂ) ಡಾ. ಎಸ್.ಕೆ. ಕೊಪ್ಪ ಡಾ. ಎಂ.ಎಂ. ಪಡಶೆಟ್ಟಿ, ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ - ಚರಿತ್ರಸಾಹಿತ್ಯ -೧ (ಸಂ)೧೦ ಪ್ರಕಾಶನ ವಚನಪಿತಾಮಹ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರ ಬಿ.ಎಲ್. ಡಿ.ಇ. ಸಂಸ್ಥೆ ವಿಜಾಪೂರ ೨೦೦೭ ಪ. ೨೯
೨೨. ಅದೇ ಪು. ೧೧೮
೨೩. ಡಾ. ಫ.ಗು. ಹಳಕಟ್ಟಿ (ಸಂ) ಡಾ. ಎಂ.ಎಸ್. ಮದಭಾವಿ, ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ ೧೧, (ಚರಿತ್ರ ಸಾಹಿತ್ಯ:೨) ಪ್ರಕಾಶನ ವಚನ ಪಿತಾಮಹ ಫ.ಗು. ಹಳಕಟ್ಟಿ ಸಂಶೋಧನಾ ಕೇಂದ್ರ ವಿಜಾಪೂರ ೨೦೦೭
೨೪. ಅದೇ ಪು. ೩೦೦
೨೫. ಅದೇ ಪು. ೩೦೨
೨೬. ಅದೇ ಪು. ೩೦೩
೨೭. ಅದೇ ಪು ೩೦೩
೨೮. ಅದೇ ಪು. ೩೦೩
೨೯. ಅದೇ ಪು. ೩೦೪
೩೦. ಅದೇ ಪು. ೩೦೬, ೩೦೭

# ಅಧ್ಯಾಯ - ೮
# ಸಮಾರೋಪ

ಚಾರಿತ್ರಿಕ ಅಧ್ಯಯನದ ಕೊರತೆಯಿಂದ ಅದೆಷ್ಟೋ ಮಹಾತ್ಮರು, ಸತ್ಪುರುಷರು ಪುರಾಣೀಕೃತ ವ್ಯಕ್ತಿಗಳಾಗಿ, ದೈವವಾಗಿ, ದೇಗುಲದಲ್ಲಿ ಪೂಜೆಗೊಳ್ಳುತ್ತಿದ್ದಾರೆ. ಈ ನನ್ನ ಅಧ್ಯಯನದಲ್ಲಿ ದೈವವಾಗಿರುವ, ಗೋಲಗೇರಿ ಗೊಲ್ಲಾಳೇಶ್ವರನನ್ನು ಚರಿತ್ರೆಯ ಚೌಕಟ್ಟಿನಲ್ಲಿ ಗುರುತಿಸಲಾಗಿದೆ. ಆತನ ನೈಜವಾದ ಇತಿಹಾಸವನ್ನು ವೀರಶೈವ ಸಾಹಿತ್ಯದಲ್ಲಿ ಲಭ್ಯವಾದ ಆಕರಗಳು ಹಾಗೂ ಗೋಲಗೇರಿಯಲ್ಲಿ ವಾಸವಾಗಿರುವ ದೇವರಮನೆ ಕುಟುಂಬದ ಇತಿಹಾಸ ಮತ್ತು ಇವರ ಕುರಿತು ಹೆಳವರು ಹೇಳಿದ್ದ, ದಾಖಲಿಸಿದ, ಮಾಹಿತಿಯನ್ನಾಧರಿಸಿ, ಈ ನಾಡಿನ ಪ್ರಸಿದ್ಧ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಹಾಗೂ ಗೊಲ್ಲಾಳೇಶ್ವರ ಹೆಸರಿನಲ್ಲಿ ನಿರ್ಮಿಸಿದ ದೇವಾಲಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಗೊಲ್ಲಾಳೇಶ್ವರನಿಂದ ರಚಿತವಾದ ವಚನಗಳನ್ನೂ ವಿವರಣಾತ್ಮಕವಾಗಿ ವಿಶ್ಲೇಷಣೆ ಮಾಡಲಾಗಿದೆ. ಈ ವಚನಕಾರ ಶರಣಗೊಲ್ಲಾಳ ಬಸವಣ್ಣನವರಿಗಿಂತ ಹಿರಿಯನಾಗಿದ್ದನು ಎಂಬ ಅಭಿಪ್ರಾಯಕ್ಕೆ ಬರಲಾಗಿದೆ.

ಗೊಲ್ಲಾಳನು ಹುಟ್ಟಿದ್ದು ವಿಜಾಪೂರ ಜಿಲ್ಲೆಯ ಸಿಂದಗಿ ತಾಲ್ಲೂಕಿನ, ಢವಳಾರ ಎಂಬ ಗ್ರಾಮದಲ್ಲಿ. ಆತನ ತಂದೆ ಕಾಟಕೂಟ. ತಾಯಿ ದುಗ್ಗಳೆ, ಈ ದಂಪತಿಗಳು ಕುರುಬ ಜನಾಂಗದವರಾಗಿದ್ದರು. ಕುರಿ ಕಾಯುವದೇ

ಇವರ ಕಾಯಕವಾಗಿತ್ತು. ಆತನು ಬಸವ ಪೂರ್ವಕಾಲದವನೆಂದು ಹಲವು ನಿದರ್ಶನಗಳ ಮುಖಾಂತರ ದೃಢಪಡಿಸಿದೆ.

ಗೊಲ್ಲಾಳೇಶ್ವರ ಕಾಲದ ಸಾಮಾಜಿಕ ಜೀವನ, ಧಾರ್ಮಿಕ ಸಂದರ್ಭಗಳನ್ನು ಈ ಅಧ್ಯಯನದಲ್ಲಿ ವಿವೇಚಿಸಲಾಗಿದೆ. ಆತನು ಕೆಳವರ್ಗದ ಕುರುಬ ಜನಾಂಗದಲ್ಲಿ ಜನಿಸಿದರೂ, ಮೇಲುವರ್ಗದ ಆರಾಧ್ಯ ದೈವವಾಗಿ ಇಂದಿಗೂ ಪೂಜೆಗೊಳ್ಳುತ್ತಿರುವ ಆತನ ವ್ಯಕ್ತಿತ್ವವನ್ನು ವಿವರಿಸಲಾಗಿದೆ. ಮೇಲುವರ್ಗದವರಾದ ಬಣಜಿಗ, ಪಂಚಮಶಾಲಿ, ಗಾಣಿಗೇರ, ರಡ್ಡಿ, ಕುಡೊಕ್ಕಲಿಗ, ಈ ಜನಾಂಗದವರು ಗೊಲ್ಲಾಳೇಶ್ವರನನ್ನು ಮನೆಯ ದೇವರನ್ನಾಗಿ ಆರಾಧಿಸುತ್ತಿರುವುದನ್ನು ವಿವರಿಸಿದೆ. ಆದರೆ ಕುರುಬ ಜನಾಂಗದವರು ಗೊಲ್ಲಾಳನನ್ನು ಹೆಚ್ಚಾಗಿ ಪೂಜಿಸುವುದಿಲ್ಲ. ಇದಕ್ಕೆ ಧಾರ್ಮಿಕ ಪರಿಸರವು ಕಾರಣವಾಗಿದೆ. ಅಂದು ಈ ಕುಟುಂಬ ಶೈವರಾಗಿರಲಿಕ್ಕಿಲ್ಲ ಇದಕ್ಕೆ ಸ್ವತಃ "ತಂದೆಯೇ ವಿರೋಧ ವ್ಯಕ್ತಪಡಿಸುವಲ್ಲಿ ಗೊಲ್ಲಾಳನ ಮತ ಶೈವವಾಗಿರಲಿಕ್ಕಿಲ್ಲ, ಆದರೂ ಆತನ ಶೈವ ಪ್ರೀತಿಗೆ ಮಿತಿ ಇರಲಿಲ್ಲ. ಹೀಗಾಗಿ ಜೀವಮಾನವಿಡೀ ಶೈವಾರಾಧನೆಯನ್ನು ಅಚಲವಾಗಿ ಪಾಲಿಸಿಕೊಂಡು ಬಂದ. ಆದರೆ ಕುರುಬ ಜನಾಂಗದವರು ಗೊಲ್ಲಾಳೇಶ್ವರನನ್ನು ಒಪ್ಪಿಕೊಳ್ಳಲಿಲ್ಲ. ಉಳಿದ ಮೇಲುವರ್ಗದ ಜನಾಂಗದವರು ಅಪ್ಪಿಕೊಳ್ಳುವಂತಾಯಿತು."[1] ಇವನು ಶೈವಧರ್ಮಿಯಾಗಿ ಶಿವನಾರಾಧಕನಾದನೆಂದು ತಿಳಿದು ಬರುವುದು.

"ಬಸವ ಪೂರ್ವ ಯುಗದಲ್ಲಿ ಉಗ್ರಭಕ್ತಿಯ ಅರವತ್ತುಮೂವರು ಬಾಣ ಮಯೂರಾದಿ ಶೈವರು ಮತ್ತು ಶೈವ ವೀರಶೈವಗಳ ಸಮ್ಮಿಶ್ರ ಆಚರಣೆಯ ಸಮ ಉಗ್ರಭಕ್ತಿಯ ದೇವರ ದಾಸಿಮಯ್ಯಾದಿ ಶರಣರು ಕಂಡುಬರುತ್ತಾರೆ.

ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣ
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣಾ
ಸಿರಿಯಾಳನ ಮಗನ ಬೇಡಿದದಂದಿಂದ ಭಯ ಕಾಣಿರಣ್ಣಾ
ದಾಸನ ವಸ್ತ್ರವ ಬೇಡಿದಂದಿಂದ ಭಯ ಕಾಣಿರಣ್ಣಾ
ಅಘಟಿತ ಘಟಿತರು ವಿಪರೀತ ಚರಿತರು
ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ"[2]

ಗೊಲ್ಲಾಳನೂ ಲಿಂಗಪೂಜೆ ನಿಷ್ಠೆಯಲ್ಲಿರುವಾಗ, ತಂದೆ ಲಿಂಗಕ್ಕೆ ಅಪಮಾನಿಸಿದನೆಂದು ತಂದೆಯನ್ನು ಕೊಲ್ಲುತ್ತಾನೆ.

ಗೊಲ್ಲಾಳನು ಕುರಿಯ ಹಿಕ್ಕೆಯನ್ನು ಲಿಂಗವೆಂದು ಪೂಜಿಸಿದ ಸ್ಥಳವೇ ಗೋಲಗೇರಿ. ಇದು ಆತನ ಕರ್ಮಭೂಮಿ ಹಾಗೂ ಐಕ್ಯಸ್ಥಳವೆಂದು ಹೇಳಲಾಗಿದೆ. ಗೊಲ್ಲಾಳೇಶ್ವರ ದೇವಸ್ಥಾನಗಳ ಎದುರುಗಡೆ ಇಂದೂ ಅರ್ಚಕರ ಸಮಾಧಿಯನ್ನು ಮಾಡಲಾಗುತ್ತದೆ. ಇದಕ್ಕೆ ನಾಗರಕಟ್ಟೆ ಎನ್ನುವರು. ಈ ಉಲ್ಲೇಖದಂತೆ ಗೊಲ್ಲಾಳನ ಸಮಾಧಿ ಗೋಲಗೇರಿಯಲ್ಲಿದೆ.

ಗೊಲ್ಲಾಳನು ಶರಣನಾಗಿ ವಚನಗಳನ್ನು ರಚಿಸಿದ. ಆದರೆ ಉಪಲಬ್ಧವಾದ ಹತ್ತು ವಚನಗಳನ್ನು ಅಧ್ಯಯನ ಮಾಡಲಾಗಿದೆ. ಇವುಗಳು ಬೆಡಗಿನ ವಚನಗಳೆಂದು ವಿದ್ವಾಂಸರು ಗುರುತಿಸಿರುವರು. ವಚನಗಳು ಅತ್ಯಂತ ಎತ್ತರ ಮಟ್ಟದ ಅನುಭವವನ್ನು ಹೊಂದಿದ ವಚನಗಳಾಗಿವೆಯೆಂದು ವಿಶ್ಲೇಷಣೆ ಮಾಡಲಾಗಿದೆ. ಈತನ ವಚನಗಳ ಅಂಕಿತ ನಾಮವು ವೀರಬೀರೇಶ್ವರ ಎಂದಿದೆ. "ವಚನಕಾರರಲ್ಲಿ ಬಹುಮಂದಿ ತಮ್ಮ ಆರಾಧ್ಯದೈವವನ್ನು ಅಥವಾ ಇಷ್ಟದೈವವನ್ನು ತಮ್ಮ ವಚನಗಳ ಅಂಕಿತಗಳನ್ನಾಗಿ ಮಾಡಿಕೊಳ್ಳುವದು ರೂಢಿ. ಇಷ್ಟಲಿಂಗದ ಕಲ್ಪನೆಯುಳ್ಳ ವೀರಶೈವರಿಗೆ ಇದು ತುಂಬಾ ಸಹಜವಾದುದೂ ಹೌದು"[೩] ಭಕ್ತ ಗೊಲ್ಲಾಳನು ತಾನು ಮಾಡಿದುದೆಲ್ಲವನ್ನೂ ತನ್ನ ಇಷ್ಟ ದೈವವಾದ ವೀರಬೀರೇಶ್ವರನಿಗೆ ಸಮರ್ಪಿಸಿದ್ದಾನೆ. ಷಟ್‌ಸ್ಥಲದ ವಿಚಾರಗಳನ್ನು ಪರವಸ್ತುವಿನ ಸ್ವರೂಪವನ್ನು ತನ್ನ ವಚನಗಳಲ್ಲಿ ಚಿತ್ರಿಸಿದ್ದಾನೆ. ಆತನು ಒಬ್ಬ ಜ್ಞಾನಿ ಶರಣನೆಂದು ನಾವು ಗುರುತಿಸಿದ್ದೇವೆ. ಷಟಸ್ಥಲಗಳಲ್ಲಿ ಪಾಲಿಸುವ ಭಕ್ತಿ ತನಗೆ ಬರಲೆಂದು ಆತ ದೇವರಲ್ಲಿ[೩] ಪ್ರಾರ್ಥಿಸುತ್ತಾನೆ."[೪] ಗೊಲ್ಲಾಳನು ಮುಗ್ಧನಲ್ಲ ಅವನೊಬ್ಬ ಜ್ಞಾನಿಯಾಗಿದ್ದ ಎಂಬುದಕ್ಕೆ ಆತನ ವಚನಗಳೇ ಸಾಕ್ಷಿಯಾಗಿವೆ.

ವಕ್ಯಗಳ ವಿವರ ಹಾಗೂ ಮೌಖಿಕ ಸಾಹಿತ್ಯದ ಆಕರಗಳಿಂದ ಗೊಲ್ಲಾಳೇಶ್ವರರ ಗುರು, ಜಂಗಮ ನಂದಯ್ಯನೆಂದು ಗುರುತಿಸಲಾಗಿದೆ. ಮತ್ತು ಆ ಕಾಲಮಾನ ಸಂದರ್ಭದಲ್ಲಿ ಜಂಗಮರು ಲಿಂಗದೀಕ್ಷೆ ನೀಡುವವರಾಗಿದ್ದರು. "ಶಿವಶರಣರ ಕಾಲದಲ್ಲಿ ಅವರಿಗಿಂತ ಪೂರ್ವದ ಜಂಗಮರು ಅಸ್ತಿತ್ವದಲ್ಲಿದ್ದರು. ಅವರಲ್ಲಿ ಬಹುಜನರು ಧರ್ಮಬೋಧೆ ಮಾಡುತ್ತಾ ಹಿಂದುಸ್ಥಾನದಲ್ಲೆಲ್ಲ ಸಂಚರಿಸುತ್ತಿದ್ದ ಹಾಗೆ ಶಿವಶರಣರ ಚರಿತ್ರೆಗಳಲ್ಲಿ ಉಲ್ಲೇಖಗಳಿರುತ್ತವೆ. ಅವರು ಒಂದೆಡೆಗೆ ಇರದೆ ಬೇರೆ ಬೇರೆ ದೇಶಗಳಿಗೆ ಹೋಗಿ ಬೋಧೆ ಮಾಡುತ್ತಿದ್ದ ಹಾಗೆ ತೋರಿಬರುತ್ತದೆ. ಕಾಶ್ಮೀರ ದೇಶದ ಅರಸನಾದ ಮಹಾದೇವರಾಜನಲ್ಲಿ ಬಹುಜನ ಜಂಗಮರು ವಾಸವಾಗಿದ್ದು ಅವರು ಆಗಿಂದಾಗ್ಗೆ ಕರ್ನಾಟಕಕ್ಕೆ ಬಂದು ಸಂಚರಿಸುತ್ತಿದ್ದರೆಂದು ಮೋಳಿಗೆ ಮಾರಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. .......ವಿಜಾಪೂರ ಪ್ರಾಂತದಲ್ಲಿ ಕೋನೂರು ಬ್ರಹ್ಮಯ್ಯ, ಗೋಲಗೇರಿಯ ಗೊಲ್ಲಾಳ, ಇಳಿಹಾಳ ಬ್ರಹ್ಮಯ್ಯ ,..... ಇವರೆಲ್ಲರ ಚರಿತ್ರೆಗಳಲ್ಲಿ ಜಂಗಮರ ಅಥವಾ ಮಾಹೇಶ್ವರರ ಉಲ್ಲೇಖಗಳು ಬಂದಿರುತ್ತವೆ."[೫]

ಗುರು ನಂದಯ್ಯನಿಂದ ಗೊಲ್ಲಾಳನು ಇಷ್ಟಲಿಂಗವನ್ನು ಪಡೆದ. ಗುರು ಅನುಗ್ರಹಿಸಿದ್ದನ್ನೇ ಲಿಂಗವೆಂದು ಪೂಜಿಸಿದ. "ವೀರಶೈವ ಧರ್ಮದಲ್ಲಿ ಗುರುವಿನ ಸ್ಥಾನ ಮಹತ್ವದ್ದು. ಮಂತ್ರೋಪದೇಶ ಮಾಡಿ ಶಿಷ್ಯನನ್ನು ಶುದ್ಧೀಕರಿಸಿ, ಅವನ ಅಜ್ಞಾನವನ್ನು ನಿವಾರಿಸಿ, ಇಷ್ಟಲಿಂಗವನ್ನು ಅನುಗ್ರಹಿಸಿ ಅವನನ್ನು ಉದ್ಧರಿಸುವ ಗುರುವಿನ ಪಾತ್ರ ದೊಡ್ಡದು. ಲಿಂಗಧಾರಣೆಯಾಗುವುದರ ಮೂಲಕ ಸಾಮಾಜಿಕವಾಗಿ ದೂರವಿರಿಸಲ್ಪಟ್ಟ ತಾವು ಉತ್ತಮರೆನಿಸುವೆವೆಂಬ ಭಾವಭ್ರಮೆಯಿಂದ ಹನ್ನೆರಡನೆ ಶತಮಾನದಲ್ಲಿ ಕೆಳವರ್ಗಕ್ಕೆ ಸೇರಿದವರಲ್ಲಿ ಬಹಳ ಮಂದಿ ಲಿಂಗಧಾರಣೆಗೆ ಹಾತೊರೆದರು."[೬] ಇದರ ಫಲವಾಗಿ ಆಸೆ ಆಮಿಷಗಳಿಗೆ ಒಳಗಾದ ಜಂಗಮರು

ಯೋಗ್ಯನಾದವನಿಗೂ, ಯೋಗ್ಯ ಅಲ್ಲದವನಿಗೂ ಲಿಂಗವನ್ನು ಅನುಗ್ರಹಿಸಿದರು. ಹೀಗೆ ಜಂಗಮರು ಹಣದ ಆಮಿಷಕ್ಕೆ ಒಳಗಾಗಿದ್ದರು. ಗೊಲ್ಲಾಳನು ಹೊನ್ನಿನ ಬಿಂದಿಗೆಯನ್ನು ನೀಡಿ ಲಿಂಗದೀಕ್ಷೆಯನ್ನು ಪಡೆದನು. ಈ ತೆರನಾದ ನಡುವಳಿಕೆಯನ್ನು ಕುರಿತು ಅಂಬಿಗರ ಚೌಡಯ್ಯನಂಥವರು ತಮ್ಮ ವಚನಗಳಲ್ಲಿ ಕಟುವಾಗಿ ಟೀಕಿಸಿದ್ದಾರೆ. ಈ ವಿಷಯದ ವಿಶ್ಲೇಷಣೆಯನ್ನು ಮಾಡಲಾಗಿದೆ.

ಗೊಲ್ಲಾಳನ ಪ್ರಭಾವಲಯ ನಾಡಿನಾದ್ಯಂತ ಹರಡಿತ್ತು ಎಂಬುದನ್ನು ವಿವರಿಸಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯದವರು (ಹಸ್ತಪ್ರತಿ ವಿಭಾಗದಿಂದ) ಸಂಗ್ರಹಿಸಿದ ಹಸ್ತಪ್ರತಿಗಳಲ್ಲಿ ತಾಳೆಪ್ರತಿ ಕಟ್ಟೊಂದು ದೊರೆತಿದ್ದು, ಇದರಲ್ಲಿ ವೀರಗೊಲ್ಲಾಳನ ಚಾರಿತ್ರವಿರುವುದು. ಹಾಗೂ ಗೋಲಗೇರಿಯ ದೇವರಮನೆ ಕುಟುಂಬದಲ್ಲಿ ಗೊಲ್ಲಾಳೇಶ್ವರ ಪುರಾಣ ಹಸ್ತಪ್ರತಿ ಇರುವದು. ಇವುಗಳ ಆಧಾರದಿಂದಲೂ ಇವನೊಬ್ಬ ಶರಣನಾಗಿ ಬದುಕಿದ, ಹನ್ನೆರಡನೆ ಶತಮಾನದ ವೈಚಾರಿಕ ಕ್ರಾಂತಿಗೆ ತಳಪಾಯ ಹಾಕಿದ ಬಹು ಜನ ಶರಣರಲ್ಲಿ ಇವನೂ ಒಬ್ಬನಾಗಿದ್ದನೆಂದು ಗುರುತಿಸಲಾಗಿದೆ.

ಗೊಲ್ಲಾಳೇಶ್ವರನು ಕನ್ನಡ ನಾಡಿನ ವೀರಶೈವ ಸಾಹಿತ್ಯದಲ್ಲಿ, ಜಾನಪದ ಸಾಹಿತ್ಯದಲ್ಲಿ ಬಿಂಬಿತವಾದಂತೆ ಒಬ್ಬ ಶರಣನಾಗಿದ್ದ. ಆತನು ಶರಣ ಸಂಪ್ರದಾಯದಲ್ಲಿಯೇ ಬೆಳೆದು ಬೆಳಕು ನೀಡಿದವನಾಗಿದ್ದಾನೆ." ಜಂಗುಳಿಯ ದೈವವ ಪೂಜಿಸೆಂಜಲ ತಿಂಬ ಲಿಂಗಹೀನಗೆ ಲಿಂಗವುಂಟೆ? ಎನ್ನುತ್ತಾ ನೀನು ನನಗೆ ತಂದೆಯಲ್ಲ, ನನ್ನ ವೈರಿಯೆಂದು ಆತನ ಶಿರವನ್ನು ಕಡಿದನು"[೭] ಗೊಲ್ಲಾಳನಿಗೆ 'ಲಿಂಗ ನಿಷ್ಠೆಯೇ' ಬದುಕಾಗಿತ್ತು.

"ಲಿಂಗವ ಕಟ್ಟಿ ಫಲವೇನೊ ಕೇಳಿರೊ
ಜಂಗಮದಿಂಗಿತವರಿದು
ಅಂಗ ಮನವು ಒಪ್ಪಿ ತೀರ್ಥ ಪ್ರಸಾದವ
ಹಿಂಗದಿರ್ದಡೆ ಮುಕ್ತಿಯುಂಟೆ"[೮]

ಲಿಂಗದ ಮಹತ್ವವನ್ನು ಅರಿತವನಾಗಿ, ತಂದೆಯನ್ನು ಲಿಂಗದ ಅರಿವಿಗೆ ತಂದುದಲ್ಲದೆ, ತನ್ನ ಸುತ್ತಣ ಜನಾಂಗಗಳಲ್ಲಿ ಲಿಂಗದ ಮಹತ್ವವನ್ನು ಪ್ರಸಾರ ಮಾಡಿದನೆಂದು ಗೊಲ್ಲಾಳನ ಚಾರಿತ್ರದ ಕಥಾಸಾರದಿಂದ ಕಂಡುಕೊಂಡ ವಿಷಯವನ್ನು ವಿವರಿಸಲಾಗಿದೆ.

ಗೊಲ್ಲಾಳನ ವೃತ್ತಿ ಕುರಿ ಕಾಯುವುದಾಗಿತ್ತು. ಶರಣರ ತತ್ವದಂತೆ ಕಾಯಕ ಜೀವಿಯಾಗಿದ್ದ ಆತ ಕಾಯಕಕ್ಕೆ ಮಹತ್ವ ನೀಡಿದವನು. ಲಿಂಗಕಾಣಲು ಶ್ರೀಶೈಲಕ್ಕೆ ಪರಶೆ ಹೊರಟಾಗಲು. ಅದಕ್ಕೆ ಮರುಳಾಗದೆ ಜ್ಞಾನವುಳ್ಳವನಾಗಿ ಕಾಯಕದಲ್ಲಿದ್ದುಕೊಂಡೇ 'ಲಿಂಗ' ಆಯತ ಮಾಡಿಕೊಂಡವನು. ಅರುವಿನ ಕುರುಹಾಗಿ ಬದುಕಿದವನು. ಹೆತ್ತವರಿಗೂ ಮುಕ್ತಿಯ ಮಾರ್ಗವನ್ನು ತೋರಿಸಿದವನು.

ಭಕ್ತಿ, ನಂಬಿಕೆ, ನಿಷ್ಠೆ, ಈ ವಿಷಯಗಳಲ್ಲಿ ಗೊಲ್ಲಾಳನಂತಹ ಅಚಲ ಮನಸ್ಸಿನವರು ವಿರಳರೆಂಬಂತೆ ವಿಶ್ಲೇಷಣೆ ಮಾಡಲಾಗಿದೆ. ಅಂತರಂಗ ಶುದ್ಧಿಯಿಲ್ಲದೆ. ಭಾವಶುದ್ಧವಿರದೇ ಹೋದರೆ ಮಾನವನ ಬದುಕು

ಕುರಿಹಿಕ್ಕೆಗಿಂತಲೂ ಕನಿಷ್ಠವಾಗುವದು. ಮಾನವನ ಬದುಕು ನಂಬಿಕೆಯಲ್ಲಿ ಕಟ್ಟಲ್ಪಡುತ್ತದೆ. ವಿನಃ ಅಪನಂಬಿಕೆಯಲ್ಲಿ ಅಲ್ಲ. ಅವರವರ ಭಾವಕ್ಕೆ ಅವರವರ ತೆರನಾಗಿ ಇರುತಿಹನು ಶಿವನು ಎಂಬಂತೆ, ಕುರಿಹಿಕ್ಕೆಯಾದರೇನು? ಗುಂಡುಕಲ್ಲಾದರೇನು? ಬಳ್ಳದಲ್ಲಿ ಆದರೇನು? ಮಂದಿರ, ಮಸೀದಿ, ಚರ್ಚುಗಳಲ್ಲಿ ಆದರೇನು? ದೇವರು ಒಬ್ಬನೆ, ಅವನು ಅಖಂಡವಾಗಿದ್ದಾನೆ. ಖಂಡವಾಗಿಲ್ಲ. ನಾವಿದ್ದ ಠಾವಿನಲ್ಲಿಯೇ ದೇವರನ್ನು ಕಾಣಬೇಕು. ನಮ್ಮ ಫಲಿತ ಫಲದಿಂದಲೇ ಪೂಜಿಸಬೇಕು. ಕುರಿ ಹಾಲಾದರೇನು? ಎಕ್ಕೆ ಹೂಗಳಾದರೇನು? ಪೂಜಿಸುವ ಮನಸ್ಸು ಶುದ್ಧವಾಗಿರಬೇಕು. ದೇವರಿಗೆ ಆಕಳ ಹಾಲು, ಆಕಳ ತುಪ್ಪವೇ ಬೇಕಾಗಿಲ್ಲ. ಭವ್ಯ ಮಂದಿರ, ಮಸೀದಿ, ಚರ್ಚುಗಳು ಬೇಕಾಗಿಲ್ಲ ಎಂದು ವಿವರಿಸಿ ಗೊಲ್ಲಳನು ಕಾಯಕದಲ್ಲಿಯೇ ದೇವರನ್ನು ಕಂಡುಕೊಡನೆಂದು, ಆಳವಾಗಿ ಅಭ್ಯಸಿಸುವುದಕ್ಕೆ ಸಾಕ್ಷ್ಯ ಪೂರೈಸಲಾಗಿದೆ.

ಈತನ ಹೆಸರಿನಲ್ಲಿ ನಡೆಯುವ ಜಾತ್ರೆ, ಉತ್ಸವ, ನಂಬಿಕೆ, ಆಚರಣೆ ಸಂಪ್ರದಾಯಗಳು ಸಮಾಜ ಬಾಂಧವ್ಯದ ಬೆಸುಗೆಯಾಗಿವೆ. ಈತನ ಭಕ್ತರು ಒಟ್ಟಾಗಿ ನಡೆಸುವ ಸಾಂಸ್ಕೃತಿಕ ಜೀವನ ವೈವಿಧ್ಯಪೂರ್ಣವೂ, ವೈಶಿಷ್ಟ್ಯಪೂರ್ಣವೂ ಆದವುಗಳಾಗಿವೆ.

ಒಟ್ಟಿನಲ್ಲಿ ಗೊಲ್ಲಾಳೇಶ್ವರನು ಶರಣ ಸಮುದಾಯದಲ್ಲಿ ಮುಗ್ಧ ಕುರಿಗಾಹಿಯಲ್ಲ. ಶರಣರ ಲಿಂಗತತ್ವವನ್ನು ಅರಿತವನಾಗಿದ್ದಾನೆ. ವೀರಶೈವಸಾಹಿತ್ಯದಲ್ಲಿ ಈತನ ಪಾಲು ದೊಡ್ಡದಾಗಿದೆ. ತನ್ನ ಲಿಂಗನಿಷ್ಠೆಯ ಬಲದಿಂದ ಲಿಂಗತತ್ವಕ್ಕೆ (ಶರಣ ತತ್ವಕ್ಕೆ) ಮೌಲಿಕ ಕೊಡುಗೆಯನ್ನು ನೀಡಿದ್ದಾನೆ. ವೀರಶೈವ ಧರ್ಮ-ತತ್ವ-ಸಿದ್ಧಾಂತಗಳಿಗೆ ಪೂರಕವಾಗಿ ಜನ-ಮನದಲ್ಲಿ ಸ್ಥಾಯಿಯಾಗಿದ್ದಾನೆ.

ಗೊಲ್ಲಾಳೇಶ್ವರನು ರಚಿಸಿದ ವಚನಗಳು ಈಗ್ಗೆ ಅಲ್ಪಪ್ರಮಾಣದಲ್ಲಿ ಅಧ್ಯಯನಕ್ಕೆ ಲಭ್ಯವಾಗಿರುವುದರಿಂದ ಇನ್ನೂ ಆತನ ವಚನಗಳು ಇರಬಹುದು. ಆದ್ದರಿಂದ ನಾಡಿನಾದ್ಯಂತ ಕ್ಷೇತ್ರಕಾರ್ಯ ಕೈಗೊಳ್ಳುವ ಮುಖಾಂತರ ಆತನ ವಚನಗಳನ್ನು ಹುಡುಕಿ ವಿಸ್ತೃತ ಸಂಶೋಧನಾತ್ಮಕ ಅಧ್ಯಯನ ಮಾಡಬಹುದಾಗಿದೆ.

**ಕೊನೆಯ ಟಿಪ್ಪಣಿಗಳು**

೧. ಪ್ರೊ. ವಸ್ತ್ರದ ವಿ.ಡಿ. ಹಾಲಕೆನೆ ಸಂ. ಚನ್ನಪ್ಪ ಕಟ್ಟಿ ಮತ್ತು ವಿ.ಡಿ. ವಸ್ತ್ರದ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪೂರ ೨೦೦೨. ಪುಟ - ೧೨೬.
೨. ಡಾ. ಕಲಬುರ್ಗಿ ಎಂ.ಎಂ. ಶಾಸನಗಳಲ್ಲಿ ಶಿವಶರಣರು, ಸಿರಿಗನ್ನಡ ಪ್ರಕಾಶನ, ಕ.ವಿ.ವಿ. ಧಾರವಾಡ. ೧೯೭೦. ಪುಟ - ೪೯.
೩. ನಾರಾಯಣ ಪಿ.ವಿ. ಸಾಧನೆ ಪತ್ರಿಕೆಯ ನಾಲ್ಕನೆಯ ಸಂಚಿಕೆ, ೧೯೭೨, ಪುಟ - ೧೧೫
೪. ಹುಣಸ್ಯಾಳ ಎಸ್.ಎಂ., ಬಸವೇಶ್ವರರ ಸಮಕಾಲೀನರು, ಬಸವ ಸಮಿತಿ ಬೆಂಗಳೂರು ೧೯೬೮, ಪುಟ - ೫೯೫ -೫೯೬
೫. ಡಾ. ಹಳಕಟ್ಟಿ ಫ. ಗು. ಅರವತ್ತುಮೂರು ಶಿವಶರಣರ ಚರಿತ್ರೆಗಳು ಭಾಗ ೩, ಹಿತಚಿಂತಕ ೧೯೪೫, ಪುಟ - ೭೩
೬. ಡಾ. ವಿದ್ಯಾಶಂಕರ ಎಸ್., ವಚನ ಪರುಷ, ಸ್ನೇಹ ಪ್ರಕಾಶನ, ಜ್ಞಾನಭಾರತಿ, ಬೆಂಗಳೂರು ೧೯೮೧, ಪುಟ - ೩೫.
೭. ಡಾ. ಹಳ್ಳಿಕೇರಿ ಎಫ್.ಟಿ., ಕಂಠಪತ್ರ ವಿಕಾಸ ಪ್ರಕಾಶನ, ಶೋಧನ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ, ೨೦೦೩, ಪುಟ - ೧೩೧
೮. ಅದೇ - ಪುಟ - ೧೩೧

## ಅನುಬಂಧಗಳು

೧. ಗೊಲ್ಲಾಳೇಶ್ವರ ಕುರಿತ ಸಾಹಿತ್ಯ

೨. ಪರಾಮರ್ಶನ ಗ್ರಂಥಗಳು

೩. ಪತ್ರಿಕೆಗಳು

೪. ವಕ್ತೃಗಳ ವಿವರ

೫. ಛಾಯಾ ಚಿತ್ರಗಳು

# ಅನುಬಂಧಗಳು
# ಗೊಲ್ಲಾಳೇಶ್ವರ ಕುರಿತ ಸಾಹಿತ್ಯ
## ೧. ಶ್ರೀ ಗೊಲ್ಲಾಳೇಶ್ವರ ಸುಪ್ರಭಾತ

ಕಂ ॥ ಶ್ರೀ ಗುರು ಗೊಲ್ಲಾಳೇಶ್ವರಲಿಂಗೇಶ್ವರ
ವರ ಸುಪ್ರಭಾತವಿದನು ಸಾ -
ನುರಾಗದಿ ಪೇಳುವವರಿಗೆ
ಚಿರ ಸುಖ ಭೋಗ ಮೋಕ್ಷಗಳಪ್ಪುವು ಜಗದಿ ॥

ಶ್ರೀಮದ್ ಭಾವಲಿಂಗ ನೀ ಗೊಲ್ಲಾಳೇಶಲಿಂಗೇಶ
ಶ್ರೀಮತ್ ಪ್ರಾಣಲಿಂಗ ನೀ ಗೊಲ್ಲಾಳ ಲಿಂಗೇಶ
ಶ್ರೀಮತ್ ಪ್ರಣವ ಸ್ವರೂಪ ನೀ ಗೊಲ್ಲಾಳಲಿಂಗೇಶ
ಸುಪ್ರಭಾತವು ನಿನಗೆ ಗೋಲಗೇರಿ ಪುರವಾಸ ॥೧॥

ಸತ್ಯಲಿಂಗವೆ ಏಳು ನಿತ್ಯ ವಂದ್ಯನೆ ಏಳು
ಮರ್ತ್ಯದೊಳು ಮಹಿಮೆಗಳ ಮೆರೆದವನೆ ಏಳು

ಪ್ರತ್ಯಗಾತ್ಮನೆ ಏಳು ಪರಂಜ್ಯೋತಿಯೇ ನೀನೇಳು
ಬೆಳಗಾಯಿತೇಳಯ್ಯ ಗೊಲ್ಲಾಳಲಿಂಗೇಶ ||೨||

ಮೂಡಣದಿ ಉಷೆಯಡರಿ ಮುಂಬೆಳಕ ಬೆಳಗುವುದು
ನಾಡೆ ಸುಸ್ವರ ಗೈಯುವವು ಪಕ್ಷಿ ಸಂಕುಳವು
ಒಡನೆ ಬಿರಿದಿಹವು ಸುಗಂಧದಿಂದ ಪತ್ರೆ ಪುಷ್ಪಾದಿಗಳು
ಬೆಳಗಾಯಿತೇಳಯ್ಯ ಗೊಲ್ಲಾಳಲಿಂಗೇಶ ||೩||

ಉತ್ತುಮಂ ಶಿವಲಿಂಗ ಪೂಜೆಯದು ಬಹು ನ
ಕ್ಷತ್ರವಿಹ ಕಾಲದೊಳೆಂಬುದನರಿದು
ಭಕ್ತ ತಿಂಥಿಣಿ ಮಿಂದು ಬಾಗಿಲಿಗೆ ಬಂದಿಹುದು
ಬೆಳಗಾಯಿತೇಳಯ್ಯ ಗೊಲ್ಲಾಳ ಲಿಂಗೇಶಾ ||೪||

ಶಿವಬಸವ ಶಿವಯೋಗಿ ಮೃತ್ಯುಂಜಯಪ್ಪಗಳು
ವಿಶ್ವಾರಾಧ್ಯ ಸಿದ್ಧರಾಮೇಶ ಮಹಾಂತ ಸ್ವಾಮಿಗಳು
ವಿವಿಧ ಜಂಗಮ ಪುಂಗವರು ದರ್ಶನಕೆ ಬಂದಿಹರು
ಬೆಳಗಾಯಿತೇಳಯ್ಯ ಗೊಲ್ಲಾಳ ಲಿಂಗೇಶ ||೫||

ಭರತಖಂಡದೋಳ್ ಪ್ರಖ್ಯಾತಿ ಪಡೆದ ಹ-
ನ್ನೆರಡು ಜ್ಯೋತಿರ್ಲಿಂಗಗಳ ಮೀರಿದ ಹದಿ-
ಮೂರನೆಯ ಜ್ಯೋತಿರ್ಲಿಂಗವೆಂದರುಹಿತ್ತ
ಗುರು ಗೊಲ್ಲಾಳ ಲಿಂಗೇಶ ಬೆಳಗಾಯಿತೇಳಯ್ಯ ||೬||

ಸತಿ ದುಗ್ಗಳಾದೇವಿ ಪತಿ ಬಲ್ಲುಗರುದರದೊಳ್
ಸುತನಾದ ಗೊಲ್ಲಾಳ ಇಚ್ಚಿಸಿದ ಲಿಂಗವನು ಮ-
ರೆತ ಜಂಗಮನಿತ್ತ ಕುರಿಯ ಹಿಕ್ಕಿಯೊಳಗ-
ವತರಿಸಿದ ಗೊಲ್ಲಾಳ ಲಿಂಗೇಶ ಬೆಳಗಾಯಿತೇಳಯ್ಯ ||೭||

ಭಕ್ತಿ ಭಾವದಿಂ ಗೊಲ್ಲಾಳ ಕುರಿಯ ಹಿಕ್ಕಿಯ ಲಿಂಗಕ್ಕೆ
ಯುಕ್ತಿಯಿಂ ಕುರಿಯ ಹಾಲನೆ ಎರೆದೆರೆದು
ಪತ್ರೆ ಪುಷ್ಪಾದಿಗಳಿಂದಲುಪಚರಿಸುತ್ತ
ಭಕ್ತಿಯಿಂ ಮೈಮನ ಮರೆದನ್ನೈ ಲಿಂಗವೇ ಏಳಯ್ಯ ||೮||

ಕುರಿ ಕಾಯ್ವ ಗೊಲ್ಲಾಳ ಮನೆಗೆ ಬಾರದಿರಲು
ಕುರಿಗಳೆಲ್ಲವು ಹಾಲು ಕರೆಯದಿದ್ದುದ ಕಂಡು
ತ್ವರಿತದಿಂ ತಂದೆ ಅಡವಿಗೈತಂದು
ಭರದಿ ಎಡಗಾಲಿಲೊದೆದನ್ನೆ ಲಿಂಗತಂದೇ ಏಳಯ್ಯ ||೯||

ಕಡು ಭಕ್ತಿಯುತನಾದ ಗೊಲ್ಲಾಳ
ದೃಢ ಮನದಿ ಲಿಂಗವನ್ನಪ್ಪಿ ಗೋಳಾಡಿ
ಕೊಡಲಿಯಿಂ ಪಿತನ ಶಿರ ಕಡಿಯೆ
ದೃಢತೆಗೊಲಿದು ಶರಣ ಪದವಿತ್ತ ಮೃಡನೆ ಏಳಯ್ಯ ||೧೦||

ಸುರಪುರದ ಮರಿಯಪ್ಪಗೊಲಿದವನೆ
ಮರಿಯಪ್ಪನ ಮನೆತನವ ಗೋಲ್ಗಿರಿಗೆ ತರಿಸಿದವನೆ
ಚಿರಕಾಲವು ಸರ್ವ ಸೇವೆ ಬಯಸುವವನೆ
ಬೆಳಗಾಯಿತೇಳಯ್ಯ ಗೊಲ್ಲಾಳ ಲಿಂಗೇಶ
ಸುರಪುರದ ಡಂಬಳದ ಗೌರಮ್ಮಗೊಲಿದೆ ||೧೧||

ದಕ್ಷಿಣದ ಡಂಬಳದ ಗೌರಮ್ಮಗೊಲಿದೆ
ಲಕ್ಷ್ಮೇಶ್ವರ ನಂದಿಗೆ ಕೃಷ್ಣೆಯೊಳು ದಾರಿ ತೋರಿದೆ
ಲಕ್ಷ ಬಿಲ್ವಾರ್ಚನೆಯೊಳು ಶಾಂಭವಿಯ ಪೂಜೆ ಕೈಕೊಂಡೆ
ಅಕ್ಷಯದಾತನೆ ಬೆಳಗಾಯಿತೇಳಯ್ಯ ||೧೨||

ಉಕ್ಕಲಿ ಗೌಡರ ಭಕ್ತಿ ಬೋನವ ನಿತ್ಯ ಉಂಡವನೆ ಏಳಯ್ಯ
ಅಕ್ಕರದಿ ಅನುಗಾಲವೂ ಹಸಿದ ಜಂಗಮ ಕುಣಿಸೆಂದವನೆ ಏಳಯ್ಯ
ಬಿಕ್ಕಟ್ಟಿನ ಪ್ರಸಂಗದೊಳು ಹೊಳಿಯಪ್ಪಗೆ ಹಣವಿತ್ತವನೆ ಏಳಯ್ಯ
ಒಕ್ಕೊರಲಿನಿಂ ಭಜಿಸುವೆವು ಮುಕ್ಕಣನೇ ಬೇಗನೇಳಯ್ಯ ||೧೩||

ಇಷ್ಟಲಿಂಗವೇ ತಾನಾದ ಕುರಿಯ ಹಿಕ್ಕಿಯೊಳು
ನಿಷ್ಠೆಯಿಂ ನಿಜರೂಪವನು ಕಂಡ ಶರಣ ಗೊಲ್ಲಾಳನು
ಷಟ್‌ಸ್ಥಲದ ಮರ್ಮವನು ಮುನ್ನರಿಯದಿದ್ದರೂ
ಶ್ರೇಷ್ಠ ವಚನಗಳ ರಚಿಸಿಹನು ಕೇಳಲೇಳಯ್ಯ ||೧೪||

ನಿಜ ವಸ್ತು ನೀನೆಂದು ಪರತತ್ತ್ವ ಬೇರೆಂದು
ನಿಜವಲ್ಲದೆ ಮತ್ತೊಂದನರಿಯದಂತಿರಿಸೆಂದು

ನಿಜ ಭಕ್ತಿಯಿಂ ಬೇಡುವ ಭಕ್ತರನು ಉದ್ಧರಿಸಲು
ಜಗದೊಡೆಯ ಏಳಯ್ಯ ಗೊಲ್ಲಾಳ ಲಿಂಗಯ್ಯ ||೧೫||

ಜಯ ಮಂಗಲವು ಸಚ್ಚಿದಾನಂದ ರೂಪನಿಗೆ
ಜಯ ಮಂಗಲವು ನಿತ್ಯಾನಂದ ಮೂರುತಿಗೆ
ಜಯ ಮಂಗಲವು ಚಿತ್ಕಳಾ ಪ್ರಪೂರ್ಣನಿಗೆ
ಮಂಗಲನೆ ಮಂಗಲವ ಪಾಡುವೆವು ಕರುಣಿಸೇಳಯ್ಯ ತಂದೆ ||೧೬||

## ೨. ಓಂ ನಮೋ ಗೊಲ್ಲಾಳೇಶಾಯ ನಮಃ

ಓಂ ನಮೋ ಗೊಲ್ಲಾಳೇಶ್ವರಾಯss
ಓಂ ನಮೋ ಗೊಲ್ಲಾಳೇಶ್ವರಾಯss
ಓಂ ನಮೋ ಗೊಲ್ಲಾಳೇಶ್ವರಾಯss

ಎನ್ನ ತಂದೆ ಬಾ ss
ಗೊಲ್ಲಾಳೇಶನೇ ಬಾss ಬಾss ರೋss
ಎನ್ನ ಮೊರೆಯನು ಕೇಳೋ
ಬಹು ಪಾಶವನ್ನು ಕಳೆಯೋ ।ಪ

ಸಂಸಾರ ಎಂಬ ಸಾರಗದಲ್ಲಿ
ಜೀವ ಎಂಬ ನೌಕೆ-ನನದಯ್ಯಾ
ಆಶೆ ಎಂಬ ಸುಳಿಗೆ ಸಿಲುಕಿ
ನೊಂದೆನ್ನೈ ಬೆಂದೆನ್ನೈss
ಎನ್ನ ತಂದೆ ಬಾss ।೧

ಮಹಾದೇವ ನೀನೇ,
ಎನಗೆ ಗತಿ
ಎಂದು ಅವಸರದಿ ನಾss
ನಿನ್ನಲ್ಲಿ ಬಂದೆ
ಶಿಶುವ ಎತ್ತಿ ಕೊಂಬಂತೆ ಮಾತೆss
ನೀ ಸಲುಹೋ ದೇವನೇ
ಎನ್ನ ತಂದೆ ಬಾss ।೨

# ೩. ಮುಕ್ತಿ ಎನಗೆ ಬ್ಯಾಡೋ

ಮುಕ್ತಿ ಎನಗೆ ಬ್ಯಾಡೋ । ಜಗದೊಳು ಜನ್ಮಿಸಿ ಕಾಪಾಡೋ ।
ಲಿಂಗಯ್ಯನೇ (ಶಿವನೇ)। ಮುಕ್ತಿ ಎನಗೆ ಬ್ಯಾಡೋ

ಸುಪ್ತಿಯ ಸುಖದಂಥಾ ಮುಕ್ತಿಯು ನಿನ್ನದು
ಭಕ್ತನಾಗಿ ಭವ ತಿರುಗದು ಪಾಡೋ ।ಪ

ಸಕಲ ಜೀವರು ಲಯವಾದರೆ, ನಿನ್ನ ಪೂಜಿಸುವವರ್ಯಾರೋ ।
ಭಕ್ತರಿಲ್ಲದೇ, ಭವ ಬರಿದಾದೀತೋ....।
ಶಕ್ತಿ ವಿಶಿಷ್ಟವೆಂಬ ನಾಮವು ಅಳಿದೀತೋ ।೧

ಜನಿಸೋ, ಎನಗೆ ನೀ ಬೇಕಾದಲ್ಲಿ ।
ಒಂದಿನಿತೂ ಅಗಲದ ದಯೆಯೊಂದಿರಲಿ ।
ಘನಕೆ, ಘನವೆಂದು, ಕುಣಿ, ಕುಣಿದಾಡುವೆ ।
ಜನಿಸೋ ಜನಕ ಜಗ ಭಜಿಸುತಿರಲಿ ।೨

ನೀ ಅಗಣಿತನೆಂದು
ಭವದಲ್ಲಿ ಸಾರಿ ಹೇಳುವೆ ನಾ ಬಂದು
ಗೋಲಗೇರಿಯ ಶ್ರೀ ಗೊಲ್ಲಾಳೇಶಾ
ಅಪೇಕ್ಷೆ ನನಗಿಲ್ಲ ಮೋಕ್ಷವು ಬೇಕಿಲ್ಲ
ಮೋಕ್ಷವು ಬೇಕಿಲ್ಲ, ಆಪೇಕ್ಷೆ ನನಗಿಲ್ಲಾ....

## ೪. ಗೋಲಗೇರಿ ಊರ ನೋಡಾ

ಗೊಲ್ಗೇರಿ ಊರ ನೋಡಾ । ಗೊಲ್ಲಾಳನ ಗುಡಿಯ ನೋಡಾ ।
ಬಲ್ಲಂಥಾ ಶರಣರಾ ಗಡಿಬಿಡsss । ದೇವ ಗೊಲ್ಲಾಳ ಕೈ ಹಿಡಿ ।ಪ

ತನುಮನವ ದೇವಗ ನೀಡು । ಬಡವರಿಗೆ ದಾನವ ಮಾಡು ।
ಕುಲಬೇಧ ಮರೆತುs ಸುಡು (ಬಿಡು)। ನೆಲವೊಂದೆ ಎಲ್ಲ ಜೋಡು ।
ಗುಡಿಗೋಪುರ ಸಡಗರ ನೋಡು । ಒಡೆಯ ಗೊಲ್ಲಾಳನ ಬೀಡು ।
ಎಡೆಬಿಡೆ, ಶಿವನಾಮ ನೀ ಮಾಡಿ sss। ದೇವ ಗೊಲ್ಲಾಳ ಕೈಹಿಡಿ ।೧

ಕಂಚಿsನ ಕಳಸವ ನೋಡು । ಮಿಂಚಿನ ಬೆಳಕಾ ನೋಡು ।
ಪಂಚಶೀಲ ಮಂತ್ರವ ಕೇಳು । ಕುಂತು, ನಿಂತು ಧ್ಯಾನವ ಮಾಡು ।
ಕಟೆದಂಥ ಕಂಬವ ನೋಡಾ । ಮಾಟವಾದ ಮಂದಿರ ನೋಡಾ ।
ಸುಂದರವಾದ ಚಂದ್ರನ (ಈ) ಬೀಡುss। ದೇವ ಗೊಲ್ಲಾಳ ನೀ, ನೋಡು ।೨

ಮುಗಿಲ್ಲೆತ್ತರವಾಗಿ ನಿಂತs ।ಗೊಲ್ಲಾಳನ ಥೇರ (ತೇರ) ನೋಡಾ ।
ಪ್ರತಿವರ್ಷ ಜಾತ್ರೆಗೊಮ್ಮೆsss। ಭಕ್ತsರs ಜೋsರ ನೋಡಾ ।
ಹರಕೆ ಹೊತ್ತ ಜನರಿಗೆ ದೇವಾ । ಹರಸಿ ಕಳಿಸಿ ಕೀರ್ತಿಯ ಪಡೆದೆ ।

ಆರತಿಯನು ಬೆಳಗುವೆ ದೇವ ।
ಒಡೆಯs ಶಿವಶರಣರಾ ನಿನ್ನ ಗುಡಿsss।
ದೇವ ಗೊಲ್ಲಾಳs ಕೈ ಹಿಡಿss

## ೫. ಜೋಗುಳ ಪದ

ತೂಗೀರೆ ರನ್ನsನ । ತೂಗೀರೆ ಬಾಲsನ ।
ತೂಗೀರೆss ಅಚ್ಚ -ಮುತ್ತsನ ।
ತೂಗೀರೆ ಅಚ್ಚ ಮುತ್ತ, ಗೊಲ್ಲಾಳನ ।
ನಿಚ್ಚ ಮುತ್ತೈದೇರ ತೂಗೀರೆ । ನೀವು ತೂಗೀರೇ ।

ಬೆಳ್ಳಿ ಆಂವೀಗಿ ಮೆಟ್ಟು । ಬಿಸಲಾಗ ನಿಂತಾನ ।
ಶಿಸುವ ಗೊಲ್ಲಾಳನ ತೂಗೀರೆ ।
ಶಿಸುವ ಗೊಲ್ಲಾಳನ ಪೂಜಾದ ಹೊತ್ತಿಗೆ ।
ಹಸು ಮಕ್ಕಳ ತೊಟ್ಟಿಲ ತೂಗೀರೆ । ನೀವು ತೂಗೀರೆ ॥೧॥ (ಕೋರಸ)

ದುಸಿಯಾಳದ (ದುಸ್ಯಾಳದ) ಹೂವ । ಬೀಸುತ ಬರುತಾರ ।
ಕಾಶೀ ದೇಶದ ಶರಣರ । ಕಾಶೀ ದೇಶದ ಶರಣರು ಬರುವಾಗ ।
ಕಾಶೀ ಈಶ್ವರನನ್ನು ತೂಗೀರೇ । ನೀವು ತೂಗೀರೆ ॥೨॥ (ಕೋರಸ)

ಮಲ್ಲೀssಗಿಯ ಹೂವು । ಚಲ್ಲುತ ಬರುತಾರ
ಕಲ್ಯಾಣ ದೇsಶದ ಶರಣರ ।
ಕಲ್ಯಾಣ ದೇಶದ ಶರಣರು ಬರುವಾಗ ।
ಮಲ್ಲಿಕಾರ್ಜುನನ್ನು ತೂಗೀರೇ । ನೀವು ತೂಗೀರೆ ॥೩॥ (ಕೋರಸ)

ಹಂಪೀssಯ ಹೂವ । ಹಂಚುತ ಬರುತಾರ ।
ಹಂಪೀ ದೇಶದ ಶರಣರ ।
ಹಂಪೀ ದೇಶದ ಶರಣರು ಬರುವಾಗ
ಹಂಪೀ ವಿರುಪಾಕ್ಷನ ತೂಗೀರೆ । ನೀವು ತೂಗೀರೆ ॥೪॥ (ಕೋರಸ)

ಅಡಕೀssಯ ಹೂವ । ಖಡಕೀಲೆ ತರತಾರ ।
ಕಡಿಯ ದೇಶದ ಶರಣ ಬರುವಾಗ
ಒಡೆಯ ಗೊಲ್ಲಾಳನನ್ನು ತೂಗೀರೆ ।
ನೀವು ತೂಗೀರೆ ॥೫॥( ಕೋರಸ)

## ೬. ಶ್ರೀ ಗೊಲ್ಲಾಳೇಶ್ವರ ಜೋಗುಳ ಪದ

ಜೋ ಜೋ ಎಂದು ಜನ್ಮಕ್ಕೆ ಬಂದು । ಜೋ ಎಂದು ಗೊಲ್ಲಾಳ
ಶಿವತಾನೆ ಬಂದು ಢವಳಾರ ಪಟ್ಟಣಕೆ ಅಧಿಕಾರ ಎಂದು ।
ಹೀಂಗ ಜೋಗುಳ ಪದಕೆ, ಸಾಧ್ಯವಾಗೆಂದು ಜೋ ಜೋ ।ಪ

ಕೈಲಾಸದೊಳಗ ಮುಗ್ಧನು ತಾನು ಗಣಪತಿ ಎಂಬ ನಾಮ
ಉಳ್ಳವನು ದೇವತೆಗಳೊಂದಿಗೆ ತಾನು ಹಿರಿಯನು
ಹೀಂಗ ಸಾರಿ ಹೇಳಿದನು ತನ್ನ ಗುರುತವನು ಜೋ ಜೋ ।೧

ತಾಯಿ ದುಗ್ಗಳವನ ಹೊಟ್ಟೆಯಲೆ ಹುಟ್ಟಿ ಢವಳಾರ
ಅಡವ್ಯಾಗ ಹಾಕ್ಯಾನ ಹಟ್ಟಿ ಪರವತಕ ಹೋಗುವಾಗ
ಆಗ್ಯಾನ ಭೆಟ್ಟಿ ಆಗ ನಂದಯ್ಯನ ಪಾದ ಹಿಡಿದಾನ ಗಟ್ಟಿ ಜೋ ಜೋ ।೨

ಏಳೇಳೋ ಬಾಲಾ, ನಿನ್ನ ಪರಿ ಏನು ? ಎಲ್ಲಿ ಬಿಟ್ಟಿ
ನಿನ್ನ ಕುರಿಯ ಮರಿಗಳನು, ಹಿಂಗ್ಯಾಕ ಆಗೀದಿ ಹುಚ್ಚನು ನೀನು
ಎಂದು ಸಾರಿ ಹೇಳಿದನು ಅಯ್ಯ ನಂದಯ್ಯನು ಜೋ ಜೋ ।೩

ಪರವತ ಗಿರಿಯ ಏರುತ ನಂದಯ್ಯನು, ಲಿಂಗವು ತಾರದೆ
ಮರೆತು ಬಂದಿಹನು, ಕುರುಬನ ಕಂಡು ಗಾಬರಿಯಾದನು । ಆಗ
ತ್ವರಿತದಿ ತೊಗೊಂಡಾ ಕುರಿಯ ಹಿಕ್ಕಿಯನು ಜೋ ಜೋ ।೪

ಗೊಲ್ಲಾಳನ ಬಾವಕೆ, ಮೆಚ್ಚಿದ ಈಶ್ವರನು, ಪಾದಕೆ ನಿಲುಕದಂತಾ
ತನು, ಕುರಿಯ ಹಿಕ್ಕಿಯೊಳು ಬೆರೆತ ನಿಂಗಯ್ಯನು, ಇಂಥ
ಗೋಲಗೇರಿ ಕ್ಷೇತ್ರಕ್ಕೆ ಮಿಗಿಲಾದವನು ಜೋ ಜೋ ।೫

ಯಾರಿಗಾಗದಂಥ ತೇರು ನಿರ್ಮಿಸಿದಾ, ದೇಶದೊಳಗಿನ
ತನ್ನ ಭಕ್ತರ ಸಲುಹಿದಾ, ಇಂಗ್ರೇಜ ಸರಕಾರಕ್ಕೆ ಪ್ರಸಿದ್ಧನಾದ
ಇಂಥ ನಿಂಗಯ್ಯ ಹುಟ್ಟಿದ್ದು ಅಮೃತ ಸ್ಥಳವು ಜೋ ಜೋ ।೬

ಸಿದ್ಧಲಿಂಗ ಸ್ವಾಮಿಗೆ ಒಲಿಸಿಕೊಂಡವನ
ತ್ರಿಕಾಲ ಪೂಜೆ ನಡೆಸಿಕೊಂಡವನ, ಜಂಗಮ ದಾಸೋಹ

ಇಡಿಸಿಕೊಂಡವನ ಹೀಂಗ ದಿನದಿನಕ
ಪ್ರಸಿದ್ಧಿ ಪಡೆದುಕೊಂಡವನ ಜೋ ಜೋ |೭

ಮರೆಪ್ಪ ಸಾವಕಾರಗ ಹುಣ್ಣ್ಹುಟ್ಟಿಸಿದವನು, ಕುರಿಯ ಹಿಕ್ಕಿ
ಹಾಕಿ ಮಾಯಿಸಿದವನು, ಚಿರಸೇವೆಗೆಂದವರ ಕರೆಸಿಕೊಂಡವನು,
ಹೀಂಗ ಹೆಸರಾದ ಗುಡಿಯ ಕಟ್ಟಿಸಿಕೊಂಡವನು ಜೋ ಜೋ |೮

ಈ ಪದ ಹುಟ್ಟಿದ್ದು ಹಂಪಿಯ ಸ್ಥಳವು
ವಿರುಪಾಕ್ಷಹಾನ ಸಾಕಾರ ಚೆಲುವು ಜೋಕೆಯಿಂದಲೆ
ತನ್ನ ಶಿಸುವನ ಸಲಹು ಹೀಂಗ ಲಾಲಿಸಿ
ಹೇಳಿದವರಿಗೆ ಆದೀತು ಫಲವು ಜೋ ಜೋ |೯

## ೭. ಶ್ರೀ ಗುರು ಗೊಲ್ಲಾಳೇಶ್ವರ ಕೋಲಿನ ಪದ

ಧವಳಾರದಗಿರುವರು ಬಲ್ಲುಗ ದೇವರು
ಧರ್ಮಪತ್ನಿ ದುಗ್ಗಳಮ್ಮ ಕೋಲೆನ್ನ ಕೋಲೆ ॥ಪ॥

ಧರ್ಮನೇ ಪತ್ನೆಂಬ ದುಗ್ಗಳಮ್ಮನ ಹೊಟ್ಟೆಲಿ
ಪುತ್ರ ಹುಟ್ಟ್ಯಾನ ಗೊಲ್ಲಾಳ ಕೋಲೆನ್ನ ಕೋಲೆ ॥೧॥

ಶ್ರೀಶೈಲಕೋಗುವರು ನಂದಯ್ಯ ಮುನತ್ತ್ಯಾವರು
ಹಾದ್ಯಾಗ ಗೊಲ್ಲಾಳ ತರುಬ್ಯಾನ ಕೋಲೆನ್ನ ಕೋಲೆ ॥೨॥

ಹಾದ್ಯಾಗ ಗೊಲ್ಲಾಳ ತರುಬುತ ಕೇಳ್ಯಾನ
ಎಲ್ಲಿಗ್ಹೋಗತೀರಿ (ನಮಗ ಹೇಳರಿ)ನಮಗ್ಹೇಳ್ರಿ
ಕೋಲೆನ್ನ ಕೋಲೆ ॥೩॥

ಶ್ರೀಶೈಲ ಕೋಗತಿವಿ ಯಾತ್ರವ ಮಾಡತೀವಿ
ಗಿರಿ ದೋಚದುಂಡಿ(ಪತ್ಯದುಂಡಿ)ದವನತ್ತ ಕೋಲೆನ್ನ ಕೋಲೆ ॥೪॥

ಗಿರಿ ಪತ್ಯದುಂಡಿ ದವನತ್ತ ತೊಗೊಂಡು
ಲಿಂಗ ಮೊದಲಮಾಡಿ ತರತೀವ್ರಿ ಕೋಲೆ ॥೫॥

ಏ ಮುತ್ಯ ನಿನಗ್ಹೇಳತಿನಿ ಕಾಲೀಗಿ ಬೀಳತೇನಿ
ಬಿಂದಿಗ್ಹೊನ್ನ ನಿನಗ ಕೊಡತೀನಿ ಕೋಲೆನ್ನ ಕೋಲೆ ॥೬॥

ಬಿಂದಿಗಿ ಹೊನ್ನ ನಿನಗ ಕೊಡತೇನ್ರಿ ಮುತ್ತ್ಯಾ
ನನಗೊಂದು ಲಿಂಗ ತರಬೇಕ್ರಿ ಕೋಲೆನ್ನ ಕೋಲೆ ॥೭॥

ಶ್ರೀಶೈಲ ಕ್ಹೋಗ್ಯಾರ ಯಾತ್ರವ ಮುಗಿಸ್ಯಾರ
ಗಿರಿ ಮೊತ್ತೆದುಂಡಿ ದವನತ್ತ ಕೋಲೆನ್ನ ಕೋಲೆ ॥೮॥

ಗಿರಿ ಮೊತ್ತದುಂಡಿ ದವನತ್ತ ತಗೊಂಡು
ಲಿಂಗವ ಮರೆತು ಬಂದೇವ್ರಿ ಕೋಲೆನ್ನ ಕೋಲೆ ॥೯॥

ಲಿಂಗವ ಮರೆತು ಬಂದಾನ ನಂದಯ್ಯ ಮುತ್ತ್ಯಾ
ಹಾದ್ಯಾಗ ಗೊಲ್ಲಾಳ ತರುಬ್ಯಾನ ಕೋಲೆನ್ನ ಕೋಲೆ ॥೧೦॥

ಹಾದ್ಯಾಗ ಗೊಲ್ಲಾಳ ತರುಬುತ ಕೇಳ್ಯಾನ
ನಮಗೊಂದು ಲಿಂಗ ಕೊಡಿರೆಂದ ಕೋಲೆನ್ನ ಕೋಲೆ ||೧೧||

ಲಿಂಗವ ಮರೆತು ಬಂದೇವ್ರಿ ಕೋಲೆನ್ನ ಕೋಲೆ ||೧೨||

ಎಡಗಾಲಲೆ ತಗೊಂಡಾನ ಬಲಗೈಲೆ ಹಿಡಿದಾನ
ಆಡಿನ್ಹಿಕ್ಕೊಂದು ಕೊಟ್ಟಾನ ಕೋಲೆನ್ನ ಕೋಲೆ ||೧೩||

ಆಡನ್ಹಿಕ್ಕಿಯ ತಂದು ತೀಡಿ ಲಿಂಗವ ಮಾಡಿ
ನೋಡಿರಿ ಶಿವನ ಮಹಿಮವ ಕೋಲೆನ್ನ ಕೋಲೆ ||೧೪||

ಗೋಲಗೇರಿ ಲಿಂಗ ಆಡಿನ್ಹಿಕ್ಯಾಗ
ನೆನದಾಗ ಕೋಲೆನ್ನ ಕೋಲೆ ||೧೫||

ಹಳಿ ಸಗರದಾಗ ಇರುವರು ಮರಿಯಪ್ಪ ಸಾವಕಾರು
ಬಿಡದೆ (ಚಳುವಳಿ) ನಡಿಸ್ಯಾರ ಕೋಲೆನ್ನ ಕೋಲೆ ||೧೬||

ಬಿಡದನೆ ಚಾವಳಿ ನಡಿಸ್ಯಾರು ಸಾವುಕಾರು
ಪಾಲಿಕೆ ಮುಂದ ಇರುತಾರ ಕೋಲೆನ್ನ ಕೋಲೆ ||೧೭||

ಉಕ್ಕಲಿ ಗೌಡರಿಗಿ ಮೆಚ್ಚ್ಯಾನು ಗೊಲ್ಲಾಳ
ಭಕ್ತಿಲಿ ಅವರ ನಡುದಾರ ಕೋಲೆನ್ನ ಕೋಲೆ ||೧೮||

ಭಕ್ತಿಲಿ ಅವರು ನಡದಾರ ಗೌಡರು
ಶಕ್ತಿಲಿ ಮಹಲ ಕಟ್ಟುಸ್ಯಾರ ಕೋಲೆನ್ನ ಕೋಲೆ ||೧೯||

ಗೋಲಗೇರಿಯ ನೋಡ ಗೊಲ್ಲಾಳನ ಗುಡಿ ನೋಡ
ತಾಯಿ ಜಾನಮ್ಮನ ಮನಿ ನೋಡ ಕೋಲೆನ್ನ ಕೋಲೆ ||೨೦||

ತಾಯಿನೆ ಜಾನಮ್ಮನ ಮನಿಯ ಪಡಸ್ಯಾಲ್ಯಾಗ
ಉಂಡ ಜಂಗಮರ ಸಭೆ ನೋಡ ಕೋಲೆನ್ನ ಕೋಲೆ ||೨೧||

ಗೋಲಗೇರಿಯ ನೋಡ ಗೊಲ್ಲಾಳನ ಗುಡಿ ನೋಡ
ಮೇಲೆ ಅವ್ವಮ್ಮನ ಗುಡಿ ನೋಡ ಕೋಲೆನ್ನ ಕೋಲೆ ||೨೨||

ಮೇಲೆನೆ ಅವ್ವಮ್ಮನ ಗುಡಿಯಾ ಬಾಗಿಲದಾಗ
ಬಾಗಿ ನಿಂತಾನ ಬಸವಣ್ಣ ಕೋಲೆನ್ನ ಕೋಲೆ ||೨೩||

ಗೋಲಗೇರಿಯ ನೋಡ ಗೊಲ್ಲಾಳನ ಗುಡಿ ನೋಡ
ಇಲ್ಲಿ ಗೊಲ್ಲಾಳ ನೆಲಿಸ್ಯಾನ ಕೋಲೆನ್ನ ಕೋಲೆ ||೧೪||

ಇಲ್ಲಿ ಗೊಲ್ಲಾಳ ನೆಲೆಸಿದ ಕಾರಣ
ಗೋಲಗೇರಿ ಎಂಬುವರು ನಗರಾಗೆ ಕೋಲೆನ್ನ ಕೋಲೆ ||೧೫||

ಎಲ್ಲ ದೇವರ ಗುಡಿಯ ಕಲ್ಲಿಲಿ ಮುಗದಾವ
ಬಲ್ಲಿದ ಗೊಲ್ಲಾಳನ ಅರಮನೆಯ ಕೋಲೆನ್ನ ಕೋಲೆ ||೧೬||

ಬಲ್ಲಿದ ಗೊಲ್ಲಾಳನ ಪದರಿನ ಗೋಡೆ
ಮಲ್ಲಿಗ್ಹುವುದಲೆ ಮುಗದಾವ ಕೋಲೆನ್ನ ಕೋಲೆ ||೧೭||

ಕೊಂಡಗೂಳಿ ದಾರಿಲೆ ಧೂಳ್ಯಾಕ ದುಮ್ಯಾಕು
ನಂದಿಕೋಲಾಟ ನವಲಾಟ ಕೋಲೆನ್ನ ಕೋಲೆ ||೧೮||

ನಂದಿನೆ ಕೋಲಾಟ ನವಲಾಟ
ಗೊಲ್ಲಾಳನ ಬಿಂದಿಗಿ ಆಟ ನುಡಿಮಾಗ ಕೋಲೆನ್ನ ಕೋಲೆ ||೧೯||

ಅಪ್ಪನ ಪಾಕ್ಯಾಗ ನೀರ್ಯಾರ ಚಲ್ಯಾರ
ಪಾರಿವಾಳಾಡಿ ಗಿಣಿಯಾಡಿ ಕೋಲೆನ್ನ ಕೋಲೆ ||೨೦||

ಪಾರಿವಾಳಾಡಿ ಗಿಣಿಯಾಡಿ ಜಾನಮ್ಮನ ಮಮ್ಮಕ್ಕಳಾಡಿ
ಮನಿಗ್ಯಾರ ಕೋಲೆನ್ನ ಕೋಲೆ ||೨೧||

## ೮. ಕಾಯೋ ನೀ ದೇವಾ

ಕಾಯೋ ನೀ ದೇವಾ, ಗುರು ಗೊಲ್ಲಾಳೇಶಾ ।
ಪರಶಿವನ ರೂಪ, ನೀ ಶ್ರೀ ಸಿದ್ಧಪುರುಷಾ ॥ಪ॥

ತಿಳಿದು, ತಿಳಿದೂ ನಾನು ತಪ್ಪು ಮಾಡಿದೆ ದೇವಾ ।
ತಿಳಿಯದಿದ್ದರೆ ಏನು ಕಂದನಲ್ಲವೆ ನಾನು ।
ತಿಳಿಯದೇ ಮಾಡಿ ತಪ್ಪುಗಳನ್ನೆಲ್ಲಾ ।
ಹಡೆದವರು ಮನ್ನಿಸಿ ಅಪ್ಪುವುದಿಲ್ಲವೇ ॥೧॥ ಕಾಯೋ...

ನಾನಾ ಕ್ಷೇತ್ರಗಳಲಿ ಹಲವು ಹೆಸರುಗಳಿಂದಾ
ಧರ್ಮವನುಳಿಸಲು ಅವತರಿಸಿ ಬಂದೆ
ಧವಳಾರಕೆ ಬಂದು ಕುರಿಯ ಹಿಕ್ಕಿಯನಂಬಿ
ಈಶನ ಪಡೆದು ಮಹೇಶ್ವರನಾದೆ
ನಿನ್ನಿಂದಾ ಗೋಲಗೇರಿ ಕ್ಷೇತ್ರ ಎನಿಸಿರುವೆ ॥೨॥

ಕ್ಷಣ ಕ್ಷಣದಲಿ ಬಂದು, ನಿನ್ನ ಮಹಿಮೆಯನು ತೋರಿದೆ
ತೋರಿದಾಗ ಮಾತ್ರ, ಭಯ ಭಕ್ತಿಯಿಂದ ನಮಿಸಿ
ಮತ್ತೆ ಭವಸಾಗರದಲಿ ಮರೆತು ಮಾಯೆಗೆ ಸೋತು
ತೊಳಲಾಡುತಿರುವೆನು ರಕ್ಷಿಸು ದೇವಾ ॥೩॥ ಕಾಯೋ.....

ಇನ್ನಾದರೂ ನನಗೆ ತಿಳಿಯಬಾರದೆ, ದೇವಾ
ನಿನ್ನ ದರ್ಶನ ಪಡೆವ ಭಕ್ತನಾಗಲಿಲ್ಲ
ಕಂಡು, ಕಂಡೂ ನಾನು ತಪ್ಪು ಮಾಡಿದೆ ದೇವಾ
ಇನ್ನಾದರೂ ನನ್ನ ಮನ್ನಿಸು ದೇವಾ
ನಿನ್ನ ಹೊರತು ನನಗೆ ಬೇರಾರು ಇಲ್ಲ
ನಿನ್ನ ನಂಬದೆ ನನಗೆ ಗತಿಯಿಲ್ಲಾ ದೇವಾ
ನೀನೆ ನನಗೆ ಜೀವಾತ್ಮ ಪರಮಾತ್ಮ ॥೪॥

ಕಾಯೋ ನೀ ದೇವಾ, ಗುರು ಗೊಲ್ಲಾಳೇಶಾ
ಪರಶಿವನ ರೂಪ, ನೀ ಶ್ರೀ ಸಿದ್ಧಪುರುಷಾ ॥

## ೯. ನೀ ತಂದೆ ನಾ ಕಂದ

ನೀ ತಂದೆ ನಾ ಕಂದ
ನನ್ನ ಸಲಹೋ ದೇವಾ
ನಿನ್ನನ್ನೆ ನಂಬಿ ನಾ ಬಂದೆ
ಲಿಂಗಯ್ಯಾ, ನೀ ಕಾಯಬೇಕೋ ತಂದೆ
ನನ್ನನ್ನು ನೀ ಕಾಯಬೇಕೋ ತಂದೆ |ಪ

ನಿನ್ನ ಸ್ಥಾನದಿ ಬಂದು
ಧ್ಯಾನವ ಮಾಡಿದರೆ
ಬೇಡಿದ ವರಗಳ ಕೊಟ್ಟೆ
ಲಿಂಗಯ್ಯ ಬೇಡಿದ ವರಗಳ ಕೊಟ್ಟೆ
ಭಕ್ತರು ತಂದಂತಹ ಎಡೆಯನ್ನು ಸ್ವಿಕರಿಸಿ
ಕುರುಹನ್ನು ತೋರಿಸಿದೆ
ಲಿಂಗಯ್ಯ ಮನದಿಚ್ಚೆಪೂರ್ಯೆಸಿದೆ |೧

ಭಕ್ತರು ಬರುವಾಗ ತೊಂದರೆ ಆದಾಗ
ಅವರಿದ್ದಲ್ಲಿಗೆ ಹೋದೆ
ಗುರುನಾಥ ದರ್ಶನ ಕೊಟ್ಟಿರುವೆ
ಅವರಂತೆ ನನಗೂ ದರ್ಶನ ಕೊಟ್ಟು
ಸಲಹಯ್ಯಾ ಪುನೀತನಾಗುವೆನೋ
ಲಿಂಗಯ್ಯ ಪಾದನ ಹೊಂದುವೆನೋ |೨

ಇನಿತು ನಿನ್ನಯ ಕೋಪ
ನನ್ನ ಮೇಲೇಕಯ್ಯ
ತಾಳಬಲ್ಲನೆ ದೇವಾ ನಾನು
ಈ ಕೋಪ ತಾಳಬಲ್ಲನೆ ದೇವಾ ನಾನು
ನಿನ್ನ ಕರುಣೆಯ ಪ್ರೀತಿ
ನನ್ನ ಮೇಲಿರಲಯ್ಯಾ, ನಿನ್ನ ನಂಬದೆ ನನಗೆ ಗತಿಯಿಲ್ಲ
ದೇವಾ ನೀನೆ ನನಗಾಸರೆಯು, ಲಿಂಗಯ್ಯಾ
ನೀನೆ ನನಗಾಸರೆಯು |೩

# ೧೦. ಸೊಲ್ಲು ಸೊಲ್ಲಿಗೆ ನೆನೆವೆ

ಸೊಲ್ಲು ಸೊಲ್ಲಿಗೆ ನೆನೆವೆ, ಎಲ್ಲಾ ಕೊಡುವೆ ದೇವಾ
ಗೋಲಗೇರಿಯ ಶ್ರೀ ಗೊಲ್ಲಾಳೇಶಾ ।ಪ

ಹೆತ್ತಾತ ನೀನಾದೆ, ಮುತ್ತಾತ ನೀನಾದೆ
ಭಕ್ತರನು ಕರುಣಿಸಿ, ಕಾಪಾಡಿದೆ
ಭಕ್ತರನು ಕರುಣಿಸಿ, ಕಾಪಾಡಿದ ನಿನ್ನನ್ನು
ಚಿತ್ತದಲಿ ನಾನು ನೆನೆದೇನಾ ।೧

ಭಕ್ತವತ್ಸಲನಾದೆ, ಭಕ್ತಿಯ ಶೆಲೆಯಾದೆ
ಮುಕ್ತಿ ಮಾರ್ಗವ ತೋರಿಸಿದೆ
ಮುಕ್ತಿಯ ಮಾರ್ಗವ ತೋರಿಸಿ ಜಗಕೆಲ್ಲಾ
ಭಕ್ತಿಯ ಬಂಧುರ ನೀನಾದೆ ।೨

ಹಿರಿಯರಿಗೆ ಹಿರಿಯಾ, ಕಿರಿಯರಿಗೆ ಕಿರಿಯಾ
ದೊರೆಸ್ವಾಮಿ ನೀನಾಗಿ ನಿಂತವನೇ
ಹನ್ನೆರಡು ಜೋತಿರ್ಲಿಂಗಗಳ ಮೀರಿ ಜಗದಿ
ಹದಿಮೂರನೆಯ ಲಿಂಗವಾದವನೆ ।೩

ಕಣ್ಣಾದೆ ನೀನು, ನಂಬಿ ಕರೆದವಗೆ
ಹಣ್ಣಾದೆ ಭಕ್ತರಾ ಓಗರೆಗೆ
ಹಣ್ಣಾದೆ ಭಕ್ತರಾ ಓಗರೆದೆ ಸ್ವಾಮಿ
ಮುಕ್ಕಣ್ಣನಾದೆ ನಿನ್ನ ತಿಳಿದವಗೆ ।೪

ಧರೆಯೊಳು ಮೆರೆಯುವ
ಗೋಲಗೇರಿಯ ಪುರದಿ
ಚಿರಕಾಲ ಬಾಳಿದ ಗತಿನಿಂದೆ
ಗುರುಸಿದ್ಧಲಿಂಗ ಸ್ವಾಮಿಗಳ ದಯದಿಂದಾ
ಮರುಳಾದ ಕಂದಾ ನಿನ್ನಡಿಗೆ ಬಂದೆ ।೫

ಸೊಲ್ಲು ಸೊಲ್ಲಿಗೆ ನೆನೆವೆ, ಎಲ್ಲಾ ಕೊಡುವ ದೇವಾ
ಗೋಲಗೇರಿಯ ಶ್ರೀ ಗೊಲ್ಲಾಳೇಶಾ.

## ೧೧. ಹೊತ್ತು ಮುಳುಗಿದರೇನು

ಹೊತ್ತು ಮುಳುಗಿದರೇನು ಕತ್ತಲಾದರೇನು
ಅಪ್ಪ ನಿನ್ನ ಗುಡಿಗೆ ಬರುವೇನೋ
ಗೊಲ್ಲಾಳೇಶಾ ಗೋಲಗೇರಿ ಲಿಂಗೇಶಾ ।ಪ।

ಇಷ್ಟ ಪ್ರಾಣಗಳ ಭಾವಲಿಂಗಗಳ
ಅಷ್ಟ ತ್ರಿವಿಧದೀ ಸಿದ್ಧಿಯುಳ್ಳವನೇ
ಬಾಳಿನ ಚಿಂತಕನೇ ಧೂಳನು ಕಳೆದವನೇ
ಬಾಳುವ ಜನಕೆಲ್ಲಾ ಚೈತನ್ಯದಾಯಕನೇ
ಅಪ್ಪಾ ನಿನ ಗುಡಿಗೆ ಬರುವೇನೋ
ಗೊಲ್ಲಾಳೇಶಾ ಗೋಲಗೇರಿ ಲಿಂಗೇಶಾ ।೧।

ಗುರುವೇ ಹರ ರೂಪಾ
ಹರನೇ ಗುರು ರೂಪಾ
ಹರಗುರು ರೂಪಗಳಾ ತೋರಿದ ಗೊಲ್ಲಾಳೇಶಾ
ಗೋಲಗೇರಿ ಲಿಂಗೇಶಾ ದಾಟಿಲೋ ಭವಪಾಶಾ
ಬಂದ ಕಂಟಕ ನಾಶಾ ಮರುಳ ಕಂದನ ಆಶಾ
ಅಪ್ಪಾ ನಿನ ಗುಡಿಗೆ ಬರುವೆನೋ
ಗೊಲ್ಲಳೇಶಾ ಗೋಲಗೇರಿ ಲಿಂಗೇಶಾ ।೨।

## ೧೨. ಗೊಲ್ಲಾಳೇಶಾ ದಯ ತೋರೋ

ಶ್ರೀ ಗೊಲ್ಲಾಳೇಶಾ ದಯೆ ತೋರೋ
ಭಾಗಿ ಭಜಿಪೆ ಸದ್ಗುರು ನಾಥಾ ।ಪ।

ರಾಗ ಭರಿತಾ ಜೀವನವೆಂಬೋ
ಸಾಗರದೋಳು ನಾ ಮುಳುಗುತಿಹೆನು
ಬೇಗ ಸುಮತಿ ದಡವನಿಕ್ಕಿ
ಸಾಗಿಸಯ್ಯಾ ಭವದ ನೌಕೆ ।೧

ಭಂಗ ಗೊಳಿಸೈ ಸರ್ವ ಪಾಪ
ಹಿಂಗಿಸಯ್ಯಾ ಭವದ ತಾಪ
ವಿಜಯ ಶ್ರೀ ಗುರುಪಾದೇಶನ ಪಡೆವಾ
ಮಂಗಲ ಪಥವಾ ತೋರಿಸಯ್ಯಾ ।೨

ನಂಬಿದವರಾ ಕಷ್ಟ ಪರಿಹರಿಸೋ
ಸ್ವಾಮಿ ನಿನ್ನ ನಂಬಿದವರಾ ಕಷ್ಟ ಪರಿಹರಿಸೋ
ಪರುಷ ಹಸ್ತದ ಲೀಲಾ ಮೂರ್ತಿಯೆ
ನಾಡಿನ ಜನರಿಗೆ ಬೋಧೆಯ ನೀಡುತಾ
ನಾಡ ಉದ್ಧರಿಸೋ ಮಹಾ ಮಹಾತ್ಮನೆ ।೩

ಶ್ರೀ ಗೊಲ್ಲಾಳೇಶ ದಯ ತೋರೋ
ಬಾಗಿ ಭಜಿಪೆ ಸದ್ಗುರು ನಾಥಾ.

## ೧೩. ಎಲ್ಲಾ ದೇವರೊಳು ಬಲ್ಲಿದ ನೀನು ಗೊಲ್ಲಾಳ ತಂದೆ

ನಿನ್ ಪಾದಕ್ಕೆ ನಾ ಶರಣೆಂದೆ ।ಪ।

ಟೊಂಕದಲ್ಲಿ ಕಠಾರಿ ।ಕೈಯಲಿ ಕೊಡಲಿಯನು ಹಿಡಿದೆ ।
ಕುರಿಗಳನೆಲ್ಲ ಮುಂದೆ ಮಾಡಿಕೊಂಡು । ರಕ್ಷಿಸುತ್ತ ನಿಂದೆ ।
ಲಕ್ಷದ ಮೇಲೆ ತೊಂಭತ್ತಾರು ಸಾವಿರ ಕುರಿಗಳ ಸಲುಹಿದೆ
ಸಾಕ್ಷಾsತ್ ಶಿವನಾದೆ ।೧

ಉದಯ ಕಾಲದಲಿ । ಸೂರ್ಯನ ಕಿರಣ ಭೂಮಿಗೆ ಹರಡಿರಲು
ಕುರಿಗಳ ಕಾಲಿನ ಸಪ್ಪಳಕೆ ಧೂಳು । ಮುಗಿಲು ಸೇರುತಿರಲು ।
ಡಂಬಳ ಕಪ್ಪದ ಹಳ್ಳದ ದಂಡೀಲಿ, ಗೊಲ್ಲಾಳ ಬರುತಿರಲು ।
ಕೊಳಲಿನ ನಾದವೆ ತುಂಬಿರಲು ।೨

ಫಾಲ್ಗುಣ ಮಾಸದಿ ವಾಡಿಕೆಯಂತೆs -ಶರಣರು ನಡಿತಿರಲು
ಶ್ರೀ ಗಿರಿಗ್ಹೋಗಲು ಭಕ್ತರ ಸಾಲು - ಸಾಲೇ ಬರುತಿರಲು ss ।
ಪರುಷದ ಜನರs ಭಜನೆಯ ಕೇಳುತ ಗೊಲ್ಲಾಳ ನಿಂತಿರಲು ।
ಆನಂದದಿ ಕುಣಿತಿರಲು ।೩

ಅಣ್ಣಾ -ಅಪ್ಪ ನೀವೆಲ್ಲ ಎಲ್ಲಿಗೆ - ಹೋಗು ತಿರುವಿರೆಂದು ।
ಕೇಳಿದ ಗೊಲ್ಲಾಳ(ಗ) ಜಂಗಮನೊಬ್ಬ - ಹೇಳ್ತಾನ ಬಳಿ ಬಂದು
ನಿನ್ನ ಹೆಸರು ಏನು ಹೇಳೋ, ತಮ್ಮಾ - ಹೇಳುವೆ ಮುಂದಿಂದೂ
ಶಿವನ ಮಹಿಮದ ಕತೆಯೊಂದು ।೪

ಕುರಿಯ ಹಿಕ್ಕಿಯ ಗೊಬ್ಬರ ಗುಂಡಿಗೆ, ಜಂಗಮ ತಾ ಬಂತು ।
ಇದರೊಳಗಿರುವ ಲಿಂಗಕೆ ನೀನು - ಪೂಜಿಸಬೇಕೆಂದು ।
ಜಂಗಮನ, ಮಾತಿಗೆ, ಗೊಲ್ಲಳ ನಂಬಿದ ನನ್ನ ತಂದೆ ಎಂದು ।
ಶಿವನೇ ತಾನಾದನು ಅಂದು ।೫

## ೧೪. ನಡಿ ತಂಗಿ ನಡಿಯೇ ಹೋಗೋಣಾ

ನಡಿ ತಂಗಿ ನಡಿಯೇ ಹೋಗೋಣ ಗ್ಯಾಲಗೇರಿ ಕ್ಷೇತ್ರಕ್ಕೆ ।
ಗೊಲ್ಲಾಳ ಲಿಂಗನ ದರುಳನ ಪಡಿಯುದಕ ।ಪ।

ಗೊಲ್ಲಾಳನ ದರುಶನ ಪಡೆಯುದಕ
ಧವಳಾರ ಪಟ್ನ ಗೊಲ್ಲಾಳನ ಊರ ।
ಕುರುಬರ ಕುಲದಲಿ ಜನಿಸಿದ ಧೀರ ।
ಮೂರು ಸಾವಿರದಾ ಮುನ್ನೂರ ಅರವತ್ತು
ಕುರಿಯ ದೊಡ್ಡಿಯೇ ಗ್ಯಾಲಗೇರಿ ಊರ । ನಡಿ ತಂಗಿ ..... ।೧

ಕುರಿಯ ಹಿಕ್ಕಿಯಲಿ ಲಿಂಗವ ಮಾಡಿ ।
ಮೂರು ಹೊತ್ತು ಪೂಜಾ ಲಿಂಗಕೆ ಮಾಡಿ ।
ಕುರಿಯ ಹಿಕ್ಕಿಯಲಿ ರೂಪವ ತೋರಿದ ।
ಈಶ ಗೊಲ್ಲಾಳನ ಮಹಿಮವ ನೋಡಲು । ನಡಿ ತಂಗಿ ।೨

ಸುರಪುರ ಮರಿಯಪ್ಪ ಲಿಂಗಯ್ಯಾಗ ಭಕ್ತ ।
ಪೂಜೆಯ ಸಲುವಾಗಿ ಅವನ ಕರಿಶ್ಯಾನ ।
ನಂಬಿಗೆ ಇಟ್ಟು ನಡೆದರೆ ... ನೀನು ।
ಗೊಲ್ಲಾಳ ಕೊಂಡುವನು ದರ್ಶವನ್ನು । ನಡಿ ತಂಗಿ .... ।೩

## ೧೫. ತೇರು ಸಾಗುತಾದವ್ವ ತಂಗಿ

ತೇರು ಸಾಗ ತಾದವ್ವ ತಂಗಿ ನೋಡುಲಾಕ ಹೋಗನ ನಡೆಯ
ತೇರು ಎಳಿಯು ತಾದವ್ವ ತಂಗಿ ಗೋಲಗೇರಿ ಕ್ಷೇತ್ರದಲಿ
ತೇರು ಸಾಗುತಾದವ್ವ ||ಪ||

ಒಂಬತ್ತಂಕಣದ ತೇರ ಆರು ಗಾಲಿ ಸಮಜೋಡಿ
ಮೂರು ಅಚ್ಚಿನ ವಳಗ ನಲಿ ನಲಿದು ತಿರುಗುತಾದ
ತೇರು ಸಾಗತಾದವ್ವ ||೧||

ಒಂದು ಅಂಕಣದೊಳಗ ಆನಿ ಅಂಬಾರಿ ನೋಡಾ
ಎರಡು ಅಂಕಣದಲಿ ಕುದರಿಯ ಸವಾರಿ ನೋಡ
ತೇರು ಸಾಗುತಾದವ್ವಾ ||೨||

ಮೂರು ಅಂಕಣದೊಳಗ ನರಸಿಂಹನ ಆರ್ಭಟನೋಡ
ನಾಲ್ಕು ಅಂಕಣದಲ್ಲಿ ಪಗಡಿಯ ಬಾಜಾರ ನೋಡ
ತೇರು ಸಾಗತಾದವ್ವ ||೩||

ಐದು ಅಂಕಣದೊಳಗ ಈಶ ಗೊಲ್ಲಾಳನ ಅವತಾರ ನೋಡ
ಆರು ಅಂಕಣದೊಳಗ ಭೃಂಗಿಯ ನಾಟ್ಯವ ನೋಡಾ
(ಪರಶಿವನು ನಿಂತಾನ ) ನೋಡ
ತೇರು ಸಾಗುತಾದವ್ವ ||೪||

ಏಳು ಅಂಕಣದೊಳಗ ಈಶ ಗೊಲ್ಲಾಳನ ಗುಮ್ಮಟನೋಡ
ಎಂಟು ಅಂಕಣದಲ್ಲಿ ಪಂಚತತ್ವದ ಕಳಸವ ನೋಡ
ತೇರು ಸಾಗುತಾದವ್ವ ||೫||

ಒಂಬತ್ತು ಅಂಕಣದೊಳಗ ಭೂ ಚಕ್ರದ ಕೊಡಿಯವ ನೋಡ
ಹತ್ತು ಅವತಾರದೊಳಗ ಈಶ ಗೊಲ್ಲಾಳ ಹೊಂಟಾನ ನೋಡ
ತೇರು ಸಾಗುತಾದವ್ವ ||೬||

ನಾನು ಎಂಬ ಅಹಂಕಾರ (ಮಮಕಾರ) ಬಿಟ್ಟು ಬ್ರಹ್ಮ ಸೂತ್ರ
ಮಿಣೆಯವ ಹಿಡಿದು
ಈಶ ಗೊಲ್ಲಾಳನ ಸೇವೆಯ ಮಾಡಿ ಮುಕ್ತಿ ಬೇಡನುಬಾರ
ತೇರು ಸಾಗುತಾದವ್ವ ||೭||

ದೇಶದೊಳಗ ಗೋಲಗೇರಿ ಶಹರ ಈಶ ಗೊಲ್ಲಾಳನ
ಪುಣ್ಯದ ಕ್ಷೇತ್ರ ಮರೆಪ್ಪ ಸಾವುಕಾರ ಮಾಡಿಸಿದ ತೇರ
ನೋಡಲಾಕ ಹೋಗನು ನಡೆಯ
ತೇರ ಸಾಗುತಾದವ್ವ ತಂಗಿ ||೮||

# ೧೬. ಬನ್ನಿ ಹೋಗೋಣ

ಬನ್ನಿ ಹೋಗೋಣ ಗೋಲಗೇರಿ ಲಿಂಗಯ್ಯಗ ಹೋಗೋಣಾ
ಗೊಲ್ಲಾಳಲಿಂಗಯ್ಯಗ ಹೋಗೋಣಾ
ಸತ್ಯವಂತರಾಗಿ, ಚಿತ್ತಶುದ್ಧರಾಗಿ ದರ್ಶನ ಪಡೆಯೋಣಾ ।ಪ।

ಪೂಜೆಯ ನೋಡಣಾ, ಮೂರು ಹೊತ್ತು ಪೂಜೆಯ ನೋಡೋಣಾ
ಸೋಮವಾರಕ್ಕೊಮ್ಮೆ ನಡೆಯುವ ಪಲಾಕ್ಷಿ ಉತ್ಸವ ನೋಡೋಣ
ಭಕ್ತಿ ಭಾವದಿಂದ ಪುನೀತರಾಗಿ ಪೂಜೆಯ ಮಾಡೋಣ ಪಾದ
ಪೂಜೆಯ ಮಾಡೋಣಾ ॥೧॥

ಶ್ರಾವಣಕ ಹೋಗೋಣಾ ಭಕ್ತೀಲೆ ಪುರಾಣ ಕೇಳೋಣಾ ದೇವನ ಪುರಾಣ ಕೇಳೋಣಾ
ವೈಭವದಿಂದಾ ನಡೆಯುವ ದಶಮಿಯ ಉತ್ಸವನೋಡೋಣಾ ನೋಡಿ ಧನ್ಯರಾಗೋಣಾ
ಸಪ್ತ ಭಜನೆಯ ಮಾಡಿ ಈಶನ ಮಹಿಮೆಯ ತಿಳಿಯೋಣಾ ॥೨॥

ಕಾರ್ತಿಕ ಮಾಸದ ಪೂಜೆಯ ಜೊತೆಗೆ, ದೀಪದ ಉತ್ಸವ ನೋಡೋಣ
ನಾಡಿನ ಭಕ್ತರು ಭಕ್ತೀಲೆ ಕಟ್ಟಿಸಿದ, ಎಲೆ ಪೂಜೆಯನು ಮಾಡೋಣ
ಯುಗಾದಿ ಮುಂದ, ಶ್ರೀಶೈಲಕ ಹೋಗುವ ಕಂಬಿಯ ಭಕ್ತರ ನೋಡೋಣಾ ॥೩॥

ಜಾತ್ರೆಗೆ ಹೋಗೋಣ, ಉಚಾಯಿ ಉತ್ಸವ ನೋಡೋಣಾ
ಅನ್ನ ಪ್ರಸಾದ ಸ್ವೀಕರಿಸಿ, ಆಶೀರ್ವಾದ ಪಡೆಯೋಣಾ
ಡೊಳ್ಳಿನ ವಾಲಗ ನೋಡೋಣಾ, ಬಿಂದಗಿ ಉತ್ಸವ ನೋಡೋಣಾ,
ನಂದಿ ಕೋಲಾಟ ನೋಡೋಣಾ
ದಿವಟಗಿ ದೀಪ ಹಿಡಿಯೋಣಾ, ಬಿಂದಗಿ ಮುಂದ ಓಡೋಣಾ
ಗುರುವಿನ ಸ್ಥಾನದ ಗಂಗೆಯಿಂದಾ ಗೊಲ್ಲಾಳನ ಪೂಜೆಯ
ಮಾಡೋಣಾ ॥೪॥

ಸಡಗರದಿಂದ ನಡೆಯುವ, ತೇರಿನ ಪೂಜೆಯ ನೋಡೋಣಾ
ಪಂಚಲೋಹದ ಕಳಸವನ್ನು ವೈಭವದಿ ಏರಿಸೋಣಾ

ನಾಡಿಗೆ ಮಿಗಿಲಾದ ಭೂ ಚಕ್ರದ ಕೊಡೆಯನ್ನು ಏನರಿಸೋಣಾ
ದೇಶಕ ಹೆಸರಾದ ತೇರನು ಎಳೆದು ಭಾಗ್ಯವಂತರಾಗಿ ಬಾಳೋಣಾ
ಇಲ್ಲೆ ಮುಕ್ತಿಯ ಹೊಂದೋಣಾ ||೫||

ಬನ್ನಿ ಹೋಗೋಣಾ ಗೋಲಗೇರಿ ಲಿಂಗಯ್ಯಗ ಹೋಗೋಣಾ
ಗೊಲ್ಲಾಳಲಿಂಗಯ್ಯಗ ಹೋಗೋಣಾ
ಸತ್ಯವಂತರಾಗಿ, ಚಿತ್ತಶುದ್ಧರಾಗಿ ದರ್ಶನ ಪಡೆಯೋಣಾ

# ೧೭. ಮುಗ್ಧ ಶರಣರ ಹಾಡು

ಮುಗ್ಧ ಶರಣರ ಹಾಡು ಸಿದ್ಧಿ ಮಂತ್ರವ ನೋಡು
ಸಿದ್ದಾಗೋ ಹಾಡ ಹಾಡುದಕೇ ಎಲೆ ಜೀವ
ಶುದ್ಧಾಗಿ ಹೊಂದು ಶಿವ ಪದವ ||೧||

ಜಂಗಮರ ಶಿವಪೂಜೆ ಲಿಂಗವನೆ ನೆನೆಸಿದನು
ಹಿಂಗಿಸಿ ಆಶೆ ಶಿವಲಿಂಗ ನನಗೊಲಿದು
ಲಿಂಗಾಗಿ ಕೂತು ಕೈಯ್ಯೊಳಗೆ ||೨||

ಲಿಂಗವೇ ಗತಿಯೆಂದು ಕಂದ ಕುರುಬರಿಗಂದ
ಲಿಂಗಯ್ಯ ಮೆಚ್ಚಿ ಹರಿಸಿದರೆ ಕುರುಬರಿಗೆ
ಗಂಗ್ಯಾಗಿ ಹೊನ್ನು ಹರಿಯುವದು ||೩||

ಹರಹರನೆ ಗಿರಿಲಿಂಗ ಗುರುಲಿಂಗವೆನಗಾದಿ
ಎರಗಿದನು ಭಕ್ತಗೊಲ್ಲಾಳ ಹರುಷದಲಿ
ಕುರುಬರೊಡಗೂಡಿ ಕಾಡೊಳಗೆ
ಮಳಲದಿನ್ನಿಯ ಹೊಳೆವ ಹಿಕ್ಕಿಯನಿಟ್ಟು
ಹೊಳಲಲಿಂಗಿಲ್ಲಿ ನೆನೆ ಎಂದು ಭಕ್ತಿಯಲಿ
ತಿಳಿಗೊಳದ ನೀರ ಸಿಂಪಡಿಸಿ ||೪||

ಕಾಡ ಪತ್ರಿಯನೆತ್ತಿ ಕಾಡ ಹೂಗಳ ಕೊಯ್ದು
ಓಡ್ಯಾಡಿ ತಂದು ಶಿವಪೂಜೆ ಮಾಡಿದರು
ನೋಡಿ ನಗುತ್ತಿದ್ದ ಶಿವಲಿಂಗ ||೫||

ನೊರೆ ಬಂದ ಕುರಿಹಾಲು ಹರಗೆಂದು ಎಡೆಮಾಡಿ
ಕುರಿಹಿಕ್ಕೆಗಂದ ಲಿಂಗಯ್ಯ ಬೆಳಗಿದರೆ
ಧರೆಗೆಲ್ಲ ಬೆಳಕು ಹರಿಯುವುದು. ||೬||

ಹಿಂಡಿನೊಳಗಿರು ನಾಯಿ ಹಿಂಡಗಲಿ ಕೇಳುವವು
ಬೆಂಡಮೇಲೆತ್ತಿ ಶಿವಭಜನೆ ತೊರೆಬಿಟ್ಟು
ಹಿಂಡುವದು ನಿಂತು ಕುರಿಹಿಂಡು ||೭||

ಹರಸೊದ್ದ ನರಪಾಪಿ ಇರಲಾರಿ ಬದುಕಿನ್ನೂ
ಕರೆಯಲಾರೆನು ತಂದೆಂದು ಸಹಿಸುವೆನೆ
ಹರನಿಂದೆ ಎಂದ ಗೊಲ್ಲಾಳ ॥೮॥

ಕಡುಪಾಪಿ ಬಿಡೆನಾನು ಕಡಿದು ಚೆಲ್ಲುವೆ ನಿನ್ನ
ಕೊಡಲಿಯನೆತ್ತಿ ತಲೆಗಿಡಲು ಕುರಿಹಿಕ್ಕಿ
ಧಡಲೆಂದು ಒಂಡೆದು ಶಿವನೆದ್ದು ॥೯॥

ಕುರಿಯ ಹಿಕ್ಕಿಯ ನಂಬಿ ಹರನೆಂದು ಪೂಜಿಸಿದ
ಕುರುಬ ಶಿವಭಕ್ತ ಗೊಲ್ಲಾಳ ಹರಮೆಚ್ಚಿ
ಕರೆದೊಯ್ದನವನ ಶಿವಪುರಕೆ ॥೧೦॥

ಹಂತಿಯದು ಹಾಡೆಂದು ಪಂತ ಕಟ್ಟಲು ಬೇಡ
ಕಂತಿ ಕರಗುವದು ನಿಂತಲ್ಲೆ ಗೊಲ್ಲಾಳ
ಕಂತು ಎದೆಯೊಳಗೆ ಹಾಡಿಸಿದ ॥೧೧॥

ಶರಣು ಶರಣೆಂಬುವೆನು ಹರಣ ಹಾರುವ ತನಕ
ಕರುಣಿಸಿರಿ ಶರಣ ಗೊಲ್ಲಾಳ ನಮಗಿನ್ನು
ಹರಸರಿ ಹುಲುಸು ಹುಲುಲ್ಲಿಗೋ ॥೧೨॥

# ೧೮. ಭಾವಲಿಂಗ

ಶ್ರೀ ಗೊಲ್ಲಾಳೇಶ್ವರ ಲಿಂಗಕ್ಕೆ ಅಭಿಷೇಕ ಮಾಡಿದಾಗೊಮ್ಮೆ ಪ್ರತಿ ಸಲ ಭಕ್ತಿಯಿಂದಾ ಧರ್ಮದರ್ಶಿಗಳು ಭಕ್ತಿಯಿಂದಾ ಹಾಡುವ ಪದ.

ಭಾವಲಿಂಗ ಓಂ ಸದ್ಭಕ್ತ ಜನರ ಭಾವಲಿಂಗ ಓಂ
ಭಾರವಲಿಂಗ ಓಂ ಸದಾಶಿವಾವ ಕಾಲರೆನಿಸಿ,
ವೀರಶೈವ ಧರ್ಮ ನಿಷ್ಠ ಭುವಿಯಳೋಭಿ
ಮೆರೆದ ರಮಳ ಮಹಿಮ ಭಾವಲಿಂಗ ಓಂ ||ಪ||

ಮಲ್ಲವಿಬುಗಳು ಶಿವಗರ್ಪಿಸಾದುಣ ಲೊಲ್ಲೆನಾಗಳು
ಎನೆ ಕುಹಕರೊಂದು ಬಳ್ಳ ಎಳೆಯೊಳು
ನೆಲೆಸೆಳ್ಳಸುತ್ತರೆಲ್ಲರಾಗಲು ಮಲ್ಲಭಾವ ನಿಮ್ಮ ಗೌರಿ
ವಲ್ಲಭನಿತನೆಂದು ತೋರಲ್ ಒಳತೆಂದು ಭಾವ ಭಜಿಸಿ
ಅಲ್ಲೇ ಲಿಂಗವಾಯಿತಾಗ, ಭಾವಲಿಂಗ ಓಂ ....... ||೧||

ನಂಬಿಯಣ್ಣನು ಆ ಪೊರವಿನಾಟಿ ಕುಂಭ ಕುಚವನು
ಕಾಣುತ್ತಲಿಲ್ಲ ಸ್ವಯಂಭುವೀತನು ಎನುತಾಪಾಡಿ
ತಾನು ಭರಿತನು, ಸಂಭ್ರಮದಲಿ ತನ್ನ ಭಾವಂ
ಬಲಿಯೇ ಭಜಿಸುತ್ತ ಕರಿಯೇ ಶಂಭೋ ಎನುತ (ಎಂದು)
ನುಡಿದನಾಗ ನಂಬಿಗಿಟ್ಟ ಈತನಾಗ, ಭಾವಲಿಂಗ ಓಂ.... ||೨||

ಪೆದ್ದಯಾಕ್ಕೈನು ಶಿವಲಿಂಗದೀಕ್ಷೆ ಬದ್ಧನಾಹೆನು
ತಾನೆನುತಲಾ ಗುರುವಿದ ಶಾವನು
ಕಾಯ್ದಿರಲು ನೋಡಿ ರೌದ್ರದಾತನು
ಬಿದ್ದ ಗುಂಡಗಲ್ಲನೆತ್ತು ಬದ್ದ ಹೋ ಎನುತ ಹಾ ಕಲ್
ಉದ್ಧರಿಸಿದನೆಂದು ಪಿಡಿದು ಸಿದ್ಧಲಿಂಗವಾಯಿತಾಗ,
ಭಾವಲಿಂಗ ..... ||೩||

ಶರಣಕುಲಜನು ಆ ಕಾಟ ಕೂಟ ನರವಿಧೂತನು
ನಟ್ಟಡವಿಯೋಳ ಕುರಿ ತರಬಿದಾತನು

ಚರವರನು ಕೊಟ್ಟ ಕುರಿಯ ಹಿಕ್ಕಿಯನು
ಪರಮನೆಂದು ಭಜಿಸುತಿರಲ್ಕೆ ಭರದಿ ತಂದೆಲೊದಿಯಲವನ
ಶಿರವ ಹರಿದು ಹರನು ಮೆಚ್ಚಿ
ಪರಮ ಪದವಿಯಿತ್ತನಾಗ, ಭಾವಲಿಂಗ ಓಂ.... ||೩||

ಶರಧಿ ರತ್ನವಾ ಧರಿಸಿರ್ಪಗೋಲ್‌ಗೇರಿ
ಸರಸಮೇತವಾ ತಳಿವಂತೆ ಹರನ
ಕುರಣದೊಳ್ ಇರುವಾ
ಸ್ವತಂತ್ರಭಾವ ಭರಿತ ಲಿಂಗವಾ
ಪರಮ ಘನಮಠೇಶನ ಸತ್ಕರುಣದಿಂದ
ಧರಿಸಿರುವಾ ಶಿವಶರಣರಾವ ಕುರುಹ ಹಿಡಿವ
ಅದರೋಳ್ ಉಮೇಶ ತೋರ್ಪನಾಗ, ಭಾವಲಿಂಗ, ಓಂ ..... ||೫||

ಪ್ರತಿಯೊಬ್ಬ ಭಕ್ತನು ವಿಶ್ವಾಸದಿಂದ ಭಾವನೆಯಿಂದಾ ಪೂಜಿಸಿ ಪರಮಾತ್ಮನನ್ನು ಒಲಿಸಿಕೊಂಡಾಗ ಅಲ್ಲಿ ಉದ್ಭವವಾದ ಲಿಂಗವೇ ಭಾವಲಿಂಗ ಎಂದು ತಿಳಿದು ಹಿಂದಿನ ಹಿರಿಯರು ಭಕ್ತಿಯಿಂದಾ ರಚಿಸಿದ ಈ ಪದ್ಯ ಇಂದಿಗೂ ಜನಪ್ರಿಯವಾಗಿ ಹಾಡುವ ರೂಢಿಯಲ್ಲಿದೆ. ಈ ಪದ್ಯದಲ್ಲಿ ಬಳೇಶಮಲ್ಲಯ್ಯ, ನಂಬಿಯ್ಣ, ಗೊಲ್ಲಾಳೇಶ್ವರ, ಇವರುಗಳು ಲಿಂಗ ಪೂಜಿಸಿದ ಪರಿಯನ್ನು ಹಾಡಿ ಹೊಗಳಲಾಗಿದೆ.

## ೧೯. ಮನವೇ ಕಾರಣವು ಕಾಣಿರಯ್ಯ

ಗೊಲ್ಲಾಳೇಶ್ವರ ಪೂಜಾ ಸಮಯದಲ್ಲಿ ಹಾಗೂ ಜಂಗಮರ ಪಾದಪೂಜಾ ಸಮಯದಲ್ಲಿ ಭಕ್ತಿಯಿಂದಾ ಹಾಡುವ ಪದ.

ಮನವೇ ಕಾರಣವು ಕಾಣಿರಯ್ಯ
ಶಿವಶರಣರಿಗೆಲ್ಲ
ಮನವೇ ಕಾರಣವು ಕಾಣಿರಯ್ಯಾ ||ಪ||

ಬೆಳ್ಳಿಯ ಪರ್ವತ ಹಿರಿದೆನು ಮಹಾ ?
ಅಳ್ಳಿಯ ಬಳ್ಳವು ಕಿರಿದೆನು ಮಹಾ ?
ಒಳ್ಳೆಯ ಮನದಲಿ ಪೂಜೆಯ ಮಾಡಲು
ಬಳ್ಳಿನೋಳ್ ಶಿವಬೆರೆತನು ಮಹಾ ಮನವೇ ... ||೧||

ತಂಬೂರಿ ನಾರದ ಹಿರಿದನು ಮಹಾ
ಕುಂಬಾರ ಗುಂಡನು ಕಿರಿದನು ಮಹಾ
ಕುಂಬಾರ ಗುಂಡನ ಗಡಗಿಯ ಶಬ್ದಕೆ
ಶಂಭೋ ಶಂಕರ ತಾ, ಕುಣಿದನು ಮಹಾ, ಮನವೇ..... । |೨||

ಶ್ರೀ ಗಿರಿ ಲಿಂಗವು ಹಿರಿದೆನು ಮಾ
ಕುರಿಯ ಹಿಕ್ಕಿಯನು ಕಿರಿದನು ಮಹಾ
ವರಗುರು ಶಾಂತನ ಪೂಜೆಯ ಮಾಡಲು
ಕುರಿಯ ಹಿಕ್ಕಿಯೊಳು ಶಿವ ಬೆರೆತನು ಮಹಾ, ಮನವೇ.... ||೩||

ಮೇದಿನಿ ಚೋಳನು ಹಿರಿದನು ಮಹಾ
ಮಾದರ ಚನ್ನನು ಕಿರಿದನು ಮಹಾ
ಮಾದರ ತನ್ನನ ಮನೆಯೊಳಗಂಬಲಿ
ಆದಿ ರುದ್ರ ತಾ, ಸವಿದನು ಮಹಾ, ಮನವೇ .... ||೪||

ಜಗದೊಳು ಚೌರನು ಹಿರಿದನು ಮಹಾ
ಸಗರದ ಗೊಗ್ಗಿಯು ಕಿರಿದನು ಮಹಾ
ಸಗರದ ಗೊಗ್ಗಿಯ ಮಿಗಿಲಾದ ದೂಪಕೆ
ಅಜಹರ ರುದ್ರ ತಾ, ಸವಿದನು ಮಹಾ ||೫||

ಈ ಪದ್ಯದಲ್ಲಿಯ ಶರಣರಾದ ಬಳೇಶ ಮಲ್ಲಯ್ಯ, ಕುಂಬಾರ ಗುಂಡಯ್ಯ, ಗೊಲ್ಲಾಳೇಶ್ವರ, ಮಾದರ ಚನ್ನಯ್ಯ, ಸಗರದ ಗೊಗ್ಗಿಯು ಇವರನ್ನು ಹಾಡಿ ಸ್ಮರಿಸಲಾಗಿದೆ.

# ೨೦. ಪಾದ ಪೂಜೆ

ಪ್ರತಿ ಸಲ ಜಂಗಮರ ಪಾದ ಪೂಜಾ ನಡೆದ ಸಮಯದಲ್ಲಿ ದೇವಸ್ಥಾನದ ಧರ್ಮದರ್ಶಿಗಳಾದ ದೇವರಮನಿ ಅವರ ಮನೆಯಲ್ಲಿ ಪೂಜಾ ನಡೆದಾಗ ಭಕ್ತಿ ಪೂರಕವಾಗಿ ಹಾಡುವ ಪಾದಪೂಜಾ ಪದ.

ಪಾದ ಪೂಜೆ ಮಾಡಿರಿ ಶಿವಜಂಗಮ ಪಾದ
ಸದ್ಗುರುವಿನ ಪಾದ ಪೂಜೆ ಮಾಡಿರಿ ಶಿವಜಂಗಮ ಪಾದ

ಬಾಲಿಯವ್ವನ ನಂದನ ಪಾದ
ಮೇಲಾದನ ಪಾದ ಚಿಲ್ಲಾಳನ ಭಕ್ತಗೆ ಮೆಚ್ಚಿದ ಪಾದ
ಬಾಲನ ನಿಂಗಿತೊ ಲಾಲಿಸಿ.....
ಬಾಲು ಕುಡಿದು ಪರಿಪಾಲಿಸಿ ಪ್ರೇಮಿಸಿ ಪಾದ ಪೂಜೆ ...... ||೧||

ಭುಜಗೇಂದ್ರ ಸ್ತೋತ್ರಕೆ ಮೆಚ್ಚಿದ ಪಾದ
ಭುಜನಾಶನ ಪಾದ ಭುದ ನಾಲ್ಕು ಲೋಚನ ರಂಜಿತ ಪಾದ
ಅಜ ಹರಿ ಹರಿಹರ ಗಜ ಚರ್ಮಾಂಭರ
ಸುಜನ ಪ್ರಮಥ ಗಣ ಭಜಿಸುವ ಪಾದ ಪೂಜೆ ||೨||

ಬಲ್ಲಾಳನ ಸತಿಯಳು ಬೇಡಿದ ಪಾದ
ಸಲ್ಲೈಸುವ ಪಾದ ಗೊಲ್ಲಾಳನ ಭಕ್ತಿಗೆ ಮೆಚ್ಚಿದ ಪಾದ
ಬಿಲ್ಲಿಲೆ ಹೊಯಿದರೆ ನಿಲ್ಲದಿ ಒಲವನು
ಸೊಲ್ಲಿಸಿ ಮಹಿಮನ ಬಲ್ಲದ ಪಾದ ಪೂಜೆ.....

ಭಂಡಾರನ ತಸ್ಕರ ಮಾಡಿದ ಪಾದ
ದುಂಡೇಶನ ಪಾದ ಗುಂಡಯ್ಯನ ಭಕ್ತಿಗೆ ಮೆಚ್ಚಿದ ಪಾದ
ಬಿಲ್ಲಿಲೆ ಹೊಯಿದರೆ ನಿಲ್ಲದಿ ಒಲವನು
ಸೊಲ್ಲಿಸಿ ಮಹಿಮನ ಬಲ್ಲದ ಪಾದ ಪೂಜೆ....

ಭಂಡಾರನ ತಸ್ಕರ ಮಾಡಿದ ಪಾದ
ದುಂಡೇಶನ ಪಾದ ಗುಂಡಯ್ಯನ ಭಕ್ತಿಗೆ ಮೆಚ್ಚಿದ ಪಾದ
ದಂಡಿತ ದೈತ್ಯರ ರುಂಡವ ಧರಿಸಿದ

ಪುಂಡ ಪರಾಕ್ರಮ ಮಂಡಿತ ಪಾದ ಪೂಜೆ ||೯||

ದಶಕಂಠನ ಧರಣಿಗೆ ಮೆಟ್ಟಿದ ಪಾದ
ದಶಹಸ್ತನ ಪಾದ ದಶ ಪಂಚಾ ನೇತ್ರುಳ್ಳ, ಮಂಜುಳ ಪಾದ
ಅಸಮದಿ ಆಳಗುಂಡಿಗಿ ಯೋಮದ ವಿಖ್ಯಾತನ
ಪಶುಪತಿ ರೇವಣಸಿದ್ಧನ ಪಾದ ಪೂಜೆ. ||೫||

ಈ ಪದ್ಯದಲ್ಲಿ ಭಕ್ತ ಚಿಲ್ಲಾಳ, ಭುಜಗೇಂದ್ರ, ಬಲ್ಲಾಳ, ಗೊಲ್ಲಾಳ, ದುಂಡೇಶ, ಗುಂಡಯ್ಯ ರೇವಣಸಿದ್ಧ ಇವರೆಲ್ಲ ಲಿಂಗವನ್ನು ಒಲಿಸಿಕೊಂಡವರೆಂದು ಪೂಜಿಸುವರು.

## ೨೧. ಕಡ್ಡಿ ಬತ್ತಿ ಬೆಳಗ ಬನ್ನಿರೆ

ಶ್ರೀ ಗೊಲ್ಲಾಳೇಶ್ವರ ದೇವರ ಪೂಜಾ ಸಮಯದಲ್ಲಿ ಪ್ರತಿನಿತ್ಯ ಮೂರು ಸಲ ಪೂಜಾ ನಡೆದಾಗ ಹಾಡುವ ಪದಗಳು. ಐದು ಬೆಳ್ಳಿಯ ಕಡ್ಡಿಗಳಿಗೆ ಬತ್ತಿ ಸುತ್ತಿ ಆರತಿ ಬೆಳಗುವಾಗ ಹಾಡುವ ಪದ.

ಕಡ್ಡಿ ಬತ್ತಿ ಬೆಳಗು ಬನ್ನಿರೇ
ಕಾರುಣ್ಯ ನಿಧಿಗೆ ಕಡ್ಡಿ ಬತ್ತಿ ಬೆಳಗು ಬನ್ನೀರೆ.
ಕಡ್ಡಿ ಬತ್ತಿ ಬೆಳಗು ಬನ್ನಿ ಗುಡ್ಡದೇವ ಗೊಲಿಸು ಬನ್ನಿ
ದಡ್ಡತಾನ್ಸದಿಂದ ನಮ್ಮ ದೊಡ್ಡ ಸ್ವಾಮಿ ಪಾದಕೆರಗಿ
ಕಡ್ಡಿ ಬತ್ತಿ... ||ಪ||

ಇಂದು ಮಡಿಯನುಟ್ಟು ತೊಟ್ಟು
ಗಂಧ ಕಸ್ತೂರಿ ಫಣೆಯನ್ನಿಟ್ಟು
ಇಂದುಧರಗೆ ವೀಳ್ಯಕೊಟ್ಟು
ಮಂದಗಮನೆಯರು ಹರುಷಬಿಟ್ಟು,
ಕಡ್ಡಿ ಬತ್ತಿ..... ||೧||

ಲೋಕನಾಥ ಇಂದು ಬಂದು
ಏಕೋದೇವ ಈತನೆಂದು
ಕಾಕಮನದ ಭ್ರಮಿಯಕೊಂದು
ಏಕೋ ಚಿತ್ತದಲ್ಲಿನೆಂದು, ಕಡ್ಡಿ ಬತ್ತಿ.... ||೨||

ದೇಶಕ ಅಧಿಕ ಜಿಣಮಗೇರಿ
ವಾಸು ಬಂದು ಕೈಗೆ ಸಾರಿ
ಆಶೆ ಅಳಿದು ಹರುಷ ತಾಳಿ
ಈಶ ಪದವಿ ಕೊಡುವ ಸಾರಿ,
ಕಡ್ಡಿ ಬತ್ತಿ.... ||೩||

# ೨೨. ಮಂಗಳಾರತಿ ಎತ್ತಿ ಬೆಳಗಿರೆ

ಮಂಗಳಾರುತಿ ಎತ್ತಿ ಬೆಳಗಿರೆ
ಸಿದ್ಧ ಗೊಲ್ಲಾಳಲಿಂಗಗೆ
ಆಡಿನ ಹಿಕ್ಕಿಯ ತಿಕ್ಕಿ ತೀಡಿ
ಲಿಂಗ ಮಾಡಿದ ದೇವಗೆ ಶರಣಗೆ ||ಪ||

ಪೂಜೆ ಮಾಡಿದ ಮುಗ್ದಗೆ
ಮಹಾದೇವನೊಲಿಸಿದ ಶರಣಗೆ
ಆಡಿನ ಹಿಕ್ಕಲಿ ಮೂಡಿ ಬಂದಾ
ಮಲ್ಲಿಕಾರ್ಜುನ ಲಿಂಗಗೆ ||೧||

ತಂದೆ ಬಲ್ಲುಗ ತಾಯಿ ದುಗ್ಗಳೆ
ಉದರದೀ ನೀ ಜನಿಸಿದೇ
ಮರ್ತ್ಯ ಲೋಕದ ಮರೆವಿನಲ್ಲಿ
ಕುರಿಯ ಕಾಯ್ದ ಕಂದಗೆ ||೨||

ತನ್ನರವಿನಿಂದಾ ಮರೆವು ತೆಗೆದಾ
ಮಹಾ ಭಕ್ತ ಗೊಲ್ಲಾಳಗೆ
ಲಿಂಗ ಪೂಜೆಯ ಕೆಡಿಸಬಂದ
ತಂದೆ ಶಿರ ಕಡಿದವನಿಗೆ ||೩||

ತಂದೆ ಶಿರ ಕಡಿದವನಿಗೆ
ಮಹಾಮಂತ್ರ ನೆಲೆಗೊಂಡಾತಗೆ
ಮಹಾಮಂತ್ರವ ಜಪಿಸಿ ಮರಳಿ
ತಂದೆಯನು ಪಡೆದವನಿಗೆ ||೪||

ಕೋಟಿ ಕೋಟಿ ಭಕ್ತರಾ
ಮನದಿಚ್ಛೆಯನು ತಿಳಿದಾತಗೆ
ನಂಬಿದವರಿಗೆ ಬೇಡಿದ್ದನ್ನು
ಕೊಟ್ಟು ಸಲುಹಿದಾತಗೆ ||೫||

ಮುಗ್ಧ ಜಂಗಮ ಪ್ರೇಮಿಗೆ
ನಿತ್ಯ ದಾಸೋಹ ಮೂರ್ತಿಗೆ
ಸತ್ಯವಂತರ ಸಲುಹುತಿರುವಾ ಮನದಲಿರುವಾ
ಗೊಲ್ಲಾಳಲಿಂಗೇಶಗೆ ||೬||

ಮಂಗಳಾರತಿ ಎತ್ತಿ ಬೆಳಗಿರೆ
ಸಿದ್ಧ ಗೊಲ್ಲಾಳಲಿಂಗಗೆ
ಆಡಿನ ಹಿಕ್ಕಿ ತಿಕ್ಕಿ ತೀಡಿ
ಲಿಂಗ ಮಾಡಿದ ದೇವಗೆ

## ೨೩. ಜಯ ಜಯ ದೇವಾ

ಜಯ ಜಯ ದೇವಾ ಜಯ ಮಹಾದೇವಾ
ಜಯ ಮಹಾಲಿಂಗವೇ ಗೋಲಗೇರಿ ಗೊಲ್ಲಾಳಲಿಂಗವೇ
ತಂದೆ ಗೊಲ್ಲಾಳೇಶನೆ ಜಯವೆಂದು ನಿನಗೆ
ಮುತ್ತಿನಾರತಿಯ ಬೆಳಗುವೆನೋ ತಂದೆ ||ಪ||

ಶ್ರೀಶೈಲ ಮಲ್ಲಯ್ಯಗೋಗುವ ಭಕ್ತರ
ಭಕ್ತಿಗೆ ಮರುಳಾದೆ ದೇವಾ ಭಕ್ತಿಗೆ ಮರುಳಾದೆ
ಭಕ್ತರು ನುಡಿದ ಶಿವಸ್ಮರಣೆ ಕೇಳಿ ಮಂತ್ರಮುಗ್ಧನಾದೆ
ನಂದಯ್ಯ ಸ್ವಾಮಿಯ ಪಾದವ ಹಿಡಿದು
ಲಿಂಗವ ಪಡಕೊಂಡೆ ತಂದೆ ಲಿಂಗವ ಪಡಕೊಂಡೆ
ಭಕ್ತಿ ಭಾವದಿಂದ ಚಿನ್ನವನ್ನ ಗುರುದಕ್ಷಿಣೆ ಕೊಟ್ಟವನೆ ||೧||

ಕುರಿಯ ಹಿಕ್ಕಿಯನೆ ಲಿಂಗವೆಂದು
ನೀ ಭಕ್ತಿಲೆ ಕುಣದವನೆ ದೇವಾ ಹಾಲನ್ನೆರೆದವನೆ
ಭಕ್ತಿಲೆ ಪೂಜೆಯ ಗೈದವನೆ ಶಿವನನು ಒಲಿಸಿಕೊಂಡವನೆ
ಧವಳಾರ ಪುರವನು ಶಿವಪುರಕೊಯ್ದು ಪಾವನ ಗೈದವನೆ ||೨||

ಡಂಬಳ ಗೌರಮ್ಮನ ಭಕ್ತಿಯ ಬೋನವನುಂಡವನೆ
ನೈವೇದ್ಯವನು ಉಂಡವನೇ ಭೇಡಿದವರಿಗೆ
ಬೇಡಿದ ಕೊಟ್ಟು ಕಾಮಧೇನುವಾದೆ
ಲಕ್ಷ್ಮೇಶ್ವರದಾ ನಂದಿಗೊಲಿದು ಅಲ್ಲಿ ಉದ್ಭವನಾದವನೆ
ದೇವಾ ಉದ್ಭವನಾದವನೇ ಸುರಪುರದ ಮರಿಯಪ್ಪಗೆ
ಪೂಜಗೆ ಕರೆಸಿಕೊಂಡವನೇ ||೩||

ನಿತ್ಯ ನೇಮದಿ ಪೂಜಿಸಿದವರಿಗೆ
ಬೇಡಿದಕೊಡುವನೇ ತಂದೆ ಬೇಡಿದ ಕೊಡುವವನೆ
ಗುರುವೇ ಬೇಡಿದ ಕೊಡುವವನೇ
ದೇವಾ ಬೇಡಿದ ಕೊಡುವವನೇ
ದುಷ್ಟರ ಶಿಕ್ಷಿಸಿ ಶಿಷ್ಟರ ರಕ್ಷಿಸಿ
ಭಕ್ತರ ಕಾಯುವವನೇ ||೪||

ನಿನ್ನ ನಂಬಿ ನಾ ಓಡಿ ಬಂದೆನೋ
ರಕ್ಷಿಸು ಗುರುದೇವಾ ನನ್ನನ್ನು
ರಕ್ಷಿಸು ಗುರುದೇವಾ
ನಿನ್ನ ಪಾದದಲಿ ಮೋಕ್ಷ ಹೊಂದಲು
ಆರುತಿ ಬೆಳಗುವೆನೋ ||೫||

ಜಯ ಜಯದೇವಾ ಜಯ ಮಹಾದೇವಾ
ಜಯ ಮಹಾಲಿಂಗವೇ ಗೋಲಗೇರಿ ಗೊಲ್ಲಾಳಲಿಂಗವೇ
ತಂದೆ ಗೊಲ್ಲಾಳೇಶನೆ ಜಯವೆಂದು ನಿನಗೆ
ಮುತ್ತಿನಾರುತಿಯ ಬೆಳಗುವೆನೋ ತಂದೆ ||

## ೨೪. ಆರುತಿ ಬೆಳಗನು ಬಾ

ಆರುತಿ ಬೆಳಗನು ಬಾ
ಗೊಲ್ಲಾಳಗ, ಆರುತಿ ಬೆಳಗನು ಬಾ
ಆರುತಿ ಬೆಳಗುವೆ ಪಾರಮಾರ್ಥದೊಳು
ಸಾರವ ತಿಳಿದು ತಾರಕ ಬ್ರಹ್ಮಗ
ಗೊಲ್ಲಾಳಗ ಆರುತಿ ಬೆಳಗನು ಬಾ ||ಪ||

ಗುದಗುಹ್ಯಗಳನ್ನೊತ್ತಿ ಮೆಲ್ಲಕೆ ಚದುರ ತನದಿ ಹತ್ತಿ
ಸದರಿನ ಮನಿಯೋಳು ನೆದರಿಟ್ಟು ನೋಡಲು
ಎದುರಿಗೆ ಕಾಂಬುವ ಸದಮಲ ಬ್ರಹ್ಮಗೆ
ಗೊಲ್ಲಾಳಗ ಆರುತಿ ಬೆಳಗುನು ಬಾ ||೧||

ಬಿಡದಿಡೆಯನು ತಡೆದು ಪಿಂಗಳ
ನಾಡುದ್ವಾರವ ಪಿಡಿದು ಕೂಡಿಸಿ ಶ್ವಾಸದಿ
ನೋಡಲು ಅಗ್ನಿಯ ಗೂಡಿಲಿ
ಮೂಡಿದ ತಾರಕ ಬ್ರಹ್ಮ
ಗೊಲ್ಲಾಳಗ ಆರುತಿ ಬೆಳಗನು ಬಾ ||೨||

ಚಂದ್ರ ಸೂರ್ಯರ ತಂದು ಕೂಡಿಸಿ
ವಂದೆ ಸ್ಥಳದಿ ಮಿಂದು
ಚಂದಾಗಿ ಬೆಳಗುವೆ ತಂದೆ ಗೊಲ್ಲಾಳಗೆ
ಮಂದ ಪ್ರಕಾಶವು ಆನಂದ ಬ್ರಹ್ಮಗೆ
ಗೊಲ್ಲಾಳಗೆ ಆರುತಿ ಬೆಳಗನು ಬಾ ||೩||

## ೨೫. ಕರ್ಪೂರದಾರುತಿ ಪದ

ಪ್ರತಿ ದಿನ ಪೂಜಾ ಸಮಯದಲ್ಲಿ ಮಂಗಳಾರುತಿ ನಂತರ ಕರ್ಪುರ ಆರತಿ ಮಾಡುವಾಗ ರೂಡಿಯಲ್ಲಿರುವ ಪದ.

ಕರ್ಪುರಾರುತಿ ಬೆಳಗಿರೆ
ಕಾರುಣ್ಯ ಮೃಢಹರ ದೇವಗೆ ||ಪ||

ನೀಲಕಂದರ ನಿಗಮಗೋಚರ
ಬಾಲ ಚಂದ್ರಾ ಭರಣಗೆ
ಬಾಲಿಗೊಲಿದನು ಹಾಲು ಸವಿದನು
ಲೋಲ ಶ್ರೀ ಗುರುರಾಯಗೆ, ಕರ್ಪುರಾರುತಿ ... ||೧||

ವಾರಿಜೋದ್ಭವ ಶಿರವ ಹರಿದನು
ಮಾರ ಹರ ಮಹಾದೇವಗೆ
ಘೋರ ದುರಿತವ ದೂರ ಮಾಡಿದ
ಶೂರ ಷಣ್ಮುಖನಯ್ಯಗೆ, ಕರ್ಪುರಾರತಿ... ||೨||

ಶರಣು ಜನಕೆ ವರನಿತ್ತನು
ಪರಮ ಪಾರ್ವತಿ ಅರಸಗೆ
ಧರೆಯೊಳು ಅಧಿಕವಾಗಿ ಮೆರೆಯುವ
ಗೋಲಗೇರಿ ಪುರಧೀಶಗೆ ||೩||

## ೨೬. ಹಂತೀ ಪದ

೧. ಥೌವಳಾರದಾಗ ಇರುವರೋ । ಬಲ್ಲುಗ ದೇವರು । ಧರ್ಮಪತ್ನಿಯೋ ದುಗಳಮ್ಮೋ । ಧರ್ಮಪತ್ನಿಯು ದುಗಳಮ್ಮನ ಹೊಟ್ಟೇಲೆ । ಪುತ್ರ ಹುಟ್ಯಾನ ಗೊಲ್ಲಾಳೊ ॥

೨. ಆಡನೆ ಕಾಯುತ, ಉಣ್ಣಿಯ ನೂಲುತ । ಕೈಯ್ಯಾಗ ಭಿರಕೀ ಹಿಡಿದಾನೋ । ಕೈಯ್ಯಾಗ ಭೀರಕೀ ಹಿಡಿದಾನ ಗೊಲ್ಲಾಳ । ಡಂಬಳ ದಾರ್‍ಯಾಗ ನಿಂತಾನೋ ॥

೩. ಶ್ರೀಶೈಲಕ ಹೋಗುವರು, ನಂದಯ್ಯ ಮುತ್ಯಾರು । ದಾರಿ ತರುಬ್ಯಾನ ಗೊಲ್ಲಾಳ । ಆವಾಗ। ಎಲ್ಲಿಗಿ ಹೋಗತೀರಿ ನನಗ್ಹೇಳೋ ।

೪. ಶ್ರೀಶೈಲಕ ಹೋಗತೀರಿ । ಅಲ್ಲೇನ ತರತೀರಿ । ಗಿರಿ ಪೂಚಾದುಂಡಿ । ದವನವೊ । ತಗೊಂಡು । ದವನದ ಹುಣ್ಣೀಗಿ, ಬರತೀವೋ ॥

೫. ಏ ಮುತ್ತ್ಯಾ ಹೇಳತೀನಿ, ಕಾಲಿಗಿ ಬೀಳತೀನಿ । ಬಿಂದಿಗಿ ಹೊನ್ನ । ಕೊಡತೀನಿ। ನಂದಯ್ಯ ಮುತ್ತ್ಯಾ । ನನಗೊಂದು ಲಿಂಗ ತರಬೇಕೋ ॥

೬. ಶ್ರೀಶೈಲಕ ಹೋಗ್ಯಾನ ಯಾತ್ರೆಯ ಮಾಡ್ಯಾನ । ಲಿಂಗ ನೆನಪಹಾರಿ, ಬಂದಾನ । ನಂದಯ್ಯ ಮುತ್ತ್ಯಾ । ಎದುರಿಗಿ ಗೊಲ್ಲಾಳ ನಿಂತಾನೋ ॥

೭. ಎಡಗಾಲ್ಲೆ ತೊಗೊಂಡಾ(ನ) ಬಲಗೈಯಾಗ ಹಿಡಿದಾನ । ಆಡಿನ ಹಿಕ್ಕೊಂದು ಕೊಟ್ಟಾನ ನಂದಯ್ಯ । ಭಕ್ತೀಲೆ ಗೊಲ್ಲಾಳ ದುಡದಾನೋ ॥

೮. ಮೂಗಂಡಗ ಹಾಲ ತಂದು । ನಾಗಂಡಗ ತುಪ್ಪ ತಂದು । ರುದ್ರಾಭಿಷೇಕ ಮಾಡ್ಯಾನೋ । ಗೊಲ್ಲಾಳ । ಕಾಡ ಪತ್ರಿಯ ಏರಿಸ್ಯಾನೋ ।

೯. ಆವಾಗ ಬಲ್ಲುಗ । ಅರಿವಿಕಿ ಆಗ್ಯಾನ । ಹಾಳ ಮಾಡತಾನ ಗೊಲ್ಲಾಳೋ। ಹಾಳ ಮಾಡತಾನಂತ, ಗೊಲ್ಲಾಳಗ ಹೊಡಿಲಾಕ । ಕೊನಿಯ ಕೊಡಲಿಯಾ ತಂದಾನೋ ॥

೧೦. ಕೊನಿಯ ಕೊಡಲಿಯ, ತಂದಾನ ಬಲ್ಲುಗ । ಗೊಬ್ಬರದ ಗುಂಡಿಗಿ ಹೋಗ್ಯಾನ । ಬಲ್ಲುಗ ।ಆವಾಗ ಗೊಲ್ಲಾಳನ, ದೂಡ್ಯಾನೋ ॥

೧೧. ಸಿಟ್ಟಿಗೇರಿ ಗೊಲ್ಲಾಳ, ಕೊಡಲಿ ತಗೊಂಡಾನ। ತಂದೆಯ ರುಂಡಾ ಹೊಡದಾನೋ ।ಗೊಲ್ಲಾಳ । ಪರಮಾತ್ಮ ಪ್ರತ್ಯಕ್ಷ ಆಗ್ಯಾನ ॥

೧೨. ಪರಮಾತ್ಮ ಪ್ರತ್ಯಕ್ಷ ಆಗೀನೆ । ಹೇಳ್ಯಾನ ಎಲ್ಲಿರಿಗಿ ಕೈಲಾಸಕ ।
ಕರೆದೊಯ್ಯಾ । ಹೇಳ್ಯಾನ ।ಭೂಲೋಕಕ್ಕಾಗಿ ನೆನಿ ಅಂದಾ ॥

೧೩. ಆಡೀನ ಹಿಕ್ಕಿಯ ತಂದು । ತೀಡಿ ಲಿಂಗವ ಮಾಡಿ । ನೋಡಿರಿ ಶಿವನ
ಮಹಿಮವೋ । ಗೊಲ್ಲಾಳ । ಆಡಿನ ಹಿಕ್ಕ್ಯಾಗ ನೆನದಾನೋ ॥

೧೪. ಹಳಿಸಗರದಾಗ, ಇರುವರೋ । ಮರಿಯಪ್ಪ ಸಾವುಕಾರ । ಮುತ್ತಿನ
ವ್ಯಾಪಾರ, ನಡಿಸ್ಯಾರೋ। ಸಾವುಕಾರ । ಆ ಹಟ್ಟೇಗಿ ವಸ್ತೀ ಮಾಡ್ಯಾನ ।

೧೫. ವಸ್ತಿಯ ಮಾಡ್ಯಾನ । ಗಸ್ತಿಯ ತಿರುಗ್ಯಾಡಿ । ಮಳಿಗೂಟ ತಲಿಯಾಗ,
ಹೊಡದಾನೋ । ಸಾಹುಕಾರ । ಹೇರೆತ್ತಿನ ಕಣ್ಣ ಹೋಗ್ಯಾವೊ ॥

೧೬. ಆವಾಗ, ಸಾಹುಕಾರಗ,। ಸ್ವಪ್ನವ ಬಿದ್ದಾದ । ಗುಡಿಯ ಕಟ್ಟಸತೀನಿ
ಅಂದಾನೋ । ಸಾಹುಕಾರ । ಹೇರೆತ್ತಿನ ಕಣ್ಣ ಬಂದಾವೋ ॥

೧೭. ವ್ಯಾಪಾರ ಮಾಡ್ಯಾನ । ಲಾಭನೆ ಆಗ್ಯಾದ । ಲಾಭ ಆಗ್ಯಾದೋ - ಘನ
ಲಾಭೋ । ಆದರ ಆಡಿ ಮಾತ ನೆನಪಹಾರೋ॥

೧೮. ಆವಾಗ ಸಾಹುಕಾರಗ । ಬೆನ್ನಿನ್ನ ಹುಣ್ಣಾ ಹುಟ್ಟಿ । ಏನು ಹಚ್ಚಿದರ
ಮಾಯಲಿಲ್ಲೋ । ಸಾವಕಾರ । ಬೇಗ ಬೆಳಗಾನ ಹಲುಬ್ಯಾನೋ ॥

೧೯. ಕಂಬಳಿ ಟೊಪ್ಪಿಗಿ ಮಾಡಿ । ಕೈಯ್ಯಾಗ ಕೋಲ ಹಿಡಿದು । ಹಳಿಸಗರಕ
ಹೋಗಿ ನಿಂತಾನೋ । ಗೊಲ್ಲಾಳ । ಆಡಿನ ಹಿಕ್ಕ್ಯೊಂದು ಕೊಟ್ಟಾನೋ ॥

೨೦. ಆಡೀನ ಹಿಕ್ಕ್ಯೊಂದು, ಕೊಟ್ಟಾನ ಗೊಲ್ಲಾಳ । ತೈದು ಹಚ್ಚಂತಾ -
ಹೇಳ್ಯಾನೋ । (ಹೇಳುತ) ನಡುದಾನ । ಆವಾಗ ಸಾವುಕಾರನ ಅರಿವ್ಯಾಗೋ ॥

೨೧. ಎಲ್ಲ ದೇವರ ಗುಡಿ । ಕಲ್ಲೀಲೆ ಮುಗದಾವೋ । ಬಲ್ಲಿದ ಗೊಲ್ಲಾಳನ ।
ಅರಮನಿಯೋ । (ಅರಮನಿ) ಪದರಿಗೋಡೆ ಮಲ್ಲೀಗಿ ಹೂವೀಲೆ ಮುಗದಾವೋ ॥

೨೨. ಗೋಲಗೇರಿ ನೋಡೋ, ಗೊಲ್ಲಾಳನ ಗುಡಿ ನೋಡೋ । ತಾಯಿ
ಜಾನಮ್ಮನ ಅರಮನೆಯೋ । (ಅರಮನಿ) ಪಡಸಾಲ್ಯಾಗ ಉಂಡ
ಜಂಗಮರ ಸಭಾ ನೋಡೋ ॥

೨೩. ಲಿಂಗಯ್ಯನ ಗುಡಿ ಮುಂದ । ಲಿಂಗ ಮುದ್ರೆಯ ಕಲ್ಲು । ನಿಂದರಿಸಿ ಎತ್ತಿ
ಇಳವ್ಯಾಳೋ । ಜಾನಮ್ಮ । ಹೊಂದಿಸಿ ಕೈಯ ಮುಗದಾಳೋ ॥

೨೪. ಅಪ್ಪನ ಪೌಳ್ಯಾಗ, ಲ್ಯಾವಳ ಬಿದ್ದಾದ । ಹಾವಂತ ಜೀವ
ಹೆದರ್ಯಾದೋ । ಜಾನಮ್ಮ । ಹಾವಲ್ಲೋ ಶಿವನ ಶಿವದಾರೋ ॥

೨೫. ಅಪ್ಪನ ಪೌಳ್ಯಾಗ, ನೀರ್‍ಯಾರ ಚೆಲ್ಯಾರ । ಪಾರಿವಾಳ ಆಡೀ ... ಗಿಳಿ ಆಡ್ಯೋ । ಜಾನಮ್ಮನ । ಮೊಮ್ಮಕ್ಕಳಾಡಿ, ಮನಗ್ಯಾರೋ ॥

೨೬. ಅಣ್ಣ ತಮ್ಮರು ಕೂಡಿ । ಹೊನ್ನ ಗುಡ್ಡಕ ಹೋಗಿ । ಚನ್ನಂಗಿ ಬಿದರ ಕಡದಾರೋ। (ಕಡಿಯುತ) ಮಾಡ್ಯಾರ । ಹೊನ್ನ ಗೋಲಗೇರಿ ಹೊಸತೇರೋ ॥

೨೭. ಗೋಲಗೇರಿಯ ತೇರ ।ಮ್ಯಾಲಿಕ ಬಹುದೂರ । ಸುಳಿಗಾಳಿಗೊಮ್ಮೆ ಸುಳಕೂತೋ । (ಸುಳಕೂತೋ), (ಸುಳಕು) ತೇರಿನ ಮ್ಯಾಲ ಕೈಹೊಡೆದು ಗೊಂಬೆ ನಗತಾವೋ ॥

೨೮. ಅಪ್ಪನ, ತೇರಿಗಿ । ಎಪ್ಪತ್ತ ಮಿಣಿ ಹೂಡಿ । ಪಪ್ಪಳಿ ಶಿಲ್ಯಾ ಪರತ ಹೂಡಿ । ಗೊಲ್ಲಾಳನ । ಚಪ್ಪಳಿಗಿಟ್ಟ ತೇರಾ ಎಳದೇವೋ ॥

೨೯. ಗೋಲಗೇರಿಯ ತೇರ । ಘಾಲ ಮೇಲಾಗ್ಯಾದ । ಮ್ಯಾಲಿನ ಕಳಸ ಸಯಲಾಗ್ಯೋ । (ಸಯಲಾಗಿ) ಹೊಳೆಪ್ಪ ಮುತ್ತ್ಯಾ ಗಾಬರ‍್ಯಾಗ್ಯಾನ ಘುಳಿಗ್ಯಾಗೋ॥

೩೦. ದೇವರ ಹಿತಕಾಗಿ, ಒಡಿಯ ಶರಣಪ್ಪನವರು । ಬಿಡದೆ ಚಳುವಳಿ ನಡಿಸ್ಯಾರೋ । ಮಹಾತ್ಮರು । ಪಾಲಿಕಿ ಮುಂದ ಇರತಾರೋ ॥

೩೧. ಕೊಂಡಗೂಳಿ ದಾರೀಲೆ ಮಂದ್ಯಾಗ ನೆರದಾರೋ । ನಂದೀಕೋಲಾಟ । ನವಲಾಟೋ । ಗೊಲ್ಲಾಳನ । ಬಿಂದಿಗಿಯಾಟ ಗುಡಿಯಾಗೋ ॥

೩೨. ಅಲ್ಲಿ ಹಾನ ಇಲ್ಲ್ಯಾನ । ಹಳ್ಳದ ದಂಡ್ಯಾಗ ಹಾನ । ಕೂಗಳತಿ ಮ್ಯಾಲ ನೆನೆದಾನೋ । ಅಗ್ನಿ ಬಸವ । ಕೂಗಿದರ ದನಿಯ ಕೊಡತಾನೋ ॥

೩೩. ಮಳ್ಳಿ, ಮಾಗಣಗೇರಿ । ಎಲ್ಲ್ಯಾದ ಕುಳಗೇರಿ ತೆಗ್ಗಿನ್ಯಾಗಾದ, ಗೋಲಗೇರಿ, । ಗೊಲ್ಲಾಳನ । ಹುಬ್ಬಿನಾಗಾದ ಹರಿನಾಮೋ ॥

೩೪. ಆಲಗೂರದ ಹಾಲ, ಗೋಲಗೇರಿಯ ಬೆಲ್ಲ। ಮ್ಯಾಲ ಡಂಬಳದ ಕೆನಿಮೊಸರ । ಗೋಲಗೇರಿ । ತಂದಿ ಗೊಲ್ಲಾಳಗ ಅಭಿಷೇಕೋ ॥

೩೫. ಯುಗಾದಿ ಹೊಸದಿನ ಹೊಸ ಹೋರಿಗಳೆ ಹೂಡಿ ರೈತ ನಿನ್ನ ರಾಬ ಸುರುವಾಗಿ ಗೊಲ್ಲಾಳ ಕಾಯ ಒಡೆದು ಕೈಯ ಮುಗಿದೇನು

೩೬. ನೇಗಿಲ ಉಕ್ಕಿಯ ಕುಂಟಿ ಒಡೆದಾವೋ ಒಳಗಿನ ಹಂಟಿ ಕಾಸಿಗಿ ತೆಗೆದು ಕಡಿಗೊಗೆದೊ ಗೊಲ್ಲಾಳ ನೋಡ್ಯಾನ ಭೂಮ್ಯಾಗ,

# ೨೭. ಬಹುಪರಾಕ

ಧರೆಯೊಳಗೆ ಗೊಲ್ಲಾಳ ಬರುವಾಗ ಹಿಕ್ಕಿಯೊಳು ನೆಲೆದೋರಿ
ನಿಜವಾಗಿ ನೂರಪಾಲ ಬಿಡದೆರಸಿಕೊಂಡವರಪ್ಪನಂ ಶಿರಕಡಿದು
ದೃಢಗೊಲಿದು ಬಿಡದೆ ಧವಳಾರ ಪುರ
ತನ್ನೊಡನೆ ಕೈಲಾಸಕ್ಕೆ ಕರೆದೊಯ್ದು ಮೃಡ ಹರನೆ
ಗೋಲಗೇರಿ ಲಿಂಗಾ ಬಹುಪರಾಕ ||೧||

ಇತ್ತ ಭೂತಳದೊಳು ಕರ್ತೃ ಶಕಂರನೆನಿಸಿ ಮತ್ತೆ
ಗಂಗನಪಳ್ಳಿ ಮಲ್ಲಪ್ಪಗೊರವಾಗಿ ತುತ್ತು ಮಾಡಿ
ಅಮೃತವನ್ನು ಬಿಡದೆ ಪ್ರೀತಿಯಲುಂಡು
ಲಕ್ಷ್ಮೀಶ್ವರ ನಂದಿ ಬರುವಾಗ ಸ್ವಪ್ನದಲ್ಲಿ ಬಂದು
ದಕ್ಷಿಣದಲ್ಲಿದ್ದ ಡಂಬಳ ಗೌರಮ್ಮಗೊಲಿದು
ಕುಷದೊಳಗಿಟ್ಟು ತ್ರಿಜಗವ ರಕ್ಷಿಸುವ ಖಗರಾಜಧರನೆ
ಗೋಲಗೇರಿ ಲಿಂಗಾ ಬಹುಪರಾಕ ||೨||

ಮತ್ತು ನರರೊಳು ಮರಿಯಪ್ಪ ಭಕ್ತನಿಗೊಲಿದು
ಪೃಥ್ವಿಯೊಳು ಅರವತ್ತು ಕ್ಷೇತ್ರಕ್ಕೆ ಮಿಗಿಲೆನಿಪ
ಕರ್ತೃ ಮಾಡಿದರು ಹೊಸದಾಗಿ ರಥವು ಪ್ರಾಂತದೊಳು
ವಾರ್ತೆಯಲ್ಲಿ ಮೆರೆಯುವಂಥಾ ಕೀರ್ತಿ ಧರಂದುರನೆ
ಗೋಲಗೇರಿ ಲಿಂಗಾ ಬಹುಪರಾಕ ||೩||

ಎಲ್ಲ ದೇವರೊಳು ದೇವ ಬಲ್ಲಿದನು ನೀನೆಂದು
ಸುಲಲಿತಾ ದಯಾಸಿಂಧು ಸೊಲ್ಲಿನೊಳಗಾನೆಂದು
ಸೋಮಶೇಖರನೆಂದು ಬಲ್ಲಬಲ್ಲಂಥಾ ಜನರು
ಸೊಲ್ಲನಿಲ್ಲದೇ ಕೂಗುವರು ಎಲ್ಲಿದ್ದೀ ದನಿ ದೋರೋ
ಗೋಲಗೆರಿ ಲಿಂಗಾ ಬಹುಪರಾಕ ||೪||

ಬೇಡಿದಾ ಬಯಕೆಯನು ಗಾಢ ಕೊಡುತಿಹನೆಂದು
ನಾಡಭಕ್ತರು ಬಂದು ಹಾಡಿ ಹರಸುತ ಹೊಗಳುತಲಿಹರು
ನೋಡು ನಿಮ್ಮಯ ಕರುಣೆ

ದೃಷ್ಟಿಯಲ್ಲಿ ತಡಮಾಡಬೇಡ ಎನ್ನೊಡೆಯಾ
ಗೋಲಗೇರಿ ಲಿಂಗಾ ಬಹುಪರಾಕ ||೫||

ಸ್ವಾಮಿ ಪರಾಕ ತ್ರಿಲೋಕ ಪ್ರಿಯ ಪರಾಕ ಧೀರ ಪರಾಕ
ಗಂಭೀರ ಪರಾಕ ಶರಣ ಸಂಗ ಗೋಲಗೇರಿ ಲಿಂಗ
ಪರಾಕ, ಮಂಗಳ ಮಹಿಮನ ಪರಾಕ ತಿಂಗಳ ಸೂಡಿನ ಪರಾಕ
ಗಂಗೀರಮಣನ ಪರಾಕ ಗೌರಿ ಪ್ರಿಯನ ಪರಾಕ
ಮಾರ ಸಂಹರನ ಪರಾಕ ಮಾರನ ವೈರಿಯ ಪರಾಕ
ಕೋಳೂರು ಕೊಡಗೂಸಿನಿಂದ ಹಾಲು ಸವಿದಂಥ ನೀಲಕಂದರನೇ
ಗೋಲಗೇರಿ ಲಿಂಗಸ್ವಾಮಿ ಬಹು ಪರಾಕ ||೬||

ಎಲ್ಲಾ ದೇವರಿಗೆ ದೇವ ಪರಾಕ ಕಲ್ಲು ಮೂಳಿಗಂಡ ಪರಾಕ
ಕೊಲ್ಲಾಪೂರ ಮಾಯಿಗಂಡ ಪರಾಕ
ಮಾಯೀ ಪ್ರಚಂಡಪರಾಕ ಮಾಯೀ ಕೋಳಾಲ ಪರಾಕ
ಜಂಗುಳಿ ದೈವಗಂಡ ಪರಾಕ ಜಗದ ಮಾಯಿಗಂಡ ಪರಾಕ
ಸತ್ತು ಹುಟ್ಟಿ ಬರುವಂಥಾ ಮರ್ತ್ಯ ದೈವಂಗಳಿಗೆ
ಕರ್ತು ಬಲ್ಲವನೇ ಗೋಲಗೇರಿ ಲಿಂಗಾ ಬಹು ಪರಾಕ* ||೭||

* ಸಂಪಾದಕರು ಶ್ರೀಮತಿ ಶಾಂಭವೀ ತಾಯಿ ಗ. ಕೆರೂಡಿ ಹಂಸಭಾವಿ ಶ್ರೀ ಗೊಲ್ಲಾಳೇಶ್ವರ ಭಕ್ತಿಗೀತೆಗಳು ಪುಟ ೧ರಿಂದ ೬೧

## ೨೮. ಶ್ರೀ ಗೊಲ್ಲಾಳೇಶ್ವರನ ನೂರೆಂಟು ನಾಮಾವಳಿ

ಓಂ ಶ್ರೀಮದ್ ಮಹಾಲಿಂಗ ಗೊಲ್ಲಾಳೇಶಾಯ ನಮಃ

ಓಂ ಸದ್‌ಭಾವಲಿಂಗ ಗೊಲ್ಲಾಳೇಶಾಯ ನಮಃ

ಓಂ ಪ್ರಾಣಲಿಂಗ ಗೊಲ್ಲಾಳೇಶಾಯ ನಮಃ

ಓಂ ಪ್ರಣವ ಸ್ವರೂಪ ಗೊಲ್ಲಾಳೇಶಾಯ ನಮಃ

ಓಂ ಇಷ್ಟಲಿಂಗ ಗೊಲ್ಲಾಳೇಶಾಯ ನಮಃ

ಓಂ ಕಷ್ಟಪರಿಹಾರಕ ಗೊಲ್ಲಾಳೇಶಾಯ ನಮಃ

ಓಂ ಆಚಾರಲಿಂಗ ಗೊಲ್ಲಾಳೇಶಾಯ ನಮಃ

ಓಂ ಸಚರಾಚರ ಚೇತನ ಗೊಲ್ಲಾಳೇಶಾಯ ನಮಃ

ಓಂ ಶಿವಲಿಂಗ ಗೊಲ್ಲಾಳೇಶಾಯ ನಮಃ

ಓಂ ಶಿವಭಕ್ತಪ್ರಿಯ ಗೊಲ್ಲಾಳೇಶಾಯ ನಮಃ ೧೦

ಓಂ ಜಂಗಮಲಿಂಗ ಗೊಲ್ಲಾಳೇಶಾಯ ನಮಃ

ಓಂ ಜಗಾದಾಧಾರ ಗೊಲ್ಲಾಳೇಶಾಯ ನಮಃ

ಓಂ ಪ್ರಸಾದಲಿಂಗ ಗೊಲ್ಲಾಳೇಶಾಯ ನಮಃ

ಓಂ ಪ್ರಸನ್ನಮೂರ್ತಿ ಗೊಲ್ಲಾಳೇಶಾಯ ನಮಃ

ಓಂ ಕರದೀ ಬೆಳಗುವ ಗೊಲ್ಲಾಳೇಶಾಯ ನಮಃ

ಓಂ ವರ ಬಿಂದು ಕಳಾ ಗೊಲ್ಲಾಳೇಶಾಯ ನಮಃ

ಓಂ ಗುರುಲಿಂಗ ಗೊಲ್ಲಾಳೇಶಾಯ ನಮಃ

ಓಂ ಚರಲಿಂಗ ಗೊಲ್ಲಾಳೇಶಾಯ ನಮಃ

ಓಂ ಸದೃಶಲಿಂಗ ಗೊಲ್ಲಾಳೇಶಾಯ ನಮಃ ೨೦

ಓಂ ಸಮೃದ್ಧಲಿಂಗ ಗೊಲ್ಲಾಳೇಶಾಯ ನಮಃ

ಓಂ ನಿರಾಕಾರಲಿಂಗ ಗೊಲ್ಲಾಳೇಶಾಯ ನಮಃ

ಓಂ ನಿರವಯಲಿಂಗ ಗೊಲ್ಲಾಳೇಶಾಯ ನಮಃ

ಓಂ ಪರತತ್ವ ಲಿಂಗ ಗೊಲ್ಲಾಳೇಶಾಯ ನಮಃ

ಓಂ ಪರವಸ್ತು ಲಿಂಗ ಗೊಲ್ಲಾಳೇಶಾಯ ನಮಃ

ಓಂ ಚಿನ್ಮಯ ಲಿಂಗ ಗೊಲ್ಲಾಳೇಶಾಯ ನಮಃ

ಓಂ ಪರಿಪೂರ್ಣ ಲಿಂಗ ಗೊಲ್ಲಾಳೇಶಾಯ ನಮಃ

ಓಂ ನಿರಂಜನ ಲಿಂಗ ಗೊಲ್ಲಾಳೇಶಾಯ ನಮಃ

ಓಂ ಪರಂಜ್ಯೋತಿರ್ಲಿಂಗ ಗೊಲ್ಲಾಳೇಶಾಯ ನಮಃ

ಓಂ ಪ್ರಭುಲಿಂಗ ಗೊಲ್ಲಾಳೇಶಾಯ ನಮಃ ೩೦

ಓಂ ಶಂಕರಲಿಂಗ ಗೊಲ್ಲಾಳೇಶಾಯ ನಮಃ

ಓಂ ಬಸವಲಿಂಗ ಗೊಲ್ಲಾಳೇಶಾಯ ನಮಃ

ಓಂ ಸಹಸ್ರಲಿಂಗ ಗೊಲ್ಲಾಳೇಶಾಯ ನಮಃ

ಓಂ ಶತಕೋಟಿಲಿಂಗ ಗೊಲ್ಲಾಳೇಶಾಯ ನಮಃ

ಓಂ ಅಪಾರಲಿಂಗ ಗೊಲ್ಲಾಳೇಶಾಯ ನಮಃ

ಓಂ ಜಯಲಿಂಗ ಗೊಲ್ಲಾಳೇಶಾಯ ನಮಃ

ಓಂ ಭವ ಭಯ ಹರ ಲಿಂಗ ಗೊಲ್ಲಾಳೇಶಾಯ ನಮಃ

ಓಂ ಚಿಲ್ಲಿಂಗ ಗೊಲ್ಲಾಳೇಶಾಯ ನಮಃ

ಓಂ ಸತ್ಯಲಿಂಗ ಗೊಲ್ಲಾಳೇಶಾಯ ನಮಃ

ಓಂ ಸ್ತುತ್ಯಲಿಂಗ ಗೊಲ್ಲಾಳೇಶಾಯ ನಮಃ ೪೦

ಓಂ ಉಮಾಪತಿ ಗೊಲ್ಲಾಳೇಶಾಯ ನಮಃ

ಓಂ ಕ್ಷಮಾಪತಿ ಗೊಲ್ಲಾಳೇಶಾಯ ನಮಃ

ಓಂ ತ್ರಿನೇತ್ರ ಗೊಲ್ಲಾಳೇಶಾಯ ನಮಃ

ಓಂ ತ್ರಿಭುವನಪಾಲ ಗೊಲ್ಲಾಳೇಶಾಯ ನಮಃ

ಓಂ ಗರಳಧರ ಗೊಲ್ಲಾಳೇಶಾಯ ನಮಃ

ಓಂ ಉರಗ ಭೂಷಣ ಗೊಲ್ಲಾಳೇಶಾಯ ನಮಃ

ಓಂ ನಿಗಮಗೋಚರ ಗೊಲ್ಲಾಳೇಶಾಯ ನಮಃ

ಓಂ ನಿಗಮಾತೀತ ಗೊಲ್ಲಾಳೇಶಾಯ ನಮಃ

ಓಂ ಪರಶಿವ ಗೊಲ್ಲಾಳೇಶಾಯ ನಮಃ

ಓಂ ವರಪ್ರದ ಗೊಲ್ಲಾಳೇಶಾಯ ನಮಃ ೫೦

ಓಂ ಭೃಂಗೀಶ ಗೊಲ್ಲಾಳೇಶಾಯ ನಮಃ

ಓಂ ಮಂಗಳಮೂರ್ತಿ ಗೊಲ್ಲಾಳೇಶಾಯ ನಮಃ

ಓಂ ನಾಟ್ಯ ಮುದ್ರೆಯ ಗೊಲ್ಲಾಳೇಶಾಯ ನಮಃ

ಓಂ ನೋಟವತಿ ಸುಂದರ ಗೊಲ್ಲಾಳೇಶಾಯ ನಮಃ

ಓಂ ಶುದ್ಧಮುದ್ರೆಯ ಗೊಲ್ಲಾಳೇಶಾಯ ನಮಃ

ಓಂ ಶಬ್ದನಾದದ ಗೊಲ್ಲಾಳೇಶಾಯ ನಮಃ

ಓಂ ಸಿದ್ಧಬುದ್ಧಿಯ ಗೊಲ್ಲಾಳೇಶಾಯ ನಮಃ

ಓಂ ಬದ್ಧ ಸಂಗೀತಪ್ರಿಯ ಗೊಲ್ಲಾಳೇಶಾಯ ನಮಃ

ಓಂ ಸೋಮಶೇಖರ ಗೊಲ್ಲಾಳೇಶಾಯ ನಮಃ

ಓಂ ವ್ಯೋಮಕೇಶ್ವರ ಗೊಲ್ಲಾಳೇಶಾಯ ನಮಃ ೬೦

ಓಂ ಕಾಮದಹನ ಗೊಲ್ಲಾಳೇಶಾಯ ನಮಃ

ಓಂ ವಾಮದೇವ ಗೊಲ್ಲಾಳೇಶಾಯ ನಮಃ

ಓಂ ರೇಣುಕ ಗೊಲ್ಲಾಳೇಶಾಯ ನಮಃ

ಓಂ ದಾರುಕ ಗೊಲ್ಲಾಳೇಶಾಯ ನಮಃ

ಓಂ ಸೌರಾಷ್ಟ್ರ ಸೋಮನಾಥ ಗೊಲ್ಲಾಳೇಶಾಯ ನಮಃ

ಓಂ ಪಂಪಾಧೀಶ ಗೊಲ್ಲಾಳೇಶಾಯ ನಮಃ

ಓಂ ಕೃಪಾನಿಧಿ ಗೊಲ್ಲಾಳೇಶಾಯ ನಮಃ

ಓಂ ಸೂಕ್ಷ್ಮಾಂಗ ಗೊಲ್ಲಾಳೇಶಾಯ ನಮಃ ೭೦

ಓಂ ಭಸ್ಮಾಂಗ ಗೊಲ್ಲಾಳೇಶಾಯ ನಮಃ

ಓಂ ತಾಮಸ ನಾಶ ಗೊಲ್ಲಾಳೇಶಾಯ ನಮಃ

ಓಂ ಕಾಮಿತ ಫಲದಾಯಕ ಗೊಲ್ಲಾಳೇಶಾಯ ನಮಃ

ಓಂ ಕಡುಪ್ರಿಯ ಗೊಲ್ಲಾಳೇಶಾಯ ನಮಃ

ಓಂ ಕರುಣಾಮೂರ್ತಿ ಗೊಲ್ಲಾಳೇಶಾಯ ನಮಃ

ಓಂ ಕಿಂಕರಪ್ರಿಯ ಗೊಲ್ಲಾಳೇಶಾಯ ನಮಃ

ಓಂ ಶರಣರಿಗೊಲಿದ ಗೊಲ್ಲಾಳೇಶಾಯ ನಮಃ

ಓಂ ಮೃತ್ಯುಂಜಯ ಗೊಲ್ಲಾಳೇಶಾಯ ನಮಃ

ಓಂ ನಿತ್ಯತೃಪ್ತ ಗೊಲ್ಲಾಳೇಶಾಯ ನಮಃ

ಓಂ ಮಹಾಂತೇಶ ಗೊಲ್ಲಾಳೇಶಾಯ ನಮಃ ೮೦

ಓಂ ಮಹಿಮಾಮೂರ್ತಿ ಗೊಲ್ಲಾಳೇಶಾಯ ನಮಃ

ಓಂ ಶಿವಯೋಗಿಷ್ಟದ ಗೊಲ್ಲಾಳೇಶಾಯ ನಮಃ

ಓಂ ಶಿವಬಸವಪ್ರಿಯ ಗೊಲ್ಲಾಳೇಶಾಯ ನಮಃ

ಓಂ ಮುಗ್ಧ ಗಣೇಶ ಗೊಲ್ಲಾಳೇಶಾಯ ನಮಃ

ಓಂ ಕುರುಬ ಗೊಲ್ಲಾಳಗೊಲಿದ ಗೊಲ್ಲಾಳೇಶಾಯ ನಮಃ

ಓಂ ಕುರಿಯ ಹಿಕ್ಕೆಯೊಳುದ್ಭವ ಗೊಲ್ಲಾಳೇಶಾಯ ನಮಃ

ಓಂ ಗೌರಾಯಿಯ ಭಕ್ತಿಗೊಲಿದ ಗೊಲ್ಲಾಳೇಶಾಯ ನಮಃ

ಓಂ ಸರ್ವೋದ್ಧಾರಕ ಗೊಲ್ಲಾಳೇಶಾಯ ನಮಃ

ಓಂ ಸಂತಾನವೀವ ಗೊಲ್ಲಾಳೇಶಾಯ ನಮಃ

ಓಂ ಸಂತೋಷದಾಯಕ ಗೊಲ್ಲಾಳೇಶಾಯ ನಮಃ

ಓಂ ಲಕ್ಷ್ಮೇಶ್ವರ ಪುರವಾಸ ಗೊಲ್ಲಾಳೇಶಾಯ ನಮಃ ೯೦

ಓಂ ಕರಿಮಲ್ಲಿಗೆಯ ಕುರುಹ ತೋರಿದ ಗೊಲ್ಲಾಳೇಶಾಯ ನಮಃ

ಓಂ ಗಂಗೊಳ್ಳಿ ಮಲ್ಲಪ್ಪನ ಎಡೆ ಸ್ವೀಕರಿಸಿದ ಗೊಲ್ಲಾಳೇಶಾಯ ನಮಃ

ಓಂ ಕೃಷ್ಣೆಯೊಳು ದಾರಿ ತೋರಿದ ಗೊಲ್ಲಾಳೇಶಾಯ ನಮಃ

ಓಂ ಸುರಪುರದ ಮರಿಯಪ್ಪಗೊಲಿದ ಗೊಲ್ಲಾಳೇಶಾಯ ನಮಃ

ಓಂ ಮರಿಯಪ್ಪನ ಸರ್ವ ಸೇವೆ ಸ್ವೀಕರಿಸಿದ ಗೊಲ್ಲಾಳೇಶಾಯ ನಮಃ

ಓಂ ಮರಿಯಪ್ಪಗೆ ಬೇತಾಳ ಬೇನೆ ಕೊಟ್ಟ ಗೊಲ್ಲಾಳೇಶಾಯ ನಮಃ

ಓಂ ಕುರಿಯ ಹಿಕ್ಕಿಯೊಲು ಬೇನೆ ಕಳೆದ ಗೊಲ್ಲಾಳೇಶಾಯ ನಮಃ

ಓಂ ಮರಿಯಪ್ಪನ ಮನೆತನವನ್ನೆ ಗೋಲ್ಗಿರಿಗೆ ತರಿಸಿದ ಗೊಲ್ಲಾಳೇಶಾಯ ನಮಃ

ಓಂ ಚಿರಕಾಲವೂ ಅವರ ಸೇವೆ ಬಯಸುವ ಗೊಲ್ಲಾಳೇಶಾಯ ನಮಃ

ಓಂ ಛತ್ರ ಚಾಮರ ಶೋಭಿತ ಗೊಲ್ಲಾಳೇಶಾಯ ನಮಃ ೧೦೦

ಓಂ ರಥೋತ್ಸವ ಮೂರ್ತಿ ಗೊಲ್ಲಾಳೇಶಾಯ ನಮಃ

ಓಂ ಉತ್ಸಾಹದಾಯಕ ಗೊಲ್ಲಾಳೇಶಾಯ ನಮಃ

ಓಂ ವಿಶ್ವವ್ಯಾಪಕ ಗೊಲ್ಲಾಳೇಶಾಯ ನಮಃ

ಓಂ ವಿಶ್ವಾರಾಧ್ಯರೊಲವಿನ ಗೊಲ್ಲಾಳೇಶಾಯ ನಮಃ

ಓಂ ಮೋಕ್ಷ ಕಾರಣ ಗೊಲ್ಲಾಳೇಶಾಯ ನಮಃ

ಓಂ ಮೋಕ್ಷದಾಯಕ ಗೊಲ್ಲಾಳೇಶಾಯ ನಮಃ

ಓಂ ಶ್ರೀಶೈಲ ಮಲ್ಲಿಕಾರ್ಜುನ ಗೊಲ್ಲಾಳೇಶಾಯ ನಮಃ

ಓಂ ಶ್ರೀ ಗೋಲ್ಗಿರಿ ವಾಸ ಗೊಲ್ಲಾಳೇಶಾಯ ನಮಃ

ಯಂಕಂಚಿ ಯರಗಲ್ಲ ಮಾಡಬಾಳ
ಅಂತರಂಗಿ ಧವಳಾರ । ಮುಂದಿರುವ
ಗೊಂಚಲ ಮುತ್ತ ಗೋಲಗೇರಿ ॥

ಆಡಿsನ ಹಿಕ್ಕಿಯತಂದು ತೀಡಿ ಲಿಂಗವ ಮಾಡಿ
ನೋಡಿರೋ ಶಿವನ ಮಹಿಮವ । ಶಿವತಾನು
ಆಡಿನ ಹಿಕ್ಕ್ಯಾಗ ನೆಲಿಸ್ಯಾನ ॥

## ಗೊಲ್ಲಾಳನ ಸ್ಮರಣೆ

ಗೊಲ್ಲಾಳನ ಭಜಿಸು ಹೇ ಮನವೆ
ಉಲ್ಲಾಸದಿಂದಲಿ ಎಲ್ಲ ಚಿಂತೆಯ ತೂರಿ ||ಪ||

ಮೋಸವ ಅಳಿದು ಆಸೆಯ ಕಳೆದು
ಧ್ಯಾಸವು ಸೂಸುತಲಿ ಹಾಸು ಹೊಕ್ಕಾದ ಮನದಿ
ಸೂಸುವ ಮನದಿ ಯಶವ ನೀಡಲು ನೀನು ||೧||

ಗಟ್ಟಿ ಮನದಿಂದ ನಿಷ್ಠಾ ಭಾವದಿ
ಸ್ಪಷ್ಟ ಎಲ್ಲವು ಚಲ್ಲಿ ಅಟ್ಟಹಾಸದಿಂದ ||೨||

ಧೇಯ ಆತನೆಡೆಗಿಟ್ಟು ಜೀಯಾ ಕರುಣೆ ನೀಡೆಂದು
ಕಾಯಾ ವಾಚಾ ವಾಚಾ ಮನದಿ ನೀನು ||೩||

ಧೀರತನದಿಂದ ಹರಗೊಂಡು ನೀನು
ಯಾರೂ ಇಲ್ಲ ನಿನ್ನ ಹೊರತೆಂದು
ಕುರುಬ ಗೊಲ್ಲಾಳನ ಸೆರಗೊಡ್ಡಿ ಬೇಡುನೀ ||೪||

ಝೂಟರಿಗೆ ಕಾಣದಂಥ ನಾಟಕಕೆ ನೋಡದಂತ
ಭೂಟಕರಿಗೆಲ್ಲ ಕಣ್ಣು ತೆರೆಯದಂತಹ
ಸಾಟಿಯಿಲ್ಲದ ನೀಟಾದ ಸ್ವಾಮಿಯ ||೫||

## ಆರತಿ

ಆರತಿ ಬೆಳಗುವೆ ಗೊಲ್ಲಾಳನಿಗೆ
ಈರತಿ ತೊರೆದು ಆರತಿ ನೀಡುವ ||೧||

ವ್ಯಸನವ ಚಲ್ಲಿ ಹಸನು ಮನದಲ್ಲಿ
ಎಸೆಯುವ ಸ್ವಾಮಿಯ ಚರಣಸನ್ನಿಧಿಯಲ್ಲಿ ||೨||

ಕುರಿಯ ಹಿಕ್ಕೆಯಲ್ಲಿ ಬೆಳೆದನಿಲ್ಲಿ
ಧರೆಯೊಳು ವರವಿನ ಬೆಡಗಿನ ಮೂರುತಿಗೆ ||೩||

ಉತ್ತರ ಕನ್ನಾಡಲಿ ಮಹತ್ತರ ದೇವನೆನಿಸಿ
ಎತ್ತ ನೋಡಿದತ್ತ ಅತ್ಯುತ್ತಮ ಕಾರ್ಯಗೈವ ||೪||

ಅಚ್ಚರಿಪಡಿಸುವ ನಿಚ್ಚಳ ಮೂರುತಿಗೆ
ಹೆಚ್ಚು ಭ್ರಾಂತಿ ಚಲ್ಲಿ ನಿಚ್ಚಳ ಮನದಿ ||೫||

# ಧರೆಯೊಳು ಅರುಹು ಕುರುಹಿನ
# ಕುರುಬ ಗೊಲ್ಲಾಳೇಶ್ವರ
# ಗೋಲಗೇರಿ

ಅರುಹಿನ ಕುರುಬ ಗೊಲ್ಲಾಳ ಸರಳ ಕಾಯ್ವ ಭಕ್ತಿಗೆ ಬಹಳ ಆಳ
ಮರೆಯದ ಕಾರ್ಯಗೈದ ಜಗದ ಜನರೋದ್ಧಾರಕ್ಕಾಗಿ
ಹರುಷದಿ ಕಾರ್ಯಗೈದ ಕೇಳಿದ ನೋಡಿದ ದಿಗ್ಭ್ರಾಂತಿಯಾಗುವಂತೆ ||೧||

ಕುರಿಯ ಹಿಕ್ಕೆಯಲಿ ದೇವನಕಂಡ ವರವಿನ ಭಕ್ತ ೧೨ನೇ ಶತಕದಿ ಈ ಭಂಡ
ಧೀರತನದಿ ಚೈತ್ರ ಶುದ್ಧ ದವನದ ಹುಣ್ಣಿವೆಗೆ ರಥೋತ್ಸವ
ಧರೆಯೊಳು ಸಿಂದಗಿ ತಾಲೂಕಿನ ಗೋಲಗೇರಿಯಲ್ಲಿ ||೨||

ಗೋಲಗೇರಿಯಲಿ ಪ್ರೀತಿಯಲಿ ಲೀಲೆಯಲಿ ಸಮಸ್ತ ಉತ್ತರ ಕನ್ನಡಲಿ
ಕಾಲನೋಡದೆ ಹರಗೊಂಡು ಬರುವರು ಧಾವಿಸಿ ಗೋಲಗೇರಿಗೆ
ಲೋಲರಾಗಿ ತಮ್ಮ ತಮ್ಮ ಕಾರ್ಯ ಜೈಭೇರಿ ಹೊಡಿಸುವರು ||೩||

ಹರುಷದಿ ಮುಗ್ಧ ಜೀವಿ ಕುರಿ ಕಾಯುವುದೆ ಒಳ್ಳೆ ಭಾವ
ಕುರಿ ಕಾಯುವ ಕುರುಬರು ಭೋಳಾ ಇರುವುದೆ ಬಹಳ
ಸರಸದಿ ಹೇಳುವದಾದರೆ ಅಧಿಕ ಭೋಳಾ ಈ ಗೊಲ್ಲಾಳ ||೪||

ಮುದ್ದಾದ ಮೂಲ ಹೆಸರು ಕಾಟಕೋಟ ಇದ್ದಂತೆ ಹೇಳಿದರೆ ತಾಕಲಾಟ
ಇದ್ದಿರುವ ಹೆಸರೇ ತಪ್ಪದೆ ಹೇಳುವೆ ಗೊಲ್ಲಾಳೇಶ
ಅದ್ಧೂರಿ ಹೆಸರೇ ಜಗತುಂಬ ಹರಡಿವೆ ಶ್ರೀ ಗೊಲ್ಲಾಳೇಶ ||೫||

ಗೊಲ್ಲಾಳನಿಗೆ ಲಿಂಗಪೂಜೆ ಮನದಿಚ್ಛೆ ಎಲ್ಲಿಸಿಗುವದು ವರವೆಂದು ಉತ್ಕಟೇಚೆ
ಉಲ್ಲಾಸದಿ ಶ್ರೀಶೈಲ ಪಾತಾಳ ಗಂಗೆಯಲಿ ಸಿಗುವುದು ದೇವರಿಚ್ಛೆ
ಮೆಲ್ಲಗೆ ಮನದಿ ಲಿಂಗಪೂಜೆ ಬಯಕೆ ಎಷ್ಟು ಮಾತ್ರಕ್ಕೂ ಆರಲಿಲ್ಲ ||೬||

ಸುಂದರ ಗೊಲ್ಲಾಳ ಕಂಡೊಂದು ದಿನ ಜಂಗಮರ ತಂಡ
ಬಂಧುರ ಶ್ರೀಶೈಲದ ಹೆಸರು ಕೇಳಿದ ಒಮ್ಮೆಲೆ ಈ ಪ್ರಚಂಡ
ಅಂದದಿ ಪಾತಾಳ ಗಂಗೆಯಿಂದ ಲಿಂಗ ತರಲು ಕೇಳಿದ ಉದ್ಧಂಡ ||೭||

ಧಾವಿಸಿ ಜಂಗಮರು ಆವೇಶದಿ ಲಿಂಗಕ್ಕೆ ಸಾವಿರಹೊನ್ನೆಂದು ಸುಳ್ಳು ಹೇಳಿದರು
ಭಾವದಿ ಲಿಂಗ ಮನದಿ ನಟ್ಟಿದ್ದರಿಂದ ಬೆಲೆ ಹೆಚ್ಚೇನು ಅನಿಸಲಿಲ್ಲ
ಜೀವ ತಾಳದೆ ಐದುನೂರು ಹೊನ್ನು ತಂದು ಕೊಟ್ಟೇಬಿಟ್ಟನು ||೮||

ಜಂಗಮರಿಗೆ ಪುಕ್ಕಟೆ ಕಲ್ಲು ಅಂಗಾಂಗದೊಳು ತುಂಬಿತು ಸಂತಸ ಸೊಲ್ಲು
ಶೃಂಗಾರದಿ ಯಾತ್ರೆ ಮುಗಿಸಿ ಗುಂಗಿನಲ್ಲಿ ಲಿಂಗ ನೆನಪಿಲ್ಲ
ದಂಗಾದರು ಕುರಿ ಕಂಡಾಗ ಜಂಗಮರಿಗೆ ಸಂಚಕಾರವಾಯಿತಲ್ಲ ||೯||

ಲಿಂಗ ತೋರದಿದ್ದರೆ ಝುಲ್ಲು ಹ್ಯಾಂಗ ೫೦೦ ಹೊನ್ನು ಕೊಡುವ ಗುಲ್ಲು
ದಂಗಾಗಿ ಕುರಿ ಹಿಕ್ಕಿಯಿಂದ ತಯಾರಾಯ್ತು ಡೌಲು
ಹಂಗು ತೊರೆದು ಗೊಲ್ಲಾಳನಿಗೆ ನೀಡಿದರು ಅಮೂಲ್ಯ ಲಿಂಗ ||೧೦||

ಮೋಸ ಮಾಡಿದರು ಕೂಡಲೆ ಹೇಸಿ ಜಂಗಮರು ಆಗಲೆ
ಧ್ಯಾಸದಿ ಲಿಂಗ ತಕ್ಕೊಂಡ ಉಳಿದರ್ಧ ಬೆಲೆ ಕೊಟ್ಟೇಬಿಟ್ಟ
ಸೂಸುವಂತೆ ಜಂಗಮರು ಹೇಳಿದರು ಈ ಲಿಂಗ ಅಮೌಲ್ಯವೆಂದರು ||೧೧||

ಉಗ್ರಲಿಂಗವೆಂದ ಧೇನಿಸು ಜಾಗ್ರತೆಯಿಂದ ನೀನು ಪಾಲಿಸು
ಅಗ್ರಭಾವದಿ ಇಪ್ಪತ್ತೊಂದು ದಿನ ತಪ್ಪದೇ ಲಿಂಗವನ್ನು
ಜಾಗ್ರತೆಯಿಂದ ನೆಲದಿ ಹೂಳಿಟ್ಟು ದಿನಾಲು ೧೦೦ ಕೊಡ ಹಾಲಿನ ಅಭಿಷೇಕ ||೧೨||

ತಪ್ಪದೆ ಗೊಲ್ಲಾಳ ನೀನು ಇಪ್ಪತ್ತೆರಡನೆಯ ದಿನ
ಒಪ್ಪಿಸಿ ಮಹಾಗಣಾರಾಧನೆ ರುದ್ರಾಭಿಷೇಕ ಪ್ರಾಣಪ್ರತಿಷ್ಠಾಪನೆ
ಒಪ್ಪುವಂತೆ ಹೇಳಿ ಜಂಗಮರು ೫೦೦ ಹೊನ್ನು ಜಾಳಿಗೆಯೊಡನೆ ಪಾರಾದರು ||೧೩||

ಉಲ್ಲಾಸದಿ ಬೆಳಗಿನಲಿ ಸ್ನಾನಮಾಡಿ ಗೊಲ್ಲಾಳ ಗಿಡದ ಕೆಳಗೆ ಹೂಳಿಟ್ಟು
೧೦೦ ಕೊಡ ಹಾಲು ಹಾಕಹತ್ತಿದನು
ಗುಲ್ಲಾಗಿ ಆರ್ಭಟಿಸುತ್ತ ತಂದೆ ಕೆಂಡಮಂಡಲ ಗುದ್ದಲಿಯೊಡನೆ ಬಂದೇಬಿಟ್ಟನು
ಅಲ್ಲೋಲಕಲ್ಲೋಲಮನದಿ ಜಾಗಕೆ ಒದ್ದು ಗುದ್ದಲಿಯಿಂದ ಅಗುಳಹತ್ತಿದ ||೧೪||

ಗೊಲ್ಲಾಳ ಭಕ್ತಿ ವಿಶ್ವಾಸಕ್ಕೆ ಅಲ್ಲಿಯೇ ಲಿಂಗ ಒಡಮೂಡಿತ್ತು ಆಗಲೆ
ಕಲ್ಲು ಮನದಿ ಗೊಲ್ಲಾಳ ಒದ್ದು ತಂದೆಯ ತಲೆ ತುಂಡರಿಸಿದನು
ಅಲ್ಲಿಯೇ ಗೊಲ್ಲಾಳನ ಭಕ್ತಿಗೆ ಶಿವ ಪ್ರತ್ಯಕ್ಷನಾಗಿ ಅಪ್ಪಿಕೊಂಡನು ||೧೫||

ಶಕಳರೂಪದಿ ಕೈಗೆತ್ತಿಕೊಂಡು ಚುಳುಕಾಗಿ ಮನದಿ ತುಂಬಿಕೊಂಡು
ಕಳವಳಿಸಿ ಆರಾಧಿಸಿದರೂ ಕಲ್ಲಿನಿಂದಾಗ ಅದು ಕೂಡ ದೇವರಲ್ಲ
ಉಳಿಯ ಮೊನೆಯ ಹೊಡೆತ ಅದು ಕೂಡ ತಾಳಲಾರದು ||೧೬||

ಭಾವಪೂರ್ಣವಾಗಿದ್ದರೆ ದೇವರು ನಿರ್ಗುಣ ನಿರಾಕಾರ
ನಿರ್ವಿಕಾರ ನಿರಂಜನ ಎಂಬುದನ್ನು ಭಾವಾವೇಶದಿ
ವೀರಶೈವರು ಪರಬ್ರಹ್ಮಸ್ವರೂಪವನ್ನು ಲಿಂಗರೂಪದೊಳಗೆ ||೧೭||

ವಜ್ರದ ಲಿಂಗವೂ ದೇವರೆನಿಸದೆ ವಜ್ರವು ಇನ್ನಷ್ಟು ಭಾರವು
ಭರ್ಜರಿ ವಿಚಾರಿಸಿ ಕುರಿಕಾವ ವೀರಗೊಲ್ಲಾಳೇಶನು
ವಜ್ರವಜ್ಜಿ ಬೆಲೆ ಬಹಳ ಎಲ್ಲ ಕಿತ್ತೊಗೆದನು ||೧೮||

ಉಲ್ಲಾಸದಿಂದ ಕಲ್ಯಾಣ ಶರಣರ ಸಿರಿ ಕೊಂಬಂತೆ
ಕಲ್ಲು ಮರಮಣ್ಣಿನಿಂದ ದೇವರಾಗದೆ ಬೊಂಗಳೆನಿಸಿ
ಎಲ್ಲವನ್ನೂ ಅಳೆದುತೂಗಿ ನೋಡಿಕೊಂಡು ||೧೯||

ಎಲ್ಲಿಹಾನ ಪರಮಾತ್ಮ ಎಲ್ಲಿ ಹಾನೋತಿಳಿ
ಬಲ್ಲಂತ ಮಹಾತ್ಮರ ಬಲ್ಲೆ ಹಾನೊ ಎಂದು ಅಳೆದು
ಇಲ್ಲವೆಂದು ತೀರ್ಮಾನಿಸಿಕೊಂಡೇ ಬಿಟ್ಟನು ||೨೦||

ಮತ್ತೆ ವಿಚಾರಿಸಿ ಚಿತ್ತದಲ್ಲಿಯೂ ಪರಮಾತ್ಮಾ ಇಲ್ಲ
ಚಿತ್ತವು ಪಂಚೇಂದ್ರಿಯ ಅರಿಷಡ್ವರ್ಗ ಸಪ್ತವ್ಯಸನಗಳ ಮೊತ್ತಾಗಿದೆ
ಚಿತ್ತವು ಇವೆಲ್ಲವುಗಳಿಂದ ಮುಕ್ತ ಮಾಡಬೇಕೇನು ||೨೧||

ಇಷ್ಟೆಲ್ಲವುಗಳೂ ಸ್ಪಷ್ಟ ಸ್ವ ಇಚ್ಛೆಯಾದ ಬಳಿಕ
ಗಟ್ಟಿಯಾಗಿ ನಂಬದೆ ನೆಚ್ಚದೆ ಕೊಂಬಮೆಟ್ಟಿ ಕೂಗಿದರೂ
ತನ್ನಪಾಡಿಗೆ ಇರುವನು
ಅಟ್ಟಹಾಸದಿ ತನ್ನ ತಾನರಿದ ತಾನೇದೇವರೆಂಬುದು ಅಚ್ಚನೇರು ||೨೨||

ವ್ರತನಿಯಮಕ್ಕೆ ಪರಮಾತ್ಮ ಒಲೆವ ವ್ರತನಿಯಮ ನಿಷ್ಠೆಯ ಪ್ರದರ್ಶನ
ವ್ರತನಿಯಮ ಅನ್ಯರಿಗೆ ಅನಾನುಕೂಲತೆಗಳು
ವ್ರತದಿಂದ ಭಕ್ತರ ಮನನೊಂದು ವ್ಯರ್ಥವಾಗುತ್ತದೆ ||೨೩||

ಕಿಚ್ಚಿನೊಳಗೆ ಉಚ್ಚೆಯ ಹೊಯ್ದು ಬೆಳ್ವಂತೆ ಇದನ್ನೆ ಗೊಲ್ಲಾಳ
ಎಚ್ಚರಿಸಿ ವ್ರತ ಬಿಸಿತುಪ್ಪ ಬಾಯಲ್ಲಿ ಹಾಕಿಕೊಂಡಂತೆ
ನಿಚ್ಚಳವಾಗಿ ವ್ರತಪಾಪ ಕೊನೆತನ ಪಾಲಿಸದಿರುವುದು ಮಹಾಪಾಪ ||೧೪||

ಸಾಹಸ ಪಡದೆ ಸಹಜಭಕ್ತಿ ನಿಜವಾದ ಪ್ರೇಮ
ಓಹೊ ಬಂದುದು ಕೈಕೊಳ್ಳುವದೇ ನೇಮವು
ವಾಹವ್ವಾ ಎನ್ನುವಂತೆ ಇದು ವಂಚನೆ ಮಾಡದಪ್ಪುದೇನೇವು ||೧೫||

ಇನ್ನೊಂದೇನೆಂದರೆ ತನ್ನ ತಾನರಿತುಕೊಂಡರೆ
ತಾನೇದೇವರೆಂಬು ನಿಚ್ಚಳನೀಮ ಮತ್ತೇನು ಹೇಳಲಿ
ಅನ್ನದೆ ಮುಖ್ಯ ವಿಷಯ ತಿಳಿಸಿ ಹೇಳಿದೆನು ||೧೬||

ವಚನದ ಕೊನೆಯಲ್ಲಿ ಖಚಿತ ಬೀರಗೊಲ್ಲಾಳನ ಅಭಿಪ್ರಾಯ
ಅಚಲವಾದ ವಿಶ್ವಾಸವೇ ಮುಖ್ಯವೆಂದ್ಹೇಳಿದನು
ಗಟ್ಟಿಯಾಗಿ ಸರ್ವ ವ್ಯಾಪಕತ್ವ ಸರ್ವ ಶ್ರುತತ್ವ
ಸರ್ವ ಮರ್ಥ್ಯತ್ವ ಇದುವೆ ನಿಜಲಿಂಗ ||೧೭||

ನಿಲ್ಲದೆ ಕೇಳಿರಿ ಎಲ್ಲದಕ್ಕೂ ಅಚಲವಾದವೇ ಮುಖ್ಯ
ಅಲ್ಲದೇ ವಿಶ್ವಾಸ ಕಡು ನಿಷ್ಠೆಯಾದಾಗ ಮಹೇಶ ಸ್ಥಲವಾಗುವದು
ಎಲ್ಲಚಲ್ಲಿ ಕೇಳಿರಿ ಆ ವಿಶ್ವಾಸ ಸಾವಧಾನವಾದಾಗ ಪ್ರಾಸಾದಿಸ್ಥಲ ವಾಗುವದು ||೧೮||

ಮತ್ತೂ ಕೇಳಿರಿ ಸತ್ಯವಾಗಿ ಆ ವಿಶ್ವಾಸವು
ಉತ್ತಮ ಅನುಭಾವವಾದಾಗ ಪ್ರಾಣಲಿಂಗ ಸ್ಥಲವಾಗುವದು
ಇಂತಹ ವಿಶ್ವಾಸ ಅಖಂಡವಾದಾಗ ಅದುವೆ ಸರ್ವಾಂಗ ಲಿಂಗವಾಗುತ್ತದೆ ||೧೯||

ವಿಶ್ವಾಸವುಳ್ಳಲ್ಲಿ ದೇವನುಂಟು ವಿಶ್ವಾಸವಿಲ್ಲದಲಿ ಏನೂ ಇಲ್ಲ
ಶಾಸ್ವತವಾಗಿ ಅಂತೆಯೇ ದೇವರು ಬೀರಗೊಲ್ಲಾಳೇಶನಿಗೆ
ನಿಶ್ಚಿತವಾಗಿ ಕುರಿಯೊಳಗೇ ಪ್ರತ್ಯಕ್ಷನಾದನು ||೨೦||

ಸರಳವಾಗಿ ಉರಿಲಿಂಗ ಪೆದ್ದಣ್ಣನಿಗೆ ಗುಂಡು ಗಲ್ಲಿನಲ್ಲಿ ಪ್ರತ್ಯಕ್ಷನಾದ
ಹರುಷದಿ ವ್ಯಾಪಾರಿ ಮಲ್ಲಸೆಟ್ಟಿಗೆ ಬಳ್ಳದಲ್ಲಿ ಪ್ರತ್ಯಕ್ಷನಾದ
ಸ್ಥಿರವಾಗಿ ನಂಬಿದಲ್ಲಿ ಪರಮಾತ್ಮನ ಅಸ್ತಿತ್ವವುಂಟು ನಂಬದಲ್ಲಿ ಇಲ್ಲೆ ಇಲ್ಲ ||೨೧||

ವಚನ ಈ ಮೂಲಕ ಖಚಿತವಾಗಿ ಅರುಹಿನ ಕುರುಬ ಗೊಲ್ಲಾಳ
ಸಚ್ಚಾರಿತ್ರೆಯಿದಿಂದ ತಾನೇ ಸರ್ವಾಂಗ ಲಿಂಗವಾಗಬೇಕು
ಉಚ್ಚಭಾವದಿ ಹೊನ್ನ ಬಿಟ್ಟು ಒಡವೆಯಿಲ್ಲ ಮಣ್ಣು ಬಿಟ್ಟು ಮಡಕೆ ಇಲ್ಲ
ತನುಬಿಟ್ಟು ದೇವರಿಲ್ಲವೆಂದನು ||೩೨||

ಧಡಪಡ ಶರಣರು ಕಡಕೋಳ ಮಡಿವಾಳಪ್ಪನವರು
ಕಡೆಯಮಾತ ನೀ ತಿಳಿದರೆ ಒಳ್ಳೆಯದು
ಧಡಲ್ಬಾಜಿ ಹಾರಿಸಿದಂತೆ ಹೌದಪ್ಪ ನೀನೇ ದೇವರು
ನಿನ್ನ ನೀ ತಿಳಿದರೆ ಇಲ್ಲೋ ದೂರು ||೩೩||

ಶ್ರೇಷ್ಠ ಗೊಲ್ಲಾಳೇಶನ ಬಗ್ಗೆ ಸ್ಪಷ್ಟ ನನಗೆ ತಿಳಿಯದಿದ್ದರೂ ಹೊಳೆದಷ್ಟು
ನಿಷ್ಠೆಯಿಂದ ಸ್ವಾಮಿಯ ಮಾಡಿದ್ದೇನೆ
ಅಟ್ಟಹಾಸದಿ ತಾವೆಲ್ಲ ಸ್ವಾಮಿಯ ನಿಷ್ಠಾವಂತ ಭಕ್ತರಾಗಿರಿ* ||೩೪||

* ಶ್ರೀ ಹ. ರಂ. ಕುಲಕರ್ಣಿ ಗೊಲ್ಲಾಳೇಶ್ವರ ಪ್ರಕಾಶನ ವಿಜಾಪುರ ೨೦೦೧. ಪುಟ ೫ ರಿಂದ ೧೦

# ಗೋಲಗೇರಿಯ ಶ್ರೀ ಗೊಲ್ಲಾಳೇಶ್ವರ

ಸಣ್ಣವರು ದೊಡ್ಡವರು ಕೂಡಿರಿ ಹಿರಿಯರ
ದೇವರ ಮಾತ ಆದಾವ ಸತ್ಯ ನೋಡರಿ
ದೇವರ ಕಥೆ ಕೇಳಿರಿ ಶಾಂತಚಿತ್ತದಿಂದ
ಸಭಾದಾಗ ದೈವ ಕೂಡಿರಿ ಒಳ್ಳೆಯ ಮನಸ್ಸಿನಿಂದ
ಗೋಲಗೇರಿಯ ಭೂಮ್ಯಾಗ ಸತ್ಯುಳ್ಳ ಶರಣ
ದಿನ ಕುರಿಯ ಕಾಯುತ್ತಿದ್ದ ಯಾವತ್ತು
ಕುರಿ ಕಾಯುವದು ಕೇಳಿರಿ ಆ ಹೊತ್ತು
ಸಾವಿರಾರು ಜಂಗಮರು ಕಂಬಿ ಹೊತ್ತು
ಶ್ರೀಶೈಲಕ ಹೊಂಟಾರ ಎಲ್ಲರ ಜತ್ತ
ಜೊತೆಗೆ ಉಘೇ ಉಘೇ ಎನ್ನುವ ಮಾತ
ಗೊಲ್ಲಾಳ ಕೇಳ್ಯಾನ ದೂರಿಂದ ನಿಂತ
ಓಡಿಬಂದು ಅಡ್ಡಗಟ್ಟಿ ಕೇಳತಾನ
ಎಲ್ಲಿಗೆ ಹೋಗತೀರಂತ ಶರಣರನ
ಎಲ್ಲರೂ ಕೂಡಿ ಆಗ ಹೇಳ್ಯಾರ ಮಾತ
ನಾವು ಶ್ರೀಶೈಲಕ ಹೋಗತೀವಿ ಅಂತ
ಮಲ್ಲಿಕಾರ್ಜುನನ ದರ್ಶನ ಮಾಡಿ ಬರತೀವಿಂತ
ಗೊಲ್ಲಾಳ ದುಡ್ಡು ಕೊಟ್ಟಾನ ಒಯ್ಯಿರಂತ
ಬರುವಾಗ ಒಂದು ಲಿಂಗ ತನ್ನಿರಂತ
ಜಂಗಮರು ಹೇಳತಾರ ಇಲ್ಲೇ ಇರಬೇಕಂತ
ದುಡ್ಡು ತಗೊಂಡು ಅವರು ಹೊಂಟಾರ ನಕ್ಕೋತ
ತಿಂಗಳ ಮ್ಯಾಲ ಮತ್ತ ಮರಳಿ ಬರತೀವಿಯಂತ
ಕುರಿಯ ಕಾಯುವುದು ಬಿಟ್ಟೇದಿ ಮತ್ತ ಮರತ
ಇಲ್ಲೇ ಇರಬೇಕಂತ ಹಿಂಗ ಹೇಳಿ ಹೋದರು ಆವತ್ತ
ಕಡೆ ಬಾಗಿಲದಾಗ ಏರುವುದು ಕಷ್ಟದ ಮಾತ
ಭೀಮನ ಕೊಳ್ಳದಾಗ ಹಾನಪ್ಪ ಭಗವಂತ
ಕೈಲಾಸ ಬಾಗಿಲ ಅಲ್ಲಿ ಹೋದವರಿಗೆ ದೊರತಿತ್ತ

ಅಲ್ಲಿ ದಾನ ಧರ್ಮ ಮಾಡುವುದು ಮಸ್ತ
ಪಲ್ಲದಾರಿ ಪಂಚದಾರಿ ಯಾತ್ರೆ ಮಾಡಿಯಾಯಿತು
ಆಗ ದೇವರ ದರ್ಶನ ಎಲ್ಲರಿಗಾಯಿತು
ಯುಗಾದಿ ಪಾಡ್ಯ ಎಲ್ಲರಿಗೆ ಅಲ್ಯಾಯಿತು
ಗಿರಿ ಏರ್‍ಯಾರಪ್ಪ ಉಘೇ ಉಘೇ ಅನ್ನುವ ಮಾತು
ಅಲ್ಲಿ ಪಾತಾಳಗಂಗೀ ಜಳಕವ ಸಿಸ್ತ
ನಾಡಮ್ಯಾಲಿನ ಕಂಬಿ ಕೂಡ್ಯಾವ ಮಸ್ತ
ಯಾತ್ರೆ ಮುಪಂಗಿಸಿ ಪರತ ಹೊಂಟರಾವತ್ತು
ದುಡ್ಡ ಅವರ ಹಂತೀಲೆ ಉಳಿಯಿತು ಮರೆತು
ಗಿರಿ ಇಳಿದಾರಪ್ಪ ಉಘೇ ಉಘೇ ಅನುಕೋತು
ಹಾದ್ಯಾಗ ಆದಾವು ಹತ್ತೆಂಟು ವಸ್ತಿ
ಗೋಲಗೇರಿ ಭೂಮ್ಯಾಗ ಬಂದರಾವತ್ತ
ಜೊತೆಗೆ ಉಘೇ ಉಘೇ ಎನ್ನುವ ಮಾತ
ಮುಗ್ಧ ನಿತ್ಯ ಹಾದಿ ಕಾಯುತ್ತಿದ್ದನಂತ
ಗೊಲ್ಲಾಳನ ನೋಡಿ ಜಂಗಮರಂತಾರಂತ
ಶ್ರೀಶೈಲದಿಂದ ಲಿಂಗ ತರುವುದು ಮರೆತೆವಂತ
ಬೆರಕಿ ಜಂಗಮರು ತಗೆದಾರ ಭೇತ
ಲಿಂಗ ಅಂಬುದರಾ ಅವನಿಗೇನು ಗೊತ್ತು
ಕುರಿಯ ಹಿಕ್ಕಿಯ ಲಿಂಗ ಮಾಡ್ಯಾನ ಅಲ್ಲೇ ಕುಳಿತು
ಒಯ್ದು ಕೊಡಬೇಕು ಹ್ಯಾಂಗ ಎಂಬ ಮಾತು
ಯಾತ್ರಾದಿಂದ ಲಿಂಗ ತಂದೀವಿತಕೊಳ್ಳು ಭಕ್ತಿವಂತ
ಲಿಂಗ ಮನಿಗೆ ಒಯ್ಯಬೇಕೋ ಶಕ್ತಿವಂತ
ಕುರಿಯ ಗೊಬ್ಬರದಾಗ ಮುಚ್ಚಿಬೇಕು.
ಹಿಂಡಿದಷ್ಟು ಹಾಲ ನೀನು ಹಾಕತಿರಬೇಕು
ನಿತ್ಯ ನೇಮ ಪೂಜೆ ಮಾಡತಿರಬೇಕು
ಶರಣನ ಕೈಯಾಗ ಲಿಂಗ ಕೊಟ್ಟು, ಹೇಳತಾರ ಹಾನಪ್ಪ ಭಗವಂತ
ಜ್ಯೋತಿರ್ಲಿಂಗದಾಗ, ಭಕ್ತಿ ಮಾಡಪ್ಪ ಶುದ್ಧ ಮನಸ್ಸಿನಿಂದ ನೀ ಸ್ವಂತ

ನಾ ಸ್ವಂತ ಹಿಂಗ ಹೇಳಿ ಹೋದರಾವತ್ತು ಕುರಿಯ ಹಿಕ್ಕ್ಯಾಗ ಲಿಂಗವ್ಹೋದಿಟ್ಟು
ನಿಷ್ಠೆಯಿಂದ ಯಾವತ್ತು ಮಾಡುತ್ತಿದ್ದ ಭಕ್ತಿ ದೃಢವಿಟ್ಟು
ಬಾರಾವರ್ಷ ಭಕ್ತಿ ಮಾಡ್ಯಾನ, ಹಿಂಡಿದಷ್ಟು ಹಾಲ ಲಿಂಗಕ ಸುರುವ್ಯಾನ
ಕೇಳಿರಪ್ಪ ನೀವು ಸ್ವಂತ ಸಿಟ್ಟಿನಿಂದ ಬೈಕೋಂತ ಅವರ ತಂದಿ ಬಂದಾನ
ದೇವರು ಎಲ್ಲಿಹಾನ ನನಗ ಬೇಗ ತೋರಿಸಂತ
ಎಂತಹ ವ್ಯಾಳೆಯ ತಂದಿಯೋ ನೀ ಭಗವಂತ
ಬೇಡ್ಯಾನು ವರವ ಕೈಯ ಜೋಡಿಸಿ ನಿಂತು
ಗೊಬ್ಬರ ಹಿಕ್ಕ್ಯಾಗ ಶಿವಹುಟ್ಟಿ ಬಂದನೋ ಸಾಕ್ಷಾತ್
ಶರಣನ ಭಾವುಕ ಮೆಚ್ಚಿ ಗೋಲಗೇರಿಲಿಂಗನ
ಗುಡಿಯು ಬೆಳೆಯಿತೋ ಮುಂದ ಮುಂದ*

* ಸಂ. ಡಾ. ಎಸ್. ಸಿ. ಪಾಟೀಲ ಜನಪದ ಹಾಡುಗಳಲ್ಲಿ ಗೋಲಗೇರಿ ಗೊಲ್ಲಾಳೇಶ್ವರ ಹಾಡು ಹೇಳಿದವರು ಸಿದ್ದಣ್ಣ ಚಂದ್ರಾಮಪ್ಪ ಪೂಜಾರಿ. ವಯಸ್ಸು ೨೭, ಊರು ಸಾಲೋಡಗಿ ತಾ. ಬ.ಬಾಗೇವಾಡಿ, ಜಿ. ವಿಜಾಪೂರ, ಪುಟ ೧೫ ರಿಂದ ೧೬.

## ಬೀಸುವ ಕಲ್ಲಿನ ಹಾಡಿನಲ್ಲಿ
## ಗೋಲಗೇರಿಯ ಶ್ರೀ ಗೊಲ್ಲಾಳೇಶ್ವರ

ಆಡಿನ ಹಿಕ್ಕಿಯ ತಂದು ತೀಡಿ ಲಿಂಗವ ಮಾಡಿ
ನೋಡಿರಿ ಶಿವನ ಮಹಿಮಾವ -ಗೋಲಗೇರಿಲಿಂಗ
ಆಡಿನ ಹಿಕ್ಕ್ಯಾಗ ನೆನೆದಾನ ||೧||

ಗೋಲಗೇರಿ ಎಂಬುದು ಮ್ಯಾಲಿನ ಕೈಲಾಸ
ಒಳಗ ಅವ್ವಮ್ಮ ಶಿವಶರಣೆ -ನಿಂಗಯ್ಯನ
ಸೇವೆ ಮಾಡ್ಯಾಳ ಸರ್ವತ್ ನ್ಯಾಗ ||೨||

ಗೋಲಗೇರಿಯಂತ ಊರಿಲ್ಲ ಊರ ಮುಂದೆ ಕೆರಿ ಇಲ್ಲ
ತೀರ್ಥದ ಬಾವಿಯಂತ ಬಾವಿಯಿಲ್ಲ - ಗೋಲಗೇರಿ
ಗೊಲ್ಲಾಳನಂತ ದೇವರಿಲ್ಲ ||೩||

ಗೋಲಗೇರಿಯ ಲಿಂಗ ಚಿಣಿಯ ಆಡುತ ಹೊಂಟ
ಯಂಕಂಟಿದಾಟಯರಗಲ್ಲ-ಕಾಳಮ್ಮನ
ಚಿತ್ತರದ ಕೊಡಕ ಚಿಣಿ ಬಡಿದು ||೪||

ಬಂಗಾರ ಬಳಿ ಎರಡು ಬಂಡೀಗಿ ಕೀಲ ಎರಡು
ಸಂಗಮ ಮುಂದ ಹೊಳಿ ಎರಡು -ಗೋಲಗೇರಿ
ನಿಂಗಯ್ಯನ ಮ್ಯಾಲ ಕಳಸ ಎರಡು ||೫||

ತೆಗ್ಗಿಲ್ಲ ತೆವರಿಲ್ಲ ಮುಗ್ಯಾವ ಎರಡಾಗಿ
ಹೊಡ್ಡಿನಾಗ ಆದ ಗೋಲಗೇರಿ - ಗೋಲಗೇರಿ
ಗೊಲ್ಲಾಳನ ತೇರ ಆಕಾಶದಾಗ ||೬||

ಗೋಲಗೇರಿಯ ತೇರ ಅದಕ ಹೂವಿನ ಹಾರ
ಅದರಾಗ ಗೊಲ್ಲಾಳ ಸುಬೇದಾರ - ಬಾಯ್ಯಾಗ
ಸದರ ಸಾಪರದಾಗ ಬೆಳೆಯಲಿ ||೭||

ಗೋಲಗೇರಿಯ ತೇರಗಾಲಿ ಮ್ಯಾಲಾದವು
ಮ್ಯಾಲಿನ ಕಳಸ ನಡುಗ್ಯಾವ - ಗೊಲ್ಲಾಳ
ಗಾಬರಿಯಾದನ ಗಳಿಗ್ಯಾಗ ||೮||

ಗೋಲಗೇರಿಯ ತೇರ ಮ್ಯಾಲಕ ಬಹುದೂರ
ಸುಳಿಗಾಳಿಗೊಮ್ಮಿ ಬಳಕುತ -ತೇರಿನಮ್ಯಾಲ
ಕೈಬಡಿದು ಗೊಂಬಿ ನಗತಾವ ||೯||

ಗೋಲಗೇರಿಯ ಗೊಲ್ಲಾಳ ಎಲಿಯ ಪೂಜಿಯನೊಲ್ಲ
ಯಾಕೆನ್ನ ಮನಿಗೆ ಬರವಲ್ಲ - ಗೊಲ್ಲಾಳ
ತೇರಿಗೆ ನಮಗ ಋಣವಿಲ್ಲ ||೧೦||

ಆಲಗೂರದ ಅಕ್ಕಿ ಗೋಲಗೇರಿಯ ಬೆಲ್ಲ
ಮ್ಯಾಲ ಡಂಬಳದ ಕೆನಿಮಸರ - ಗೋಲಗೇರಿ
ಅಪ್ಪ ಲಿಂಗಯ್ಯನ ಅಭಿಷೇಕ ||೧೧||

ಹೊತ್ತ ಮುಳುಗಿದರೇನು ಕತ್ತಲಾದರೇನು
ತಂದೆ ನಿನಗುಡಿಗೆ ಬರುವೇನು -ಗೊಲ್ಲಾಳ
ಮುತ್ತಿನ ಬಾಗಿಲ ತೆರದಿಡೋ ||೧೨||

ಚಂದುಳ್ಳ ಗೋಲಗೇರಿ ನಂದಿ ಬಾಜಾರದಾಗ
ನಿಂದರಿಸಿ ಗಾಡಿ ಇಳಿದೇನ -ಹೊಂದಿಸಿ ಕೈಯ
ಮುಗಿದೇನ ಗೋಲಗೇರಿ ಲಿಂಗಗ ||೧೩||

ಅಪ್ಪ ಗೊಲ್ಲಾಳಲಿಂಗ ತಪ್ಪ ನನ್ನಲಿ ಇಲ್ಲ
ಒಪ್ಪತ್ತಿನ ಹಾಲ ಕರವುಂಡು -ಮಲ್ಲಿಗಿ
ಮಗ್ಗಿ ಹೂ ಎಂಜಲಾಗಿ ಮಗಮುದದ ||೧೪||

ಅಪ್ಪ ಗೊಲ್ಲಾಳ ಲಿಂಗ ತಪ್ಪ ನನ್ನಲಿ ಇಲ್ಲ
ಒಂದ್ಹೊತ್ತಿನ ಊಟ ಹಸಿವಿಲ್ಲ -ತಪ್ಪದ
ನನ್ನ ಮನಿರಾಬ ನಡೆಸಪ್ಪ ||೧೫||

ಇಂದು ನನ್ನ ಮನಿಯ್ಯಾಗ ತುಂಬಿದ ಹುಣ್ಣಿವಿ
ತಂದಿಗೇರ್‍ಯಾವ ಬಿಳಿಹೂವ -ಗೋಲಗೇರಿ
ಲಿಂಗಕ್ಕೇರ್‍ಯಾವು ದವನಾವು ||೧೬||

ಮಳೆಗಾಲಕ ಮಲ್ಲಿಗಿ ಚಳಿಗಾಲಕ ಕ್ಯಾದಿಗಿ
ಉಗ್ರಾಣ ಬ್ಯಾಸಿಗ್ಯಾಗ ದವನ ಮುಡಿವಂತ
ದೇವರು ಗೋಲಗೇರಿಯ ಗೊಲ್ಲಾಳ ||೧೭||

ಹಾಸಿಗಿ ಮಾಡಾಗ ದ್ಯಾಸ ನಿನಮ್ಯಾಲ
ದಾಸಾಳದ ಹೂವ ಬಗಲಾಗ ಹಿಡಿಕೊಂಡು
ಗೋಲಗೇರಿ ಲಿಂಗನ ನೆನೆದೇನು ||೧೮||

ಸನ್ಯಾಸಿಗೆ ಒಪ್ಯಾವ ಸಣ್ಣ ಎಳಿ ಶಿವದಾರ
ಜೋಗಿಗೆ ಒಪ್ಯಾವ ಜಪಮಣಿ- ಗೋಲಗೇರಿ
ಲಿಂಗಯ್ಯನ ಒಪ್ಯಾವ ಎಲಿಪೂಜೆ ||೧೯||

ನಿಂಗಯ್ಯನ ಪವಳ್ಯಾಗ ನಮ್ಮತ್ತ ನೋಡಿರೇನ
ಮುತ್ತಿನ ಹಗ್ಗ ಮುಗದಾಣಿ -ತಪ್ಪಿಸಗೊಂಡಾದ
ಮುಟ್ಟಿಸಿಗೊಳ್ಳಪ್ಪ ನಿನ ಹರಕಿ* ||೨೦||

* ಸಂ. ಡಾ. ಎಸ್.ಸಿ. ಪಾಟೀಲ ಬಸವಪಥ

ಹಾಡುಗಳು ಹೇಳಿದವರು

೧. ತಾರಾಬಾಯಿ ಶಂ. ಹಿದ್ನೂರ, ವಯಸ್ಸು ೬೦, ಊರು ಹಿಪ್ಪರಗಿ, ತಾ. ಸಿಂದಗಿ, ಜಿ. ವಿಜಾಪೂರ.
೨. ನೀಲಮ್ಮ ಗುಜಗೊಂಡ, ವಯಸ್ಸು ೬೫, ಊರು ಮನಗೂಳಿ, ತಾ. ಬ. ಬಾಗೇವಾಡಿ, ಜಿ. ವಿಜಾಪೂರ
೩. ಸಂಗಪ್ಪ ಬಾವೂರ, ವಯಸ್ಸು ೬೩, ಊರು ಮುತ್ತಗಿ, ತಾ. ಬ.ಬಾಗೇವಾಡಿ ಜಿ. ವಿಜಾಪುರ
೪. ಶಾಂತಮ್ಮ ತಂಬಿಮಠ ವಯಸ್ಸು ೬೫, ಊರು ಮುತ್ತಗಿ, ತಾ. ಬ.ಬಾಗೇವಾಡಿ ಜಿ. ವಿಜಾಪುರ
೫. ರಾಮನಗೌಡ ಬಸನಗೌಡ ಬಿರಾದಾರ, ವಯಸ್ಸು ೭೫, ಊರು ಮುತ್ತಗಿ, ತಾ. ಬ.ಬಾಗೇವಾಡಿ ಜಿ. ವಿಜಾಪುರ
೬. ಚಂದ್ರಪ್ಪಗೌಡ, ಕೇವಣಸಿದ್ದಪ್ಪಗೌಡ ಪಾಟೀಲ, ಊರು ಮಾಣಶಿವಣಗಿ, ತಾ. ಜೇವರಗಿ ಜಿ. ಗುಲ್ಬರ್ಗಾ

## ಮಂಗಳಾರತಿ ಹಾಡಿನಲ್ಲಿ
## ಗೋಲಗೇರಿಯ ಶ್ರೀ ಗೊಲ್ಲಾಳೇಶ್ವರ

೧

ಮಂಗಳಾರತಿ ತಂದು ಎತ್ತಿರೇ ಜಯ ಗಂಗೀಯ ರಮಣಾಗ
ಗೋಲಗೇರಿ ಗೊಲ್ಲಾಳಲಿಂಗಗ ನೀಲ ಗಂಗೀಯ ರಮಣಾಗ ||ಪಲ್ಲವಿ||

ಅಂಗದೊಳಗ ಲಿಂಗ ಆತ್ಮ ಆತ್ಮದೊಳಗ ಲಿಂಗ
ಅಂಗೈದೊಳಗ ಇರುವ ಘನ ಲಿಂಗಗೇ
ಕುಂಬಾರ ರಮಣಾಗ ಕುಣಿಸ್ಯಾಡುವ ದೇವಗೇ
ಗಂಗೀಯ ರಮಣ ಗೋಲಗೇರಿ ಲಿಂಗಗೇ
ಗಂಧ ಕಸ್ತೂರಿ ಪೂಜೆ ಗಮಕ ಹೂವಿನ ಪೂಜೆ
ಚಂದ್ರಶೇಖರ ನಮ್ಮ ಘನಲಿಂಗ ಹರನ ಪೂಜೆ
ಮಂಗಳಾರತಿ ಪೂಜೆ ಮಾಯ ಕಾರಣ ಪೂಜೆ
ತಂದೆ ಗೋಲಗೇರಿ ಲಿಂಗ ನಿನ್ನ ಪೂಜೆ
ಮಂಗಳಾರತಿ ತಂದು ಎತ್ತಿರೆ ಜಯ ಗಂಗೀಯ ರಮಣಾಗ
ಗೋಲಗೇರಿ ಗೊಲ್ಲಾಳ ಲಿಂಗಗ ನೀಲ ಗಂಗೀಯ ರಮಣಾಗ ||ಪಲ್ಲವಿ||

೨

ಆರುತಿ ಮಾಡುವೆನು ಗೊಲ್ಲಾಳಗೊಂದು ಆರತಿ ಬೆಳಗುವೆನು
ಮಾರಸಂಹರನಿಗೆ ಧಾರಣಿಗಧಿಪತಿ ಕಾರುಣ್ಯಮೂರ್ತಿಗೆ ||ಪಲ್ಲವಿ||

ಉಜಗ ಭೂಷಣನಿಗೆ ಇಚಾಂಬರಿ ಹರಹರಿಮುನಿ ಬಂಧಗೆ
ಸುಜನ ಭಕ್ತರ ಪ್ರಿಯಗೆ ನಂದಿಗೆ ನಿಜರೂಪ ತೋರಿದಗೆ
ತ್ರಿಜಗದೊಡೆಯಗೆ ಸುಜನರ ಶಿಕ್ಷೆಗೆ ಗಜಮುಖದಾತಗೆ
ಭಜಕರ ಪೋಷೆಗೆ, ಗೋಲಗೇರಿ ಲಿಂಗ ಗೊಲ್ಲಾಳೇಶ್ವರನಿಗೆ ||೧||

ಪೊಡವಿಗಧಿಕವಾದ ಈ ಗೋಲಗೇರಿ ಒಡೆಯನೆನಿಸಿ ಮೆರೆದ
ಬಿಡದೆ ಭಕ್ತರಿಗೊಲಿದ ಮರಿಯಪ್ಪನ ದಿಡದಲ್ಲಿ ತಾ ಬೆರೆದ
ನಿಡಗುಂದ ಕಿಡಿಗಣ್ಣರುದ್ರಗೆ, ಕಡುಮಮತೆಯಿಂದ ಬಿಡದೆ
ಆರುತಿ ಬೆಳಗುವೆನು ಲಿಂಗಯ್ಯಗೊಂದು ಆರತಿ ಬೆಳಗುವೆನು ||೨||

ಆರುತಿ ಮಾಡುವೆನು ಗೊಲ್ಲಾಳಗೊಂದು ಆರುತಿ ಬೆಳಗುವೆನು

ಮಾರಸಂಹರನಿಗೆ ಧಾರಣೆಗಧಿಪತಿ ಕಾರುಣ್ಯಮೂರ್ತಿಗೆ* ||ಪಲ್ಲವಿ||

* ಸಂ. ಡಾ. ಎಸ್.ಸಿ. ಪಾಟೀಲ ಬಸವಪಥ

ಹಾಡು ಹೇಳಿದವರು

* ಶಿದ್ರಾಮಪ್ಪ ಹೂಗಾರ. ವಯಸ್ಸು ೮೦, ಊರು ಖೈನೂರು, ತಾ. ಸಿಂದಗಿ, ಜಿ. ವಿಜಾಪೂರ.

## ಕೋಲಾಟದ ಹಾಡಿನಲ್ಲಿ
## ಗೋಲಗೇರಿಯ ಶ್ರೀ ಗೊಲ್ಲಾಳೇಶ್ವರ

ಹೊಸಗುಡಿ ಕಟ್ಟಲಿ ಹೊಸಪ್ಯಾಟಿ ಹುಟ್ಟಲಿ

ರಸರಾಯರ ಕಬ್ಬ ಚಿಗಿಯಲಿ

ರಸರಾಯರ ಕಬ್ಬ ಚಿಗಿಯಲಿ- ಗೋಲಗೇರಿ

ಅಪ್ಪ ಲಿಂಗಯ್ಯನ ಹೊಸತೇರು || ಕೋಲು ಕೋಲೆನ್ನ ಕೋಲ||

ಅಪ್ಪ ನಿನ ಗುಡಿಯಾಗ ಇಪ್ಪತ್ತೊಂದು ಬಾವಿ

ನಿತ್ರ್ಯಾರು ನೀರ ತರತಾರ

ನಿತ್ರ್ಯಾರು ನೀರ ತರತಾರ -ಗೋಲಗೇರಿ

ಅಪ್ಪ ನಿಂಗಯ್ಯನ ಪೂಜೇಕ || ಕೋಲು ಕೋಲೆನ್ನ ಕೋಲ ||

ಅಣ್ಣ ನಿನ್ನ ಗುಡಿಯಾಗ ಹನ್ನೊಂದು ಬಾವಿ

ಸುಮಂಗಲಿಯರು ಜಲವ ತರತಾರ

ಸುಮಂಗಲಿಯರು ಜಲವ ತರತಾರ - ಗೋಲಗೇರಿ

ಅಪ್ಪ ನಿಂಗಯ್ಯನ ಪೂಜೇಕ || ಕೋಲು ಕೋಲೆನ್ನ ಕೋಲ||

ಅಪ್ಪ ನಿನ್ನ ಗುಡಿಯಾಗ ಇಪ್ಪತ್ತೊಂದು ಪುಷ್ಪದ ಗಿಡ ಹುಟ್ಟಿ

ಸಣ್ಣ ರುದ್ರಾಕ್ಷಿ ಸರಮಾಲೆ

ಸಣ್ಣ ರುದ್ರಾಕ್ಷಿ ಸರಮಾಲೆ- ಗೋಲಗೇರಿ

ಅಪ್ಪ ನಿಂಗಯ್ಯನ ಪೂಜೇಕ ||ಕೋಲು ಕೋಲೆನ್ನ ಕೋಲ||

ಅಣ್ಣ ನಿನ್ನ ಗುಡಿಯಾಗ ಹನ್ನೊಂದು ಪುಷ್ಪದ ಗಿಡ ಹುಟ್ಟಿ
ದೊಡ್ಡ ರುದ್ರಾಕ್ಷಿ ಸರಮಾಲೆ
ದೊಡ್ಡ ರುದ್ರಾಕ್ಷಿ ಸರಮಾಲೆ - ಗೋಲಗೇರಿ
ಅಪ್ಪ ನಿಂಗಯ್ಯನ ಪೂಜೇಕ ||ಕೋಲು ಕೋಲೆನ್ನ ಕೋಲ||

ತಂದೆ ಗುಡಿಯಾಗ ಕಪ್ಪಮಾರಕಿ ಯಾರು
ಕಪ್ಪರ ತುಂಬಾಳ ಗುಡಿ ಗುಡಿಸಿ
ಕಪ್ಪರ ತುಂಬಾಳ ಗುಡಿ ಗುಡಿಸಿ -ಗೋಲಗೇರಿ
ಹೊನ್ನಮ್ಮ ಕಂಚ ತುಂಬಾಳ ಕಳಸದಾಗ ||ಕೋಲು ಕೋಲೆನ್ನ ಕೋಲ||

ಮ್ಯಾಳಿಗಿ ಮನಿಯಾಕಿ ಹೋಳಿಗಿ ಮಾಡುವಾಕಿ
ಜಪ್ಪನ್ ಮಾಡ ತಡವಿಲ್ಲ
ಜಪ್ಪನ್ ಮಾಡ ತಡವಿಲ್ಲ-ಗೋಲಗೇರಿ
ಅಪ್ಪ ನಿಂಗಯ್ಯನ ಹೊಸತೇರು ||ಕೋಲು ಕೋಲೆನ್ನ ಕೋಲ||

ಉಪ್ಪರಗಿ ಮನಿಯಾಕಿ ತುಪ್ಪನ ಕಾಸುವಾಕಿ
ಜಪ್ಪನ್ ಮಾಡ ತಡವಿಲ್ಲ
ಜಪ್ಪನ್ ಮಾಡ ತಡವಿಲ್ಲ -ಗೋಲಗೇರೀಶನ
ಚಪ್ಪಾಳಿ ಹಾಕಿ ತೇರ ಎಳದೇನು ||ಕೋಲು ಕೋಲೆನ್ನ ಕೋಲ||

ಮಗ್ಗಲ ಮನಿಯಾಕಿ ಹಪ್ಪಳ ಮಾಡವಾಕಿ
ಜಪ್ಪನ್ ಮಾಡ ತಡವಿಲ್ಲ
ಜಪ್ಪನ್ ಮಾಡ ತಡವಿಲ್ಲ -ಗೋಲಗೇರಿ
ಅಪ್ಪ ನಿಂಗಯ್ಯನ ಪೂಜೇಕ ||ಕೋಲು ಕೋಲೆನ್ನ ಕೋಲ||*

* ಸಂ. ಡಾ. ಎಸ್.ಸಿ. ಪಾಟೀಲ ಬಸವಪಥ
ಹಾಡುಗಳು ಹೇಳಿದವರು
* ಗಂಗಮ್ಮ ಗುಜಗೊಂಡ ವಯಸ್ಸು ೨೫, ಊರು ಮನಗೂಳಿ, ತಾ. ಬ. ಬಾಗೇವಾಡಿ, ಜಿ. ವಿಜಾಪೂರ.

# ಗೊಲ್ಲಾಳೇಶ್ವರ ಚರಿತ್ರೆ

ಕನ್ನಡ ನಾಡಿನ ಭಕ್ತ ಸಮೂಹವ
ಕೇಳಿರಿ ಕಥೆಯನ್ನು ನಾ ಹೇಳುವೆ ಚರಿತೆಯನಾ
ಗೋಲಗೇರಿ ಕ್ಷೇತ್ರದಿ ಗೊಲ್ಲಾಳೇಶ್ವರ
ನೆಲೆಸಿದ ಕಥೆಯನ್ನು
ನಾಡನು ಬೆಳಗಿದ ಕಥೆಯನ್ನು

ಪೂರ್ವ ಕಾಲದಲಿ ಕನ್ನಡ ನಾಡಲಿ
ಡವಳಾರ ಒಂದಿತ್ತು
ಕುರುಬರ ಕುಲದಿಂದ ಕೂಡಿತ್ತು
ಬಯಲು ಸೀಮೆಯ ಭಾಗವಾದರು
ಹಸಿರಿಂದ ಕೂಡಿತ್ತು
ಹಸಿರೇ ಹಸಿರು ಆಗಿತ್ತು
ನಾಡನು ಕಾಯುವ ದೈವೀ ಪುರುಷನ
ಕೊಡುಗೆಯ ನೀಡಿತ್ತು ಮಹಿಮನ
ಚರಿತೆಯ ಸಾರಿತ್ತು

ಬಲ್ಲಿದನಾಗಿ ಬಲ್ಲುಗ ದೇವನು
ಅಲ್ಲಿಯೇ ನೆಲೆಸಿದನು
ಪತ್ನಿ ದುಗ್ಗಳೆಯನು ಪಡೆದಿದ್ದನು
ಹುಣ್ಣಿಮೆ ಚಂದ್ರನ ಪ್ರತಿಬಿಂಬದಂತ
ಮಗನನು ಪಡೆದನು
ಗೊಲ್ಲಾಳನೆಂದು ಹೆಸರಿಟ್ಟನು
ಹುಟ್ಟಿದ ಒಬ್ಬ ಮಗನನ್ನು
ಮುದ್ದಿನಿಂದ ಸಾಕಿದನು
ಪ್ರೀತಿಯನೆರೆದು ಬೆಳೆಸಿದನು

ಕುಲಕಸುಬು ಬಿಡದಂತ ಗೊಲ್ಲಾಳ
ಕುರಿಯನು ಕಾಯ್ದನು
ಉಣ್ಣೆಯ ನೂಲನು ನೇಯಿದನು

ಲಕ್ಷದ ಮೇಲೆ ತೊಂಬತ್ತಾರು ಸಾವಿರ
ಕುರಿಗಳ ಸಲುಹಿದನು
ಸಲುಹಿ ಶಿವಲೀಲೆಯ ಗೈದನು
ಕುರಿಯನು ಕಾಯುತ ಧರೆಯನು
ಸ್ವರ್ಗ ಮಾಡಿಯೇ ಬಿಟ್ಟನು
ಭೂಲೋಕ ಒಡೆಯನಾದವನು

ಪಾಲ್ಗುಣ ಮಾಸದಿ ವಾಡಿಕೆಯಂತೆ
ಶರಣರು ನಡೆಸಿರಲು
ಭಕ್ತರು ಶ್ರೀ ಗಿರಿಗ್ಹೋರಟಿರಲು
ಕುರಿಯನು ಕಾಯುತ ಗೊಲ್ಲಾಳೇಶ್ವರ
ಕಂಬಿಯ ಕಂಡಿರಲು ಭಕ್ತ ವೃಂದವ ನೋಡಿರಲು
ಹತ್ತಿರ ಹೋಗಿ ಎತ್ತಕಡೆ ನೀವು
ಹೊರಟಿರಿ ಎಂದಿರಲು
ನಂದಯ್ಯನ ನಾಲಿಗೆ ನುಡಿದಿರಲು

ಹತ್ತಿರ ಬಂದ ನಂದಯ್ಯ ಸ್ವಾಮಿ
ಸತ್ಯವ ನುಡಿದಿರಲು
ಲಿಂಗದ ಮಹಿಮೆಯ ಪಾಡಿರಲು
ಮಹಿಮೆಯ ಕೇಳುತ ಮಹಿಮಾ
ಪುರುಷನು ಭಕ್ತಿಲಿ ಮುಳುಗಿರಲು
ಭಕ್ತಿಲಿ ಮೈಯನು ಮರೆತಿರಲು
ಎಚ್ಚರವಾಗಿ ತನಗು ಒಂದು
ಲಿಂಗವ ಬೇಡಿರಲು
ತರಲು ಬಿಂದಿಗೆ ಹೊನ್ನನು ನೀಡಿದನು

ಹೊನ್ನನು ಕಂಡ ನಂದಯ್ಯ ಸ್ವಾಮಿ
ಮರೆತನು ಲಿಂಗವನು

ಶ್ರೀಗಿರಿಯಿಂದ ಮರಳಿದನು
ಹಾದಿಲಿ ಕುರಿಯನು ಕಾಯುವ
ಗೊಲ್ಲಾಳೇಶನ ಕಂಡನು
ಕಂಡು ಗಾಬರಿಯಾದನು
ಎಡಗಾಲಲಿಂದ ಕೆಳಗ ಬಿದ್ದ
ಕುರಿ ಹಿಕ್ಕಿ ತೆಗೆದನು
ಬಲಗೈಯಲ್ಲಿ ಹಿಡಿದನು

ದೂರದಿ ಹೊರಟ ನಂದಯ್ಯ ಸ್ವಾಮಿಯ
ಗೊಲ್ಲಾಳ ಕಂಡನು
ಬಂದು ವಿನಯದಿ ನಮಿಸಿದನು
ತಂದೆಯೇ ಲಿಂಗವ ತಂದಿರಾ ನೀವು
ಎಂದು ಕೇಳಿದನು
ಆಗ ಸ್ವಾಮಿ ನಂದಯ್ಯನು
.......ಕುರಿಯ ಹಿಕ್ಕಿಯನೇ
ಲಿಂಗವೆಂದು ನೀಡಿದನು
ಇದನೇ ಪೂಜಿಸು ಎಂದನು

ನಂಬಿದ ಗೊಲ್ಲಾಳೇಶನು ಕುರಿಯಾ
ಹಿಕ್ಕಿಯ ಪೂಜಿಸಿದ
ಭಕ್ತಿಲಿ ಹಾಲನು ಅರ್ಪಿಸಿದ
ಭಕ್ತಿ ಭಾವದಿಂದ ನಿತ್ಯಗೊಲ್ಲಾಳ
ಲಿಂಗವ ಪೂಜಿಸಿದಾ
ಕಾಡು ಪತ್ರೆಯ ಏರಿಸಿದಾ
ಈತನ ನಿರ್ಮಲ ಮುಗ್ಧ ಭಕ್ತಿಗೆ
ಶಿವನು ಮನಸೋತ
ತಿಪ್ಪಿಲಿ ಲಿಂಗವಾಗಿ ಬೆಳೆದ

ಹಾಲು ಹಿಂಡಿ ಲಿಂಗಕ್ಕೆ ಸುರುವುದ
ತಂದೆಯು ಕಂಡನು
ಕಂಡು ಕೋಪದಿ ಕೆರಳಿದನು
ಪೂಜೆಯ ಕೆಡಿಸಿ ಮಗನನು ಕಡಿಯಲು
ಕೊಡಲಿಯ ತಂದನು
ಕಡಿಯಲು ಕೊಡಲಿಯ ಎತ್ತಿದನು
ಭಕ್ತಿಗಿ ಮೆಚ್ಚಿ ಭೂಲೋಕಕ್ಕೆ
ಬಂದನು ಆ ಶಿವನು
ಎಲ್ಲರ ಕೈಲಾಸಕ್ಕೆ ಕರೆದೊಯ್ದನು

ಅಂದಿನಿಂದ ಗೊಲ್ಲಾಳೇಶ್ವರನು
ಲಿಂಗಯ್ಯನಾದನು
ಬಂದು ಧರೆಯಲಿ ನೆಲೆಸಿದನು
ಕುರಿಹಟ್ಟಿಯಾಗಿ ಗೋಲಗೇರಿ
ಶ್ರೀಕ್ಷೇತ್ರ ಮಾಡಿದನು
ಧರೆಯನು ಸ್ಪರ್ಶವ ಮಾಡಿದನು
ಈ ಕಥೆ ಕೇಳಿದ ಜನರ ಪಾಪವ
ಒಡನೆ ಕಳೆಯುವನು
ಮುಕ್ತಿಯ ಪಥವನು ತೊರೆದನು.*

* ಸಂ.- ಎಸ್. ಆಯ್. ಬಿರಾದಾರ
ಹಾಡು ಹೇಳಿದವರು : ಮಂಜುನಾಥ' ಜುನಗೊಂಡ ವಯಸ್ಸು ೫೩, ಊರು ಗೋಲಗೇರಿ ತಾ. ಸಿಂದಗಿ, ಜಿ. ವಿಜಾಪೂರ

# ಪರಾಮರ್ಶನ ಗ್ರಂಥಗಳು

೧. **ಶಿವಯೋಗಿ ಸಿದ್ಧರಾಮೇಶ್ವರರು, ಜೀವನ ಪರಿಚಯ ಸಾಹಿತ್ಯ ಸಿರಿ** ಲೇ- ಪ್ರೊ. ಉಮಾಪತಿ ಎಸ್. ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ ಚಿತ್ರದುರ್ಗ-೨೦೦೬

೨. **ಗ್ರಾಮ ಸಂಸ್ಕೃತಿ ಮಾಲೆ-೨ ತುಮಕೂರ ಜಿಲ್ಲಾ ಜಾತ್ರೆಗಳು**, ಲೇ- ಡಾ. ಎಣ್ಣೆಕಟ್ಟೆ ಚಿಕ್ಕಣ್ಣ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. ೨೦೦೩

೩. **ನನ್ನ ಪ್ರಿಯ ಭಾರತ - ಕನ್ನಡ**, ಲೇ-ಓಶೋ (ಅ) ಶ್ರೀ ವಿಶ್ವೇಶ್ವರ ಭಟ್ಟ ಅವುಭವ ಪ್ರಕಾಶನ, ಬೆಂಗಳೂರು. ೧೯೯೯

೪. **ಶಾಸನಗಳಲ್ಲಿ ಶಿವಶರಣರು**, ಲೇ-ಡಾ. ಕಲಬುರ್ಗಿ ಎಂ.ಎಂ., ಸಿರಿಗನ್ನಡ ಪ್ರಕಾಶನ ಕ.ವಿ.ವಿ. ಧಾರವಾಡ ೧೯೭೦

೫. **ಹರಿಹರನ ರಗಳೆಗಳು** (ಸಂ) ಡಾ. ಕಲಬುರ್ಗಿ ಎಂ.ಎಂ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೯

೬. **ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ ಕಥಾಸಾರ**, (ಸಂ) ಕಲ್ಲಮಠ ಅನ್ನಪೂರ್ಣಾದೇವಿ ಹಾಗೂ ಭೂಸನೂರಮಠ, ಶ್ರೀ ರಾಜಶೇಖರ ಪ್ರ-ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ ೧೯೫೭

೭. **ಗೆಝೆಟೀಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು** (ಅ) ಕಟ್ಟಿ ವೆಂಕಟರಂಗೋ ಮುಂಬಯಿ ಗವರ್ನಮೆಂಟ್ ಸೆಂಟ್ರಲ್ ಬುಕ್ ಡೀಪೋ. ೧೮೯೩

೮. **ಬುದ್ಧ, ಬಸವ, ಗಾಂಧಿ, ಡಾ. ಕುಳ್ಳಿ ಜಯವಂತ**, ಸಿರಿಗನ್ನಡ ಪ್ರಕಾಶನ, ಧಾರವಾಡ ೧೯೭೭.

೯. **ಧರೆಯೊಳು ಅರುಹು ಕುರುಹಿನ ಕುರುಬ ಗೊಲ್ಲಾಳೇಶ್ವರ** (ಕವನ ಸಂಗ್ರಹ), ಲೇ-ಹ.ರಂ. ಕುಲಕರ್ಣಿ ಗೊಲ್ಲಾಳೇಶ್ವರ ಪ್ರಕಾಶನ, ವಿಜಾಪೂರ. ೨೦೦೧

೧೦. **ಶ್ರೀ ಗೊಲ್ಲಾಳೇಶ್ವರ ಭಕ್ತಿ ಗೀತೆಗಳು**, ಸಂಗ್ರಹ ಹಾಗೂ ರಚನೆ - ಶ್ರೀಮತಿ ಶಾಂಭವೀ ತಾಯಿ ಗ. ಕೆರೂಡಿ ಪುರಾಣ ಮಂಗಲ ಹಾಗೂ ಸುವರ್ಣ ಮಹೋತ್ಸವ ಸಮಿತಿಯ ಸದ್ಭಕ್ತರು, ಗೋಲಗೇರಿ. ೨೦೦೦

೧೧. **ಲಿಂಗಾಯತ ತತ್ವ ಪ್ರಣಾಳಿಕೆ**, ಲೇ-ಚಂದ್ರೇಶಖರ ಟಿ. ಆರ್. - ನೀಲಗಂಗಾ ಪ್ರಕಾಶನ, ಗುಳೇದಗುಡ್ಡ, ಜಿ. ಬಾಗಲಕೋಟ ೨೦೧೦

೧೨. **ಬಿಜಾಪೂರ ಜಿಲ್ಲೆಯ ಜಾತ್ರೆಗಳು**, ಡಾ. ಚಪ್ಪರಬಂದ ಆರ್. ಆರ್. ಯಾಸ್ಮಿನ್ ಪ್ರಕಾಶನ ವಿಜಾಪೂರ. ೨೦೦೬

೧೩. **ಶ್ರೀ ಗೊಲ್ಲಾಳೇಶ್ವರ ಚರಿತ್ರೆ** ಲೇ- ಜಂಬಗು ಶರಣಪ್ಪ ಶಿವಪ್ಪ -ಪ್ರಕಾಶನ ಶ್ರೀ ಬಸವರಾಜ ಶಂಕರಪ್ಪ ಗಣಪೂರ. ವ್ಹಿ.ಎಸ್. ಮಠ ಗೋಲಗೇರಿ. ೨೦೦೨

೧೪. **ದೇವರನ್ನು ಕುರಿತು ಒಂದು ಬಹುಮುಖಿ ನೋಟ** ಲೇ-ಡಿವಿಜಿ, ಸಂ. ಪ್ರೊ. ವೀರಭದ್ರಪ್ಪ ಬಿ.ವ್ಹಿ. ಕನ್ನಡ ವಿಶ್ವವಿದ್ಯಾಲಯ, ೨೦೦೫

೧೫. **ಬಸವೇಶ್ವರರ ವಚನ ದೀಪಿಕೆ,** ಲೇ-ಡಾ. ತಿಪ್ಪೇರುದ್ರಸ್ವಾಮಿ ಎಚ್. ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು. ೧೯೯೫

೧೬. **ಕನ್ನಡ ಸಾಹಿತ್ಯ ಕೋಶ,** ಸಂ. ದಳವಾಯಿ ರಾಜಪ್ಪ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೯೬

೧೭. **ಶರಣ ಗೊಲ್ಲಾಳ,** ಡಾ. ದುರಗಿ ಶಕುಂತಲಾ ಸಿದ್ಧರಾಮ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು, ಜಯನಗರ ಬೆಂಗಳೂರು. ೨೦೦೯

೧೮. **ಸರ್ವ ಪುರಾತನರ ವಚನಗಳು,** ಸಂ. ನಂಜಪ್ಪನವರ ಮಠ ಬದಾಮಿ, ಸದ್ಧರ್ಮ ದೀಪಿಕೆ ಮಾಸ ಪತ್ರಿಕೆ ಪ್ರಕಾಶನ, ಮೈಸೂರು. ೧೯೫೯

೧೯. **ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ,** ಲೇ- ನಾರಾಯಣ ಪಿ.ವಿ. ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ. ೧೯೮೩

೨೦. **ಸಾಧನೆ,** ಲೇ. ನಾರಾಯಣ ಪಿ.ವಿ. ನಾಲ್ಕನೆಯ ಸಂಚಿಕೆ, ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ ಸಂ. ಡಾ. ಪಿ.ವಿ. ನಾರಾಯಣ ತರಳಬಾಳು ಪ್ರಕಾಶನ ಅಣ್ಣನ ಬಳಗ ಸಿರಿಗೆರೆ. ೧೯೮೨

೨೧. **ಪಾಲ್ಕುರಿಕೆ ಸೋಮನಾತನ ಬಸವ ಪುರಾಣ,** ಅನು- ನಾರಾಯಣ ಪಿ.ವಿ. - ತರಳ ಬಾಳು ಪ್ರಕಾಶನ, ಸಿರಿಗೆರೆ. ೧೯೮೨

೨೨. **ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ,** ಲೇ. ಡಾ. ನಾರಾಯಣ ಪಿ.ವ್ಹಿ. - ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ. ೧೯೮೩

೨೩. **ವಚನ ಪಿತಾಮಹ.** ಲೇ-ನ್ಯಾಯಮೂರ್ತಿ ಮಲ್ಲಪ್ಪ ಟಿ.ಎನ್. -ಸಂ. ಸಂಗಮನಾಥ ಜಿ. ಹಂಡಿ, ಎಸ್. ಬಿ. ಆರ್ಟ್ಸ್ ಕಾಲೇಜ, ವಿಜಾಪೂರ. ೧೯೬೮

೨೪. **ಚನ್ನಬಸವ ಪುರಾಣ,** ಪಂಡಿತ ವಿರುಪಾಕ್ಷಕೃತ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ, ಧಾರವಾಡ. ೧೯೩೪

೨೫. **ಶಿವತತ್ವ ಚಿಂತಾಮಣಿ,** ಸಂ. ಪಂಡಿತ ಬಸಪ್ಪ ಎಸ್. - ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು- ೧೯೬೦

೨೬. **ಕುರುಬರ ಜನಪದ,** ಲೇ- ಡಾ. ಪಾಟೀಲ ಎಸ್.ಸಿ. (ಸಂ) ಪ್ರೊ. ಚನ್ನಪ್ಪ ಕಟ್ಟಿ. ಪ್ರೊ. ಆರ್. ಎಸ್. ವಾಡೇದ, ಕನಕ ಜಯಂತ್ಯುತ್ಸವ ಸಮಿತಿ, ಸಿಂದಗಿ. ೧೯೯೭

೨೭. **ದೇವಾಲಯ ಚಂದ್ರಿಕೆ,** ಪ್ರಭಾಕರ ಎಂ.ಎಸ್. ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೨೮. **ಶಬ್ದವಿಲ್ಲದ ಯುದ್ಧ,** ಲೇ. ಬರಗೂರು ರಾಮಚಂದ್ರಪ್ಪ - ಅಂಕಿತ ಪ್ರಕಾಶನ, ಬಸವನಗುಡಿ, ಬೆಂಗಳೂರು. ೨೦೦೭

೨೯. **ಕರ್ನಾಟಕ ದೇವಾಲಯ ಕೋಶ,** ವಿಜಾಪೂರ ಜಿಲ್ಲೆ ಡಾ. ಬಡಿಗೇರ ವಾಸುದೇವ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೩೦ **Karnatak Journal of Politics,** ಬಾಳಿಕಾಯಿ ಎಸ್.ಆರ್. ಮತ್ತು ವಿಜಯಲಕ್ಷ್ಮಿ ಕೆ.ಮಠ ಕ.ವಿ.ವಿ. ರಾಜ್ಯಶಾಸ್ತ್ರ ಶಿಕ್ಷಕರ ಫೋರಮ್. ೨೦೦೭

೩೧. **ಜನಪದ ಸಾಹಿತ್ಯ ದರ್ಶನ (ಭಾಗ-೩) ಜನಪದ ನಂಬಿಕೆಗಳು** ಲೇ. ಬಿರಾದಾರ ಮ.ಗು. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೯

೩೨. **ಕುರುಬರ ಗುರು ಒಡೆಯರು,** ಲೇ-ಡಾ. ಬಿ.ಜಿ. ಬಿರಾದಾರ, ವಿಕಾಸ ಪ್ರಕಾಶನ ಶೋಧನಾ, ಹೊಸಪೇಟೆ ೨೦೧೦

೩೩. **ಕನ್ನಡ ಜನಪದ ಸಾಹಿತ್ಯ ಭಂಡಾರ (ಸಂಪುಟ-೧)ಗೀತೆಗಳು,** ಲೇ- ಬೆಟಗೇರಿ ಕೃಷ್ಣಮೂರ್ತಿ ಸಂ. ಮತ್ತಿಗಟ್ಟಿ ಕೃಷ್ಣಮೂರ್ತಿ, ಗುರುಮೂರ್ತಿ ಪ್ರಕಾಶನ ಕೆಂಪೇಗೌಡ ನಗರ, ಬೆಂಗಳೂರು. ೧೯೭೫

೩೪. **ಕರ್ನಾಟಕ ಜನಪದ ಕಲೆಗಳ ಕೋಶ,** ಲೇ- ಪ್ರೊ. ಬೋರಲಿಂಗಯ್ಯ ಹಿ.ಚಿ., ಸಂ. ಪ್ರೊ. ಬೋರಲಿಂಗಯ್ಯ ಹಿ.ಚಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೭

೩೫. **ಗೊಲ್ಲಾಳಯ್ಯನ ಪುರಾಣ (ರಚಯಿತ್ರು ಹಂಪೆಯ ಶ್ರೀ ಹರೀಶ್ವರ ಕವಿ),** ಸಂ. ಎಂ. ಚಂದ್ರಶೇಖರ ಹಾಗೂ ಹಿ.ಚಿ. ಶಾಂತವೀರಯ್ಯ., ಶ್ರೀ ಪ್ರಸಾದ ಪ್ರಕಾಶನ ಮನುವನ, ವಿಜಯನಗರ, ಬೆಂಗಳೂರು. ೧೯೭೨

೩೬. **ಫ.ಗು. ಹಳಕಟ್ಟಿ ಸಮಗ್ರ ಸಾಹಿತ್ಯ ಸಂಪುಟ-೧೧ (ಚರಿತ್ರ ಸಾಹಿತ್ಯ-೨),** ಸಂ. ಡಾ.ಎಂ.ಎಸ್. ಮದಭಾವಿ, ಪ್ರ: ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ಸಂಶೋಧನ ಕೇಂದ್ರ, ವಿಜಾಪೂರ. ೨೦೦೭

೩೭. **ಭಾರತದ ಪ್ರೌಢ ಇತಿಹಾಸ,** ಲೇ: ಮುಜುಮ್‌ದಾರ್ ರಾಮ ಚೌದರಿ, ಅನು: ಎನ್. ಎಸ್. ಶಾರದಾ ಪ್ರಸಾದ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿಶ್ವವಿದ್ಯಾಲಯ. ೨೦೦೮

೩೯. **ಕುರುಬ ಗೊಲ್ಲಾಳ,** ಲೇ. ಡಾ. ಮುದ್ದೇಬಿಹಾಳ ಆರ್.ಸಿ. - ಗೊಲ್ಲಾಳೇಶ್ವರ ಪ್ರಕಾಶನ, ವಿಜಾಪೂರ. ೨೦೦೧

೪೦. **ಭಾರತೀಯ ಸಂಸ್ಕೃತಿ ಜೀವನ (ವಿದ್ವತ್ಪೂರ್ಣ ಲೇಖನಗಳು),** ಲೇ- ಮೋಟಗಾನ ಹಳ್ಳಿ ಸುಬ್ರಮಣ್ಯಶಾಸ್ತ್ರಿ, ಸಂ. ಅ.ನ.ಕೃ. ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು ಸರಕಾರ, ಬೆಂಗಳೂರು.

೪೧. **ವೀರಶೈವ ಧರ್ಮ ದರ್ಶನ -ಸಂಪುಟ ೧.,** ಸಂ-ಯು.ಆರ್. ಅನಂತಮೂರ್ತಿ, ಲೇ. ಮಾಳವಾಡ ಸ.ಸ. ಜಗದ್ಗುರು ಶ್ರೀ ಶಿವರಾತ್ರೀಶ್ವರ, ಗ್ರಂಥಮಾಲೆ, ಮೈಸೂರು ೨೦೦೩

